ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯಾ—೪೯

# ವಿಷ್ಣು ಪುರಾಣಂ

( ಕನ್ನಡ ಅನುವಾದ ಸಹಿತ )

**ಸಂಪುಟ ೨.**



ಅನುವಾದಕ :

ಪಂಡಿತ, ಗಂಜಾಂ ತಿಮ್ಮಣ್ಣಯ್ಯ

ಶ್ರೀ ವಿನಾಯಕ್ ಪ್ರಿಂಟಿಂಗ್ ವರ್ಕ್ಸ್,

ಮೈಸೂರು.

೧೯೪೪

# ಪ್ರಸ್ತಾವನೆ

---

ಈ ವಿಷ್ಣುಪುರಾಣದ ಮೊದಲನೆಯ ಭಾಗದಲ್ಲಿ ಪ್ರಪಂಚದ ಸೃಷ್ಟಿಕ್ರಮವನ್ನು ಹೇಳಿರುವುದು. ಎರಡನೆಯ ಭಾಗದಲ್ಲಿ ಸ್ಥಿತಿಕ್ರಮವನ್ನು ಹೇಳಿರುವುದು.

ಸಕಲ ಲೋಕಸ್ಥಿತಿಗೆ ಧರ್ಮವೇ ಕಾರಣವೆಂಬೂ ಧರ್ಮಾಚರಣೆಯಿಂದ ಜೀವರು ಉತ್ತಮಗತಿಯನ್ನು ಪಡೆವರೆಂದೂ ಅನಾದಿಯೂ ಅಪೌರುಷೇಯವೂ ಆದ ವೇದವು ಹೇಳುವುದು. ವೇದೋಕ್ತವಾದ ಧರ್ಮವನ್ನಾಚರಿಸಿ ಅದನ್ನು ಜನತೆಗೆ ಬೋಧಿಸುತ್ತ ಬಹುಕಾಲದಿಂದ ಅದನ್ನು ರಕ್ಷಿಸಿಕೊಂಡು ಬಂದಿರುವ ಭರತಖಂಡದ ಮಹಾಮಹಿಮರೂ, ಲೋಕಕಲ್ಯಾಣಾಸಕ್ತರೂ, ಸ್ವಪ್ರಯೋಜನಾಪೇಕ್ಷೆಯಿಲ್ಲದವರೂ ದೇವಾಂಶಸಂಭೂತರೂ ಆದ ಋಷಿಗಳು ಪುರಾಣಸಂಹಿತೆಗಳ ಮೂಲಕವಾಗಿ ಆ ಧರ್ಮವನ್ನು ಜನರಿಗೆ ಬೋಧಿಸಿರುವರು.

ಮಹಾಪುರಾಣಗಳು ಹದಿನೆಂಟು ಇರುವುವು. ಅವುಗಳಲ್ಲಿ ಈ ವಿಷ್ಣುಪುರಾಣವು ಮೂರನೆಯದು. ಪುರಾಣಗಳಲ್ಲಿ ಹೇಳುವ ಸೃಷ್ಟಿಪ್ರಳಯಾದಿಕಾರ್ಯಗಳಿಗೆ ಪರಬ್ರಹ್ಮತತ್ವರೂಪನಾದ ವಿಷ್ಣುವೇ ಕಾರಣವೆಂದು ಇದರಲ್ಲಿ ಹೇಳುವುದರಿಂದ ವೈಷ್ಣವ ಪುರಾಣವೆಂದು ಹೆಸರು ಬಂದಿರುವುದು. ಈ ವಿಷ್ಣುಪುರಾಣವು ಬ್ರಹ್ಮಾಂಡ ಮಹಾಪುರಾಣದ ಪರಾಶರ ಸಂಹಿತೆಯಿಂದ ಸಂಗ್ರಹಿಸಿದುದೆಂದು ಪ್ರಥಮಾಂಶದ ಮೊದಲನೆಯ ಅಧ್ಯಾಯದ ಕೊನೆಯಲ್ಲಿ ಹೇಳಿರುವುದು.

ಮೂರನೆಯ ಅಂಶದ ಆರನೆಯ ಅಧ್ಯಾಯದಲ್ಲಿ ಸೂತನ ಆರು ಜನ ಶಿಷ್ಯರು ರಚಿಸಿದ ನಾಲ್ಕು ಪುರಾಣ ಸಂಹಿತೆಗಳಿಂದ ಸಾರವನ್ನು ತೆಗೆದುಕೊಂಡು ಈ ವಿಷ್ಣು ಪುರಾಣವನ್ನು ರಚಿಸಿದೆನೆಂದು ಪರಾಶರರೇ ಹೇಳಿರುವರು. ಈ ಪರಾಶರರು ವೈವಸ್ವತಮನ್ವಂತರದ ೨೬ ನೆಯ ದ್ವಾಪರಯುಗದಲ್ಲಿ ವೇದವಿಭಾಗಕರ್ತರಾಗಿ ವ್ಯಾಸಾಧಿಕಾರವನ್ನು ಪಡೆದಿದ್ದರೆಂದೂ ಹೇಳಿದೆ.

ಇವರ ಪುತ್ರರಾದ ಕೃಷ್ಣದ್ವೈಪಾಯನರೇ ೨೮ ನೆಯ ವ್ಯಾಸರು. **ಈ ಕೃಷ್ಣ ದ್ವೈಪಾಯನವ್ಯಾಸರು ತಮ್ಮ ಶಿಷ್ಯನಾದ ಸೂತನಿಗೆ ಹೇಳಿಕೊಟ್ಟ ಆ ಸೂತನ** ಶಿಷ್ಯರು ರಚಿಸಿದ ಪುರಾಣಗಳ ಸಾರವನ್ನು ಪರೀಕ್ಷಿತರಾಜನ ಕಾಲದಲ್ಲಿ ಪರಾಶರರು ತಮ್ಮ ಶಿಷ್ಯನಾದ ಮೈತ್ರೇಯನಿಗೆ ಹೇಳಿದರೆಂದು ಇದರಿಂದ ತಿಳಿಯಬರುವುದು.

ಹೀಗೆ ಪುರಾತನವಾದ ಈ ವಿಷ್ಣುಪುರಾಣದ ಎರಡನೆಯ ಭಾಗವಾದ ೩—೪ ನೆಯ ಅಂಶಗಳಲ್ಲಿ ಸ್ವಾಯಂಭುವಮನು ಮೊದಲಾಗಿ ವೈವಸ್ವತ ಮನುವಿನವರೆಗಿನ ಮನುವೇ ಮುಂತಾದವರ ಅಧಿಕಾರಗಳು, ವೇದಶಾಖಾವಿಭಾಗಗಳು, ಆಖ್ಯಾನ ಉಪಾಖ್ಯಾನಗಳ ಸ್ವರೂಪಗಳು, ವಿಷ್ಣುತತ್ವಸ್ವರೂಪ, ವಿಷ್ಣುಪೂಜಾವಿಧಾನ, ಆಶ್ರಮ ಧರ್ಮಗಳು, ನಿತ್ಯನೈಮಿತ್ತಿಕಾದಿಕರ್ಮಗಳು, ಸದಾಚಾರಗಳೂ, ಮತ್ತು ಅವುಗಳ ಮಹಿಮೆಗಳು, ರಾಜವಂಶವರ್ಣನೆಯ ಮೂಲವಾಗಿ ಪ್ರಸಿದ್ಧರಾದ ರಾಜರ ಚರಿತ್ರೆಗಳು ಭವಿಷ್ಯದ್ರಾಜರ ಸಂಕ್ಷೇಪ ಚರಿತ್ರೆ, ಈ ಚರಿತ್ರೆಯಿಂದ ಮಾನವನಿಗೆ ತಿಳಿಯಬೇಕಾದ ಅಂಶ. ಈ ಜ್ಞಾನದಿಂದುಂಟಾಗುವ ಫಲ ಇವುಗಳನ್ನು ಹೇಳಿದೆ.

ಜನರು ಈ ಪುರಾಣಶ್ರವಣ ಪಠನಾದಿಗಳಿಂದ ನೀತಿ ನಿಯಮಗಳನ್ನನುಸರಿಸಿ ಧರ್ಮಮಾರ್ಗದಲ್ಲಿ ನಡೆದು ಲೋಕಕ್ಕೆ ಕಲ್ಯಾಣವನ್ನುಂಟುಮಾಡುತ್ತ ತಾವೂ ಸದ್ಗತಿಯನ್ನು ಪಡೆಯಲೆಂಬ ಉದ್ದೇಶದಿಂದ ಸಂಸ್ಕೃತ ಭಾಷೆಯಲ್ಲಿದ್ದ ಈ ಉತ್ತಮ ಗ್ರಂಥವನ್ನು ತಮ್ಮ ಕನ್ನಡನಾಡಿನ ಪ್ರಜೆಗಳಿಗೆ ಉಪಯೋಗವಾಗುವಂತೆ ಕನ್ನಡ ಭಾಷೆಯಲ್ಲಿ ಅನುವಾದ ಮಾಡಿ ಪ್ರಕಟಿಸಬೇಕೆಂದು ಆಜ್ಞೆಯಿತ್ತು ಅದಕ್ಕೆ ಸಕಲ ವಿಧದಲ್ಲಿಯೂ ಅನುಕೂಲವನ್ನು ಕಲ್ಪಿಸಿಕೊಟ್ಟ ನಮ್ಮ ನ್ನಾಳುತ್ತಿರುವ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್** ಜಿ. ಸಿ. ಬಿ., ಜಿ. ಸಿ. ಎಸ್. ಐ. ಮಹಾಪ್ರಭುಗಳವರಿಗೆ ಪರಮಾತ್ಮನು ಸಕಲೇಷ್ಟಾರ್ಥಗಳನ್ನೂ ಕರುಣಿಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು.
ಸರ್ವಧಾರಿ ಸಂವತ್ಸರದ ಆಷಾಢ ಶುದ್ಧ ೧೧
ಶುಕ್ರವಾರ
ತಾ॥ ೧೬—೭—೧೯೪೮

ಅನುವಾದಕ,
**ಪಂಡಿತ ಗಂಜಾಂ ತಿಮ್ಮಣ್ಣಯ್ಯ.**

# ಶ್ರೀ ವಿಷ್ಣುಪುರಾಣದ ಮೂರನೆಯ ಅಂಶದ

# ವಿಷಯಾನುಕ್ರಮಣಿಕೆ

---

---

ಕೆ. ವೆಂಕಟಸುಬ್ಬಯ್ಯ, ಪ್ರಿಂಟರ್, ಶ್ರೀ ವಿನಾಯಕ್ ಪ್ರಿಂಟಿಂಗ್ ವರ್ಕ್ಸ್, ಮೈಸೂರು.

# ಶ್ರೀ ವಿಷ್ಣುಪುರಾಣದ ನಾಲ್ಕನೆಯ ಅಂಶದ

## ವಿಷಯಾನುಕ್ರಮಣಿಕೆ

---

---

ಶ್ರೀಃ

# ಶ್ರೀ ವಿಷ್ಣುಪುರಾಣೇ ತೃತೀಯಾಂಶೇ

## ಪ್ರಥಮೋಽಧ್ಯಾಯಃ

ಮೈತ್ರೇಯಃ

ಕಥಿತಾ ಗುರುಣಾ ಸಮ್ಯಗ್ಭೂಸಮುದ್ರಾದಿಸಂಸ್ಥಿತಿಃ ।
ಸೂರ್ಯಾದೀನಾಂ ಚ ಸಂಸ್ಥಾನಂ ಜ್ಯೋತಿಷಾಮಪಿ ವಿಸ್ತರಾತ್ ॥ ೧ ॥

ದೇವಾದೀನಾಂ ತಥಾ ಸೃಷ್ಟಿಃ ಋಷೀಣಾಂ ಚಾಪಿ ವರ್ಣಿತಾ ।
ಚಾತುರ್ವರ್ಣ್ಯಸ್ಯ ಚೋತ್ಪತ್ತಿಸ್ತಿರ್ಯಗ್ಯೋನಿಗತಸ್ಯ ಚ ॥ ೨ ॥

ಧ್ರುವಪ್ರಹ್ಲಾದಚರಿತಂ ವಿಸ್ತರಾಚ್ಚ ತ್ವಯೋದಿತಂ ।
ಮನ್ವಂತರಾಣ್ಯಶೇಷಾಣಿ ಶ್ರೋತುಮಿಚ್ಛಾಮ್ಯನುಕ್ರಮಾತ್ ॥ ೩ ॥

ಮನ್ವಂತರಾಧಿಪಾಂಶ್ಚೈವ ಶಕ್ರದೇವಪುರೋಗಮಾನ್ ।
ಭವತಾ ಕಥಿತಾನೇತಾನ್ ಶ್ರೋತುಮಿಚ್ಛಾಮ್ಯಹಂ ಗುರೋ ॥ ೪ ॥

---

### ಮೊದಲನೆಯ ಅಧ್ಯಾಯವು.

೧-೪. ಮೈತ್ರೇಯನು "ಗುರುಗಳೇ! ಭೂಮಿ, ಸಮುದ್ರಾದಿಗಳ ಸ್ಥಿತಿಯನ್ನೂ, ಸೂರ್ಯಾದಿ ಜ್ಯೋತಿರ್ಮಂಡಲಗಳ ಸ್ಥಿತಿಯನ್ನೂ ವಿಸ್ತಾರವಾಗಿ ಹೇಳಿದಿರಿ ದೇವತೆಗಳ ಮತ್ತು ಋಷಿಗಳ ಸೃಷ್ಟಿಯನ್ನೂ, ಬ್ರಾಹ್ಮಣಾದಿ ನಾಲ್ಕು ವರ್ಣಗಳ ಉತ್ಪತ್ತಿಯನ್ನೂ, ಮೃಗ, ಪಕ್ಷಿ ಮುಂತಾದ ಪ್ರಾಣಿಗಳ ಉತ್ಪತ್ತಿಯನ್ನೂ ವರ್ಣಿಸಿದಿರಿ. ಧ್ರುವ, ಪ್ರಹ್ಲಾದರ ಚರಿತ್ರೆಯನ್ನು ವಿಸ್ತಾರವಾಗಿ ಹೇಳಿದಿರಿ. ಈಗ ಎಲ್ಲ ಮನ್ವಂತರಗಳನ್ನೂ, ಅವುಗಳ ಅಧಿಪತಿಗಳನ್ನೂ, ದೇವೇಂದ್ರನೇ ಮೊದಲಾದ ದೇವತೆಗಳ ವಿಷಯಗಳನ್ನೂ ಕ್ರಮವಾಗಿ ಕೇಳಬೇಕೆಂದಿರುವೆನು ದಯೆಯಿಟ್ಟು ಹೇಳಬೇಕು" ಎಂದನು.

ಶ್ರೀ ಪರಾಶರಃ

ಅತೀತಾನಾಗತಾನೀಹ ಯಾನಿ ಮನ್ವಂತರಾಣಿ ವೈ ।
ತಾನ್ಯಹಂ ಭವತಸ್ಸಮ್ಯಕ್ ಕಥಯಾಮಿ ಯಥಾಕ್ರಮಂ ॥ ೫ ॥

ಸ್ವಾಯಂಭುವೋ ಮನುಃ ಪೂರ್ವಂ ಪರಸ್ಸ್ವಾರೋಚಿಷಸ್ತಥಾ ।
ಉತ್ತಮಸ್ತಾಮಸಶ್ಚೈವ ರೈವತಶ್ಚಾಕ್ಷುಷಸ್ತಥಾ ॥ ೬ ॥

ಷಡೇತೇ ಮನವೋಽತೀತಾಸ್ಸಾಂಪ್ರತಂ ತು ರವೇಸ್ಸುತಃ ।
ವೈವಸ್ವತೋಽಯಂ ಯಸ್ಯೈತತ್ಸಪ್ತಮಂ ವರ್ತತೇಂತರಂ ॥ ೭ ॥

ಸ್ವಾಯಂಭುವಂ ತು ಕಥಿತಂ ಕಲ್ಪಾದಾವಂತರಂ ಮಯಾ ।
ದೇವಾಸ್ತತ್ರರ್ಷಯಶ್ಚೈವ ಯಥಾವತ್ಕಥಿತಾ ಮಯಾ ॥ ೮ ॥

ಅತ ಊರ್ಧ್ವಂ ಪ್ರವಕ್ಷ್ಯಾಮಿ ಮನೋಸ್ಸ್ವಾರೋಚಿಷಸ್ಯ ತು ।
ಮನ್ವಂತರಾಧಿಪಾನ್ಸಮ್ಯಗ್ದೇವರ್ಷೀಂಸ್ತತ್ಸುತಾಂಸ್ತಥಾ ॥ ೯ ॥

---

೫-೮. ಪರಾಶರರು ಹೇಳುವರು:- ಮೈತ್ರೇಯನೇ, ಕಳೆದುಹೋದ ಮತ್ತು ಮುಂದೆ ಬರುವ ಮನ್ವಂತರಗಳನ್ನು ಕ್ರಮವಾಗಿ ನಿನಗೆ ಹೇಳುವೆನು. ಸ್ವಾಯಂಭುವ, ಸ್ವಾರೋಚಿಷ, ಉತ್ತಮ, ತಾಮಸ, ರೈವತ, ಚಾಕ್ಷುಷ ಎಂಬ ಈ ಆರು ಮನ್ವಂತರಗಳು ಕಳೆದುಹೋದುವು. ಈಗ ಸೂರ್ಯಪುತ್ರನಾದ ವೈವಸ್ವತನ ಏಳನೆಯ ಮನ್ವಂತರವು ನಡೆಯುತ್ತಿರುವುದು. ಕಲ್ಪದ ಪ್ರಾರಂಭದಲ್ಲಿ ಸ್ವಾಯಂಭುವ ಮನ್ವಂತರವನ್ನೂ ಆ ಮನ್ವಂತರದ ದೇವತೆಗಳನ್ನೂ ಋಷಿಗಳನ್ನೂ ಪ್ರಥಮಾಂಶದಲ್ಲಿ ಹೇಳಿದೆನು.

೯-೧೨. ಸ್ವಾರೋಚಿಷ ಮನ್ವಂತರಾಧಿಪತಿ, ದೇವತೆಗಳು, ಋಷಿಗಳು, ಅವರ ಮಕ್ಕಳುಗಳು ಇವರನ್ನು ಹೇಳುವೆನು. ಸ್ವಾರೋಚಿಷ ಮನ್ವಂತರದಲ್ಲಿ ಪಾರಾವಾರ (ಪಾರಾವತ) ಎಂಬ ದೇವತೆಗಳು, ವಿಪಶ್ಚಿತ್ತೆಂಬ ದೇವೇಂದ್ರ, ಊರ್ಜ

ಪಾರಾವಾರಾಸ್ಸತುಷಿತಾ ದೇವಾಸ್ಸ್ವಾರೋಚಿಷೇಂತರೇ ।
ವಿಪಶ್ಚಿತ್ತತ್ರ ದೇವೇಂದ್ರೋ ಮೈತ್ರೇಯಾಸೀನ್ಮಹಾಬಲಃ ॥ ೧೦ ॥

ಊರ್ಜಸ್ತಂಬಸ್ತಥಾ ಪ್ರಾಣೋ ದತ್ತೋಽಗ್ನಿಋಷಭಸ್ತಥಾ ।
ನಿಸ್ವರಶ್ಚಾರ್ವರೀವಾಂಶ್ಚ ತತ್ರ ಸಪ್ತರ್ಷಯೋಽಭವನ್ ॥ ೧೧ ॥

ಚೈತ್ರ ಕಿಂಪುರುಷಾದ್ಯಾಶ್ಚ ಸುತಾಸ್ಸ್ವಾರೋಚಿಷಸ್ಯ ತು ।
ದ್ವಿತೀಯಮೇತದ್ವ್ಯಾಖ್ಯಾತಮಂತರಂ ಶೃಣು ಚೋತ್ತಮಂ ॥ ೧೨ ॥

ತೃತೀಯೇಪ್ಯಂತರೇ ಬ್ರಹ್ಮನ್ ಉತ್ತಮೋ ನಾಮ ಯೋ ಮನುಃ ।
ಸುಶಾಂತಿರ್ನಾಮ ದೇವೇಂದ್ರೋ ಮೈತ್ರೇಯಾಸೀತ್ಸುರೇಶ್ವರಃ ॥ ೧೩ ॥

ಸುಧಾಮಾನಸ್ತಥಾ ಸತ್ಯಾಶ್ಶಿವಾಶ್ಚಾಥ ಪ್ರತರ್ದನಾಃ ।
ವಶವರ್ತಿನಶ್ಚ ಪಂಚೈತೇ ಗಣಾ ದ್ವಾದಶಕಾ ಸ್ಮೃತಾಃ ॥ ೧೪ ॥

ವಸಿಷ್ಠತನಯಾಸ್ತತ್ರ ಸಪ್ತ ಸಪ್ತರ್ಷಯೋಽಭವನ್ ।
ಅಜಃ ಪರಶು ದಿವ್ಯಾದ್ಯಾಸ್ತಥೋತ್ತಮಮನೋಸ್ಸುತಾಃ ॥ ೧೫ ॥

---

ಸ್ತಂಬ, ಪ್ರಾಣ, ದತ್ತ, ಅಗ್ನಿ, ಋಷಭ, ನಿಸ್ವರ, ಶಾರ್ವರೀವಾನ್ ಎಂಬ ಸಪ್ತ ಋಷಿಗಳೂ, ಚೈತ್ರ, ಕಿಂಪುರುಷ ಮುಂತಾದ ಸ್ವಾರೋಚಿಷ ಮನುವಿನ ಮಕ್ಕಳೂ ಇದ್ದರು. ಎರಡನೆಯ ಮನ್ವಂತರವನ್ನು ಹೇಳಿಯಾಯಿತು.

೧೩–೧೫. ಮೂರನೆಯ ಮನ್ವಂತರದಲ್ಲಿ ಉತ್ತಮನೆಂಬುವನು ಮನುವು, ಸುಶಾಂತಿಯೆಂಬ ದೇವೇಂದ್ರನು, ಸುಧಾಮರು, ಸತ್ಯರು, ಶಿವರು, ಪ್ರತರ್ದನರು, ವಶವರ್ತಿಗಳು ಎಂಬ ಪ್ರತಿಯೊಂದರಲ್ಲಿಯೂ ಹನ್ನೆರಡು ಹೆಸರುಗಳುಳ್ಳ ಐದು ಗಣಗಳೂ, ವಸಿಷ್ಠಪುತ್ರರಾದ ಏಳು ಜನ ಸಪ್ತರ್ಷಿಗಳೂ ಅಜ, ಪರಶು, ದಿವ್ಯ ಮುಂತಾದ ಮನುಪುತ್ರರೂ ಇದ್ದರು.

ತಾಮಸಸ್ಯಾಂತರೇ ದೇವಾಸ್ಸುಪಾರಾ ಹರಯಸ್ತಥಾ ।
ಸತ್ಯಾಶ್ಚ ಸುಧಿಯಶ್ಚೈವ ಸಪ್ತವಿಂಶತಿಕಾ ಗಣಾಃ ॥ ೧೬ ॥

ಶಿಬಿರಿಂದ್ರಸ್ತಥಾ ಚಾಸೀಚ್ಛತಯಜ್ಞೋಪಲಕ್ಷಣಃ ।
ಸಪ್ತರ್ಷಯಶ್ಚ ಯೇ ತೇಷಾಂ ಸಪ್ತ ನಾಮಾನಿ ಮೇ ಶೃಣು ॥ ೧೭ ॥

ಜ್ಯೋತಿರ್ಧಾಮಾ ಪೃಥುಃ ಕಾವ್ಯಶ್ಚೈತ್ರೋಽಗ್ನಿರ್ಧನಕಸ್ತಥಾ ।
ಪೀವರಶ್ಚರ್ಷಯೋ ಹ್ಯೇತೇ ಸಪ್ತ ತತ್ರಾಪಿ ಚಾಂತರೇ ॥ ೧೮ ॥

ನರಃ ಖ್ಯಾತಿಃ ಕೇತುರೂಪೋ ಜಾನುಜಂಘೋದಯಸ್ತಥಾ ।
ಪುತ್ರಾಸ್ತು ತಾಮಸಸ್ಯಾಸನ್ ರಾಜಾನಸ್ಸುಮಹಾಬಲಾಃ ॥ ೧೯ ॥

ಪಂಚಮೋ ಚಾಪಿ ಮೈತ್ರೇಯ ರೈವತೋ ನಾಮ ನಾಮತಃ ।
ಮನುರ್ವಿಭುಶ್ಚ ತತ್ರೇಂದ್ರೋ ದೇವಾಂಶ್ಚೈವಾಂತರೇ ಶೃಣು ॥ ೨೦ ॥

ಅಮಿತಾಭಾ ಭೂತನಯಾ ವೈಕುಂಠಾಸ್ಸುಸಮೇಧಸಃ ।
ಏತೇದೇವ ಗಣಾಸ್ತತ್ರ ಚತುರ್ದಶ ಚತುರ್ದಶ ॥ ೨೧ ॥

---

೧೬-೧೯. ನಾಲ್ಕನೆಯ ತಾಮಸ ಮನ್ವಂತರದಲ್ಲಿ ಸುಪಾರರು, ಹರಿಗಳು, ಸತ್ಯರು, ಸುಧಿಯರು, ಎಂಬ ಪ್ರತಿಯೊಂದರಲ್ಲಿಯೂ ಇಪ್ಪತ್ತೇಳು ಹೆಸರುಗಳುಳ್ಳ ದೇವಗಣಗಳೂ, ಶಿಬಿಯೆಂಬ ದೇವೇಂದ್ರನೂ, ಜ್ಯೋತಿರ್ಧಾಮ, ಪೃಥು, ಕಾವ್ಯ, ಚೈತ್ರ, ಅಗ್ನಿ, ಧನಕ, ಪೀವರ ಎಂಬ ಸಪ್ತರ್ಷಿಗಳೂ, ನರ, ಖ್ಯಾತಿ, ಕೇತುರೂಪ, ಜಾನು, ಜಂಘ ಮುಂತಾದ ರಾಜರೂ, ಮಹಾಬಲಶಾಲಿಗಳೂ ಆದ ತಾಮಸಮನುವಿನ ಪುತ್ರರೂ ಇದ್ದರು.

೨೦-೨೩. ಐದನೆಯ ರೈವತಮನ್ವಂತರದಲ್ಲಿ ವಿಭುವೆಂಬ ದೇವೇಂದ್ರನೂ, ಅಮಿತಾಭ, ಭೂತನಯ, ವೈಕುಂಠ, ಸುಸಮೇಧಸ ಎಂಬ ಪ್ರತಿಯೊಂದರಲ್ಲೂ ಹದಿನಾಲ್ಕು ಸಂಖ್ಯೆಯುಳ್ಳ ದೇವಗಣಗಳೂ ಹಿರಣ್ಯರೋಮ, ವೇದಶ್ರೀ, ಊರ್ಧ್ವಬಾಹು,

ಹಿರಣ್ಯರೋಮಾ ವೇದಶ್ರೀರೂರ್ಧ್ವ ಬಾಹುಸ್ತಥಾಪರಃ ।
ವೇದಬಾಹುಸ್ಸುಧಾಮಾ ಚ ಪರ್ಜನ್ಯಶ್ಚ ಮಹಾಮುನಿಃ ।
ಏತೇ ಸಪ್ತರ್ಷಯೋ ವಿಪ್ರ ತತ್ರಾಸನ್ ರೈವತೇಂತರೇ ॥ ೨೨ ॥

ಬಲಬಂಧು ಸುಸಂಭಾವ್ಯಸತ್ಯಕಾದ್ಯಾಶ್ಚ ತತ್ಸುತಾಃ ।
ನರೇಂದ್ರಾಸ್ಸುಮಹಾವೀರ್ಯಾ ಬಭೂವುರ್ಮುನಿಸತ್ತಮ ॥ ೨೩ ॥

ಸ್ವಾರೋಚಿಷಶ್ಚೋತ್ತಮಶ್ಚ ತಾಮಸೋ ರೈವತಸ್ತಥಾ ।
ಪ್ರಿಯವ್ರತಾನ್ವಯಾ ಹ್ಯೇತೇ ಚತ್ವಾರೋ ಮನವಸ್ಸ್ಮೃತಾಃ ॥ ೨೪ ॥

ವಿಷ್ಣುಮಾರಾಧ್ಯ ತಪಸಾಸ ರಾಜರ್ಷಿಃ ಪ್ರಿಯವ್ರತಃ ।
ಮನ್ವಂತರಾಧಿಪಾನೇತಾನ್ ಲಬ್ಧವಾನಾತ್ಮವಂಶಜಾನ್ ॥ ೨೫ ॥

ಷಷ್ಠೇ ಮನ್ವಂತರೇ ಚಾಸೀತ್ ಚಾಕ್ಷುಷಾಖ್ಯಸ್ತಥಾ ಮನುಃ ।
ಮನೋಜವಸ್ತಥೈವೇಂದ್ರೋ ದೇವಾನಪಿ ನಿಬೋಧಮೇ ॥ ೨೬ ॥

---

ವೇದಬಾಹು, ಸುಧಾಮ, ಪರ್ಜನ್ಯ, ಮಹಾಮುನಿ ಎಂಬ ಸಪ್ತರ್ಷಿಗಳೂ, ಬಲಬಂಧು, ಸುಸಂಭಾವ್ಯ, ಸತ್ಯಕ, ಮುಂತಾದ ಶೂರರೂ ರಾಜರೂ ಆದ ಮನುಪುತ್ರರೂ ಇದ್ದರು.

೨೪–೨೫. ಸ್ವಾರೋಚಿಷ, ಉತ್ತಮ, ತಾಮಸ, ರೈವತ, ಈ ನಾಲ್ಕು ಮನುಗಳು ಪ್ರಿಯವ್ರತರಾಜನ ವಂಶದವರು. ರಾಜರ್ಷಿಯಾದ ಪ್ರಿಯವ್ರತರಾಜನು ತಪಸ್ಸಿನಿಂದ ವಿಷ್ಣುವನ್ನು ಪೂಜಿಸಿ ತನ್ನ ವಂಶದಲ್ಲಿ ಈ ಮನ್ವಂತರಾಧಿಪತಿಗಳನು ಪಡೆದನು.

೨೬–೨೮. ಆರನೆಯ ಮನ್ವಂತರದಲ್ಲಿ ಚಾಕ್ಷುಷನೆಂಬುವನು ಮನುವು. ಮನೋಜವನೆಂಬುವನೇ ದೇವೇಂದ್ರನು. ಆಪ್ಯರೂ ಪ್ರಸೂತರು, ಭವ್ಯರು, ಪೃಥುಕರು ಲೇಖರು, ಎಂಬ ಎಂಟೆಂಟು ಸಂಖ್ಯೆಯುಳ್ಳ ಐದು ಗಣದೇವತೆಗಳು ಸುಮೇಧ,

ಆಪ್ಯಾಃ ಪ್ರಸೂತಾ ಭವ್ಯಾಶ್ಚ ಪೃಥುಕಾಶ್ಚ ದಿವೌಕಸಃ ।
ಮಹಾನುಭಾವಾ ಲೇಖಾಶ್ಚ ಪಂಚೈತೇ ಹ್ಯಷ್ಟಕಾ ಗಣಾಃ ॥ ೨೭ ॥

ಸುಮೇಧಾ ವಿರಜಾಶ್ಚೈವ ಹವಿಷ್ಮಾನುತ್ತಮೋ ಮಧುಃ ।
ಅತಿನಾಮಾ ಸಹಿಷ್ಣುಶ್ಚ ಸಪ್ತಾಸನ್ನಿತಿ ಚರ್ಷಯಃ ॥ ೨೮ ॥

ಊರುಃ ಪೂರುಃ ಶತದ್ಯುಮ್ನ ಪ್ರಮುಖಾಸ್ಸುಮಹಾಬಲಾಃ ।
ಚಾಕ್ಷುಷಸ್ಯ ಮನೋಃಪುತ್ರಾಃ ಪೃಥಿವೀಪತಯೋಽಭವನ್ ॥ ೨೯ ॥

ವಿವಸ್ವತಸ್ಸುತೋ ವಿಪ್ರ ಶ್ರಾದ್ಧದೇವೋ ಮಹಾದ್ಯುತಿಃ ।
ಮನುಸ್ಸಂವರ್ತತೇ ಧೀಮಾನ್ ಸಾಂಪ್ರತಂ ಸಪ್ತಮೇಂತರೇ ॥ ೩೦ ॥

ಆದಿತ್ಯವಸುರುದ್ರಾದ್ಯಾ ದೇವಾಶ್ಚಾತ್ರ ಮಹಾಮುನೇ ।
ಪುರಂದರಸ್ತಥೈವಾತ್ರ ಮೈತ್ರೇಯ ತ್ರಿದಶೇಶ್ವರಃ ॥ ೩೧ ॥

ವಸಿಷ್ಠಃ ಕಾಶ್ಯಪೋಽಥಾತ್ರಿರ್ಜಮದಗ್ನಿಸ್ಸಗೌತಮಃ ।
ವಿಶ್ವಾಮಿತ್ರ ಭರದ್ವಾಜೌ ಸಪ್ತ ಸಪ್ತರ್ಷಯೋಽತ್ರ ತು ॥ ೩೨ ॥

---

ವಿರಜ, ಹವಿಷ್ಮಂತ, ಉತ್ತಮ, ಮಧು, ಅತಿನಾಮ, ಅಸಹಿಷ್ಣು ಎಂಬ ಸಪ್ತರ್ಷಿಗಳು. ಊರು, ಪೂರು, ಶತದ್ಯುಮ್ನ ಮುಂತಾದ ರಾಜರೂ ಬಲಶಾಲಿಗಳೂ ಆದ ಮನು ಪುತ್ರರೂ ಇದ್ದರು.

೩೦. ವಿವಸ್ವತನೆಂಬ ಸೂರ್ಯನ ಮಗನಾದ ಮಹಾತೇಜಸ್ವಿಯೂದ ಶ್ರಾದ್ಧ ದೇವನೆಂಬವನು ಏಳನೆಯ ವೈವಸ್ವತ ಮನ್ವಂತರಕ್ಕೆ ಅಧಿಪತಿಯು.

೩೧–೩೪. ಈ ಮನ್ವಂತರವಲ್ಲಿ ಆದಿತ್ಯರು, ವಸುಗಳು, ರುದ್ರರು ಮುಂತಾದ ವರೇ ದೇವತೆಗಳು. ಪುರಂದರನೆಂಬವನೇ ದೇವೇಂದ್ರನು. ವಸಿಷ್ಠ, ಕಶ್ಯಪ, ಅತ್ರಿ, ಜಮದಗ್ನಿ, ಗೌತಮ, ವಿಶ್ವಾಮಿತ್ರ, ಭರದ್ವಾಜ, ಎಂಬ ಏಳು ಜನರೇ ಸಪ್ತರ್ಷಿಗಳು.

ಇಕ್ಷ್ವಾಕುಶ್ಚ ನೃಗಶ್ಚೈವ ಧೃಷ್ಟಶ್ಶರ್ಯಾತಿರೇವ ಚ ।
ನರಿಷ್ಯಂತಶ್ಚ ವಿಖ್ಯಾತೋ ನಾಭಾಗೋರಿಷ್ಟ ಏವ ಚ ॥ ೩೩ ॥

ಕರೂಷಶ್ಚ ವೃಷಧ್ರಶ್ಚ ವಸುಮಾನ್ಲ್ಲೋಕವಿಶ್ರುತಃ ।
ಮನೋರ್ವೈವಸ್ವತಸ್ಯೈತೇ ನವಪುತ್ರಾಸ್ಸುಧಾರ್ಮಿಕಾಃ ॥ ೩೪ ॥

ವಿಷ್ಣುಶಕ್ತಿರನೌಪಮ್ಯಾ ಸತ್ವೋದ್ರಿಕ್ತಾ ಸ್ಥಿತೌ ಸ್ಥಿತಾ ।
ಮನ್ವಂತರೇಷ್ವಶೇಷೇಷು ದೇವತ್ವೇನಾಧಿತಿಷ್ಠತಿ ॥ ೩೫ ॥

ಅಂಶೇನ ತಸ್ಯಾ ಜಜ್ಞೇಽಸೌ ಯಜ್ಞಸ್ಸ್ವಾಯಂಭುವೇಂತರೇ ।
ಆಕೂತ್ಯಾಂ ಮಾನಸೋ ದೇವ ಉತ್ಪನ್ನಃ ಪ್ರಥಮೇಂತರೇ ॥ ೩೬ ॥

ತತಃ ಪುನಸ್ಸ ವೈ ದೇವಃ ಪ್ರಾಪ್ತೇ ಸ್ವಾರೋಚಿಷೇಂತರೇ ।
ತುಷಿತಾಯಾಂ ಸಮುತ್ಪನ್ನೋ ಹ್ಯಜಿತಸ್ತುಷಿತೈಸ್ಸಹ ॥ ೩೭ ॥

ಔತ್ತಮೇ ಚಾಂತರೇ ಚಾಪಿ ತುಷಿತಸ್ತು ಪುನಸ್ಸ ವೈ ।
ಸತ್ಯಾಯಾಮಭವತ್ಸತ್ಯಸ್ಸತ್ಯೈಸ್ಸಹ ಸುರೋತ್ತಮೈಃ ॥ ೩೮ ॥

---

ಇಕ್ಷ್ವಾಕು, ನೃಗ, ಧೃಷ್ಟ, ಶರ್ಯಾತಿ, ನರಿಷ್ಯಂತ, ನಾಭಾಗ, ರಿಷ್ಟ, ಕರೂಷ, ವೃಷಧ್ರ ಎಂಬ ಧಾರ್ಮಿಕರಾದ ಒಂಭತ್ತು ಜನ ಮನುಪುತ್ರರೂ ಇರುವರು.

೩೫–೪೧. ಪಾಲನಕಾರ್ಯವನ್ನು ಮಾಡುವ ಸತ್ವಗುಣಪ್ರಧಾನವಾದ ಅಸಮಾನವಾದ ವಿಷ್ಣುಶಕ್ತಿಯು ಸಮಸ್ತ ಮನ್ವಂತರಗಳಲ್ಲಿಯೂ ದೇವತಾರೂಪದಿಂದಿರುವುದು. ಸ್ವಾಯಂಭುವ ಮನ್ವಂತರದಲ್ಲಿ ಆಕೂತಿಯಲ್ಲಿ ವಿಷ್ಣುವು ತನ್ನ ಅಂಶದಿಂದ ಯಜ್ಞನೆಂಬ ಹೆಸರಿನಿಂದ ಮಾನಸರೆಂಬ ದೇವತೆಗಳೊಡನೆ ಹುಟ್ಟಿದನು. ಸ್ವಾರೋಚಿಷ ಮನ್ವಂತರದಲ್ಲಿ ತುಷಿತಾ ಎಂಬವಳಲ್ಲಿ ತುಷಿತರೆಂಬ ದೇವತೆಗಳೊಡನೆ ಅಜಿತನೆಂಬ ಹೆಸರಿನಿಂದ ಹುಟ್ಟಿದನು. ಉತ್ತಮ ಮನ್ವಂತರದಲ್ಲಿ ಸತ್ಯಾ ಎಂಬವಳಲ್ಲಿ ಸತ್ಯರೆಂಬ

ತಾಮಸಸ್ಯಾಂತರೇ ಚಾಪಿ ಸಂಪ್ರಾಪ್ತೇ ಪುನರೇವ ಹಿ ।
ಹರ್ಯಾಯಾಂ ಹರಿಭಿಸ್ಸಾರ್ಧಂ ಹರಿರೇವ ಬಭೂವ ಹ ॥ ೩೯ ॥

ರೈವತೇಪ್ಯಂತರೇ ದೇವಸ್ಸಂಭೂತ್ಯಾಂ ಮಾನಸೋ ಭವತ್ ।
ಸಂಭೂತೋ ಮಾನಸೈಸ್ಸಾರ್ಧಂ ದೇವೈರ್ದೇವವರೋ ಹರಿಃ ॥ ೪೦ ॥

ಚಾಕ್ಷುಷಸ್ಯಾಂತರೇ ದೇವೋ ವೈಕುಂಠಃ ಪುರುಷೋತ್ತಮಃ ।
ವಿಕುಂಠಾಯಾಮಸೌ ಜಜ್ಞೇ ವೈಕುಂಠೈರ್ದೇವತೈಸ್ಸಹ ॥ ೪೧ ॥

ಮನ್ವಂತರೇತ್ರ ಸಂಪ್ರಾಪ್ತೇ ತಥಾ ವೈವಸ್ವತೇ ದ್ವಿಜ ।
ವಾಮನಃ ಕಾಶ್ಯಪಾದ್ವಿಷ್ಣುರದಿತ್ಯಾಂ ಸಂಬಭೂವ ಹ ॥ ೪೨ ॥

ತ್ರಿಭಿಃಕ್ರಮೈರಿಮಾನ್ಲೋಕಾನ್ ಜಿತ್ವಾ ಯೇನ ಮಹಾತ್ಮನಾ ।
ಪುರಂದರಾಯ ತ್ರೈಲೋಕ್ಯಂ ದತ್ತಂ ನಿಹತಕಂಟಕಂ ॥ ೪೩ ॥

---

ದೇವತೆಗಳೊಡನೆ ಸತ್ಯನೆಂಬ ಹೆಸರಿನಿಂದ ಹುಟ್ಟಿದನು. ತಾಮಸಮನ್ವಂತರದಲ್ಲಿ ಹರಿಯೆಂಬವಳಲ್ಲಿ ದೇವಸಮೂಹದೊಡನೆ ಹರಿ ಎಂಬ ಹೆಸರಿನಿಂದ ಹುಟ್ಟಿದನು. ರೈವತಮನ್ವಂತರದಲ್ಲಿ ಸಂಭೂತಿಯೆಂಬವಳಲ್ಲಿ ಮಾನಸರೆಂಬ ದೇವತೆಗಳೊಡನೆ ಮಾನಸನೆಂಬ ಹೆಸರಿನಿಂದ ಹುಟ್ಟಿದನು. ಚಾಕ್ಷುಷಮನ್ವಂತರದಲ್ಲಿ ವಿಕುಂಠಾ ಎಂಬ ವಳಲ್ಲಿ ವೈಕುಂಠರೆಂಬ ದೇವತೆಗಳೊಡನೆ ವೈಕುಂಠನೆಂಬ ಹೆಸರಿನಿಂದ ಹುಟ್ಟಿದನು.

೪೨-೪೩. ಈ ವೈವಸ್ವತ ಮನ್ವಂತರದಲ್ಲಿ ಕಾಶ್ಯಪನ ಹೆಂಡತಿಯಾದ ಅದಿತಿ ಯಲ್ಲಿ ವಾಮನನಾಗಿ ಹುಟ್ಟಿದನು. ಮಹಾತ್ಮನಾದ ವಾಮನನು ತ್ರಿವಿಕ್ರಮಾವ ತಾರವನ್ನು ಮಾಡಿ ಮೂರು ಹೆಜ್ಜೆಗಳಿಂದ ಮೂರು ಲೋಕವನ್ನೂ ಜಯಿಸಿ ತನ್ನ ದಾಗಿ ಮಾಡಿಕೊಂಡು ಶತ್ರುಗಳನ್ನು ನಾಶಮಾಡಿ ಪುರಂದರನೆಂಬ ದೇವೇಂದ್ರನಿಗೆ ಮೂರು ಲೋಕವನ್ನೂ ಕೊಟ್ಟನು.

ಇತ್ಯೇತಾಸ್ತನವಸ್ತಸ್ಯ ಸಪ್ತ ಮನ್ವಂತರೇಷು ವೈ ।
ಸಪ್ತ ಚೈವಾಭವನ್ವಿಪ್ರ ಯಾಭಿಸ್ಸಂವರ್ಧಿತಾಃ ಪ್ರಜಾಃ ॥ ೪೪ ॥

ಯಸ್ಮಾದ್ವಿಷ್ಟಮಿದಂ ಸರ್ವಂ ತಸ್ಯ ಶಕ್ತ್ಯಾ ಮಹಾತ್ಮನಃ ।
ತಸ್ಮಾತ್ಸ ಪ್ರೋಚ್ಯತೇ ವಿಷ್ಣುರ್ವಿಶೇರ್ಧಾತೋಃ ಪ್ರವೇಶನಾತ್ ॥ ೪೫ ॥

ಸರ್ವೇ ಚ ದೇವಾ ಮನವಸ್ಸಮಸ್ತಾಃ
ಸಪ್ತರ್ಷಯೋ ಯೇ ಮನುಸೂನವಶ್ಚ ।
ಇಂದ್ರಶ್ಚ ಯೋಽಯಂ ತ್ರಿದಶೇಶಭೂತೋ
ವಿಷ್ಣೋರಶೇಷಾಸ್ತು ವಿಭೂತಯಸ್ತಾಃ ॥ ೪೬ ॥

ಇತಿ ಶ್ರೀ ವಿಷ್ಣುಪುರಾಣೇ ತೃತೀಯಾಂಶೇ ಪ್ರಥಮೋಽಧ್ಯಾಯಃ

---

೪೪. ಮೈತ್ರೇಯನೇ ! ಈ ರೀತಿಯಲ್ಲಿ ಏಳು ಮನ್ವಂತರಗಳಲ್ಲಿಯೂ ವಿಷ್ಣುವಿನ ಏಳು ಶರೀರಗಳು ಪ್ರಜೆಗಳ ಅಭಿವೃದ್ಧಿಯನ್ನು ಮಾಡಿದುವು.

೪೫. ವಿಶ್ ಎಂಬ ಧಾತುವಿಗೆ ಪ್ರವೇಶವೆಂಬ ಅರ್ಥವಿರುವುದು. ಮಹಾಮಹಿಮನಾದ ವಿಷ್ಣುವು ತನ್ನ ಶಕ್ತಿಯಿಂದ ಈ ಸಮಸ್ತ ಪ್ರಪಂಚವನ್ನೂ ಪ್ರವೇಶಿಸಿರುವನು. ಆದುದರಿಂದ ಅವನಿಗೆ ವಿಷ್ಣುವೆಂಬ ಹೆಸರು ಬಂದಿರುವುದು. (ಮನ್ವಾದಿಗಳಲ್ಲಿ ವಿಷ್ಣುಶಕ್ತಿಯು ಆವೇಶವಾಗಿರುವುದರಿಂದ ಅವರೆಲ್ಲ ಅವನ ವಿಭೂತಿಗಳಾಗಿರುವರು. ಎಂದು ಅಭಿಪ್ರಾಯವು.) ಮುಂದಿನ ಶ್ಲೋಕಾಭಿಪ್ರಾಯವು ಅವನ ವಿಭೂತಿಸ್ವರೂಪವನ್ನೇ ವಿವರಿಸಿರುವುದು.

೪೬. ಸಮಸ್ತ ದೇವತೆಗಳೂ, ಮನುಗಳೂ, ಸಪ್ತರ್ಷಿಗಳೂ, ಮನುಪುತ್ರರೂ ದೇವರಾಜನಾದ ಇಂದ್ರನೂ ವಿಷ್ಣುವಿನ ಅಂಶದವರಾಗಿ ಅವನ ವಿಭೂತಿಗಳೆನಿಸಿರುವರು.

ಎಂಬಲ್ಲಿಗೆ ಶ್ರೀವಿಷ್ಣುಪುರಾಣದ ತೃತೀಯಾಂಶದಲ್ಲಿ

ಪ್ರಥಮಾಧ್ಯಾಯವು ಮುಗಿದುದು

ಶ್ರೀಃ

# ಶ್ರೀ ವಿಷ್ಣುಪುರಾಣೇ ತೃತೀಯಾಂಶೇ

## ದ್ವಿತಿಯೋಽಧ್ಯಾಯಃ

---

ಮೈತ್ರೇಯಃ

ಪ್ರೋಕ್ತಾನ್ಯೇತಾನಿ ಭವತಾ ಸಪ್ತಮನ್ವಂತರಾಣಿ ವೈ ।
ಭವಿಷ್ಯಾಣ್ಯಪಿ ವಿಪ್ರರ್ಷೇ ಮಮಾಖ್ಯಾತುಂ ತ್ವಮರ್ಹಸಿ ॥ ೧ ॥

ಶ್ರೀ ಪರಾಶರಃ

ಸೂರ್ಯಸ್ಯ ಪತ್ನೀ ಸಂಜ್ಞಾಭೂತ್ ತನಯಾ ವಿಶ್ವಕರ್ಮಣಃ ।
ಮನುರ್ಯಮೋ ಯಮೀ ಚೈವ ತದಪತ್ಯಾನಿ ವೈ ಮುನೇ ॥ ೨ ॥

ಅಸಹಂತೀ ತು ಸಾ ಭರ್ತುಸ್ತೇಜಶ್ಛಾಯಾಂ ಯುಯೋಜ ವೈ ।
ಭರ್ತುಶ್ಶುಶ್ರೂಷಣೇಽರಣ್ಯಂ ಸ್ವಯಂ ಚ ತಪಸೇ ಯಯೌ ॥ ೩ ॥

---

### ಎರಡನೆಯ ಅಧ್ಯಾಯವು.

೧. ಮೈತ್ರೇಯನು "ಬ್ರಹ್ಮರ್ಷಿಯೇ! ಏಳು ಮನ್ವಂತರಗಳ ವಿಚಾರಗಳನ್ನು ಹೇಳಿಯಾಯಿತು. ಮುಂದಿನ ಮನ್ವಂತರಗಳ ವಿಚಾರಗಳನ್ನೂ ಹೇಳಬೇಕು" ಎಂದನು.

೨-೪ ಪರಾಶರರು ಹೇಳುವರು :— ಸೂರ್ಯನಿಗೆ ವಿಶ್ವಕರ್ಮನ ಮಗಳಾದ ಸಂಜ್ಞೆಎಂಬುವಳು ಪತ್ನಿಯಾಗಿದ್ದಳು. ಅವಳಿಗೆ ಮನು, ಯಮ, ಯಮುನಾ ಎಂಬ ಮೂವರು ಮಕ್ಕಳು. ಅವಳು ಗಂಡನ ತೇಜಸ್ಸನ್ನು ಸಹಿಸಲಾರದೆ ಗಂಡನ ಸೇವೆಗೆ

ಸಂಜ್ಞೇಯಮಿತ್ಯಥಾರ್ಕಶ್ಚ ಛಾಯಾಯಾಮಾತ್ಮಜತ್ರಯಂ ।
ಶನೈಶ್ಚರಂ ಮನುಂ ಚಾನ್ಯಂ ತಪತಿಂ ಚಾಪ್ಯಜೀಜನತ್ ॥ ೪ ॥

ಛಾಯಾ ಸಂಜ್ಞಾ ದದೌ ಶಾಪಂ ಯಮಾಯ ಕುಪಿತಾ ಯದಾ ।
ತದಾನ್ಯೇಯಮಸೌ ಬುದ್ಧಿರಿತ್ಯಾಸೀದ್ಯಮಸೂರ್ಯಯೋಃ ॥ ೫ ॥

ತತೋ ವಿವಸ್ವಾನಾಖ್ಯಾತೇ ತಯೈವಾರಣ್ಯಸಂಸ್ಥಿತಾಂ ।
ಸಮಾಧಿದೃಷ್ಟ್ಯಾ ದದೃಶೇ ತಾಮಶ್ವೀಂ ತಪಸಿ ಸ್ಥಿತಾಂ ॥ ೬ ॥

ವಾಜಿರೂಪಧರಸ್ಸೋಽಥ ತಸ್ಯಾಂ ದೇವಾವಥಾಶ್ವಿನೌ ।
ಜನಯಾಮಾಸ ರೇವಂತಂ ರೇತಸೋಂತೇ ಚ ಭಾಸ್ಕರಃ ॥ ೭ ॥

---

ತನ್ನ ಪ್ರತಿಬಿಂಬ ಸಮಾನಳಾದ ಛಾಯೆಯೆಂಬವಳನ್ನು ನಿರ್ಮಿಸಿ ಅವಳನ್ನು ಗಂಡನ ಸಮೀಪದಲ್ಲಿ ಬಿಟ್ಟು ತಾನು ತಪಸ್ಸಿಗಾಗಿ ಅರಣ್ಯಕ್ಕೆ ಹೋದಳು. ಸೂರ್ಯನು ಇವಳು ಸಂಜ್ಞೆಯೇ ಎಂದು ತಿಳಿದು ಅವಳಲ್ಲಿ ಶನೈಶ್ಚರ, ಮತ್ತೊಬ್ಬ ಮನು, ತಪತಿ ಎಂಬ ಮೂವರು ಮಕ್ಕಳನ್ನು ಹುಟ್ಟಿಸಿದನು.

೫-೭. ಸಂಜ್ಞಾರೂಪದಿಂದ ಇದ್ದ ಛಾಯೆಯು ತನ್ನ ಮಕ್ಕಳ ಮೇಲಿನ ಪಕ್ಷಪಾತದಿಂದಿರಲು ಯಮನು ತನ್ನನ್ನು ಕಾಲಿನಿಂದ ಒದೆಯುವುದಕ್ಕೆ ಪ್ರಯತ್ನಿಸಿದಾಗ ನಿನ್ನ ಕಾಲುಬಿದ್ದು ಹೋಗಲೆಂದು ಶಾಪವನ್ನು ಕೊಟ್ಟಳು. ಆಗ ಅವಳ ನಿರ್ದಯತ್ವ ವನ್ನು ನೋಡಿ ಇವಳು ಸಂಜ್ಞೆಯಲ್ಲ ಬೇರೊಬ್ಬಳೆಂದು ಬುದ್ಧಿಯುಂಟಾಯಿತು. ಬಳಿಕ ಸೂರ್ಯನು ನೀನು ಇವನ ತಾಯಿಯಲ್ಲ, ನೀನು ಯಾರೆಂಬುದನ್ನು ಸತ್ಯವಾಗಿ ಹೇಳೆಂದು ಅವಳನ್ನು ಕೇಳಲು, ನಾನು ಸಂಜ್ಞೆಯಲ್ಲ ಅವಳ ಛಾಯೆಯೆಂದು ಹೇಳಿದಳು. ಆಗ ಸೂರ್ಯನು ಸಂಜ್ಞೆಯು ಎಲ್ಲಿರುವಳೆಂದು ಯೋಚಿಸಿ ಜ್ಞಾನದೃಷ್ಟಿ ಯಿಂದ ಉತ್ತರಕುರುದೇಶದ ಕಾಡಿನಲ್ಲಿ ಕುದುರೆಯ ರೂಪದಿಂದ ತಪಸ್ಸನ್ನಾಚರಿಸುತ್ತಿರು ವಳೆಂದು ತಿಳಿದು ತಾನೂ ಕುದುರೆಯ ರೂಪದಿಂದ ಅವಳನ್ನು ಸೇರಿ ಅವಳಲ್ಲಿ ಅಶ್ವಿನೀ ದೇವತೆಗಳನ್ನೂ ರೇವಂತನನ್ನೂ ಹುಟ್ಟಿಸಿದನು. ರೇತಸ್ಸಿನ (ಕೊನೆ) ಅಂತವಲ್ಲಿಹುಟ್ಟಿ ದವನಾದುದರಿಂದ ರೇವಂತನೆಂದು ಹೆಸರು.

ಆನಿನ್ಯೇ ಚ ಪುನಸ್ಸಂಜ್ಞಾಂ ಸ್ವಸ್ಥಾನಂ ಭಗವಾನ್ರವಿಃ ।
ತೇಜಸಶ್ಶಮನಂ ಚಾಸ್ಯ ವಿಶ್ವಕರ್ಮಾ ಚಕಾರ ಹ ॥ ೮ ॥

ಭ್ರಮಮಾರೋಪ್ಯ ಸೂರ್ಯಂ ತು ತಸ್ಯ ತೇಜೋವಶಾತನಂ ।
ಕೃತವಾನಷ್ಟಮಂ ಭಾಗಂ ಸವ್ಯಶಾತಯದವ್ಯಯಂ ॥ ೯ ॥

ಯತ್ತಸ್ಸೌರ್ಯಾದ್ವೈಷ್ಣವಂ ತೇಜಶ್ಶಾತಿತಂ ವಿಶ್ವಕರ್ಮಣಾ ।
ಜಾಜ್ವಲ್ಯಮಾನಮಪತತ್ ತದ್ಭೂಮೌ ಮುನಿಸತ್ತಮ ॥ ೧೦ ॥

ತ್ವಷ್ಟೈವ ತೇಜಸಾ ತೇನ ವಿಷ್ಣೋಶ್ಚಕ್ರಮಕಲ್ಪಯತ್ ।
ತ್ರಿಶೂಲಂ ಚೈವ ಶರ್ವಸ್ಯ ಶಿಬಿಕಾಂ ಧನದಸ್ಯ ಚ ॥ ೧೧ ॥

ಶಕ್ತಿಂ ಗುಹಸ್ಯ ದೇವಾನಾಂ ಅನ್ಯೇಷಾಂ ಚ ಯದಾಯುಧಂ ।
ತತ್ಸರ್ವಂ ತೇಜಸಾ ತೇನ ವಿಶ್ವಕರ್ಮಾ ವ್ಯವರ್ಧಯತ್ ॥ ೧೨ ॥

---

೮-೯. ಮಹಾಮಹಿಮನಾದ ಸೂರ್ಯನು ಸಂಜ್ಞೆಯನ್ನು ಪುನಃ ತನ್ನ ಸ್ಥಾನಕ್ಕೆ ಕರೆದುಕೊಂಡು ಬಂದನು. ವಿಶ್ವಕರ್ಮನು ಸೂರ್ಯನಿಗೆ ತಿರುಗುವಿಕೆ ಯನ್ನುಂಟುಮಾಡಿ ಅವನ ತೇಜಸ್ಸು ಕಡಿಮೆಯಾಗಿ ಶಾಂತವಾಗುವಂತೆ ಮಾಡಿದನು. ಸೂರ್ಯನಿಗೆ ಮೊದಲಿನ ತೇಜಸ್ಸಿನ ಎಂಟನೆಯ ಒಂದು ಭಾಗ ತೇಜಸ್ಸು ಕಡಿಮೆ ಯಾಯಿತು.

೧೦-೧೨. ವಿಶ್ವಕರ್ಮನು ಸೂರ್ಯನಲ್ಲಿ ಕಡಿಮೆಮಾಡಿದ ವೈಷ್ಣವ ತೇಜಸ್ಸು ಪ್ರಕಾಶವಾಗಿ ಉರಿಯುತ್ತ ಭೂಮಿಯ ಮೇಲೆ ಬಿದ್ದಿತು. ವಿಶ್ವಕರ್ಮನೇ ಆ ತೇಜಸ್ಸಿ ನಿಂದ ವಿಷ್ಣುವಿಗೆ ಚಕ್ರಾಯುಧವನ್ನೂ, ಈಶ್ವರನಿಗೆ ತ್ರಿಶೂಲವನ್ನೂ, ಕುಬೇರನಿಗೆ ಪಲ್ಲಕ್ಕಿಯನ್ನೂ, ಕುಮಾರಸ್ವಾಮಿಗೆ ಶಕ್ತ್ಯಾಯುಧವನ್ನೂ ಇತರ ದೇವತೆಗಳಿಗೆ ಅವರವರ ಆಯುಧಗಳನ್ನೂ ಮಾಡಿಕೊಟ್ಟನು.

ಛಾಯಾ ಸಂಜ್ಞಾಸುತೋ ಯೋಽಸೌ ದ್ವಿತೀಯಃ ಕಥಿತೋ ಮನುಃ ।
ಪೂರ್ವಜಸ್ಯ ಸವರ್ಣೋಽಸೌ ಸಾವರ್ಣಿಸ್ತೇನ ಕಥ್ಯತೇ ॥ ೧೩ ॥

ತಸ್ಯ ಮನ್ವಂತರಂ ಹ್ಯೇತತ್ ಸಾವರ್ಣಿಕಮಥಾಷ್ಟಮಂ ।
ತಚ್ಛೃಣುಷ್ವ ಮಹಾಭಾಗ ಭವಿಷ್ಯಂ ಕಥಯಾಮಿ ತೇ ॥ ೧೪ ॥

ಸಾವರ್ಣಿಸ್ತು ಮನುರ್ಯೋಽಸೌ ಮೈತ್ರೇಯ ಭವಿತಾ ತತಃ ।
ಸುತಪಾಶ್ಚಾಮಿತಾಭಾಶ್ಚ ಮುಖ್ಯಾಶ್ಚಾಪಿ ತದಾ ಸುರಾಃ ॥ ೧೫ ॥

ತೇಷಾಂ ಗಣಾಸ್ತು ದೇವಾನಾಮೇಕೈಕೋ ವಿಂಶಕಸ್ಸ್ಮೃತಃ ।
ಸಪ್ತರ್ಷೀನಥ ವಕ್ಷ್ಯಾಮಿ ಭವಿಷ್ಯಾನ್ಮುನಿಸತ್ತಮ ॥ ೧೬ ॥

ದೀಪ್ತಿಮಾನ್ಗಾಲವೋ ರಾಮಃ ಕೃಪೋ ದ್ರೌಣಿಸ್ತಥಾ ಪರಃ ।
ಮತ್ಪುತ್ರಶ್ಚ ತಥಾ ವ್ಯಾಸಋಷ್ಯಶೃಂಗಶ್ಚ ಸಪ್ತಮಃ ॥ ೧೭ ॥

ವಿಷ್ಣುಪ್ರಸಾದಾದನಘಃ ಪಾತಾಳಾಂತರಗೋಚರಃ ।
ವಿರೋಚನಸುತಸ್ತೇಷಾಂ ಬಲಿರಿಂದ್ರೋ ಭವಿಷ್ಯತಿ ॥ ೧೮ ॥

---

೧೩–೧೯. ಛಾಯೆಯೆಂಬುವಳ ಎರಡನೆಯಮಗನಾದ ಮನುವು ಸೂರ್ಯಪುತ್ರನೂ, ಏಳನೆಯ ಮನ್ವಂತರಾಧಿಪತಿಯೂ ಆದ ಶ್ರಾದ್ಧದೇವನ ಸವರ್ಣನಾದುದರಿಂದ ಸಾವರ್ಣಿಯೆಂದು ಹೆಸರನ್ನು ಪಡೆದನು. ಮುಂದೆ ಬರುವ ಎಂಟನೆಯ ಮನ್ವಂತರವೇ ಅವನದು. ಈ ಮನ್ವಂತರದಲ್ಲಿ ಸಾವರ್ಣಿಯೇ ಮನುವು. ಸುತಪರು, ಅಮಿತಾಭರು ಎಂಬುವರೇ ದೇವತೆಗಳು. ಈ ಪ್ರತಿಯೊಬ್ಬರಿಗೂ ಇಪ್ಪತ್ತು ಗಣದೇವತೆಗಳು. ದೀಪ್ತಿಮಂತ, ಗಾಲವ, ರಾಮ, ಕೃಪ, ದ್ರೋಣಪುತ್ರನಾದ ಅಶ್ವತ್ಥಾಮ, ನನ್ನ ಪುತ್ರನಾದ ವ್ಯಾಸ, ಋಷ್ಯಶೃಂಗ ಇವರೇ ಸಪ್ತ ಋಷಿಗಳು. ವಿಷ್ಣುವಿನ ಅನುಗ್ರಹದಿಂದ ಪಾಪವಿಲ್ಲದವನಾದ ಪಾತಾಳದಲ್ಲಿ ವಾಸಿಸುತ್ತಿರುವ ವಿರೋಚನನ ಮಗನಾದ

ವಿರಜಾಶ್ಚಾರ್ವರೀವಾಂಶ್ಚ ನಿರ್ಮೋಕಾದ್ಯಾಸ್ತಥಾಪರೇ ।
ಸಾವರ್ಣೇಸ್ತು ಮನೋಃ ಪುತ್ರಾಃ ಭವಿಷ್ಯಂತಿ ನರೇಶ್ವರಾಃ ॥ ೧೯ ॥

ನವಮೋ ದಕ್ಷಸಾವರ್ಣಿರ್ಭವಿಷ್ಯತಿ ಮುನೇ ಮನುಃ ॥ ೨೦ ॥

ಪಾರಾಮರೀಚಿಗರ್ಭಾಶ್ಚ ಸುಧರ್ಮಾಣಶ್ಚ ತೇ ತ್ರಿಧಾ ।
ಭವಿಷ್ಯಂತಿ ತಥಾ ದೇವಾ ಏಕೈಕೋ ದ್ವಾದಶೋ ಗಣಃ ॥ ೨೧ ॥

ತೇಷಾಮಿಂದ್ರೋ ಮಹಾವೀರ್ಯೋ ಭವಿಷ್ಯತ್ಯದ್ಭುತೋ ದ್ವಿಜ ॥ ೨೨॥

ಸವನೋ ದ್ಯುತಿಮಾನ್ ಹವ್ಯೋ ವಸುಮೇಧಾತಿಥಿಸ್ತಥಾ ।
ಜ್ಯೋತಿಷ್ಮಾನ್ಸಪ್ತಮಸ್ಸತ್ಯಸ್ತತ್ರೈತೇ ಚ ಮಹರ್ಷಯಃ ॥ ೨೩ ॥

ಧೃತಕೇತುರ್ದೀಪ್ತಕೇತುಃ ಪಂಚಹಸ್ತೋ ನಿರಾಮಯಃ ।
ಪೃಥುಶ್ರವಾದ್ಯಾಶ್ಚ ತಥಾ ದಕ್ಷಸಾವರ್ಣಿಕಾತ್ಮಜಾಃ ॥ ೨೪ ॥

---

ಬಲಿಯು ದೇವೇಂದ್ರನಾಗುವನು. ವಿರಜ ಶಾರ್ವರೀವಾನ್, ನಿರ್ಮೋಕನೇ ಮೊದಲಾದವರು ಸಾವರ್ಣಿಮನುವಿನ ಮಕ್ಕಳಾಗುವರು. ಇವರೂ ರಾಜರಾಗುವರು.

೨೦-೨೪. ಒಂಭತ್ತನೆಯ ಮನ್ವಂತರದಲ್ಲಿ ದಕ್ಷ ಸಾವರ್ಣಿಯು ಮನುವಾಗುವನು. ಪಾರ, ಮರೀಚಿಗರ್ಭ, ಸುಧರ್ಮ ಎಂಬ ಮೂವರು ದೇವತೆಗಳು ಪ್ರತಿಯೊಬ್ಬರೂ ಹನ್ನೆರಡು ಗಣಗಳಿಂದ ಕೂಡಿರುವರು. ಅವರಿಗೆಲ್ಲ ಅದ್ಭುತನೆಂಬ ಶೂರನಾದ ದೇವೇಂದ್ರನಿರುವನು. ಸವನ, ದ್ಯುತಿಮಂತ, ಹವ್ಯ, ವಸು, ಮೇಧಾತಿಥಿ, ಜ್ಯೋತಿಷ್ಮಂತ, ಸತ್ಯ ಎಂಬ ಸಪ್ತರ್ಷಿಗಳಿರುವರು. ಧೃತಕೇತು, ದೀಪ್ತಕೇತು, ಪಂಚಹಸ್ತ, ನಿರಾಮಯ, ಪೃಥುಶ್ರವ, ಮುಂತಾದವರು ದಕ್ಷಸಾವರ್ಣಿಯ ಮಕ್ಕಳು.

ದಶಮೋ ಬ್ರಹ್ಮಸಾವರ್ಣಿರ್ಭವಿಷ್ಯತಿ ಮುನೇ ಮನುಃ ।
ಸುಧಾಮಾನೋ ವಿರುಧಾಶ್ಚ ಶತಸಂಖ್ಯಾಸ್ತಥಾಮರಾಃ ॥ ೨೫ ॥

ತೇಷಾಮಿಂದ್ರಶ್ಚ ಭವಿತಾ ಶಾಂತಿರ್ನಾಮ ಮಹಾಬಲಃ ।
ಸಪ್ತರ್ಷಯೋ ಭವಿಷ್ಯಂತಿ ಯೇ ತದಾ ತಾನ್ ಶೃಣುಷ್ವ ಮೇ ॥ ೨೬ ॥

ಹವಿಷ್ಮಾನ್ಸುಕೃತಸ್ಸತ್ಯಸ್ತಪೋಮೂರ್ತಿಸ್ತಥಾಪರಃ ।
ನಾಭಾಗೋ ಪ್ರತಿಮೌಜಾಶ್ಚ ಸತ್ಯಕೇತುಸ್ತಥೈವ ಚ ॥ ೨೭ ॥

ಸುಕ್ಷೇತ್ರಶ್ಚೋತ್ತಮೌಜಾಶ್ಚ ಭೂರಿಷೇಣಾದಯೋ ದಶ ।
ಬ್ರಹ್ಮಸಾವರ್ಣಿಪುತ್ರಾಸ್ತು ರಕ್ಷಿಷ್ಯಂತಿ ವಸುಂಧರಾಂ ॥ ೨೮ ॥

ಏಕಾದಶಶ್ಚ ಭವಿತಾ ಧರ್ಮಸಾವರ್ಣಿಕೋ ಮನುಃ ॥ ೨೯ ॥

ವಿಹಂಗಮಾಃ ಕಾಮಗಮಾ ನಿರ್ವಾಣಾ ರುಚಯಸ್ತಥಾ ।
ಗಣಾಸ್ತ್ವೇತೇ ತಥಾ ಮುಖ್ಯಾ ದೇವಾನಾಂ ಹಿ ಭವಿಷ್ಯತಾಂ ।
ಏಕೈಕಸ್ತ್ರಿಂಶಕಸ್ತೇಷಾಂ ಗಣಶ್ಚೇಂದ್ರಶ್ಚ ವೈ ವೃಷಾ ॥ ೩೦ ॥

---

೨೫–೨೮. ಹತ್ತನೆಯ ಮನ್ವಂತರಕ್ಕೆ ಬ್ರಹ್ಮಸಾವರ್ಣಿಯು ಮನುವಾಗುವನು. ಸುಧಾಮರು, ವಿರುಧರು, ಎಂಬ ನೂರು ಸಂಖ್ಯೆಯ ದೇವತೆಗಳಿರುವರು. ಅವರಿಗೆ ಶಾಂತಿಯೆಂಬ ಮಹಾಬಲಶಾಲಿಯಾದ ದೇವೇಂದ್ರನಿರುವನು. ಹವಿಷ್ಮಂತ ಸುಕೃತ, ಸತ್ಯ, ತಪೋಮೂರ್ತಿ, ನಾಭಾಗ, ಪ್ರತಿಮೌಜ, ಸತ್ಯಕೇತು ಎಂಬುವರೇ ಸಪ್ತರ್ಷಿಗಳು. ಸುಕ್ಷೇತ್ರ, ಉತ್ತಮೌಜ, ಭೂರಿಷೇಣ, ಮುಂತಾದ ಹತ್ತು ಜನ ಬ್ರಹ್ಮಸಾವರ್ಣಿಪುತ್ರರು ರಾಜರಾಗಿ ಭೂಮಿಯನ್ನು ಪಾಲಿಸುವರು.

೨೯-೩೨. ಹನ್ನೊಂದನೆಯ ಮನ್ವಂತರಕ್ಕೆ ಧರ್ಮಸಾವರ್ಣಿಯು ಮನುವಾಗುವನು. ವಿಹಂಗಮರು, ಕಾಮಗಮರು, ನಿರ್ವಾಣರು, ರುಚಿಗಳು ಎಂಬ ದೇವತೆಗಳು ಒಬ್ಬೊಬ್ಬರೂ ಮೂವತ್ತು ಗಣಗಳಿಂದ ಕೂಡಿರುವರು. ಅವರಿಗೆ ವೃಷ

ನಿಶ್ಚರಶ್ಚಾಗ್ನಿತೇಜಾಶ್ಚ ವಪುಷ್ಮಾನ್ಘೃಣಿರಾರುಣಿಃ ।
ಹವಿಷ್ಮಾನನಘಶ್ಚೈತೇ ಭಾವ್ಯಾಃ ಸಪ್ತರ್ಷಯಸ್ತದಾ ॥ ೩೧ ॥

ಸರ್ವತ್ರಗಸ್ಸ್ವಧರ್ಮಾ [redacted] ದೇವಾನೀಕಾದಯಸ್ತಥಾ ।
ಭವಿಷ್ಯಂತಿ ಮನೋಸ್ತಸ್ಯ ತನಯಾಃ ಪೃಥಿವೀಶ್ವರಾಃ ॥ ೩೨ [redacted]

ರುದ್ರ ಪುತ್ರಸ್ತು ಸಾವರ್ಣಿರ್ಭವಿತಾ ದ್ವಾದಶೋ ಮನುಃ ।
ಋತುಧಾಮಾ [redacted] ತತ್ರೇಂದ್ರೋ ಭವಿತಾ ಶೃಣು ಮೇ ಸುರಾನ್ ॥ ೩೩ ॥

ಹರಿತಾ ರೋಹಿತಾ ದೇವಾಸ್ತಥಾ ಸುಮನಸೋ ದ್ವಿಜ
ಸುಕರ್ಮಾಣಸ್ಸುರಾಪಾಶ್ಚ ದಶಕಾಃ ಪಂಚ ವೈ ಗಣಾಃ ॥ ೩೪ ॥

ತಪಸ್ವೀ ಸುತಪಾಶ್ಚೈವ ತಪೋಮೂರ್ತಿಸ್ತಪೋರತಿಃ ।
ತಪೋ ಧೃತಿ ರ್ದ್ಯುತಿಶ್ಚಾನ್ಯಸ್ಸಪ್ತಮಸ್ತು ತಪೋಧನಃ ।
ಸಪ್ತರ್ಷಯಸ್ತ್ವಿಮೇತಸ್ಯ ಪುತ್ರಾನಪಿ ನಿಬೋಧ ಮೇ ॥ ೩೫ ॥

ದೇವವಾನುಪದೇವಶ್ಚ ದೇವಶ್ರೇಷ್ಠಾದಯಸ್ತಥಾ ।
ಮನೋಸ್ತಸ್ಯ ಮಹಾವೀರ್ಯಾ ಭವಿಷ್ಯಂತಿ ಸುತಾನ್ನೃಪಾಃ ॥ ೩೬ ॥

---

ನೆಂಬ ದೇವೇಂದ್ರನಿರುವನು. ನಿಶ್ಚರ, ಅಗ್ನಿತೇಜ, ವಪುಷ್ಮಂತ, ಘೃಣಿ, ಅರುಣಿ, ಹವಿಷ್ಮಂತ, ಅನಘ ಎಂಬುವರೇ ಸಪ್ತರ್ಷಿಗಳಾಗುವರು. ಸರ್ವತ್ರಗ, ಸ್ವಧರ್ಮ, ದೇವಾನೀಕ ಮುಂತಾದ ಮನುಪುತ್ರರು ರಾಜರಾಗುವರು.

೩೩-೩೬. ಹನ್ನೆರಡನೆಯ ಮನ್ವಂತರಕ್ಕೆ ರುದ್ರಸಾವರ್ಣಿಯು ಮನುವಾಗುವನು. ಋತುಧಾಮನೆಂಬುವನು ದೇವೇಂದ್ರನಾಗುವನು. ಹರಿತರು, ರೋಹಿತರು, ಸುಮನಸರು ಸುಕರ್ಮರು, ಸುರಾಪಕರು ಎಂಬ ಹತ್ತು ಹತ್ತು ಗಣಗಳಿಂದ ಕೂಡಿದ ಐದು ಗುಂಪಿನ ದೇವತೆಗಳಿರುವರು. ತಪಸ್ವಿ, ಸುತಪ, ತಪೋಮೂರ್ತಿ, ತಪೋರತಿ, ತಪೋಧೃತಿ, ದ್ಯುತಿ, ತಪೋಧನ ಎಂಬ ಸಪ್ತರ್ಷಿಗಳಾಗುವರು. ದೇವವಂತ, ಉಪದೇವ, ದೇವಶ್ರೇಷ್ಠ ಮುಂತಾದ ಮಹಾಶೂರರಾದ ಮನುಪುತ್ರರು ರಾಜರಾಗುವರು.

ತ್ರಯೋದಶೋ ರೌಚ್ಯನಾಮ ಭವಿಷ್ಯತಿ ಮುನೇ ಮನುಃ ॥ ೩೭ ॥

ಸುತ್ರಾಮಾಣಸ್ಸುಧರ್ಮಾಣಸ್ಸುಕರ್ಮಾಣಸ್ತಥಾಮರಾಃ ।
ತ್ರಯಸ್ತ್ರಿಂಶದ್ವಿಭೇದಾಸ್ತೇ ದೇವಾನಾಂ ಯತ್ರ ವೈ ಗಣಾಃ ॥ ೩೮ ॥

ದಿವಸ್ಪತಿರ್ಮಹಾವೀರ್ಯಸ್ತೇಷಾಮಿಂದ್ರೋ ಭವಿಷ್ಯತಿ ॥ ೩೯ ॥

ನಿರ್ಮೋಹಸ್ತತ್ವದರ್ಶೀ ಚ ನಿಷ್ಪ್ರಕಂಪೋ ನಿರುತ್ಸುಕಃ ।
ಧೃತಿಮಾನವ್ಯಯಶ್ಚಾನ್ಯಸ್ಸಪ್ತಮಸ್ಸುತಪಾ ಮುನಿಃ ।
ಸಪ್ತರ್ಷಯಸ್ತ್ವಮೀ ತಸ್ಯ ಪುತ್ರಾನಪಿ ನಿಬೋಧ ಮೇ ॥ ೪೦ ॥

ಚಿತ್ರಸೇನವಿಚಿತ್ರಾದ್ಯಾ ಭವಿಷ್ಯಂತಿ ಮಹೀಕ್ಷಿತಃ ॥ ೪೧ ॥

ಭೌಮಶ್ಚತುರ್ದಶಶ್ಚಾತ್ರ ಮೈತ್ರೇಯ ಭವಿತಾ ಮನುಃ ।
ಶುಚಿರಿಂದ್ರಸ್ಸುರಗಣಾಸ್ತತ್ರ ಪಂಚ ಶೃಣುಷ್ವ ತಾನ್ ॥ ೪೨ ॥

ಚಾಕ್ಷುಷಾಶ್ಚ ಪವಿತ್ರಾಶ್ಚ ಕನಿಷ್ಠಾ ಭ್ರಾಜಿತಾಃ ತಥಾ ।
ವಾಚಾವೃದ್ಧಾಶ್ಚ ವೈ ದೇವಾಸ್ಸಪ್ತರ್ಷೀನಪಿ ಮೇ ಶೃಣು ॥ ೪೩ ॥

---

೩೭-೪೧. ಹದಿಮೂರನೆಯ ಮನ್ವಂತರಕ್ಕೆ ರೌಚ್ಯನೆಂಬುವನು ಮನು ವಾಗುವನು. ಸುತ್ರಾಮರು, ಸುಧರ್ಮರು, ಸುಕರ್ಮರು ಎಂಬ ಒಂದೊಂದು ಗುಂಪಿಗೆ ಮೂವತ್ತುಮೂರು ಗಣಗಳುಳ್ಳ ದೇವತೆಗಳಾಗುವರು. ಅವರಿಗೆ ಮಹಾಬಲಶಾಲಿ ಯಾದ ದಿವಸ್ಪತಿಯೆಂಬವನು ದೇವೇಂದ್ರನಾಗುವನು. ನಿರ್ಮೋಹ, ತತ್ವದರ್ಶಿ ನಿಷ್ಪ್ರಕಂಪ, ನಿರುತ್ಸುಕ, ಧೃತಿಮಂತ, ಅವ್ಯಯ, ಸುತಪ ಎಂಬುವರು ಸಪ್ತರ್ಷಿಗಳಾ ಗುವರು. ಚಿತ್ರಸೇನ, ವಿಚಿತ್ರ ಮುಂತಾದ ಮನುಪುತ್ರರು ರಾಜರಾಗುವರು.

೪೨-೪೫. ಹದಿನಾಲ್ಕನೆಯ ಮನ್ವಂತರಕ್ಕೆ ಭೌಮನೆಂಬುವನು ಮನುವಾಗು ವನು. ಶುಚಿಯೆಂಬವನು ದೇವೇಂದ್ರನಾಗುವನು. ಚಾಕ್ಷುಷರು, ಪವಿತ್ರರು, ಕನಿಷ್ಠರು, ಭ್ರಾಜಿತರು, ವಾಚಾವೃದ್ಧರು. ಎಂಬ ಐದು ಗಣದೇವತೆಗಳಿರುವರು.

ಅಗ್ನಿಬಾಹುಶ್ಶುಚಿಶ್ಶುಕ್ರೋ ಮಾಗಧೋಽಗ್ನೀಧ್ರ ಏವ ಚ ।
ಯುಕ್ತಸ್ತಥಾಜಿತಶ್ಚಾನ್ಯೋ ಮನುಪುತ್ರಾನತಃ ಶೃಣು ॥ ೪೪ ॥

ಉರುಗಂಭೀರ ಬುದ್ಧ್ಯಾದ್ಯಾ ಮನೋಸ್ತಸ್ಯ ಸುತಾ ನೃಪಾಃ ।
ಕಥಿತಾ ಮುನಿಶಾರ್ದೂಲ ಪಾಲಯಿಷ್ಯಂತಿ ಯೇ ಮಹೀಂ ॥ ೪೫ ॥

ಚತುರ್ಯುಗಾಂತೇ ವೇದಾನಾಂ ಜಾಯತೇ ಕಿಲ ವಿಪ್ಲವಃ ।
ಪ್ರವರ್ತಯಂತಿ ತಾನೇತ್ಯ ಭುವಂ ಸಪ್ತರ್ಷಯೋ ದಿವಃ ॥ ೪೬ ॥

ಕೃತೇ ಕೃತೇ ಸ್ಮೃತೇರ್ವಿಪ್ರ ಪ್ರಣೇತಾ ಜಾಯತೇ ಮನುಃ ।
ದೇವಾ ಯಜ್ಞಭುಜಸ್ತೇ ತು ಯಾವನ್ಮನ್ವಂತರಂ ತು ತತ್ ॥ ೪೭ ॥

ಭವಂತಿ ಯೇ ಮನೋಃ ಪುತ್ರಾಃ ಯಾವನ್ಮನ್ವಂತರಂ ತು ತೈಃ ।
ತದನ್ವಯೋದ್ಭವೈಶ್ಚೈವ ತಾವದ್ಭೂಃ ಪರಿಪಾಲ್ಯತೇ ॥ ೪೮ ॥

---

ಅಗ್ನಿಬಾಹು, ಶುಚಿ, ಶುಕ್ರ, ಮಾಗಧ, ಅಗ್ನೀಧ್ರ, ಯುಕ್ತ, ಅಜಿತ, ಎಂಬವರೇ ಸಪ್ತರ್ಷಿಗಳು. ಊರು, ಗಂಭೀರ, ಬುದ್ಧಿ ಮೊದಲಾದ ಮನುಪುತ್ರರು ರಾಜರಾಗಿ ಭೂಮಿಯನ್ನು ಪಾಲಿಸುವರು.

೪೬-೪೮. ಚತುರ್ಯುಗದ ಕೊನೆಯಲ್ಲಿ ಅಂದರೆ ಕಲಿಯುಗದ ಕೊನೆಯಲ್ಲಿ ಜನರು ವೇದಾಧ್ಯಯನವನ್ನು ಮಾಡದೆ ಸಂಪ್ರದಾಯಗಳನ್ನೆಲ್ಲ ಬಿಟ್ಟುಬಿಡುವರು. ಆಗ ಸಪ್ತರ್ಷಿಗಳು ಮರ್ತ್ಯಲೋಕದಿಂದ ಭೂಮಿಗೆ ಬಂದು ಆ ವೇದಗಳನ್ನು ಹೇಳಿ ಕೊಟ್ಟು ಮತ್ತೆ ಆ ಧರ್ಮವು ನಡೆಯುದಂತೆ ಮಾಡುವರು. ಪ್ರತಿಯೊಂದು ಕೃತಯುಗ ದಲ್ಲಿಯೂ ಮನುವು ಧರ್ಮಶಾಸ್ತ್ರಗಳನ್ನು ರಚಿಸುವನು. ಮತ್ತು ಧರ್ಮಪ್ರವರ್ತಕನೂ ಆಗುವನು. ದೇವತೆಗಳು ಆ ಮನ್ವಂತರವು ಕಳೆಯುವವರೆಗೆ ಯಜ್ಞಭಾಗಗಳನ್ನು ತೆಗೆದುಕೊಳ್ಳುತ್ತಿರುವರು. ಮನುಪುತ್ರರ ವಂಶದಲ್ಲಿ ಹುಟ್ಟಿದವರೇ ಆ ಮನ್ವಂತರವು ಕಳೆಯುವವರೆಗೆ ರಾಜರಾಗುವರು.

ಮನುಸ್ಸಪ್ತರ್ಷಯೋ ದೇವಾ ಭೂಪಾಲಾಶ್ಚ ಮನೋಃಸ್ಸುತಾಃ ।
ಮನ್ವಂತರೇ ಭವಂತ್ಯೇತೇ ಶಕ್ರಶ್ಚೈವಾಧಿಕಾರಿಣಃ ॥ ೪೯ ॥

ಚತುರ್ದಶಭಿರೇತೈಸ್ತು ಗತೈರ್ಮನ್ವಂತರೈರ್ದ್ವಿಜ ।
ಸಹಸ್ರಯುಗಪರ್ಯಂತಃ ಕಲ್ಪೋ ನಿಶ್ಶೇಷ ಉಚ್ಯತೇ ॥ ೫೦ ॥

ತಾವತ್ಪ್ರಮಾಣಾ ಚ ನಿಶಾ ತತೋ ಭವತಿ ಸತ್ತಮ ।
ಬ್ರಹ್ಮರೂಪಧರಶ್ಶೇತೇ ಶೇಷಾಹಾವಂಬು ಸಂಪ್ಲವೇ ॥ ೫೧ ॥

ತ್ರೈಲೋಕ್ಯಮಖಿಲಂ ಗ್ರಸ್ತ್ವಾ ಭಗವಾನಾದಿಕೃದ್ವಿಭುಃ ।
ಸ್ವಮಾಯಾಸಂಸ್ಥಿತೋ ವಿಪ್ರ ಸರ್ವಭೂತೋ ಜನಾರ್ದನಃ ॥ ೫೨ ॥

ತತಃ ಪ್ರಬುದ್ಧೋ ಭಗವಾನ್ಯಥಾಪೂರ್ವಂ ತಥಾ ಪುನಃ ।
ಸೃಷ್ಟಿಂ ಕರೋತ್ಯವ್ಯಯಾತ್ಮಾ ಕಲ್ಪೇ ಕಲ್ಪೇ ರಜೋಗುಣಃ ॥ ೫೩ ॥

---

೪೯-೫೦. ಮನು, ಸಪ್ತರ್ಷಿಗಳು, ದೇವತೆಗಳು, ಮನುಪುತ್ರರಾದ ರಾಜರ, ದೇವೇಂದ್ರ ಇವರು ಪ್ರತಿಯೊಂದು ಮನ್ವಂತರಕ್ಕೂ ಅಧಿಕಾರಿಗಳಾಗಿರುವರು. ಹದಿನಾಲ್ಕು ಮನ್ವಂತರಗಳು ಕಳೆದರೆ ಸಾವಿರ ಚತುರ್ಯುಗದ ಕೊನೆಯಲ್ಲಿ ಪ್ರಳಯವಾಗುವುದು. ಇದನ್ನೇ ಕಲ್ಪಾಂತವೆಂದು ಹೇಳುವರು.

೫೧-೫೨. ಬಹ್ಮನಿಗೆ ಹಗಲಿನ ಪ್ರಮಾಣವಾದ ಸಾವಿರ ಚತುರ್ಯುಗಗಳ ಕಾಲದಷ್ಟೇ ರಾತ್ರಿ ಪ್ರಮಾಣವೂ ಇರುವುದು. ಆಗ ಬ್ರಹ್ಮರೂಪವನ್ನು ಧರಿಸಿದ ಸೃಷ್ಟಿಕರ್ತನಾದ ಭಗವಂತನು ಸಮುದ್ರಮಧ್ಯದಲ್ಲಿ ನಾರಾಯಣರೂಪದಿಂದ ಆದಿಶೇಷನೆಂಬ ಸರ್ಪದಮೇಲೆ ತನ್ನ ಮಾಯೆಯಿಂದ ಸಮಸ್ತ ಭೂತಗಳೊಡನೆ ಕೂಡಿದ ಮೂರು ಲೋಕವನ್ನೂ ನುಂಗಿ ಮಲಗಿರುವನು.

೫೦-೫೩ ಬಳಿಕ ಕಲ್ಪಾದಿಯಲ್ಲಿ ಎಚ್ಚರಗೊಂಡು ಮೊದಲಿನಂತೆ ಪ್ರತಿಕಲ್ಪದಲ್ಲಿಯೂ ರಜೋಗುಣವನ್ನಾಶ್ರಯಿಸಿ ಸೃಷ್ಟಿಯನ್ನು ಮಾಡುವನು. ಮನುಗಳು,

ಮನವೋ ಭೂಭುಜಸ್ಸೇಂದ್ರಾ ದೇವಾಸ್ಸಪ್ತರ್ಷಯಸ್ತಥಾ ।
ಸಾತ್ತ್ವಿಕಾಂಶಸ್ಥಿತಿಕರೋ ಜಗತೋ ದ್ವಿಜಸತ್ತಮ ॥ ೫೪ ॥

ಚತುರ್ಯುಗೇಷ್ವಸೌ ವಿಷ್ಣುಃ ಸ್ಥಿತಿವ್ಯಾಪಾರಲಕ್ಷಣಃ ।
ಯುಗವ್ಯವಸ್ಥಾಂ ಕುರುತೇ ಯಥಾ ಮೈತ್ರೇಯ ತಚ್ಛೃಣು ॥ ೫೫ ॥

ಕೃತೇ ಯುಗೇ ಪರಂ ಜ್ಞಾನಂ ಕಪಿಲಾದಿಸ್ವರೂಪಧೃಕ್ ।
ದದಾತಿ ಸರ್ವಭೂತಾತ್ಮಾ ಸರ್ವಭೂತಹಿತೇ ರತಃ ॥ ೫೬ ॥

ಚಕ್ರವರ್ತಿಸ್ವರೂಪೇಣ ತ್ರೇತಾಯಾಮಪಿ ಸ ಪ್ರಭುಃ ।
ದುಷ್ಟಾನಾಂ ನಿಗ್ರಹಂ ಕುರ್ವನ್ಪರಿಪಾತಿ ಜಗತ್ತ್ರಯಂ ॥ ೫೭ ॥

ವೇದಮೇಕಂ ಚತುರ್ಭಾಗಂ ಕೃತ್ವಾ ಶಾಖಾಶತೈರ್ವಿಭುಃ ।
ಕರೋತಿ ಬಹುಳಂ ಭೂಯೋ ವೇದವ್ಯಾಸಸ್ವರೂಪಧೃಕ್ ॥ ೫೮ ॥

---

ರಾಜರು, ದೇವೇಂದ್ರರು, ದೇವತೆಗಳು, ಸಪ್ತರ್ಷಿಗಳು ಎಂಬ ತನ್ನ ಸಾತ್ವಿಕಾಂಶದಿಂದ ಜಗತ್ತನ್ನು ರಕ್ಷಿಸುವನು.

೫೫. ಮೈತ್ರೇಯನೇ ! ಸ್ಥಿತಿಕಾರ್ಯವನ್ನು ಮಾಡುವ ವಿಷ್ಣುವು ನಾಲ್ಕು ಯುಗಗಳಲ್ಲಿಯೂ ಯುಗವ್ಯವಸ್ಥೆಯನ್ನು ಹೇಗೆ ಮಾಡುವನೆಂಬುದನ್ನು ಹೇಳುವೆನು ಕೇಳು.

೫೬-೬೦. ಸರ್ವಭೂತಸ್ವರೂಪನಾದ ವಿಷ್ಣುವು ಪ್ರಾಣಿಗಳಿಗೆ ಹಿತಮಾಡುವುದರಲ್ಲಾಸಕ್ತನಾಗಿ ಕೃತಯುಗದಲ್ಲಿ ಕಪಿಲಾದಿ ಮುನಿಗಳ ಸ್ವರೂಪದಿಂದ ಸಮಸ್ತ ಪ್ರಾಣಿಗಳಿಗೂ ಶ್ರೇಷ್ಠವಾದ ಜ್ಞಾನೋಪದೇಶವನ್ನು ಮಾಡುವನು. ತ್ರೇತಾಯುಗದಲ್ಲಿ ಚಕ್ರವರ್ತಿಗಳ ರೂಪದಿಂದ ದುಷ್ಟರನ್ನು ನಿಗ್ರಹಿಸುತ್ತ ಮೂರು ಲೋಕವನ್ನೂ ಕಾಪಾಡುವನು. ದ್ವಾಪರ ಯುಗದಲ್ಲಿ ವೇದವ್ಯಾಸರ ರೂಪದಿಂದ ವೇದವನ್ನು ನಾಲ್ಕು ಭಾಗವಾಗಿಯೂ, ನೂರಾರು ಶಾಖೆಗಳುಳ್ಳದಾಗಿಯೂ ವಿಭಾಗಿಸಿ ಕಲಿಯುಗದ ಕೊನೆ

ವೇದಾಂಸ್ತು ದ್ವಾಪರೇವ್ಯಸ್ಯ ಕಲೇರಂತೇ ಪುನರ್ಹರಿಃ ।
ಕಲ್ಕಿಸ್ವರೂಪೀ ದುರ್ವೃತ್ತಾನ್ಮಾರ್ಗೇ ಸ್ಥಾಪಯತಿ ಪ್ರಭುಃ ॥ ೫೯ ॥

ಏವಮೇಷ ಜಗತ್ಸರ್ವಂ ಕರೋತಿ ಪರಿಪಾತಿ ಚ ।
ಹಂತಿ ಚಾಂಶೇಷ್ವನಂತಾತ್ಮಾ ನಾಸ್ತ್ಯಸ್ಮಾದ್ವ್ಯತಿರೇಕಿ ಯತ್ ॥ ೬೦ ॥

ಭೂತಂ ಭವ್ಯಂ ಭವಿಷ್ಯದ್ವಾ ಸರ್ವಭೂತಾನ್ಮಹಾತ್ಮನಃ ।
ತದತ್ರಾನ್ಯತ್ರ ವಾ ವಿಪ್ರ ಸದ್ಭಾವಃ ಕಥಿತಸ್ತವ ॥ ೬೧ ॥

ಮನ್ವಂತರಾಣ್ಯಶೇಷಾಣಿ ಕಥಿತಾನಿ ಮಯಾ ತವ ।
ಮನ್ವಂತರಾಧಿಪಾಶ್ಚೈವ ಕಿಮನ್ಯತ್ಕಥಯಾಮಿ ತೇ ॥ ೬೨ ॥

ಇತಿ ಶ್ರೀ ವಿಷ್ಣುಪುರಾಣೇ ತೃತೀಯಾಂಶೇ ದ್ವಿತೀಯೋಽಧ್ಯಾಯಃ

---

ಯಲ್ಲಿ ಕಲ್ಕಿರೂಪನಾಗಿ ದುಷ್ಟರನ್ನು ನಿಗ್ರಹಿಸಿ ಧರ್ಮಮಾರ್ಗವನ್ನು ಸ್ಥಾಪಿಸುವನು. ಹೀಗೆ ಈ ಮಹಾವಿಷ್ಣುವು ಸಕಲ ಜಗತ್ತನ್ನೂ ಸೃಷ್ಟಿಸಿ, ರಕ್ಷಿಸಿ ಕೊನೆಗೆ ನಾಶವನ್ನು ಮಾಡಿ ತಾನು ಮಾತ್ರ ಅನಂತರೂಪನಾಗಿರುವನು. ಅನಂತರೂಪನಾದ ವಿಷ್ಣುವೆಂಬ ಆತ್ಮತತ್ವಕ್ಕಿಂತ ಬೇರೆಯಾದ ತತ್ವವು ಮತ್ತೊಂದಿಲ್ಲ.

೬೧. ಮೈತ್ರೇಯನೇ! ಈ ಪ್ರಕರಣಲ್ಲಿಯೂ, ಬೇರೆ ಪ್ರಕರಣದಲ್ಲಿಯೂ ಸರ್ವಭೂತ ಸ್ವರೂಪನಾದ ಭಗವಂತನಿಗಿಂತ ಬೇರೆಯಾದ ವಸ್ತುವು ತ್ರಿಕಾಲ ಗಳಲ್ಲಿಯೂ ಇಲ್ಲವೆಂಬುದನ್ನು ನಿನಗೆ ಹೇಳಿದೆನು. ಇದೇ ಪರಮಾತ್ಮನ ಸದ್ರೂಪವು.

೬೨. ಮೈತ್ರೇಯನೇ ! ಸಮಸ್ತ ಮನ್ವಂತರಾಧಿಪತಿಗಳನ್ನೂ ವಿಸ್ತಾರವಾಗಿ ಹೇಳಿದೆನು. ಮತ್ತೇನನ್ನು ಹೇಳಬೇಕೆಂಬುದನ್ನು ಹೇಳು, ಎಂದು ಹೇಳಿದನು.

ಎಂಬಲ್ಲಿಗೆ ಶ್ರೀವಿಷ್ಣು ಪುರಾಣದ ತೃತೀಯಾಂಶದಲ್ಲಿ
ಎರಡನೆಯ ಅಧ್ಯಾಯವು ಮುಗಿದುದು.

ಶ್ರೀಃ

# ಶ್ರೀ ವಿಷ್ಣುಪುರಾಣೇ ತೃತೀಯಾಂಶೇ

## ತೃತೀಯೋಽಧ್ಯಾಯಃ

---

ಮೈತ್ರೇಯಃ

**ಜ್ಞಾತಮೇತನ್ಮಯಾ ತ್ವತ್ತೋ ಯಥಾ ಸರ್ವಮಿದಂ ಜಗತ್ ।**
**ವಿಷ್ಣುಃ ವಿಷ್ಣೌ ವಿಷ್ಣುತಶ್ಚ ನ ಪರಂ ವಿದ್ಯತೇ ತತಃ ॥ ೧ ॥**

**ಏತತ್ತು ಶ್ರೋತುಮಿಚ್ಛಾಮಿ ವ್ಯಸ್ತಾ ವೇದಾ ಮಹಾತ್ಮನಾ ।**
**ವೇದವ್ಯಾಸ ಸ್ವರೂಪೇಣ ಯಥಾ ತೇನ ಯುಗೇ ಯುಗೇ ॥ ೨ ॥**

**ಯಸ್ಮಿನ್ಯಸ್ಮಿನ್ಯುಗೇ ವ್ಯಾಸೋ ಯೋ ಯ ಆಸೀನ್ಮಹಾಮುನೇ ।**
**ತಂ ತಮಾಚಕ್ಷ್ವ ಭಗವನ್ ಶಾಖಾಭೇದಾಂಶ್ಚ ಮೇ ವದ ॥ ೩ ॥**

---

## ಮೂರನೆಯ ಅಧ್ಯಾಯವು

೧–೩. ಮೈತ್ರೇಯನು "ಪರಾಶರರೇ! ಈ ಸಮಸ್ತ ಜಗತ್ತು ವಿಷ್ಣು ಸ್ವರೂಪವಾದುದೆಂದೂ, ವಿಷ್ಣುವಿನಲ್ಲಿಯೇ ಇರುವುದೆಂದೂ, ವಿಷ್ಣುವಿನಿಂದಲೇ ಹುಟ್ಟಿತೆಂದೂ, ವಿಷ್ಣುತತ್ವಕ್ಕಿಂತ ಬೇರೆ ತತ್ವವಿಲ್ಲವೆಂದೂ, ತಮ್ಮಿಂದ ತಿಳಿದುಕೊಂಡೆನು. ಪ್ರತಿಯುಗದಲ್ಲಿಯೂ ವೇದವ್ಯಾಸ ಸ್ವರೂಪನಾದ ವಿಷ್ಣುವು ವೇದವನ್ನು ಹೇಗೆ ವಿಭಾಗ ಮಾಡಿದನೆಂಬುದನ್ನು ಕೇಳಬೇಕೆಂದಿರುವೆನು. ಯಾವ ಯಾವ ಯುಗದಲ್ಲಿ ಯಾರು ಯಾರು ವ್ಯಾಸರಾಗಿದ್ದರೆಂಬುದನ್ನೂ, ವೇದ ಶಾಖಾ ಭೇದಗಳನ್ನೂ ನನಗೆ ಹೇಳಬೇಕು" ಎಂದನು.

ಶ್ರೀ ಪರಾಶರಃ

ವೇದದ್ರುಮಸ್ಯ ಮೈತ್ರೇಯ ಶಾಖಾಭೇದಾಸ್ಸಹಸ್ರಶಃ ।
ನ ಶಕ್ಯಾ ವಿಸ್ತರಾದ್ವಕ್ತುಂ ಸಂಕ್ಷೇಪೇಣ ಶೃಣುಷ್ವ ತಂ ॥ ೪ ॥

ದ್ವಾಪರೇ ದ್ವಾಪರೇ ವಿಷ್ಣುರ್ವ್ಯಾಸರೂಪೀ ಮಹಾಮುನೇ ।
ವೇದಮೇಕಂ ಸುಬಹುಧಾ ಕುರುತೇ ಜಗತೋ ಹಿತಃ ॥ ೫ ॥

ವೀರ್ಯಂ ತೇಜೋ ಬಲಂ ಚಾಲ್ಪಂ ಮನುಷ್ಯಾಣಾಮವೇಕ್ಷ್ಯ ಚ ।
ಹಿತಾಯ ಸರ್ವಭೂತಾನಾಂ ವೇದಭೇದಾನ್ಕರೋತಿ ಸಃ ॥ ೬ ॥

ಯಯಾ ಸ ಕುರುತೇ ತನ್ವಾ ವೇದಮೇಕಂ ಪೃಥಕ್ಪ್ರಭುಃ ।
ವೇದವ್ಯಾಸಾಭಿಧಾನಾ ತು ಸಾ ಸಾ ಮೂರ್ತಿರ್ಮಧುದ್ವಿಷಃ ॥ ೭ ॥

ಯಸ್ಮಿನ್ಮನ್ವಂತರೇ ವ್ಯಾಸಾ ಯೇ ಯೇ ತಾಂಸ್ತಾನ್ನಿಬೋಧ ಮೇ ।
ಯಥಾ ಚ ಭೇದಶ್ಶಾಖಾನಾಂ ವ್ಯಾಸೇನ ಕ್ರಿಯತೇ ಮುನೇ ॥ ೮ ॥

---

೪-೬. ಪರಾಶರರು ಹೇಳುವರು :— ಮೈತ್ರೇಯನೇ ! ವೇದವೆಂಬ ವೃಕ್ಷಕ್ಕೆ ಸಾವಿರಾರು ಕೊಂಬೆಗಳಿರುವುವು. ಅವನ್ನು ವಿಸ್ತಾರವಾಗಿ ಹೇಳಲು ಸಾಧ್ಯವಿಲ್ಲ. ಸಂಗ್ರಹವಾಗಿ ಹೇಳುವುದನ್ನು ಕೇಳು. ಪ್ರತಿ ದ್ವಾಪರ ಯುಗದಲ್ಲಿಯೂ ವಿಷ್ಣುವು ವ್ಯಾಸರೂಪದಿಂದ ಒಂದೇ ಆಗಿದ್ದ ವೇದವನ್ನು ಲೋಕಹಿತಕ್ಕಾಗಿ ಅನೇಕ ಭಾಗವಾಗಿ ಮಾಡುವನು. ಮನುಷ್ಯರಿಗೆ ವೇದಾಭ್ಯಾಸದ ವಿಷಯದಲ್ಲಿ ಉತ್ಸಾಹ, ಬುದ್ಧಿ, ಉಚ್ಚಾರಣಾ ಶಕ್ತಿ ಇವುಗಳು ಕಡಿಮೆಯಾಗಿರುವುದನ್ನು ನೋಡಿ ಸಮಸ್ತ ಪ್ರಾಣಿಗಳ ಹಿತಕ್ಕಾಗಿ ವೇದ ವಿಭಾಗವನ್ನು ಮಾಡುವನು.

೭-೮. ವಿಷ್ಣುವು ಯಾವ ಶರೀರದಿಂದ ಒಂದೇ ಆಗಿದ್ದ ವೇದವನ್ನು ವಿಭಾಗ ಮಾಡುವನೋ ವೇದವ್ಯಾಸನೆಂಬ ಹೆಸರಿನ ಆ ಶರೀರಗಳೆಲ್ಲವೂ ವಿಷ್ಣುವಿನ ಮೂರ್ತಿ ರೂಪವಾದುವು. ಯಾವ ಮನ್ವಂತರದಲ್ಲಿ ಯಾರು ಯಾರು ವ್ಯಾಸರಾಗುವರೋ

ಅಷ್ಟಾವಿಂಶತಿಕೃತ್ವೋ ವೈ ವೇದೋವ್ಯಸ್ತೋ ಮಹರ್ಷಿಭಿಃ ।
ವೈವಸ್ವತೇಽಂತರೇ ತಸ್ಮಿನ್ ದ್ವಾಪರೇಷು ಪುನಃ ಪುನಃ ॥ ೯ ॥

ವೇದವ್ಯಾಸಾ ವ್ಯತೀತಾ ಯೇ ಅಷ್ಟಾವಿಂಶತಿಸತ್ತಮ ।
ಚತುರ್ಧಾ ಯೈಃ ಕೃತೋ ವೇದೋ ದ್ವಾಪರೇಷು ಪುನಃ ಪುನಃ ॥ ೧೦ ॥

ದ್ವಾಪರೇ ಪ್ರಥಮೋ ವ್ಯಸ್ತೋ ಸ್ವಯಂ ವೇದೋಽಸ್ವಯಂಭುವಾ ।
ದ್ವಿತೀಯೇ ದ್ವಾಪರೇ ಚೈವ ವೇದವ್ಯಾಸಃ ಪ್ರಜಾಪತಿಃ ॥ ೧೧ ॥

ತೃತೀಯೇ ಚೋಶನಾ ವ್ಯಾಸಶ್ಚತುರ್ಥೇ ಚ ಬೃಹಸ್ಪತಿಃ ।
ಸವಿತಾ ಪಂಚಮೋ ವ್ಯಾಸಃ ಷಷ್ಠೇ ಮೃತ್ಯುಸ್ಸ್ಮೃತಃ ಪ್ರಭುಃ ॥ ೧೨ ॥

ಸಪ್ತಮೇ ಚ ತಥೈವೇಂದ್ರೋ ವಸಿಷ್ಠಶ್ಚಾಷ್ಟಮೇ ಸ್ಮೃತಃ ।
ಸಾರಸ್ವತಶ್ಚ ನವಮೇ ತ್ರಿಧಾಮಾ ದಶಮೇ ಸ್ಮೃತಃ ॥ ೧೩ ॥

---

ಅವರು ವೇದಶಾಖಾ ಭೇದಗಳನ್ನು ಹೇಗೆ ಮಾಡುವರೋ ಅದನ್ನು ಹೇಳುವೆನು ಕೇಳು, ವೈವಸ್ವತಮನ್ವಂತರದ ಪ್ರತಿ ದ್ವಾಪರ ಯುಗದಲ್ಲಿಯೂ ಇಪ್ಪತ್ತೆಂಟುಬಾರಿ ವೇದ ವಿಭಾಗವನ್ನು ಮಾಡಲಾಯಿತು.

೧೦-೧೩. ಈ ಮನ್ವಂತರದಲ್ಲಿ ಇಪ್ಪತ್ತೆಂಟು ದ್ವಾಪರ ಯುಗಗಳು ಕಳೆದು ಹೋದುದರಿಂದ ಇಪ್ಪತ್ತೆಂಟು ಜನ ವೇದವ್ಯಾಸರು ಕಳೆದು ಹೋದರು. ಅವರು ದ್ವಾಪರಯುಗದಲ್ಲಿ ವೇದವನ್ನು ಪುನಃ ನಾಲ್ಕು ಭಾಗವಾಗಿ ಮಾಡಿದರು. ಮೊದಲನೆಯ ದ್ವಾಪರ ಯುಗದಲ್ಲಿ ಸೃಷ್ಟಿಕರ್ತನಾದ ಬ್ರಹ್ಮನೇ ವೇದ ವಿಭಾಗವನ್ನು ಮಾಡಿದನು. ಎರಡನೆಯ ದ್ವಾಪರ ಯುಗದಲ್ಲಿ ಮನುವೂ, ಮೂರನೆಯದರಲ್ಲಿ ಶುಕ್ರನೂ, ನಾಲ್ಕನೆಯದರಲ್ಲಿ ಬೃಹಸ್ಪತಿಯೂ, ಐದನೆಯದರಲ್ಲಿ ಸೂರ್ಯನೂ, ಆರನೆಯದರಲ್ಲಿ ಮೃತ್ಯುವೂ, ಏಳನೆಯದರಲ್ಲಿ ಇಂದ್ರನೂ, ಎಂಟನೆಯದರಲ್ಲಿ ವಸಿಷ್ಠನೂ, ಒಂಭತ್ತನೆಯದರಲ್ಲಿ ಸಾರಸ್ವತನೂ, ಹತ್ತನೆಯದರಲ್ಲಿ ತ್ರಿಧಾಮನೂ ವ್ಯಾಸರಾಗಿದ್ದರು.

ಏಕಾದಶೇ ತು ತ್ರಿವೃಷಾ ಭರದ್ವಾಜಸ್ತತಃ ಪರಃ ।
ತ್ರಯೋದಶೇ ಚಾಂತರಿಕ್ಷೋ ಧರ್ಮೀ ಚಾಪಿ ಚತುರ್ದಶೇ ॥ ೧೪ ॥

ತ್ರಯ್ಯಾರುಣಿಃ ಪಂಚದಶೇ ಷೋಡಶೇ ತು ಧನಂಜಯಃ ।
ಕೃತಂಜಯಸ್ಸಪ್ತದಶೇ ಸಂಜಯೋಽಷ್ಟಾದಶಸ್ಸ್ಮೃತಃ ॥ ೧೫ ॥

ತತೋ ವ್ಯಾಸೋ ಭರದ್ವಾಜೋ ಭರದ್ವಾಜಾತ್ತು ಗೌತಮಃ ।
ಗೌತಮಾದುತ್ತಮೋ ವ್ಯಾಸೋ ಹರ್ಯಾತ್ಮಾ ಯೋಽಭಿಧೀಯತೇ ॥ ೧೬ ॥

ಅಥ ಹರ್ಯಾತ್ಮನೋ ವೇನಸ್ಸ್ಮೃತೋ ವಾಜಿಶ್ರವಾಸ್ತು ಯಃ ।
ಸೋಮಶುಷ್ಮಾಯಣಸ್ತಸ್ಮಾತ್ತೃಣಬಿಂದುರಿತಿ ಸ್ಮೃತಃ ॥ ೧೭ ॥

ಋಕ್ಷೋಽಭೂದ್ಭಾರ್ಗವಸ್ತಸ್ಮಾದ್ವಾಲ್ಮೀಕಿರ್ಯೋಽಭಿಧೀಯತೇ ।
ತಸ್ಮಾದಸ್ಮತ್ಪಿತಾ ಶಕ್ತಿರ್ವ್ಯಾಸಸ್ತಸ್ಮಾದಹಂ ಮುನೇ ॥ ೧೮ ॥

ಜಾತುಕರ್ಣೋಽಭವನ್ಮತ್ತಃ ಕೃಷ್ಣದ್ವೈಪಾಯನಸ್ತತಃ ।
ಅಷ್ಟಾವಿಂಶತಿರಿತ್ಯೇತೇ ವೇದವ್ಯಾಸಾಃ ಪ್ರಕೀರ್ತಿತಾಃ ॥ ೧೯ ॥

ಏಕೋ ವೇದಶ್ಚತುರ್ಧಾ ತು ತೈಃ ಕೃತೋ ದ್ವಾಪರಾದಿಷು ॥ ೨೦ ॥

---

೧೪-೧೯. ಕ್ರಮವಾಗಿ ಹನ್ನೊಂದರಿಂದ ಇಪ್ಪತ್ತೆಂಟರವರೆಗೆ ತ್ರಿವೃಷಾ, ಭರದ್ವಾಜ, ಅಂತರಿಕ್ಷ, ಧರ್ಮಿ, ತ್ರಯ್ಯಾರುಣಿ, ಧನಂಜಯ, ಕೃತಂಜಯ, ಸಂಜಯ, (ಚರಣಂಜಯ) ಭರದ್ವಾಜ, ಗೌತಮ, ಉತ್ತಮ, (ಹರ್ಯಾತ್ಮ) ವೇನ, (ವಾಜಶ್ರವ) ಸೋಮಶುಷ್ಮಾಯಣ, (ತೃಣಬಿಂದು) ಋಕ್ಷನೆಂಬ ಭಾರ್ಗವ, (ವಾಲ್ಮೀಕಿ) ಶಕ್ತಿ, ಪರಾಶರ, ಜಾತೂಕರ್ಣ, ಕೃಷ್ಣದ್ವೈಪಾಯನ ಎಂಬುವರು ವ್ಯಾಸರಾದರು.

೨೦-೨೧. ಒಂದೇ ಆಗಿದ್ದ ವೇದವನ್ನು ಪ್ರತಿದ್ವಾಪರ ಯುಗದ ಕೊನೆಯ ಸಂಧಿಕಾಲದಲ್ಲಿ ವ್ಯಾಸರು ನಾಲ್ಕು ಭಾಗವಾಗಿ ಮಾಡಿದರು. ನನ್ನ ಮಗನಾದ

ಭವಿಷ್ಯೇ ದ್ವಾಪರೇ ಚಾಪಿ ದ್ರೌಣಿರ್ವ್ಯಾಸೋ ಭವಿಷ್ಯತಿ ।
ವ್ಯತೀತೇ ಮಮ ಪುತ್ರೇಽಸ್ಮಿನ್ ಕೃಷ್ಣದ್ವೈಪಾಯನೇ ಮುನೇ ॥ ೨೧ ॥

ಧ್ರುವಮೇಕಾಕ್ಷರಂ ಬ್ರಹ್ಮ ಓಮಿತ್ಯೇವ ವ್ಯವಸ್ಥಿತಂ ।
ಬೃಹತ್ವಾದ್ಬೃಂಹಣತ್ವಾಚ್ಚ ತದ್ಬ್ರಹ್ಮೇತ್ಯಭಿಧೀಯತೇ ॥ ೨೨ ॥

ಪ್ರಣವಾವಸ್ಥಿತಂ ನಿತ್ಯಂ ಭೂರ್ಭುವಸ್ಸ್ವರಿತೀರ್ಯತೇ ।
ಋಗ್ಯಜುಸ್ಸಾಮಾಥರ್ವಾಣಂ ಯತ್ತಸ್ಮೈ ಬ್ರಹ್ಮಣೇ ನಮಃ ॥ ೨೩ ॥

---

ಕೃಷ್ಣದ್ವೈಪಾಯನನ ಅವಧಿಯು ಕಳೆದ ಮೇಲೆ ಮುಂದಿನ ದ್ವಾಪರಯುಗದಲ್ಲಿ ದ್ರೋಣಪುತ್ರನಾದ ಅಶ್ವತ್ಥಾಮನು ವ್ಯಾಸನಾಗುವನು.

೨೨. ಮೊದಲನೆಯ ವೇದವು ಓಂ ಎಂಬ ನಾಶರಹಿತವಾದ ಏಕಾಕ್ಷರ ರೂಪವಾಗಿದ್ದಿತು. ಓಂಕಾರ ವಾಚ್ಯವಾದ ಪರಬ್ರಹ್ಮ ತತ್ವವು ಅಳತೆಗೆ ಸಿಕ್ಕದಾದುದ ರಿಂದಲೂ ವೇದಗಳಿಗೆ ಕಾರಣವಾದುದರಿಂದಲೂ ಓಂಕಾರ ರೂಪವಾದ ಅಕ್ಷರವನ್ನು ಬ್ರಹ್ಮನೆಂದು ಹೇಳುವರು. “ ಯಸ್ಮಾದುಚ್ಚಾರ್ಯಮಾಣ ಏವಬೃಹತಿ–ಬೃಂಹಯತಿ ತಸ್ಮಾದುಚ್ಯತೇ ಬ್ರಹ್ಮೇತಿ ” ಎಂದು ಶ್ರುತಿ ಪ್ರಮಾಣವಿರುವುದು.

೨೩. ಭೂರ್ಭುವಸ್ಸುವಃ ಎಂಬ ವ್ಯಾಹೃತಿ ಮಂತ್ರವು ಯಾವಾಗಲೂ ಓಂಕಾರ ರೂಪವಾದ ಪ್ರಣವದಲ್ಲಿ ಇರುವುದೆಂದು ಹೇಳುವರು. “ ಭೂರಿತಿ ಋಗ್ವೇದೋಭುವ ಇತಿ ಯಜುರ್ವೇದಸ್ಸುವರಿತಿ ಸಾಮವೇದಃ ” “ ಓಮಿತಿ ಬ್ರಹ್ಮ, ಓಮಿತೀ ದಗ್ಂ ಸರ್ವಂ ” ಎಂಬ ವೇದವಚನವು ಹೇಳುವಂತೆ ಋಗ್ಯಜುಸ್ಸಾಮಾ ಥರ್ವಣ ರೂಪವೂ ಪ್ರಣವಸ್ವರೂಪವೂ ಆದ ಪರಬ್ರಹ್ಮನಿಗೆ ನಮಸ್ಕಾರ ಮಾಡುವೆನು.

ಜಗತಃ ಪ್ರಳಯೋತ್ಪತ್ತ್ಯೋರ್ಯತ್ತತ್ಕಾರಣ ಸಂಜ್ಞಿತಂ ।
ಮಹತಃ ಪರಮಂ ಗುಹ್ಯಂ ತಸ್ಮೈ ಸುಬ್ರಹ್ಮಣೇ ನಮಃ ॥ ೨೪ ॥

ಅಗಾಧಾಪಾರಮಕ್ಷಯ್ಯಂ ಜಗತ್ಸಂಮೋಹನಾಲಯಂ ।
ಸ್ವಪ್ರಕಾಶಪ್ರವೃತ್ತಿಭ್ಯಾಂ ಪುರುಷಾರ್ಥಪ್ರಯೋಜನಂ ॥ ೨೫ ॥

ಸಾಂಖ್ಯಜ್ಞಾನವತಾಂ ನಿಷ್ಠಾ ಗತಿಶ್ಶಮದಮಾತ್ಮನಾಂ ।
ಯತ್ತದವ್ಯಕ್ತಮಮೃತಂ ಪ್ರವೃತ್ತಿರ್ಬ್ರಹ್ಮ ಶಾಶ್ವತಂ ॥ ೨೬ ॥

ಪ್ರಧಾನಮಾತ್ಮಯೋನಿಶ್ಚ ಗುಹಾವಾಸಂ ಚ ಕಥ್ಯತೇ ।
ಅವಿಭಾಗಂ ತಥಾ ಶುಕ್ರಮಕ್ಷಯಂ ಬಹುಧಾತ್ಮಕಂ ॥ ೨೭ ॥

---

೨೪. ಜಗತ್ತಿನ ಉತ್ಪತ್ತಿ ಪ್ರಳಯಗಳಿಗೆ ಕಾರಣವೂ ಪ್ರಥಮ ಕಾರ್ಯವಾದ ಮಹತ್ತತ್ವಕ್ಕಿಂತ ಸೂಕ್ಷ್ಮವೂ ಗುಣಗಳಿಂದ ಕೂಡಿದ ಪೂಜ್ಯವೂ ಗೋಪ್ಯವೂ ಆದ ಪ್ರಕೃತಿ ರೂಪವಾದ ಪರಬ್ರಹ್ಮನಿಗೆ ನಮಸ್ಕಾರವು.

೨೫–೨೬. ಅನಾದಿಯೂ ಸರ್ವಗತವೂ ಆದುದರಿಂದ ನಾಶವಾಗದಿರುವ ತಮೋಗುಣಕ್ಕೆ ಆಶ್ರಯವಾದ ತನ್ನ ಪ್ರಕಾಶ ಮತ್ತು ಕಾರ್ಯಗಳಿಂದ ಪುರುಷನಿಗೆ ಸುಖಾನುಭವ ರೂಪವಾದ ಫಲವನ್ನುಂಟುಮಾಡುವ ಮೂಲಪ್ರಕೃತಿಯನ್ನು ಉಪಾಸನ ಮಾಡುವವರಿಗೆ ಪ್ರಾಪ್ಯಸ್ಥಾನವಾದ ಇಂದ್ರಿಯ ನಿಗ್ರಹವುಳ್ಳವರಿಗೆ ಪ್ರಕೃತಿ ಪುರುಷ ವಿವೇಕ ಜ್ಞಾನಕ್ಕೆ ಕಾರಣವಾದ ಇಂದ್ರಿಯ ಗೋಚರವಲ್ಲದಿದ್ದರೂ ನಾಶರಹಿತವಾದ ಕ್ರಿಯಾರೂಪವಾಗಿ ಸಂಕೋಚ ವಿಕಾಸಗಳಿಂದ ಕೂಡಿ ಯಾವಾಗಲೂ ಇರುತ್ತಿರುವ

೨೭. ಸಮಸ್ತವನ್ನೂ ಒಳಗೊಂಡಿರುವ ಸ್ವತಸ್ಸಿದ್ಧವಾದ ಸಂಸಾರ ಕಾರಣವಾಗಿ ಅವಿದ್ಯೆಗೆ ಆಶ್ರಯವಾದ ವಿಭಾಗಮಾಡಲು ಸಾಧ್ಯವಲ್ಲವ, ಪ್ರಕಾಶಮಾನವಾದ ಕ್ಷೀಣವಾಗದಿರುವ, ಗುಣಗಳ ಚಲನೆಯಿಂದ ನಾನಾರೂಪವಾಗಿರುವ.

ಪರಮಬ್ರಹ್ಮಣೇ ತಸ್ಮೈ ನಿತ್ಯಮೇವ ನಮೋ ನಮಃ ।
ಯದ್ರೂಪಂ ವಾಸುದೇವಸ್ಯ ಪರಮಾತ್ಮಸ್ವರೂಪಿಣಃ ॥ ೨೮ ॥

ಏತದ್ಬ್ರಹ್ಮ ತ್ರಿಧಾ ಭೇದಮಭೇದಮಪಿ ಸ ಪ್ರಭುಃ ।
ಸರ್ವಭೂತೇಷ್ವಭೇದೋಽಸೌ ಭಿದ್ಯತೇ ಭಿನ್ನಬುದ್ಧಿಭಿಃ ॥ ೨೯ ॥

ಸ ಋಙ್ಮಯಸ್ಸಾಮಮಯಸ್ಸರ್ವಾತ್ಮಾ ಸ ಯಜುರ್ಮಯಃ ।
ಋಗ್ಯಜುಸ್ಸಾಮಸಾರಾತ್ಮಾ ಸ ಏವಾತ್ಮಾ ಶರೀರಿಣಾಂ ॥ ೩೦ ॥

ಸ ಭಿದ್ಯತೇ ವೇದಮಯಸ್ಸವೇದಂ
ಕರೋತಿ ವೇದೈರ್ಬಹುಭಿಸ್ಸಶಾಖಂ ।

---

೨೮. ಪರಮಾತ್ಮ ಸ್ವರೂಪನಾಗಿ ವಾಸುದೇವನೆಂಬ ರೂಪದಿಂದಿರುವ ಓಂಕಾರ ರೂಪನಾದ ಆ ಪರಬ್ರಹ್ಮನಿಗೆ ಯಾವಾಗಲೂ ನಮಸ್ಕಾರ ಮಾಡುವೆನು. ' ತಸ್ಯಾಶ್ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ ಓಮಿತಿಬ್ರಹ್ಮ ' ಇತ್ಯಾದಿ ಶ್ರುತಿಗಳೇ ಇದಕ್ಕೆ ಪ್ರಮಾಣವು.

೨೯. ಓಂಕಾರವೆಂಬ ಒಂದೇ ಅಕ್ಷರವಾಗಿರುವ ಪ್ರಣವವೆಂಬ ಬ್ರಹ್ಮತತ್ವವು ಭೇದವಿಲ್ಲದಿದ್ದರೂ ' ಭೂರ್ಭುವಸ್ಸುವಃ ' ಎಂಬ ವ್ಯಾಹೃತಿಯಿಂದ ಮೂರು ಭೇದವಾಗಿರುವುದು. ಆ ತತ್ವವೇ ಸರ್ವೇಶ್ವರನಾದ ವಾಸುದೇವ ಸ್ವರೂಪವಾದುದು. ವಾಸುದೇವನು ಸಮಸ್ತ ಪ್ರಾಣಿಗಳಲ್ಲಿಯೂ ಭೇದವಿಲ್ಲದಿರುವನು. ಭೇದ ಬುದ್ಧಿಯುಳ್ಳವರು ಆ ಒಂದೇ ತತ್ವವನ್ನು ಭೇದಗಳಿಂದ ಕೂಡಿದುದೆಂದು ತಿಳಿಯುತ್ತಾರೆ. (ದೃಶ್ಯತೇಽಭಿನ್ನ ಬುದ್ಧಿಭಿಃ ಎಂಬ ಪಾಠಾಂತರದಲ್ಲಿ ವಿಷಯ ದೃಷ್ಟಿಯಿಲ್ಲದವರು ಅಭಿನ್ನಬುದ್ಧಿಗಳು ಇವರು ಪರಮಾತ್ಮನು ಸಮಸ್ತ ಪ್ರಾಣಿಗಳಲ್ಲಿಯೂ ಅಭೇದರೂಪದಿಂದಿರುವನೆಂದು ತಿಳಿವರೆಂದು ಅರ್ಥವು)

೩೦. ಸರ್ವಾತ್ಮನಾದ ಪರಮಾತ್ಮನು ಋಗ್ವೇದ ಸ್ವರೂಪನೂ, ಸಾಮವೇದ ಸ್ವರೂಪನೂ, ಯಜುರ್ವೇದ ಸ್ವರೂಪನೂ ಆಗಿ ಋಗ್ಯಜುಸ್ಸಾಮವೇದ ಸಾರವಾದ ಪ್ರಣವ ಸ್ವರೂಪನಾಗಿ ಶರೀರವುಳ್ಳ ಸಮಸ್ತ ಜೀವರಿಗೂ ಆತ್ಮನಾಗಿರುವನು.

ಶಾಖಾಪ್ರಣೇತಾ ಸ ಸಮಸ್ತಶಾಖಾ
ಜ್ಞಾನಸ್ವರೂಪೋ ಭಗವಾನನಂತಃ ॥ ೩೧ ॥

ಇತಿ ಶ್ರೀ ವಿಷ್ಣುಪುರಾಣೇ ತೃತೀಯಾಂಶೇ ತೃತೀಯೋಽಧ್ಯಾಯಃ

---

೩೧. ವೇದ ಮಂತ್ರಸ್ವರೂಪನಾದ ಆ ಪರಮಾತ್ಮನೇ ಋಗ್ವೇದಾದಿ ರೂಪದಿಂದ ಬೇರೆ ಬೇರೆಯಾಗುವನು. ಅವನೇ ವ್ಯಾಸರೂಪದಿಂದ ಅನೇಕ ವೇದಮಂತ್ರಗಳಿಂದ ಅನೇಕ ಶಾಖೆಗಳನ್ನು ಮಾಡುವನು. ಸಣ್ಣ ಸಣ್ಣ ಶಾಖಾಭೇದಗಳನ್ನು ಮಾಡಿದ ಪೈಲಾದಿ ವ್ಯಾಸ ಶಿಷ್ಯರೂಪನೂ ಅವನೇ ಆಗಿರುವನು. ಅವನೇ ಅನಂತನೆನಿಸಿಕೊಂಡು ಅನಂತ ಶಾಖಾ ಸ್ವರೂಪನಾಗಿಯೂ ಇರುವನು.

ಎಂಬಲ್ಲಿಗೆ ಶ್ರೀ ವಿಷ್ಣುಪುರಾಣದ ತೃತೀಯಾಂಶದಲ್ಲಿ
ಮೂರನೆಯ ಅಧ್ಯಾಯವು ಮುಗಿದುದು.

---

ಶ್ರೀಃ

# ಶ್ರೀ ವಿಷ್ಣುಪುರಾಣೇ ತೃತೀಯಾಂಶೇ

## ಚತುರ್ಥೋಽಧ್ಯಾಯಃ

---

### ಶ್ರೀ ಪರಾಶರಃ

ಆದ್ಯೋ ವೇದಶ್ಚತುಷ್ಪಾದಶ್ಶತಸಾಹಸ್ರಸಂಮಿತಃ ।
ತತೋ ದಶಗುಣಃ ಕೃತ್ಸ್ನೋ ಯಜ್ಞೋಽಯಂ ಸರ್ವಕಾಮಧುಕ್ ॥ ೧ ॥

ತತೋತ್ರ ಮತ್ಸುತೋ ವ್ಯಾಸ ಅಷ್ಟಾವಿಂಶತಿಮೇಽಂತರೇ ।
ವೇದಮೇಕಂ ಚತುಷ್ಪಾದಂ ಚತುರ್ಧಾ ವ್ಯಭಜತ್ಪ್ರಭುಃ ॥ ೨ ॥

ಯಥಾ ಚ ತೇನ ತೇ ವ್ಯಸ್ತಾ ವೇದವ್ಯಾಸೇನ ಧೀಮತಾ ।
ವೇದಾಸ್ತಥಾ ಸಮಸ್ತೈಸ್ತೈರ್ವ್ಯಸ್ತಾ ವ್ಯಾಸೈಸ್ತಥಾಮಯಾ ॥ ೩ ॥

---

### ನಾಲ್ಕನೆಯ ಅಧ್ಯಾಯವು

೧–೪. ಪರಮಾತ್ಮನಿಂದ ಹುಟ್ಟಿದ ಋಗಾದಿ ಚತುರ್ವೇದ ಸಮೂಹ ರೂಪವಾದ ವೇದವು ನಾಲ್ಕು ಪಾದಗಳಾಗಿ ಅಪರಿಮಿತವಾದ ಮಂತ್ರಗಳಿಂದ ಕೂಡಿದ್ದಿತು. ಆ ವೇದ ಮಂತ್ರಗಳಿಂದ ಸಮಸ್ತ ಇಷ್ಟಾರ್ಥಗಳನ್ನೂ ಕೊಡುವ ಹತ್ತು ಬಗೆಯ ಯಜ್ಞಗಳು ಹೊರಬಿದ್ದುವು. ಆ ಮೇಲೆ ಈ ವೈವಸ್ವತ ಮನ್ವಂತರದಲ್ಲಿ ಇಪ್ಪತ್ತೆಂಟನೆಯ ದ್ವಾಪರ ಯುಗದಲ್ಲಿ ನನ್ನ ಮಗನಾದ ವ್ಯಾಸನು ವಿಷ್ಣುವಿನ ಅವತಾರವಾದುದರಿಂದ ಒಂದೇ ಆಗಿದ್ದ ವೇದವನ್ನು ನಾಲ್ಕು ವೇದಗಳಾಗಿ ಭಾಗ ಮಾಡಿದನು. ಬುದ್ಧಿವಂತನಾದ ವೇದವ್ಯಾಸನು ಹೇಗೆ ವಿಭಾಗ ಮಾಡಿದನೋ ಹಾಗೆಯೇ ಹಿಂದಿನ

ತದನೇನೈವ ವೇದಾನಾಂ ಶಾಖಾಭೇದಾನ್ ದ್ವಿಜೋತ್ತಮ ।
ಚತುರ್ಯುಗೇಷು ರಚಿತಾನ್ ಸಮಸ್ತೇಷ್ವವಧಾರಯ ॥ ೪ ॥

ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಂ ।
ಕೋऽನ್ಯೋ ಹಿ ಭುವಿ ಮೈತ್ರೇಯ ಮಹಾಭಾರತಕೃದ್ಭವೇತ್ ॥ ೫ ॥

ತೇನ ವ್ಯಸ್ತಾ ಯಥಾ ವೇದಾ ಮತ್ಪುತ್ರೇಣ ಮಹಾತ್ಮನಾ ।
ದ್ವಾಪರೇ ಹ್ಯತ್ರ ಮೈತ್ರೇಯ ತನ್ಮೇ ಶೃಣು ಯಥಾರ್ಥತಃ ॥ ೬ ॥

ಬ್ರಹ್ಮಣಾ ಚೋದಿತೋ ವ್ಯಾಸೋ ವೇದಾನ್ವ್ಯಸ್ತುಂ ಪ್ರಚಕ್ರಮೇ ।
ಅಥ ಶಿಷ್ಯಾನ್ ಸ ಜಗ್ರಾಹ ಚತುರೋ ವೇದಪಾರಗಾನ್ ॥ ೭ ॥

ಋಗ್ವೇದ ಗ್ರಾಹಕಂ ಪೈಲಂ ಜಗ್ರಾಹ ಸುಮಹಾಮುನಿಃ ।
ವೈಶಂಪಾಯನನಾಮಾನಂ ಯಜುರ್ವೇದಸ್ಯ ಚಾಗ್ರಹೀತ್ ॥ ೮ ॥

---

ಚತುರ್ಯುಗಗಳಲ್ಲಿಯೂ ವ್ಯಾಸರು ವೇದಶಾಖಾ ವಿಭಾಗವನ್ನು ಮಾಡಿದರೆಂದು ತಿಳಿಯಬೇಕು. ನಾನೂ ಒಬ್ಬ ವ್ಯಾಸನಾದುದರಿಂದ ನಾನೂ ಹಾಗೆಯೇ ವೇದ ಶಾಖಾ ಭೇದಗಳನ್ನು ಮಾಡಿದೆನು.

೫–೬ ಮೈತ್ರೇಯನೇ, ನಾರಾಯಣನೇ ಕೃಷ್ಣದ್ವೈಪಾಯನ ವ್ಯಾಸನಾಗಿ ಅವತಾರ ಮಾಡಿದನೆಂದು ತಿಳಿ. ಹಾಗಿಲ್ಲದಿದ್ದರೆ ಮಹಾಭಾರತ ಗ್ರಂಥವನ್ನು ಮಾಡುವ ಶಕ್ತಿಯು ಮತ್ತಾರಿಗೆ ಬರುವುದು. ಈ ದ್ವಾಪರಯುಗದಲ್ಲಿ ಮಹಾ ಮಹಿಮನಾದ ನನ್ನ ಪುತ್ರನು ವೇದ ವಿಭಾಗವನ್ನು ಹೇಗೆ ಮಾಡಿದನೆಂಬುದನ್ನು ಹೇಳುವೆನು ಕೇಳು.

೭–೧೦. ವ್ಯಾಸನು ಬ್ರಹ್ಮನ ಅಪ್ಪಣೆಯಿಂದ ವೇದವನ್ನು ಸಂಪೂರ್ಣವಾಗಿ ಕಲಿಯಲು ಸಮರ್ಥರಾದ ನಾಲ್ಕು ಜನ ಶಿಷ್ಯರನ್ನು ಸಂಪಾದಿಸಿದನು. ಋಗ್ವೇದ ವನ್ನು ಕಲಿಯುವುದಕ್ಕೆ ಪೈಲನೆಂಬುವನನ್ನೂ ಯಜುರ್ವೇದವನ್ನು ಕಲಿಯುವುದಕ್ಕೆ

ಜೈಮಿನಿಂ ಸಾಮವೇದಸ್ಯ ತಥೈವಾಥರ್ವವೇದವಿತ್ ।
ಸುಮಂತುಸ್ತಸ್ಯ ಶಿಷ್ಯೋಽಭೂದ್ವೇದವ್ಯಾಸಸ್ಯ ಧೀಮತಃ ॥ ೯ ॥

ರೋಮಹರ್ಷಣನಾಮಾನಂ ಮಹಾಬುದ್ಧಿಂ ಮಹಾಮುನಿಂ ।
ಸೂತಂ ಜಗ್ರಾಹ ಶಿಷ್ಯಂ ಸ ಇತಿಹಾಸಪುರಾಣಯೋಃ ॥ ೧೦ ॥

ಏಕ ಆಸೀದ್ಯಜುರ್ವೇದಸ್ತಂ ಚತುರ್ಧಾ ವ್ಯಕಲ್ಪಯತ್ ।
ಚಾತುರ್ಹೋತ್ರಮಭೂದ್ಯಸ್ಮಿಂಸ್ತೇನ ಯಜ್ಞಮಥಾಕರೋತ್ ॥ ೧೧ ॥

ಅಧ್ವರ್ಯವಂ ಯಜುರ್ಭಿಸ್ತು ಋಗ್ಭಿರ್ಹೌತ್ರಂ ತಥಾ ಮುನಿಃ ।
ಔದ್ಗಾತ್ರಂ ಸಾಮಭಿಶ್ಚಕ್ರೇ ಬ್ರಹ್ಮತ್ವಂ ಚಾಪ್ಯಥರ್ವಭಿಃ ॥ ೧೨ ॥

---

ವೈಶಂಪಾಯನನನ್ನೂ ಸಾಮವೇದಕ್ಕೆ ಜೈಮಿನಿಯನ್ನೂ ಅಥರ್ವವೇದಕ್ಕೆ ಸುಮಂತುವನ್ನೂ ಶಿಷ್ಯರನ್ನಾಗಿ ಗ್ರಹಿಸಿದನು. ಇತಿಹಾಸ ಪುರಾಣಗಳನ್ನು ಕಲಿವುದಕ್ಕೆ ರೋಮಹರ್ಷಣನೆಂಬ ಮಹಾ ಬುದ್ಧಿಶಾಲಿಯಾದ ಸೂತನನ್ನು ಶಿಷ್ಯನನ್ನಾಗಿ ಮಾಡಿಕೊಂಡನು.

೧೧–೧೨. ಯಜ್ಞಕರ್ಮದಲ್ಲಿ ಯಜುರ್ವೇದ ಸಂಬಂಧವಾದ ಅಧ್ವರ್ಯುವಿನ ಪೂಜಾರೂಪವಾದ ಕರ್ಮವು ವಿಶೇಷವಾಗಿದ್ದುದರಿಂದ ಯಜುರ್ವೇದಕ್ಕೆ ಮುಖ್ಯತ್ವವನ್ನು ಹೇಳಿದೆ. ಹಿಂದೆ ಯಜುರ್ವೇದವೊಂದೇ ಇದ್ದಿತು. ನಾಲ್ಕು ಜನ ಋತ್ವಿಕ್ಕುಗಳು ಮಾಡಬೇಕಾದ ಕರ್ಮವಾದುದರಿಂದ ಚಾತುರ್ಹೋತ್ರನೆಂಬ ಯಜ್ಞದಲ್ಲಿ ಯಜುರ್ವೇದ ಮಂತ್ರಗಳನ್ನು ಹೇಳಿ ಕರ್ಮ ಮಾಡುವ ಋತ್ವಿಜನನ್ನು ಅಧ್ವರ್ಯುವೆಂದೂ ಋಗ್ವೇದ ಮಂತ್ರಗಳನ್ನು ಹೇಳಿ ಕರ್ಮ ಮಾಡುವ ಋತ್ವಿಜನನ್ನು ಹೋತೃವೆಂದೂ ಸಾಮಮಂತ್ರವನ್ನು ಹೇಳಿ ಕರ್ಮ ಮಾಡುವವನನ್ನು ಉದ್ಗಾತೃವೆಂದೂ ಅಥರ್ವ ವೇದ ಮಂತ್ರಗಳನ್ನು ಹೇಳಿ ಕರ್ಮ ಮಾಡುವವನನ್ನು ಬ್ರಹ್ಮನೆಂದೂ ಹೇಳುವರು.

ತತಸ್ಸ ಋಚ ಉದ್ಧೃತ್ಯ ಋಗ್ವೇದಂ ಕೃತವಾನ್ಮುನಿಃ ।
ಯಜೂಂಷಿ ಚ ಯಜುರ್ವೇದಂ ಸಾಮವೇದಂ ಚ ಸಾಮಭಿಃ ॥ ೧೩ ॥

ರಾಜ್ಞಾಂ ತ್ವಥರ್ವವೇದೇನ ಸರ್ವಕರ್ಮಾಣಿ ಸ ಪ್ರಭುಃ ।
ಕಾರಯಾಮಾಸ ಮೈತ್ರೇಯ ಬ್ರಹ್ಮತ್ವಂ ಚ ಯಥಾಸ್ಥಿತಿ ॥ ೧೪ ॥

ಸೋಽಯಮೇಕೋ ಮಹಾವೇದತರುಸ್ತೇನ ಪೃಥಕ್ಕೃತಃ ।
ಚತುರ್ಧಾ ಚ ತತೋ ಜಾತಂ ವೇದಪಾದಪಕಾನನಂ ॥ ೧೫ ॥

ಬಿಭೇದ ಪ್ರಥಮಂ ವಿಪ್ರ ಪೈಲೋ ಋಗ್ವೇದಪಾದಪಂ ।
ಇಂದ್ರಪ್ರಮಿತಯೇ ಪ್ರಾದಾ ದ್ಬಾಷ್ಕಲಾಯ [redacted] ಸಂಹಿತೇ ॥ ೧೬ ॥

ಚತುರ್ಧಾ ಸ ಬಿಭೇದಾಥ ಬಾಷ್ಕಲೊ ದ್ವಿಜ ಸಂಹಿತಾಂ ।
ಬೋಧ್ಯಾದಿಭ್ಯೋ ದದೌ ತಾಸ್ತು ಶಿಷ್ಯೇಭ್ಯಸ್ಸಮಹಾಮತಿಃ ॥ ೧೭ ॥

ಬೋಧ್ಯಾಗ್ನಿಮಾಢಕೌ ತದ್ವದ್ಯಾಜ್ಞವಲ್ಕ್ಯಪರಾಶರೌ ।
ಪ್ರತಿಶಾಖಾಸ್ತು ಶಾಖಾಯಾಸ್ತಸ್ಯಾಸ್ತೇ ಜಗೃಹುರ್ಮುನೇ ॥ ೧೮ ॥

---

೧೩–೧೫. ವ್ಯಾಸಮುನಿಯು ಒಂದೇ ಆಗಿದ್ದ ವೇದಮಂತ್ರಗಳಲ್ಲಿ ಋಕ್ಕು, ಯಜುಸ್ಸು, ಸಾಮ ಎಂಬ ಮಂತ್ರಗಳನ್ನು ಬೇರೆ ಬೇರೆಯಾಗಿ ಗುಂಪು ಸೇರಿಸಿ ಋಗ್ವೇದ, ಯಜುರ್ವೇದ, ಸಾಮವೇದಗಳನ್ನು ಮಾಡಿದನು. ರಾಜರಿಗೆ ಅಥರ್ವವೇದ ಮಂತ್ರಗಳಿಂದ ಸಮಸ್ತ ಕರ್ಮಗಳನ್ನೂ ಮಾಡಿಸಿದನು. ಯಜ್ಞಗಳಲ್ಲಿ ಅಥರ್ವವೇದಮಂತ್ರಗಳನ್ನು ಬಲ್ಲವನೇ ಬ್ರಹ್ಮತ್ವವನ್ನು ಮಾಡಬೇಕು. ಒಂದೇ ಆಗಿದ್ದ ವೇದವೆಂಬ ಮಹಾವೃಕ್ಷವನ್ನು ವ್ಯಾಸನು ನಾಲ್ಕು ಭಾಗವಾಗಿ ಮಾಡಿದ ಮೇಲೆ ವೇದವೃಕ್ಷದ ದೊಡ್ಡ ಕಾಡಾಯಿತು

೧೬–೧೮. ಮೊದಲು ಪೈಲನೆಂಬ ವ್ಯಾಸಶಿಷ್ಯನು ದೊಡ್ಡ ವೃಕ್ಷದಂತಿರುವ ಋಗ್ವೇದವನ್ನು ಎರಡು ಸಂಹಿತೆಗಳಾಗಿ ಮಾಡಿ ಒಂದನ್ನು ಇಂದ್ರಪ್ರಮಿತಿಯೆಂಬವನಿಗೂ, ಮತ್ತೊಂದನ್ನು ಬಾಷ್ಕಲನೆಂಬವನಿಗೂ ಹೇಳಿಕೊಟ್ಟನು. ಬಾಷ್ಕಲನು ತನ್ನ ಸಂಹಿತೆಯನ್ನು ನಾಲ್ಕು ಭಾಗವಮಾಡಿ ಬೋಧ್ಯ, ಅಗ್ನಿಮಾಢಕ. (ಅಗ್ನಿಮಾಠರ) ಯಾಜ್ಞವಲ್ಕ್ಯ ಪರಾಶರ ಎಂಬ ನಾಲ್ವರು ಶಿಷ್ಯರಿಗೆ ಹೇಳಿಕೊಟ್ಟನು

ಇಂದ್ರಪ್ರಮಿತಿರೇಕಾಂ ತು ಸಂಹಿತಾಂ ಸ್ವಸುತಂ ತತಃ ।
ಮಾಂಡೂಕೇಯಂ ಮಹಾಭಾಗಂ ಮೈತ್ರೇಯಾಧ್ಯಾಪಯತ್ತದಾ ॥ ೧೯ ॥

ತಸ್ಯ ಶಿಷ್ಯಪ್ರಶಿಷ್ಯೇಭ್ಯಃ ಪುತ್ರಶಿಷ್ಯಕ್ರಮಾದ್ಯಯೌ ॥ ೨೦ ॥
ವೇದಮಿತ್ರಸ್ತು ಶಾಕಲ್ಯಸ್ಸಂಹಿತಾಂ ತಾಮಧೀತವಾನ್ ।

ಚಕಾರ ಸಂಹಿತಾಃ ಪಂಚ ಶಿಷ್ಯೇಭ್ಯಃ ಪ್ರದದೌ ಚ ತಾಃ ॥ ೨೧ ॥
ತಸ್ಯ ಶಿಷ್ಯಾಶ್ಚ ಯೇ ಪಂಚ ತೇಷಾಂ ನಾಮಾನಿ ಮೇ ಶೃಣು ।

ಮುದ್ಗಲೋ ಗೋಮುಖಶ್ಚೈವ ವಾತ್ಸ್ಯಶ್ಶಾಲೀಯ ಏವ ಚ ॥
ಶೈಶಿರಃ ಪಂಚಮಶ್ಚಾಸೀತ್ ಮೈತ್ರೇಯ ಸುಮಹಾಮತಿಃ ॥ ೨೨ ॥

ಸಂಹಿತಾತ್ರಿತಯಂ ಚಕ್ರೇ ಶಾಕಪೂರ್ಣಸ್ತಥೇತರಃ ।
ನಿರುಕ್ತಮಕರೋತ್ತದ್ವತ್ ಚತುರ್ಥಂ ಮುನಿಸತ್ತಮ ॥ ೨೩ ॥

---

ಬಾಷ್ಕಲ ಶಾಖೆಯ ಸಣ್ಣಶಾಖೆಗಳನ್ನು ಆ ಶಿಷ್ಯರು ಗ್ರಹಿಸಿದರು. ಇಂದ್ರಪ್ರಮಿತಿಯು ತನ್ನ ಶಾಖೆಯನ್ನು ತನ್ನ ಮಗನಾದ ಮಹಾ ಬುದ್ಧಿಶಾಲಿಯಾದ ಮಾಂಡೂಕೇಯ ನೆಂಬುವನಿಗೆ ಹೇಳಿಕೊಟ್ಟನು.

೨೦-೨೨. ಇಂದ್ರಪ್ರಮಿತಿ ಸಂಹಿತೆಯು ಮಾಂಡೂಕೇಯನಿಂದ ಅವನ ಶಿಷ್ಯ ಪ್ರಶಿಷ್ಯರಲ್ಲಿಯೂ, ಪುತ್ರ ಪೌತ್ರರಲ್ಲಿಯೂ ಕ್ರಮವಾಗಿ ಅಭ್ಯಾಸದಲ್ಲಿ ಬಂದಿದ್ದಿತು ವೇದಮಿತ್ರನೆಂಬ ಶಾಕಲ್ಯನು ಆ ಸಂಹಿತೆಯನ್ನು ಅಭ್ಯಾಸಮಾಡಿ ಅದನ್ನು ಐದು ಭಾಗ ಮಾಡಿ ತನ್ನ ಶಿಷ್ಯರಾದ ಮುದ್ಗಲ, ಗೋಮುಖ, ವಾತ್ಸ್ಯ, ಶಾಲೀಯ, ಶೈಶಿರ ಎಂಬವರಿಗೆ ಹೇಳಿಕೊಟ್ಟನು.

೨೩-೨೪. ಶಾಕಲ್ಯನ ಸಹಪಾಠಿಯಾದ ಶಾಕಪೂರ್ಣನೆಂಬವನು ಅದೇ ಸಂಹಿತೆಯನ್ನು ಮೂರು ಭಾಗ ಮಾಡಿದನು. ಮತ್ತು ವೇದಶಬ್ದಗಳಿಗೆ ಅರ್ಥವನ್ನು

ಕ್ರೌಂಚೋ ವೈತಾಳಿಕಸ್ತದ್ವದ್ಬಲಾಕಶ್ಚ ಮಹಾಮುನಿಃ ।
ನಿರುಕ್ತಶ್ಚ ಚತುರ್ಥೋಽಭೂದ್ವೇದವೇದಾಂಗಪಾರಗಃ ॥ ೨೪ ॥

ಇತ್ಯೇತಾಃ ಪ್ರತಿಶಾಖಾಭ್ಯೋ ಹ್ಯನುಶಾಖಾ ದ್ವಿಜೋತ್ತಮ ।
ಬಾಷ್ಕಲಿಶ್ಚಾಪರಾಸ್ತಿಸ್ರಸ್ಸಂಹಿತಾಃ ಕೃತವಾನ್ ದ್ವಿಜ ।
ಶಿಷ್ಯಃ ಕಾಲಾಯನಿರ್ಗಾರ್ಗ್ಯಸ್ತೃತೀಯಶ್ಚ ತಥಾಽಜಪಃ ॥ ೨೫ ॥

ಇತ್ಯೇತೇ ಬಹ್ವೃಚಾಃ ಪ್ರೋಕ್ತಾಸ್ಸಂಹಿತಾಯೈಃ ಪ್ರಕೀರ್ತಿತಾಃ ॥ ೨೬ ॥

ಇತಿ ಶ್ರೀ ವಿಷ್ಣು ಪುರಾಣೇ ತೃತೀಯಾಂಶೇ ಚತುರ್ಥೋಽಧ್ಯಾಯಃ

---

ತಿಳಿಸುವ ನಿರುಕ್ತವೆಂಬ ವೇದಾಂಗವನ್ನು ರಚಿಸಿದನು. ಈ ನಾಲ್ಕನ್ನೂ ತನ್ನ ಶಿಷ್ಯರಾದ ಕ್ರೌಂಚ, ವೈತಾಳಿಕ, ಬಲಾಕ, ನಿರುಕ್ತ ಎಂಬ ಶಿಷ್ಯರಿಗೆ ಹೇಳಿಕೊಟ್ಟನು. ಇವರಲ್ಲಿ ನಿರುಕ್ತನೆಂಬ ನಾಲ್ಕನೆಯ ಶಿಷ್ಯನು ವೇದಗಳನ್ನೂ ವೇದಾಂಗಗಳನ್ನೂ ಸಂಪೂರ್ಣವಾಗಿ ತಿಳಿದವನು.

೨೫-೨೬ ಮೈತ್ರೇಯನೇ ! ಹೀಗೆ ಋಗ್ವೇದದ ಪ್ರತಿಯೊಂದು ಶಾಖೆಯಿಂದಲೂ ಸಣ್ಣ ಸಣ್ಣ ಶಾಖೆಗಳು ಹೊರಟವು. ಬಾಷ್ಕಲಿಯೆಂಬ ಶಾಕಲ್ಯನ ಸಹಪಾಠಿಯಾದ ಮತ್ತೊಬ್ಬನು ತಾನು ಅಭ್ಯಾಸ ಮಾಡಿದ ಇಂದ್ರಪ್ರಮಿತಿ ಸಂಹಿತೆಯನ್ನು ಮೂರು ಭಾಗಮಾಡಿ ತನ್ನ ಶಿಷ್ಯರಾದ ಕಾಲಾಯನಿ, ಗಾರ್ಗ್ಯ, ಅಜಪ ಎಂಬವರಿಗೆ ಹೇಳಿಕೊಟ್ಟನು. ಈ ಋಗ್ವೇದ ಸಂಹಿತೆಯನ್ನು ಹೇಳಿದವರನ್ನೆಲ್ಲ ಬಹ್ವೃಚರೆಂದು ಹೇಳುವರು.

ಎಂಬಲ್ಲಿಗೆ ಶ್ರೀ ವಿಷ್ಣು ಪುರಾಣದ ತೃತೀಯಾಂಶದಲ್ಲಿ

ನಾಲ್ಕನೆಯ ಅಧ್ಯಾಯವು ಮುಗಿದುದು.

ಶ್ರೀಃ

# ಶ್ರೀ ವಿಷ್ಣುಪುರಾಣೇ ತೃತೀಯಾಂಶೇ

## ಪಂಚಮೋಽಧ್ಯಾಯಃ

---

॥ ಶ್ರೀ ಪರಾಶರಃ ॥

ಯಜುರ್ವೇದತರೋಃ ಶಾಖಾಸ್ಸಪ್ತವಿಂಶನ್ಮಹಾಮುನಿಃ ।
ವೈಶಂಪಾಯನನಾಮಾಸೌ ವ್ಯಾಸಶಿಷ್ಯಶ್ಚಕಾರ ವೈ ॥ ೧ ॥

ಶಿಷ್ಯೇಭ್ಯಃ ಪ್ರದದೌ ತಾಶ್ಚ ಜಗೃಹುಸ್ತೇಽಪ್ಯನುಕ್ರಮಾತ್ ॥ ೨ ॥

ಯಾಜ್ಞವಲ್ಕ್ಯಶ್ಚ ತಸ್ಯಾಭೂದ್ಬ್ರಹ್ಮರಾತಸುತೋ ದ್ವಿಜ ।
ಶಿಷ್ಯಃ ಪರಮಧರ್ಮಜ್ಞೋ ಗುರುವೃತ್ತಿಪರಸ್ಸದಾ ॥ ೩ ॥

ಋಷಿರ್ಯೋಽದ್ಯ ಮಹಾಮೇರೋಸ್ಸಮಾಜೇನಾಗಮಿಷ್ಯತಿ ।
ತಸ್ಯ ವೈ ಸಪ್ತರಾತ್ರಾತ್ತು ಬ್ರಹ್ಮಹತ್ಯಾ ಭವಿಷ್ಯತಿ ॥ ೪ ॥

---

### ಐದನೆಯ ಅಧ್ಯಾಯವು.

೧–೨. ಮೈತ್ರೇಯನೇ ! ವ್ಯಾಸಶಿಷ್ಯನಾದ ವೈಶಂಪಾಯನನು ಯಜುರ್ವೇದವೆಂಬ ವೃಕ್ಷಕ್ಕೆ ಇಪ್ಪತ್ತೇಳು ಶಾಖೆಗಳನ್ನು ಮಾಡಿದನು. ಅವುಗಳನ್ನು ಇಪ್ಪತ್ತೇಳು ಜನ ಶಿಷ್ಯರಿಗೆ ಹೇಳಿಕೊಟ್ಟನು. ಅವರು ಅವುಗಳನ್ನು ಕಲಿತರು.

೩–೬. ಅವರಲ್ಲಿ ಬ್ರಹ್ಮರಾತನೆಂಬ ಋಷಿಯ ಮಗನಾದ ಯಾಜ್ಞವಲ್ಕ್ಯನೆಂಬ, ಸದಾಗುರುಗಳ ಇಷ್ಟದಂತೆ ನಡೆಯುವ ಧರ್ಮಮಾರ್ಗಾಸಕ್ತನಾದ ಶಿಷ್ಯನೂ ಇದ್ದನು. ಋಷಿಗಳೆಲ್ಲರೂ ಸೇರಿ ಈದಿನ ನಮ್ಮ ಮಹಾಸಮಾಜದಲ್ಲಿ ಯಾವ ಋಷಿಯು ಮೇರು ಪರ್ವತಕ್ಕೆ ಬರುವುದಿಲ್ಲವೋ ಅವನಿಗೆ ಏಳು ದಿನದೊಳಗಾಗಿ ಬ್ರಹ್ಮಹತ್ಯಾ

ಪೂರ್ವಮೇವಂ ಮುನಿಗಣೈಸ್ಸಮಯೋ ಯಃ ಕೃತೋ ದ್ವಿಜ ।
ವೈಶಂಪಾಯನ ಏಕಸ್ತು ತಂ ವ್ಯತಿಕ್ರಾಂತವಾಂಸ್ತದಾ ॥ ೫ ॥

ಸ್ವಸ್ರೀಯಂ ಬಾಲಕಂ ಸೋಽಥ ಪದಾ ಸ್ಪೃಷ್ಟಮತಾಡಯತ್ ॥ ೬ ॥

ಶಿಷ್ಯಾನಾಹ ಚ ಭೋಃ ಶಿಷ್ಯಾ ಬ್ರಹ್ಮಹತ್ಯಾಪಹಂ ವ್ರತಂ ।
ಚರಧ್ವಂ ಮತ್ಕೃತೇ ಸರ್ವೇ ನ ವಿಚಾರ್ಯಮಿದಂ ತಥಾ ॥ ೭ ॥

ಅಥಾಹ ಯಾಜ್ಞವಲ್ಕ್ಯಸ್ತಂ ಕಿಮೇಭಿರ್ಭಗವನ್ ದ್ವಿಜೈಃ ।
ಕ್ಲೇಶಿತೈರಲ್ಪತೇಜೋಭಿಶ್ಚರಿಷ್ಯೇಹಮಿದಂ ವ್ರತಂ ॥ ೮ ॥

ತತಃ ಕ್ರುದ್ಧೋ ಗುರುಃ ಪ್ರಾಹ ಯಾಜ್ಞವಲ್ಕ್ಯಂ ಮಹಾಮುನಿಂ ।
ಮುಚ್ಯತಾಂ ಯತ್ತ್ವಯಾಧೀತಂ ಮತ್ತೋ ವಿಪ್ರಾವಮಾನಕ ॥ ೯ ॥

---

ಪಾಪವು ಸಂಭವಿಸುವುದು ಎಂದು ಗೊತ್ತು ಮಾಡಿಕೊಂಡರು. ಈ ನಿಯಮವನ್ನು ವೈಶಂಪಾಯನನೊಬ್ಬನೇ ಮೀರಿದನು. ವೈಶಂಪಾಯನನು ಪ್ರಮಾದದಿಂದ ತನ್ನ ತಂಗಿಯ ಮಗನಾದ ಚಿಕ್ಕ ಹುಡುಗನಿಗೆ ಕಾಲನ್ನು ತಗುಲಿಸಿದ ಮಾತ್ರಕ್ಕೆ ಆ ಬಾಲಕನು ಸತ್ತು ಹೋದನು.

೭–೮. ವೈಶಂಪಾಯನನು ಶಿಷ್ಯರನ್ನು ಕುರಿತು "ಎಲೈ ಶಿಷ್ಯರೇ! ಪ್ರಮಾದ ದಿಂದ ಬಾಲಕನು ಮೃತನಾದರೆ ಬ್ರಹ್ಮಹತ್ಯಾ ನಾಶಕವಾದ ವ್ರತವನ್ನು ಮಾಡಬೇಕೇ? ಬೇಡವೇ? ಎಂದು ವಿಚಾರ ಮಾಡಬೇಡಿ. ಸಾಕ್ಷಾತ್ ಬ್ರಹ್ಮಹತ್ಯೆಯನ್ನು ಮಾಡಿದರೆ ಹೇಗೆ ವ್ರತಾಚರಣೆಯನ್ನು ಮಾಡಬೇಕೋ ಹಾಗೆಯೇ ಆ ವ್ರತವನ್ನು ನನಗೋಸ್ಕರ ವಾಗಿ ನೀವೆಲ್ಲರೂ ಆಚರಿಸಬೇಕು." ಎಂದು ಹೇಳಿದನು. ಆಗ ಯಾಜ್ಞವಲ್ಕ್ಯನು "ಗುರುಗಳೇ ಇವರೆಲ್ಲರೂ ಶಕ್ತಿಹೀನರು. ಇವರನ್ನೇಕೆ ಕಷ್ಟಪಡಿಸಬೇಕು. ಈ ವ್ರತವನ್ನು ತಮಗಾಗಿ ನಾನೊಬ್ಬನೇ ಆಚರಿಸುವೆನು" ಎಂದನು.

೯-೧೦. ಈ ಮಾತನ್ನು ಕೇಳಿ ಕೋಪವನ್ನು ಹೊಂದಿದ ಗುರುವು ಯಾಜ್ಞ ವಲ್ಕ್ಯನನ್ನು ಕುರಿತು ಬ್ರಾಹ್ಮಣಾವಮಾನವನ್ನು ಮಾಡಿದ ಯಾಜ್ಞವಲ್ಕ್ಯನೇ

ನಿಸ್ತೇಜಸೋ ವದಸ್ಯೇತಾನ್ ಯಸ್ತ್ವಂ ಬ್ರಾಹ್ಮಣಪುಂಗವಾನ್ ।

ತೇನ ಶಿಷ್ಯೇಣ ನಾರ್ಥೋಽಸ್ತಿ ಮಮಾಜ್ಞಾಭಂಗಕಾರಿಣಾ ॥ ೧೦ ॥

ಯಾಜ್ಞವಲ್ಕ್ಯಸ್ತತಃ ಪ್ರಾಹ ಭಕ್ತ್ಯೈತತ್ತೇ ಮಯೋದಿತಂ ।
ಮಮಾಪ್ಯಲಂ ತ್ವಯಾಧೀತಂ ಯನ್ಮಯಾ ತದಿದಂ ದ್ವಿಜ ॥ ೧೧ ॥

॥ ಶ್ರೀ ಪರಾಶರಃ ॥

ಇತ್ಯುಕ್ತ್ವಾ ರುಧಿರಾಕ್ತಾನಿ ಸರೂಪಾಣಿ ಯಜೂಂಷಿ ಸಃ ।
ಛರ್ದಯಿತ್ವಾ ದದೌ ತಸ್ಮೈ ಯಯೌ ಚ ಸ್ವೇಚ್ಛಯಾ ಮುನಿಃ ॥ ೧೨ ॥

ಯಜೂಂಷ್ಯಥ ವಿಸೃಷ್ಟಾನಿ ಯಾಜ್ಞವಲ್ಕ್ಯೇನ ವೈ ದ್ವಿಜ ।
ಜಗೃಹುಸ್ತಿತ್ತಿರಾ ಭೂತ್ವಾ ತೈತ್ತಿರೀಯಾಸ್ತು ತೇ ತತಃ ॥ ೧೩ ॥

---

ಈ ಬ್ರಾಹ್ಮಣ ಶ್ರೇಷ್ಠರನ್ನು ತೇಜಸ್ವಿಗಳಲ್ಲವೆಂದು ಹೇಳಿದುದರಿಂದು ನಾನು ಹೇಳಿಕೊಟ್ಟ ವೇದಗಳನ್ನೆಲ್ಲ ಬಿಟ್ಟು ಬಿಡು. ನನ್ನಾಜ್ಞೆಯನ್ನು ನಡೆಸದ ಶಿಷ್ಯನಿಂದ ನನಗೇನೂ ಪ್ರಯೋಜನವಿಲ್ಲ" ಎಂದನು.

೧೧-೧೨. ಬಳಿಕ ಯಾಜ್ಞವಲ್ಕ್ಯನೂ ಕೋಪದಿಂದ ಗುರುವಿನಲ್ಲಿ ಭಕ್ತಿಯಿಂದ ನಾನು ಈ ಮಾತನ್ನಾಡಿದೆನು. ನನಗೂ ತಮ್ಮ ಗುರುತ್ವವು ಬೇಡ. ನೀವು ಹೇಳಿಕೊಟ್ಟ ವೇದಗಳನ್ನು ತೆಗೆದುಕೊಳ್ಳಿರೆಂದು ಬಾಯಿಗೆ ಬೆಟ್ಟುಗಳನ್ನು ಹಾಕಿ ವಮನ ಮಾಡಿ ರಕ್ತದಲ್ಲಿ ನೆನೆದ ಯಜುಸ್ಸುಗಳನ್ನು ಕೊಟ್ಟು ಹೊರಟು ಹೋದನು.

೧೩-೧೪. ಯಾಜ್ಞವಲ್ಕ್ಯನು ವಮನಮಾಡಿದ ಯಜುಸ್ಸುಗಳನ್ನು ಮಿಕ್ಕ ಋಷಿಗಳು ತಿತ್ತಿರಿಯೆಂಬ ಪಕ್ಷಿರೂಪದಿಂದ ಗ್ರಹಣಮಾಡಿದರು. ಆದುದರಿಂದ ಅವರು

ಬ್ರಹ್ಮಹತ್ಯಾವ್ರತಂ ಚೀರ್ಣಂ ಗುರುಣಾ ಚೋದಿತೈಸ್ತು ಯೈಃ ।
ಚರಕಾಧ್ವರ್ಯವಃ ತೇ ತು ಚರಣಾನ್ಮುನಿಸತ್ತಮ ॥ ೧೪ ॥

ಯಾಜ್ಞವಲ್ಕ್ಯೋಽಪಿ ಮೈತ್ರೇಯ ಪ್ರಾಣಾಯಾಮಪರಾಯಣಃ ।
ತುಷ್ಟಾವ ಪ್ರಣತಸ್ಸೂರ್ಯಂ ಯಜೂಂಷ್ಯಭಿಲಷಂಸ್ತತಃ ॥ ೧೫ ॥

॥ ಯಾಜ್ಞವಲ್ಕ್ಯಃ ॥

ನಮಸ್ಸವಿತ್ರೇ ದ್ವಾರಾಯ ಮುಕ್ತೇರಮಿತತೇಜಸೇ ।
ಋಗ್ಯಜುಸ್ಸಾಮಭೂತಾಯ ತ್ರಯೀಧಾಮ್ನೇ ಚ ತೇ ನಮಃ ॥ ೧೬ ॥

ನಮೋಽಗ್ನೀಷೋಮಭೂತಾಯ ಜಗತಃ ಕಾರಣಾತ್ಮನೇ ।
ಭಾಸ್ಕರಾಯ ಪರಂ ತೇಜಸ್ಸೌಷುಮ್ನರುಚಿ ಬಿಭ್ರತೇ ॥ ೧೭ ॥

---

ತೈತ್ತಿರೀಯರೆನಿಸಿಕೊಂಡರು. ಗುರುವಿನ ಮಾತಿನಿಂದ ಬ್ರಹ್ಮಹತ್ಯಾನಿವಾರಕವಾದ ವ್ರತವನ್ನಾಚರಿಸಿದವರೆಲ್ಲರೂ ಯಜುಶ್ಶಾಖಾಧ್ಯಾಯಿಗಳಾಗಿ ಅಧ್ವರ್ಯುಗಳಾದರು ( ಚರಣಾಧ್ವರ್ಯುಗಳೆಂದು ಪಾಠಾಂತರ )

೧೫. ಮೈತ್ರೇಯನೇ ! ಅತ್ತ ಯಾಜ್ಞವಲ್ಕ್ಯನು ಪ್ರಾಣಾಯಾಮದಲ್ಲಾಸಕ್ತನಾಗಿ ಯಜುರ್ವೇದವನ್ನು ಕಲಿಯ ಬೇಕೆಂದು ಸೂರ್ಯನಿಗೆ ನಮಸ್ಕಾರ ಮಾಡಿ ಸ್ತೋತ್ರಮಾಡಿದನು.

೧೬. ಮುಕ್ತಿಗೆ ಮಾರ್ಗರೂಪನೂ, ಮಹಾ ತೇಜಸ್ವಿಯೂ, ಋಗ್ಯಜುಸ್ಸಾಮಗಳೆಂಬ ವೇದತ್ರಯರೂಪವಾದ ಪ್ರಕಾಶವುಳ್ಳವನೂ, ಗಾಯತ್ರೀಮಂತ್ರಾಭಿಮಾನದೇವತೆಯೂ ಆದ ಸೂರ್ಯನಿಗೆ ನಮಸ್ಕಾರವು.

೧೭. ಅಗ್ನೀಷೋಮಾತ್ಮಕನಾಗಿ ಜಗತ್ತಿಗೆ ಕಾರಣಸ್ವರೂಪನಾಗಿ ತನ್ನ ಸುಷುಮ್ನಾ ಎಂಬ ಕಿರಣದಿಂದ ಚಂದ್ರನಿಗೆ ಪ್ರಕಾಶವನ್ನುಂಟುಮಾಡುವ ಸಮಸ್ತ ಲೋಕಕ್ಕೂ ಬೆಳಕನ್ನುಂಟುಮಾಡುವ ಭಾಸ್ಕರನಿಗೆ ನಮಸ್ಕಾರವು.

ಕಲಾಕಾಷ್ಠಾನಿ ಮೇಷಾದಿಕಾಲಜ್ಞಾನಾತ್ಮನೇ ನಮಃ ।
ಧ್ಯೇಯಾಯ ವಿಶ್ವರೂಪಾಯ ಪರಮಾಕ್ಷರರೂಪಿಣೇ ॥ ೧೮ ॥

ಬಿಭರ್ತಿ ಯಸ್ಸುರಗಣಾನಾಪ್ಯಾಯ್ಯೇಂದುಂ ಸ್ವರಶ್ಮಿಭಿಃ ।
ಸ್ವಧಾವೃತೇನ ಚ ಪಿತೄನ್ ತಸ್ಮೈ ತೃ (ತೃಪ್ತ್ಯಾ) ಧೃತ್ಯಾತ್ಮನೇ ನಮಃ

ಹಿಮಾಂಬುಘರ್ಮವೃಷ್ಟೀನಾಂ ಕರ್ತಾ ಹರ್ತಾ ಚ ಯಃ ಪ್ರಭುಃ ।
ತಸ್ಮೈ ತ್ರಿಕಾಲಭೂತಾಯ ನಮಸ್ಸೂರ್ಯಾಯ ವೇಧಸೇ ॥ ೨೦ ॥

ಅಪಹಂತಿ ತಮೋ ಯಶ್ಚ ಜಗತೋಽಸ್ಯ ಜಗತ್ಪತಿಃ ।
ಸತ್ವಧಾಮಧರೋ ದೇವೋ ನಮಸ್ತಸ್ಮೈ ವಿವಸ್ವತೇ ॥ ೨೧ ॥

ಸತ್ಕರ್ಮಯೋಗ್ಯೋ ನ ಜನೋ ನೈವಾಪಶ್ಯಾಚಕಾರಣಂ ।
ಯಸ್ಮಿನ್ನನುದಿತೇ ತಸ್ಮೈ ನಮೋ ದೇವಾಯ ಭಾಸ್ವತೇ ॥ ೨೨ ॥

---

೧೮. ಕಲಾ, ಕಾಷ್ಠಾ, ನಿಮೇಷ ಮುಂತಾದ ಕಾಲರೂಪನಾಗಿ ಪ್ರಪಂಚ ರೂಪನೂ ಧ್ಯಾನಗೋಚರನೂ, ಪರಮಾತ್ಮ ಸ್ವರೂಪನೂ ಆದ ಸೂರ್ಯನಿಗೆ ನಮಸ್ಕಾರವು.

೧೯. ತನ್ನ ಕಿರಣದಿಂದ ಚಂದ್ರಮಂಡಲವನ್ನು ತುಂಬಿ ದೇವತೆಗಳನ್ನು ರಕ್ಷಿಸುವ ಸ್ವಧಾ ರೂಪವಾದ ಅಮೃತ ರಸದಿಂದ ಪಿತೃಗಳನ್ನು ತೃಪ್ತಿಪಡಿಸುವ ಸೂರ್ಯನಿಗೆ ನಮಸ್ಕಾರವು.

೨೦. ಹಿಮಶಕೆ ಮಳೆ ಇವುಗಳನ್ನುಂಟುಮಾಡುವವನೂ, ನಾಶಮಾಡುವವನೂ ಆದ ತ್ರಿಕಾಲ ಸ್ವರೂಪನೂ, ಸೃಷ್ಟಿಕರ್ತನೂ ಆದ ಸೂರ್ಯನಿಗೆ ನಮಸ್ಕಾರವು.

೨೧. ಜಗತ್ತಿನ ಕತ್ತಲೆಯನ್ನು ನಾಶಮಾಡಿ ಲೋಕಕ್ಕೊಡೆಯನಾಗಿ ಸತ್ವಮೂರ್ತಿಯಾದ ವಿವಸ್ವಂತನಿಗೆ ನಮಸ್ಕಾರವು.

೨೨-೨೩. ಸೂರ್ಯ ದೇವನು. ಉದಯಿಸದಿದ್ದರೆ ಜನರು ಸತ್ಕರ್ಮ ಯೋಗ್ಯರಾಗುವುದಿಲ್ಲ. ಶುದ್ಧರೂ ಆಗುವುದಿಲ್ಲ. ಸೂರ್ಯಕಿರಣಗಳು ಜನರನ್ನು

ಸ್ಪೃಷ್ಟೋ ಯದಂಶುಭಿರ್ಲೋಕಃ ಕ್ರಿಯಾಯೋಗ್ಯೋಭಿಜಾಯತೇ ।
ಪವಿತ್ರಕಾರಣಾತ್ಮಾಯಃ ತಸ್ಮೈ ಶುದ್ಧಾತ್ಮನೇ ನಮಃ ॥ ೨೩ ॥

ನಮಸ್ಸವಿತ್ರೇ ಸೂರ್ಯಾಯ ಭಾಸ್ಕರಾಯ ವಿವಸ್ವತೇ ।
ಆದಿತ್ಯಾಯಾದಿಭೂತಾಯ ದೇವಾದೀನಾಂ ನಮೋ ನಮಃ ॥ ೨೪ ॥

ಹಿರಣ್ಮಯಂ ರಥಂ ಯಸ್ಯ ಕೇತವೋಽಮೃತವಾಜಿನಃ ।
ವಹಂತಿ ಭುವನಾಲೋಕಚಕ್ಷುಷಂ ತಂ ನಮಾಮ್ಯಹಂ ॥ ೨೫ ॥

॥ ಶ್ರೀ ಪರಾಶರಃ ॥

ಇತ್ಯೇವಮಾದಿಭಿಸ್ತೇನ ಸ್ತೂಯಮಾನಸ್ತವೈ ರವಿಃ ।
ವಾಜಿರೂಪಧರಃ ಪ್ರಾಹ ವ್ರಿಯತಾಮಿತಿ ವಾಂಛಿತಂ ॥ ೨೬ ॥

---

ಸ್ಪರ್ಶಮಾಡಿದರೆ ಅವರು ಕರ್ಮ ಮಾಡುವುದಕ್ಕೆ ಯೋಗ್ಯರಾಗುವರು. ಶುದ್ಧಿಗೆ ಕಾರಣನಾದ ಶುದ್ಧಾತ್ಮಸ್ವರೂಪನಾದ ಸೂರ್ಯನಿಗೆ ನಮಸ್ಕಾರವು.

೨೪-೨೫. ಸವಿತೃ, ಸೂರ್ಯ, ಭಾಸ್ಕರ, ವಿವಸ್ವಂತ, ಆದಿತ್ಯ, ಎಂಬ ಹೆಸರುಗಳುಳ್ಳ ದೇವತೆಗಳಿಗೆಲ್ಲ ಮೊದಲನೆಯವನಾದ ಸೂರ್ಯನಿಗೆ ನಮಸ್ಕಾರವು. ಸೂರ್ಯನ ರಥವು ಚಿನ್ನದಿಂದ ಮಾಡಿದುದು. ಅಂದರೆ ತೇಜೋರೂಪವಾದುದು, ಕಿರಣಗಳು ಜ್ಞಾನಸ್ವರೂಪವಾದವುಗಳು. ಕುದುರೆಗಳು ಛಂದಸ್ಸಿನ ಸ್ವರೂಪವಾದುವುಗಳು. ಇವು ಜಗತ್ತನ್ನು ನೋಡಬೇಕೆಂಬ ಕಣ್ಣುಗಳುಳ್ಳ ಸೂರ್ಯನನ್ನು ಧರಿಸಿರುವುವು. ಅಂತಹ ಸೂರ್ಯನನ್ನು ನಾನು ನಮಸ್ಕರಿಸುವೆನು.

೨೬. ಹೀಗೆಂದು ಯಾಜ್ಞವಲ್ಕ್ಯನು ಸ್ತೋತ್ರ ಮಾಡಿದ ಮೇಲೆ ಸೂರ್ಯನು ಕುದುರೆಯ ರೂಪದಿಂದ ಅವನಿಗೆ ಕಾಣಿಸಿಕೊಂಡು ಇಷ್ಟಾರ್ಥವನ್ನು ಕೇಳು ಎಂದನು.

ಯಾಜ್ಞವಲ್ಕ್ಯಸ್ತದಾ ಪ್ರಾಹ ಪ್ರಣಿಪತ್ಯ ದಿವಾಕರಂ ।
ಯಜೂಂಷಿ ತಾನಿ ಮೇ ದೇಹಿ ಯಾನಿ ಸಂತಿ ನ ಮೇ ಗುರೌ ॥ ೨೭ ॥

॥ ಶ್ರೀ ಪರಾಶರಃ ॥

ಏವಮುಕ್ತೋ ದದೌ ತಸ್ಮೈ ಯಜೂಂಷಿ ಭಗವಾನ್ ರವಿಃ ।
ಅಯಾತಯಾಮಸಂಜ್ಞಾನಿ ಯಾನಿ ವೇತ್ತಿ ನ ತದ್ಗುರುಃ ॥ ೨೮ ॥

ಯಜೂಂಷಿ ಯೈರಧೀತಾನಿತಾನಿ ವಿಪ್ರೈರ್ದ್ವಿಜೋತ್ತಮ ।
ವಾಜಿನಸ್ತೇ ಸಮಾಖ್ಯಾತಸ್ಸೂರ್ಯೋಽಶ್ವಸ್ಸೋಽಭವದ್ಯತಃ ॥ ೨೯ ॥

ಶಾಖಾಭೇದಾಸ್ತು ತೇಷಾಂವೈ ದಶ ಪಂಚ ಚ ವಾಜಿನಾಂ ।
ಕಣ್ವಾದ್ಯಾಸ್ತು ಮಹಾಭಾಗಾ ಯಾಜ್ಞವಲ್ಕ್ಯ ಪ್ರಕೀರ್ತಿತಾಃ ॥ ೩೦ ॥

ಇತಿ ಶ್ರೀ ವಿಷ್ಣುಪುರಾಣೇ ತೃತೀಯಾಂಶೇ ಪಂಚಮೋಽಧ್ಯಾಯಃ

---

೨೭. ಯಾಜ್ಞವಲ್ಕ್ಯನು ಸೂರ್ಯನಿಗೆ ನಮಸ್ಕರಿಸಿ ಸೂರ್ಯದೇವನೇ ನಮ್ಮ ಗುರುವಿಗೆ ತಿಳಿಯದಿರುವ ಯಜುರ್ವೇದವನ್ನು ನನಗೆ ಹೇಳಿಕೊಡಬೇಕು" ಎಂದನು.

೨೮–೩೦. ಹೀಗೆಂದು ಯಾಜ್ಞವಲ್ಕ್ಯನು ಕೇಳಿದ ಮೇಲೆ ಸೂರ್ಯದೇವನು ವೈಶಂಪಾಯನನಿಗೆ ಬರದಿರುವ ಅಯಾತಯಾಮವೆಂಬ ಹೆಸರುಳ್ಳ ಯಜುರ್ವೇದ ವನ್ನು ಅವನಿಗೆ ಹೇಳಿಕೊಟ್ಟನು. ಅವನಿಂದ ಇತರ ಬ್ರಾಹ್ಮಣರು ಆ ವೇದವನ್ನು ಕಲಿತರು. ಸೂರ್ಯನು ಕುದುರೆಯ ರೂಪದಿಂದ ಹೇಳಿಕೊಟ್ಟುದರಿಂದ ಆ ಶಾಖೆಗೆ ವಾಜಸನೇಯ ಶಾಖೆಯೆಂದು ಹೆಸರಾಯಿತು. ಯಾಜ್ಞವಲ್ಕ್ಯನು ಹೇಳಿಕೊಟ್ಟನು ವಾಜಸನೇಯ ಶಾಖೆಯಲ್ಲಿ ಕಣ್ವಾದಿ ಹದಿನೈದು ಶಾಖೆಗಳಿರುವುವು.

ಎಂಬಲ್ಲಿಗೆ ಶ್ರೀ ವಿಷ್ಣುಪುರಾಣದ ತೃತೀಯಾಂಶದಲ್ಲಿ
ಐದನೆಯ ಅಧ್ಯಾಯವು ಮುಗಿದುದು.

ಶ್ರೀಃ

# ಶ್ರೀ ವಿಷ್ಣುಪುರಾಣೇ ತೃತೀಯಾಂಶೇ

## ಷಷ್ಠೋಽಧ್ಯಾಯಃ

॥ ಶ್ರೀ ಪರಾಶರಃ ॥

ಸಾಮವೇದತರೋಶ್ಶಾಖಾ ವ್ಯಾಸಶಿಷ್ಯಸ್ಸ ಜೈಮಿನಿಃ ।
ಕ್ರಮೇಣ ಯೇನ ಮೈತ್ರೇಯ ಬಿಭೇದ ಶೃಣು ತಂ ಮಮ ॥ ೧ ॥

ಸುಮಂತುಸ್ತಸ್ಯ ಪುತ್ರೋಽಭೂತ್ಸುತ್ವಾ ತಸ್ಯಾಪ್ಯಭೂತ್ಸುತಃ ।
ಅಧೀತವಂತೌ ಚೈಕೈಕಾಂ ಸಂಹಿತಾಂ ತೌ ಮಹಾಮತೀ ॥ ೨ ॥

ಸಹಸ್ರಸಂಹಿತಾಭೇದಂ ಸುಕರ್ಮಾ ತತ್ಸುತಸ್ತತಃ ।
ಚಕಾರ ತಂ ಚ ತಚ್ಛಿಷ್ಯೌ ಜಗ್ರಾಹಾತೇ ಮಹಾವ್ರತೌ ॥ ೩ ॥

---

### ಆರನೆಯ ಅಧ್ಯಾಯವು

೧–೨. ಮೈತ್ರೇಯನೇ! ವ್ಯಾಸರ ಶಿಷ್ಯನಾದ ಜೈಮಿನಿ ಋಷಿಯು ಸಾಮ ವೇದವೆಂಬ ವೃಕ್ಷದ ಶಾಖೆಯನ್ನು ಹೇಗೆ ವಿಭಾಗ ಮಾಡಿದನೆಂಬುದನ್ನು ಹೇಳುವೆನು ಕೇಳು. ಜೈಮಿನಿ ಋಷಿಗೆ ಸುಮಂತುವೆಂಬ ಮಗನಿದ್ದನು. ಆ ಸುಮಂತುವಿಗೆ ಸುತ್ವನೆಂಬ ಮಗನಾದನು. ಅವರಿಬ್ಬರೂ ಜೈಮಿನಿಯು ಮಾಡಿದ ಒಂದೊಂದು ಶಾಖೆಯನ್ನು ತಂತಮ್ಮ ಕಾಲದಲ್ಲಿ ಅಭ್ಯಾಸಮಾಡಿದರು.

೩–೫. ಸುತ್ವನ ಮಗನಾದ ಸುಕರ್ಮನೆಂಬವನು ಸಾಮಸಂಹಿತೆಯನ್ನು ಸಾವಿರ ಭಾಗವಾಗಿ ಮಾಡಿದನು. ಅದನ್ನು ಅವರ ಶಿಷ್ಯರಾದ ಹಿರಣ್ಯನಾಭ ಅಥವಾ

ಹಿರಣ್ಯನಾಭಃ ಕೌಸಲ್ಯಃ ಪೌಷ್ಪಿಂಜಿಶ್ಚ ದ್ವಿಜೋತ್ತಮ ।
ಉದೀಚ್ಯಾಸ್ಸಾಮಗಾಶ್ಶಿಷ್ಯಾಸ್ತಸ್ಯ ಪಂಚಶತಂ ಸ್ಮೃತಾಃ ॥ ೪ ॥

ಹಿರಣ್ಯನಾಭಾತ್ತಾವತ್ಯಸ್ಸಂಹಿತಾ ಯೈರ್ದ್ವಿಜೋತ್ತಮೈಃ ।
ಗೃಹೀತಾಸ್ತೇಽಪಿ ಚೋಚ್ಯಂತೇ ಪಂಡಿತೈಃ ಪ್ರಾಚ್ಯಸಾಮಗಾಃ ॥ ೫ ॥

ಲೋಕಾಕ್ಷಿಃ ಕೌಮುದಿಶ್ಚೈವ ಕಕ್ಷೀವಾನ್ ಲಾಂಗಲಿಸ್ತಥಾ ।
ಪೌಷ್ಪಿಂಜಿ ಶಿಷ್ಯಾಸ್ತದ್ಭೇದೈಸ್ಸಂಹಿತಾ ಬಹುಳೀಕೃತಾಃ ॥ ೬ ॥

ಹಿರಣ್ಯನಾಭ ಶಿಷ್ಯಸ್ತು ಚತುರ್ವಿಂಶತಿಸಂಹಿತಾಃ ।
ಪ್ರೋವಾಚ ಕೃತನಾಮಾಸೌ ಶಿಷ್ಯೇಭ್ಯಸ್ಸುಮಹಾಮತಿಃ ॥ ೭ ॥

ತೈಶ್ಚಾಪಿ ಸಾಮವೇದೋಽಸೌ ಶಾಖಾಭಿರ್ಬಹುಳೀಕೃತಃ ।
ಅಥರ್ವಾಣಮಥೋ ವಕ್ಷ್ಯೇ ಸಂಹಿತಾನಾಂ ಸಮುಚ್ಚಯಂ ॥ ೮ ॥

---

ಕೌಸಲ್ಯ ಪೌಷ್ಪಿಂಜಿ ಎಂಬಿಬ್ಬರು ಅಭ್ಯಾಸ ಮಾಡಿದರು. ಹಿರಣ್ಯನಾಭನೆಂಬುವನಿಗೆ ಉತ್ತರ ದೇಶದ ಸಾಮಶಾಖೆಯ ಐನೂರು ಜನ ಶಿಷ್ಯರಿದ್ದರು. ಅವರು ಹಿರಣ್ಯನಾಭನಿಂದ ಸಾಮಸಂಹಿತೆಯನ್ನು ಕಲಿತು ಕಾಲಾಂತರದಲ್ಲಿ ಬೇರೆ ದೇಶದಲ್ಲಿ ವಾಸಮಾಡುತ್ತಿದ್ದುದರಿಂದ ಅವರನ್ನು ಪಂಡಿತರು ಪ್ರಾಚ್ಯಸಾಮಗರೆಂದು ಕರೆದರು.

೬–೮. ಲೋಕಾಕ್ಷಿ, ಕೌಮುದಿ, ಕಕ್ಷೀವಂತ, ಲಾಂಗಲಿ ಎಂಬವರು ಪೌಷ್ಪಿಂಜಿಯ ಶಿಷ್ಯರು ಇವರ ಶಿಷ್ಯಪ್ರಶಿಷ್ಯರಿಂದ ಸಾಮಸಂಹಿತೆಯು ವಿಸ್ತಾರವಾಯಿತು. ಹಿರಣ್ಯನಾಭನ ಶಿಷ್ಯನಾದ ಕೃತನಾಮನೆಂಬವನು ತನ್ನ ಶಿಷ್ಯರಿಗೆ ಇಪ್ಪತ್ತನಾಲ್ಕು ಸಾಮಸಂಹಿತೆಯನ್ನು ಹೇಳಿಕೊಟ್ಟನು. ಅವರೂ ಸಾಮವೇದವನ್ನು ಅನೇಕ ಶಾಖೆಗಳಾಗಿ ಮಾಡಿದರು. ಇನ್ನು ಮುಂದೆ ಅಥರ್ವಣ ಸಂಹಿತೆಯ ವಿಚಾರವನ್ನು ಹೇಳುವೆನು.

**ಅಥರ್ವವೇದಂ ಸ ಮುನಿಸ್ಸುಮಂತುರಮಿತದ್ಯುತಿಃ ।**
**ಶಿಷ್ಯಮಧ್ಯಾಪಯಾಮಾಸ ಕಬಂಧಂ ಸೋಽಪಿ ತದ್ವಿಧಾ ॥**
**ಕೃತ್ವಾತು ದೇವದರ್ಶಾಯ ತಥಾ ಪಥ್ಯಾಯ ದತ್ತವಾನ್** ॥ ೯ ॥

**ದೇವದರ್ಶಸ್ಯ ಶಿಷ್ಯಾಸ್ತು ಮೇಧೋ ಬ್ರಹ್ಮಬಲಿಸ್ತಥಾ ।**
**ಶೌಲ್ಕಾಯನಿಃ ಪಿಪ್ಪಲಾದಸ್ತಥಾನ್ಯೋ ದ್ವಿಜಸತ್ತಮ** ॥ ೧೦ ॥

**ಪಥ್ಯಸ್ಯಾಪಿ ತ್ರಯಃ ಶಿಷ್ಯಾಃ ಕೃತಾ ಯೈರ್ದ್ವಿಜ ಸಂಹಿತಾಃ ।**
**ಜಾಬಾಲಿಃ ಕುಮುದಾದಿಶ್ಚ ತೃತೀಯಶ್ಶೌನಕೋ ದ್ವಿಜ** ॥ ೧೧ ॥

**ಶೌನಕಸ್ತು ದ್ವಿಧಾ ಕೃತ್ವಾ ದದಾವೇಕಾಂ ತು ಬಭ್ರವೇ ।**
**ದ್ವಿತೀಯಾಂ ಸಂಹಿತಾಂ ಪ್ರಾದಾತ್ಸೈಂಧವಾಯ ಚ ಸಂಜ್ಞಿನೇ** ॥ ೧೨ ॥

**ಸೈಂಧವಾನ್ಮುಂಜಿಕೇಶಶ್ಚಾಭಿನದ್ವೇದಂ ದ್ವಿಧಾ ಪುನಃ ।**
**ನಕ್ಷತ್ರಕಲ್ಪೋ ವೇದಾನಾಂ ಸಂಹಿತಾನಾಂ ತಥೈವ ಚ** ॥ ೧೩ ॥

---

೯-೧೨ ಸುಮಂತುವೆಂಬ ವ್ಯಾಸಶಿಷ್ಯನು ತನ್ನ ಶಿಷ್ಯನಾದ ಕಬಂಧನೆಂಬವನಿಗೆ ಅಥರ್ವಣ ವೇದವನ್ನು ಹೇಳಿಕೊಟ್ಟನು. ಕಬಂಧನು ಅದನ್ನು ಎರಡು ಭಾಗಮಾಡಿ ದೇವದರ್ಶ, ಪಥ್ಯ ಎಂಬ ಇಬ್ಬರು ಶಿಷ್ಯರಿಗೆ ಹೇಳಿಕೊಟ್ಟನು. ದೇವದರ್ಶನಿಗೆ ಮೇಧ, ಬ್ರಹ್ಮಬಲಿ, ಶೌಲ್ಕಾಯನಿ, ಪಿಪ್ಪಲಾದ ಎಂಬ ನಾಲ್ವರು ಶಿಷ್ಯರಿದ್ದರು. ದೇವದರ್ಶನು ತಾನು ಕಲಿತ ಸಂಹಿತೆಯನ್ನು ನಾಲ್ಕು ಭಾಗಮಾಡಿ ಶಿಷ್ಯರಿಗೆ ಹೇಳಿಕೊಟ್ಟನು. ಪಥ್ಯನಿಗೆ ಜಾಬಾಲಿ, ಕುಮುದಾದಿ, ಶೌನಕ, ಎಂಬ ಮೂವರು ಶಿಷ್ಯರು. ಪಥ್ಯನು ತನ್ನ ಸಂಹಿತೆಯನ್ನು ಮೂರು ಭಾಗ ಮಾಡಿ ಶಿಷ್ಯರಿಗೆ ಹೇಳಿಕೊಟ್ಟನು. ಅವರೂ ತಮ್ಮ ಸಂಹಿತೆಯನ್ನು ಬೇರೆ ಬೇರೆಯಾಗಿ ಮಾಡಿದರು. ಶೌನಕನು ತನ್ನ ಸಂಹಿತೆಯನ್ನು ಎರಡು ಭಾಗ ಮಾಡಿ ಒಂದನ್ನು ಬಭ್ರುವಿಗೂ, ಮತ್ತೊಂದನ್ನು ಸೈಂಧವನೆಂಬವನಿಗೂ ಹೇಳಿದನು.

೧೩-೧೪. ಸೈಂಧವನಿಂದ ಮುಂಜಿಕೇಶನೆಂಬವನು ಸಂಹಿತೆಯನ್ನು ಅಭ್ಯಾ ಮಾಡಿ ಅದನ್ನು ನಕ್ಷತ್ರಕಲ್ಪ, ವೇದಕಲ್ಪ, ಸಂಹಿತಾಕಲ್ಪ, ಆಂಗೀರಸಕಲ್ಪ, ಶಾಂತಿ

ಚತುರ್ಥಸ್ಸ್ಯಾದಾಂಗಿರಸಶ್ಶಾಂತಿಕಲ್ಪಸ್ತು ಪಂಚಮಃ ।
ಶ್ರೇಷ್ಠಸ್ತ್ವಥರ್ವಣಾಮೇತೇ ಸಂಹಿತಾನಾಂ ವಿಕಲ್ಪಕಾಃ ॥ ೧೪ ॥

ಆಖ್ಯಾನೈಶ್ಚಾಪ್ಯುಪಾಖ್ಯಾನೈರ್ಗಾಥಾಭಿಃ ಕಲ್ಪಶುದ್ಧಿಭಿಃ ।
ಪುರಾಣಸಂಹಿತಾಂ ಚಕ್ರೇ ಪುರಾಣಾರ್ಥವಿಶಾರದಃ ॥ ೧೫ ॥

ಪ್ರಖ್ಯಾತೋ ವ್ಯಾಸಶಿಷ್ಯೋಽಭೂತ್ಸೂತೋ ವೈ ರೋಮಹರ್ಷಣಃ ।
ಪುರಾಣಸಂಹಿತಾಂ ತಸ್ಮೈ ದದೌ ವ್ಯಾಸೋ ಮಹಾಮತಿಃ ॥ ೧೬ ॥

---

ಕಲ್ಪ ಎಂದು ಐದುಭಾಗ ಮಾಡಿದನು. ನಕ್ಷತ್ರಕಲ್ಪವೆಂಬುದು ಜ್ಯೋತಿಶ್ಶಾಸ್ತ್ರಕ್ಕೆ ಸೇರಿದ ನಕ್ಷತ್ರ ಪೂಜಾವಿಧಿಯನ್ನು ಹೇಳುವುದು. ವೇದಕಲ್ಪವು, ಯಜ್ಞಬ್ರಹ್ಮತ್ವ ಮುಂತಾದ ವಿಧಿಗಳನ್ನು ಹೇಳುವುದು. ಸಂಹಿತಾ ಕಲ್ಪವು ಮಂತ್ರಭಾಗವಾಗಿರುವುದು. ಆಂಗೀರಸಕಲ್ಪವು ಅಭಿಚಾರ ವಿಧಿಯನ್ನು ಹೇಳುವುದು. ಶಾಂತಿಕಲ್ಪವು ಹದಿನೆಂಟು ಬಗೆಯ ಮಹಾಶಾಂತಿಕ್ರಮವನ್ನು ಹೇಳುವುದು. ಈ ಸೈಂಧವಮುಂಜಿಕೇಶ ಸಂಹಿತೆಯು ಅಥರ್ವಣ ವೇದಾಭ್ಯಾಸಿಗಳಿಗೆ ಅತ್ಯಂತ ಶ್ರೇಷ್ಠವಾದುದಾಗಿರುವುದು.

೧೫–೧೬. ಪುರಾಣಾರ್ಥಗಳನ್ನು ತಿಳಿದ ವ್ಯಾಸನು ಆಖ್ಯಾನ, ಉಪಾಖ್ಯಾನ, ಗಾಥಾ, ಕಲ್ಪಶುದ್ಧಿ ಇವುಗಳಿಂದ ಕೂಡಿ ಪುರಾಣ ಸಂಹಿತೆಯನ್ನು ರಚಿಸಿದನು. ತಾನೇ ನೋಡಿದುದನ್ನು ಹೇಳುವುದು ಆಖ್ಯಾನವೆನಿಸುವುದು. ತಾನು ಕೇಳಿದುದನ್ನು ಹೇಳುವುದು, ಉಪಾಖ್ಯಾನವೆನಿಸುವುದು. ದೊಡ್ಡವರು ಲೋಕದ ಜನರೂ ಆಡುವ ಮಾತುಗಳು ಗಾದೆಗಳು. ಕಲ್ಪಶುದ್ಧಿಯೆಂಬುದು ವರಾಹಕಲ್ಪಾದಿಗಳ ವೃತ್ತಾಂತ ಅಥವಾ ಪಿತೃಕಲ್ಪ, ಮಂತ್ರಕಲ್ಪ, ಮುಂತಾದ ವಿಧಿಗಳು. ರೋಮಹರ್ಷಣನ ಮಗನಾದ ಸೂತನೆಂಬುವನು ವ್ಯಾಸನ ಪ್ರಸಿದ್ಧ ಶಿಷ್ಯನಾಗಿದ್ದನು. ಅವನಿಗೆ ವ್ಯಾಸನು ಪುರಾಣ ಸಂಹಿತೆಯನ್ನು ಹೇಳಿಕೊಟ್ಟನು.

ಸುಮತಿಶ್ಚಾಗ್ನಿವರ್ಚಾಶ್ಚ ಮಿತ್ರಾಯುಶ್ಶಾಂಸಪಾಯನಃ ।
ಅಕೃತವ್ರಣೋಽಥ ಸಾವರ್ಣಿಃ ಷಟ್ಶಿಷ್ಯಾಸ್ತಸ್ಯ ಚಾಭವನ್ ॥ ೧೭ ॥

ಕಾಶ್ಯಪಸ್ಸಂಹಿತಾಕರ್ತಾ ಸಾವರ್ಣಿಃ ಶಾಂಸಪಾಯನಃ ।
ರೋಮಹರ್ಷಣಿಕಾ ಚಾನ್ಯಾ ತಿಸೃಣಾಂ ಮೂಲಸಂಹಿತಾ ॥ ೧೮ ॥

ಚತುಷ್ಟಯೇನಾಪ್ಯೇತೇನ ಸಂಹಿತಾನಾಮಿದಂ ಮುನೇ ॥ ೧೯ ॥

ಆದ್ಯಂ ಸರ್ವಪುರಾಣಾನಾಂ ಪುರಾಣಂ ಬ್ರಾಹ್ಮಮುಚ್ಯತೇ ।
ಅಷ್ಟಾದಶಪುರಾಣಾನಿ ಪುರಾಣಜ್ಞಾಃ ಪ್ರಚಕ್ಷತೇ ॥ ೨೦ ॥

ಬ್ರಾಹ್ಮಂ ಪಾದ್ಮಂ ವೈಷ್ಣವಂ ಚ ಶೈವಂ ಭಾಗವತಂ ತಥಾ ।
ತಥಾನ್ಯಂ ನಾರದೀಯಂ ಚ ಮಾರ್ಕಂಡೇಯಂಚ ಸಪ್ತಮಂ ॥ ೨೧ ॥

ಆಗ್ನೇಯಮಷ್ಟಮಂ ಚೈವ ಭವಿಷ್ಯನ್ನವಮಂ ಸ್ಮೃತಂ ।
ದಶಮಂ ಬ್ರಹ್ಮವೈವರ್ತಂ ಲೈಂಗಮೇಕಾದಶಂ ಸ್ಮೃತಂ ॥ ೨೨ ॥

---

೧೭. ಸುಮತಿ, ಅಗ್ನಿವರ್ಚ, ಮಿತ್ರಾಯು, ಶಾಂಸಪಾಯನ, ಅಕೃತವ್ರಣ ಸಾವರ್ಣಿ, ಎಂಬ ಆರು ಜನರು ಸೂತನ ಶಿಷ್ಯರಾಗಿದ್ದರು. ಈ ಆರುಜನರೂ ಸೂತನು ಮಾಡಿದ ಆರು ಪುರಾಣ ಸಂಹಿತೆಯನ್ನು ಅಭ್ಯಾಸ ಮಾಡಿದರು.

೧೮-೧೯. ಮೈತ್ರೇಯನೇ ! ಅಕೃತವ್ರಣನೆಂಬ ಕಾಶ್ಯಪನೂ, ಸಾವರ್ಣಿ ಶಾಂಸಪಾಯನರೂ ಮಾಡಿದ ಮೂರು ಸಂಹಿತೆಗಳೂ ಮಿಕ್ಕ ಮೂರು ಜನರ. ಮೂಲ ಸಂಹಿತೆಯೂ ಸೇರಿ ಒಟ್ಟು ನಾಲ್ಕು ಸಂಹಿತೆಯಿಂದ ಸಾರವನ್ನು ತೆಗೆದು ಕೊಂಡು ನಾನು ಈ ವಿಷ್ಣುಪುರಾಣವನ್ನು ರಚಿಸಿದೆನು.

೨೦-೨೩. ಪುರಾಣಗಳನ್ನು ತಿಳಿದವರು ಹದಿನೆಂಟು ಪುರಾಣಗಳಿರುವುವೆಂದು ಹೇಳುವರು. ಸಮಸ್ತಪುರಾಣಗಳಿಗೂ ಮೊದಲನೆಯ ಪುರಾಣವು ಬ್ರಾಹ್ಮಪುರಾಣವು. ಕ್ರಮವಾಗಿ ೨ ಪಾದ್ಮ, ೩ ವೈಷ್ಣವ, ೪ ಶೈವ, ೫ ಭಾಗವತ, ೬ ನಾರದೀಯ, ೭

ವಾರಾಹಂ ದ್ವಾದಶಂ ಚೈವ ಸ್ಕಾಂದಂ ಚಾತ್ರ ತ್ರಯೋದಶಂ ।
ಚತುರ್ದಶಂ ವಾಮನಂ ಚ ಕೌರ್ಮ್ಯಂ ಪಂಚದಶಂ ತಥಾ ॥

ಮಾತ್ಸ್ಯಂ ಚ ಗಾರುಡಂ ಚೈವ ಬ್ರಹ್ಮಾಂಡಂ ಚ ತತಃ ಪರಂ ॥ ೨೩ ॥

ಸರ್ಗಶ್ಚ ಪ್ರತಿಸರ್ಗಶ್ಚ ವಂಶಮನ್ವಂತರಾಣಿ ಚ ।
ಸರ್ವೇಷ್ವೇತೇಷು ಕಥ್ಯಂತೇ ವಂಶಾನುಚರಿತಂ ಚ ಯತ್ ॥ ೨೪ ॥

ಯದೇತತ್ತವ ಮೈತ್ರೇಯ ಪುರಾಣಂ ಕಥ್ಯತೇ ಮಯಾ ।
ಏತದ್ವೈಷ್ಣವಸಂಜ್ಞಂ ವೈ ಪಾದ್ಮಸ್ಯ ಸಮನಂತರಂ ॥ ೨೫ ॥

ಸರ್ಗೇ ಚ ಪ್ರತಿಸರ್ಗೇ ಚ ವಂಶಮನ್ವಂತರಾದಿಷು ।
ಕಥ್ಯತೇ ಭಗವಾನ್ವಿಷ್ಣುರಶೇಷೇಷ್ವೇವ ಸತ್ತಮ ॥ ೨೬ ॥

ಅಂಗಾನಿ ವೇದಾಶ್ಚತ್ವಾರೋ ಮೀಮಾಂಸಾ ನ್ಯಾಯವಿಸ್ತರಃ ।
ಪುರಾಣಂ ಧರ್ಮಶಾಸ್ತ್ರಂ ಚ ವಿದ್ಯಾಹ್ಯೇತಾಶ್ಚತುರ್ದಶ ॥ ೨೭ ॥

---

ಮಾರ್ಕಂಡೇಯ, ೮ ಆಗ್ನೇಯ, ೯ ಭವಿಷ್ಯ, ೧೦ ಬ್ರಹ್ಮವೈವರ್ತ, ೧೧ ಲೈಂಗ, ೧೨ ವಾರಾಹ, ೧೩ ಸ್ಕಾಂದ, ೧೪ ವಾಮನ, ೧೫ ಕೌರ್ಮ, ೧೬ ಮಾತ್ಸ್ಯ, ೧೭ ಗಾರುಡ, ೧೮ ಬಹ್ಮಾಂಡ ಎಂಬಿವೇ ಹದಿನೆಂಟು ಪುರಾಣಗಳು.

೨೪-೨೬. ಈ ಸಮಸ್ತ ಪುರಾಣಗಳಲ್ಲಿಯೂ ಸೃಷ್ಟಿ, ಪ್ರಳಯ ವಂಶ, ಮನ್ವಂತರ, ವಂಶಾನುಚರಿತ, ಇವುಗಳನ್ನು ಹೇಳಿರುವುದು. ಮೈತ್ರೇಯನೇ! ನಾನು ನಿನಗೆ ಹೇಳುವ ಪುರಾಣವು ಮೂರನೆಯದಾದ ವಿಷ್ಣುಪುರಾಣವು. ಸೃಷ್ಟಿ ಪ್ರಳಯಾದಿಗಳಿಗೆಲ್ಲ ವಿಷ್ಣುವೇ ಕಾರಣನೆಂದು ಹೇಳುವುದರಿಂದ ಇದಕ್ಕೆ ವೈಷ್ಣವಪುರಾಣವೆಂದು ಹೆಸರು ಬಂದಿರುವುದು.

೨೭-೨೮. ಋಗ್ವೇದಾದಿ ನಾಲ್ಕು ವೇದಗಳು ಶಿಕ್ಷಾದಿ ಆರು ವೇದಾಂಗಗಳು ಮೀಮಾಂಸ, ನ್ಯಾಯಶಾಸ್ತ್ರ, ಪುರಾಣ, ಧರ್ಮಶಾಸ್ತ್ರ, ಇವುಗಳನ್ನೇ

ಆಯುರ್ವೇದೋ ಧನುರ್ವೇದೋ ಗಾಂಧರ್ವಶ್ಚೈವ ತೇ ತ್ರಯಃ ।
ಅರ್ಥಶಾಸ್ತ್ರಂ ಚತುರ್ಥಂ [redacted] ವಿದ್ಯಾ ಹ್ಯಷ್ಟಾದಶೈವ ತಾಃ ॥ ೨೮ ॥

ಜ್ಞೇಯಾ ಬ್ರಹ್ಮರ್ಷಯಃ ಪೂರ್ವಂ ತೇಭ್ಯೋ ದೇವರ್ಷಯಃ ಪುನಃ ।
ರಾಜರ್ಷಯಃ ಪುನಸ್ತೇಭ್ಯೋ ಋಷಿಪ್ರಕೃತಯಸ್ತ್ರಯಃ ॥ ೨೯ ॥

ಇತಿ ಶಾಖಾಸ್ಸಮಾಖ್ಯಾತಾಃ ಶಾಖಾಭೇದಾಸ್ತಥೈವ ಚ ।
ಕರ್ತಾರಶ್ಚೈವ ಶಾಖಾನಾಂ ಭೇದಹೇತುಸ್ತವೋದಿತಃ ॥ ೩೦ ॥

ಸರ್ವಮನ್ವಂತರೇಷ್ವೇವಂ ಶಾಖಾಭೇದಾಸ್ಸಮಾಸ್ಸ್ಮೃತಾಃ ॥ ೩೧ ॥

ಪ್ರಾಜಾಪತ್ಯಾ ಶ್ರುತಿರ್ನಿತ್ಯಾ ತದ್ವಿಕಲ್ಪಾಸ್ತ್ವಿಮೇ ದ್ವಿಜ ॥ ೩೨ ॥

---

ಗಾಂಧರ್ವವೇದ, ಅರ್ಥಶಾಸ್ತ್ರ ಈ ನಾಲ್ಕೂ ಸೇರಿದರೆ ಹದಿನೆಂಟು ವಿದ್ಯೆಗಳಾಗುವುವು.

೨೯-೩೧. ಬ್ರಹ್ಮರ್ಷಿಗಳು, ದೇವರ್ಷಿಗಳು, ರಾಜರ್ಷಿಗಳು, ಎಂದು ಮೂರು ಗುಂಪಿನ ಋಷಿಗಳಿರುವರು. ಈ ಋಷಿಗಳಿಂದ ವೇದಶಾಖೆಗಳೂ, ಶಾಖಾಭೇದಗಳೂ. ಶಾಖಾಕರ್ತೃಗಳೂ ಶಾಖಾಭೇದಗಳಾಗಲು ಕಾರಣಗಳು. ಇವುಗಳನ್ನು ನಿನಗೆ ಹೇಳಿರುವೆನು. ಎಲ್ಲ ಮನ್ವಂತರಗಳಲ್ಲಿಯೂ ವೇದ ಶಾಖಾಭೇದಗಳು ಸಮಾನವಾಗಿರುವುವು.

೩೨-೩೩ ಕಲ್ಪದ ಆದಿಯಲ್ಲಿ ಪ್ರಜಾಪತಿಯಾದ ಬ್ರಹ್ಮನು ನೋಡಿದ ವೇದವು ನಿತ್ಯವಾದುದು. ಈ ವೇದಶಾಖೆಗಳೆಲ್ಲ [redacted] ವೇದದ ಭೇದಗಳಾಗಿರುವುವು. ಈ ರೀತಿಯಲ್ಲಿ ನಿನ್ನ ಪ್ರಶ್ನೆಗಳಿಗೆ ಉತ್ತರವಾಗಿ ವೇದ ಸಂಬಂಧವಾದ ಶಾಖಾಭೇದ

ಏವಂ ತವೋದಿತಂ ಸರ್ವಂ ಯತ್ಪೃಷ್ಟೋಽಹಮಿಹ ತ್ವಯಾ ।

ಮೈತ್ರೇಯ ವೇದಸಂಬಂಧಂ ಕಿಮನ್ಯತ್ಕಥಯಾಮಿ ತೇ ॥ ೩೩ ॥

ಇತಿ ಶ್ರೀ ವಿಷ್ಣುಪುರಾಣೇ ತೃತೀಯಾಂಶೇ ಷಷ್ಠೋಽಧ್ಯಾಯಃ

---

ಗಳನ್ನೆಲ್ಲ ಹೇಳಿರುವೆನು. ಮೈತ್ರೇಯನೇ! ನಾನು ನಿನಗೆ ಮತ್ತೇನು ಹೇಳಬೇಕೆಂಬುದನ್ನು ತಿಳಿಸು ಎಂದು ಹೇಳಿದನು.

ಎಂಬಲ್ಲಿಗೆ ಶ್ರೀ ವಿಷ್ಣುಪುರಾಣದ ತೃತೀಯಾಂಶದಲ್ಲಿ

ಆರನೆಯ ಅಧ್ಯಾಯವು ಮುಗಿದುದು.

ಶ್ರೀಃ

# ಶ್ರೀ ವಿಷ್ಣುಪುರಾಣೇ ತೃತೀಯಾಂಶೇ

## ಸಪ್ತಮೋಽಧ್ಯಾಯಃ

॥ ಮೈತ್ರೇಯಃ ॥

ಯಥಾವತ್ಕಥಿತಂ ಸರ್ವಂ ಯತ್ಪೃಷ್ಟೋಽಸಿ ಮಯಾ ಗುರೋ ।
ಶ್ರೋತುಮಿಚ್ಛಾಮ್ಯಹಂ ಚೈಕಂ ತದ್ಭವಾನ್ಪ್ರಬ್ರವೀತು ಮೇ ॥ ೧ ॥

ಸಪ್ತದ್ವೀಪಾನಿ ಪಾತಾಳವಿಧಿಶ್ಚ ಸುಮಹಾಮುನೇ ।
ಸಪ್ತಲೋಕಾಶ್ಚ ಯೇಽಂತಸ್ಥಾ ಬ್ರಹ್ಮಾಂಡಸ್ಯಾಸ್ಯ ಸರ್ವತಃ ॥ ೨ ॥

ಸ್ಥೂಲಾತ್ಸೂಕ್ಷ್ಮತರೈಶ್ಚೈವ ಸರ್ವಂ ಪ್ರಾಣಿಭಿರಾವೃತಂ ॥ ೩ ॥

ಅಂಗುಳಸ್ಯಾಷ್ಟಮೋ ಭಾಗೋ ನ ಸೋಽಸ್ತಿ ಮುನಿಸತ್ತಮ ।
ನ ಸಂತಿ ಪ್ರಾಣಿನೋ ಯತ್ರ ಕರ್ಮಬಂಧನಿಬಂಧನಾಃ ॥ ೪ ॥

---

### ಏಳನೆಯ ಅಧ್ಯಾಯವು.

೧-೪. ಮೈತ್ರೇಯನು ಗುರುಗಳೇ ನಾನು ಕೇಳಿದ ಪ್ರಶ್ನೆಗಳಿಗೆಲ್ಲ ವಿಸ್ತಾರವಾಗಿ ಉತ್ತರವನ್ನು ಹೇಳಿದಿರಿ. ಮತ್ತೊಂದು ವಿಷಯವನ್ನು ಕೇಳಬೇಕೆಂದಿರುವೆನು ಅದನ್ನು ತಾವು ದಯವಿಟ್ಟು ಹೇಳಬೇಕು. ಈ ಬ್ರಹಾಂಡದೊಳಗೆ ಸಪ್ತದ್ವೀಪಗಳೂ, ಸಪ್ತಲೋಕಗಳೂ ಸ್ಥೂಲ, ಸೂಕ್ಷ್ಮ, ಸೂಕ್ಷ್ಮತರವು, ಸ್ಥೂಲತಮ ಪ್ರಾಣಿಗಳಿಂದ ತುಂಬಿರುವುವು. ಕರ್ಮಾನುಭವಕ್ಕಾಗಿ ಜನ್ಮವೆತ್ತಿದ ಪ್ರಾಣಿಗಳಿಲ್ಲದ ಪ್ರದೇಶವು ಒಂದಂಗುಲದ ಎಂಟನೆಯ ಒಂದು ಭಾಗದಷ್ಟು ಕೂಡ ಸಿಕ್ಕುವುದಿಲ್ಲ.

ಸರ್ವೇ ಚೈತೇ ವಶಂ ಯಾಂತಿ ಯಮಸ್ಯ ಭಗವನ್ ಕಿಲ ।
ಆಯುಷೋಂತೇ ತತೋ ಯಾಂತಿ ಯಾತನಾಸ್ತತ್ಪ್ರಚೋದಿತಾಃ ॥ ೫ ॥

ಯಾತನಾಭ್ಯಃ ಪರಿಭ್ರಷ್ಟಾ ದೇವಾದ್ಯಾಸ್ವಥ ಯೋನಿಷು ।
ಜಂತವಃ ಪರಿವರ್ತಂತೇ ಶಾಸ್ತ್ರಾಣಾಮೇಷ ನಿರ್ಣಯಃ ॥ ೬ ॥

ಸೋಽಹಮಿಚ್ಛಾಮಿ ತಚ್ಛ್ರೋತುಂ ಯಮಸ್ಯ ವಶವರ್ತಿನಃ ।
ನ ಭವಂತಿ ನರಾ ಯೇನ ತತ್ಕರ್ಮ ಕಥಯಾಮಲಂ ॥ ೭ ॥

॥ ಶ್ರೀ ಪರಾಶರಃ ॥

ಅಯಮೇವ ಮುನೇ ಪ್ರಶ್ನೋ ನಕುಲೇನ ಮಹಾತ್ಮನಾ ।
ಪೃಷ್ಟಃ ಪಿತಾಮಹಃ ಪ್ರಾಹ ಭೀಷ್ಮೋ ಯತ್ತಚ್ಛೃಣುಷ್ವ ಮೇ ॥ ೮ ॥

॥ ಶ್ರೀ ಭೀಷ್ಮಃ ॥

ಪುರಾ ಮಮಾಗತೋ ವತ್ಸ ಸಖಾ ಕಾಳಿಂಗಕೋ ದ್ವಿಜಃ ।
ಸ ಮಾಮುವಾಚ ಪೃಷ್ಟೋ ವೈ ಮಯಾ ಜಾತಿಸ್ಮರೋ ಮುನಿಃ ॥ ೯ ॥

---

೫-೭ ಈ ಸಮಸ್ತ ಪ್ರಾಣಿಗಳೂ ತಮ್ಮ ಆಯುಸ್ಸಿನ ಕೊನೆಯಲ್ಲಿ ಯಮನ ವಶರಾಗಿ ನರಕದಲ್ಲಿ ಯಾತನೆಯನ್ನನುಭವಿಸುವರು. ಮತ್ತೆ ದೇವಾದಿ ಜನ್ಮವನ್ನು ಪಡೆಯುವರು. ಹೀಗೆ ಪ್ರಾಣಿಗಳು ಹುಟ್ಟು ಸಾವುಗಳನ್ನನುಭವಿಸುತ್ತಿರುವರೆಂದು ಶಾಸ್ತ್ರದಲ್ಲಿ ಹೇಳಿರುವುದು. ಮನುಷ್ಯರು ಯಮನ ವಶರಾಗದಂತಹ ಪರಿಶುದ್ಧವಾದ ಕರ್ಮವಾವುದೆಂಬುದನ್ನು ನನಗೆ ಹೇಳಬೇಕು ಎಂದನು.

೮. ಪರಾಶರರು, ಮೈತ್ರೇಯಮುನಿಯೇ! ಮಹಾತ್ಮನಾದ ನಕುಲನು ಪಿತಾಮಹನಾದ ಭೀಷ್ಮನನ್ನು ಕುರಿತು ಇದೇ ಪ್ರಶ್ನೆಯನ್ನು ಕೇಳಿದನು. ಅವನಿಗೆ ಭೀಷ್ಮನು ಏನು ಹೇಳಿದನೋ ಅದನ್ನೇ ನಿನಗೆ ಹೇಳುವೆನು ಕೇಳು.

೯-೧೧. ಭೀಷ್ಮನು ಹೇಳಿದ್ದೇನೆಂದರೆ:—ಪ್ರೀತಿಪಾತ್ರನಾದ ನಕುಲನೇ! ಹಿಂದೆ ಕಳಿಂಗದೇಶದ ಪೂರ್ವಜನ್ಮದ ಜ್ಞಾನವುಳ್ಳ ನನ್ನ ಸ್ನೇಹಿತನಾದ ಒಬ್ಬ ಬ್ರಾಹ್ಮಣ

ತೇನಾಖ್ಯಾತಮಿದಂ ಸರ್ವಮಿತ್ಥಂ ಚೈತದ್ಭವಿಷ್ಯತಿ ।
ತಥಾ ಚ ತದಭೂದ್ವತ್ಸ ಯಥೋಕ್ತಂ ತೇನ ಧೀಮತಾ ॥ ೧೦ ॥

ಸ ಚ ಪೃಷ್ಟೋ ಮಯಾ ಭೂಯಶ್ಶ್ರದ್ಧಧಾನೇನ ವೈ ದ್ವಿಜಃ
ಯದ್ಯದಾಹ ನ ತದ್ದೃಷ್ಟಂ ಅನ್ಯಥಾ ಹಿ ಮಯಾ ಕ್ವಚಿತ್ ॥ ೧೧ ॥

ಏಕದಾ ತು ಮಯಾ ಪೃಷ್ಟ ಮೇತದ್ಯದ್ಭವತೋದಿತಂ ।
ಪ್ರಾಹ ಕಾಂಳಿಂಗಕೋ ವಿಪ್ರಃ ಸ್ಮೃತ್ವಾ ತಸ್ಯ ಮುನೇರ್ವಚಃ ॥ ೧೨ ॥

ಜಾತಿಸ್ಮರೇಣ ಕಥಿತೋ ರಹಸ್ಯಃ ಪರಮೋ ಮಮ ।
ಯಮಕಿಂಕರಯೋರ್ಯೋಽಭೂತ್ಸಂವಾದಸ್ತಂ ಬ್ರವೀಮಿ ತೇ ॥ ೧೩ ॥

ಸ್ವಪುರುಷಮಭಿವೀಕ್ಷ್ಯ ಪಾಶಹಸ್ತಂ
ವದತಿ ಯಮಃ ಕಿಲ ತಸ್ಯ ಕರ್ಣಮೂಲೇ ।

---

ನಿದ್ದನು ಅವನು ನನ್ನ ಸಮೀಪಕ್ಕೆ ಬಂದಾಗ ನಾನೊಂದು ಪ್ರಶ್ನೆಯನ್ನು ಕೇಳಿದೆನು. ಅದಕ್ಕವನು ಹೇಳಿದ, ಇದು ಹೀಗೆಯೇ ಆಗುವುದೆಂದ ಭವಿಷ್ಯಕಾರ್ಯವು ಅವನು ಹೇಳಿದಂತೆಯೇ ಆಯಿತು. ಅವನ ಮಾತನ್ನು ನಂಬಿ ಮತ್ತೆ ಅವನನ್ನು ಪ್ರಶ್ನೆ ಮಾಡಿದೆನು. ಅದೂ ಅವನು ಹೇಳಿದಂತೆ ನಡೆಯಿತು. ಬೇರೆ ವಿಧವಾಗಿ ಆಗಲಿಲ್ಲ.

೧೨-೧೩. ನಕುಲನೇ! ಒಂದಾನೊಂದು ದಿನ ನಾನು, ನೀನು ಕೇಳಿದ ಪ್ರಶ್ನೆಯನ್ನೇ ಆ ಮುನಿಯನ್ನು ಕೇಳಿದೆನು. ಅದಕ್ಕೆ ಉತ್ತರವಾಗಿ ಪೂರ್ವಜನ್ಮ ಜ್ಞಾನವುಳ್ಳ ಆ ಮುನಿಯು ಕೇಳಿದ್ದ ಯಮ ಮತ್ತು ಅವನ ದೂತನ ಅತ್ಯಂತ ಗೋಪ್ಯವಾದ ಸಂವಾದವನ್ನು ಜ್ಞಾಪಿಸಿಕೊಂಡು ನನಗೆ ಹೇಳಿದನು. ಅದನ್ನೇ ನಾನು ನಿನಗೆ ಹೇಳುವೆನೆಂದು ಹೇಳಲು ಪ್ರಾರಂಭಿಸಿದನು.

೧೪. ಯಮನು ಪಾಪಿ ಜೀವರುಗಳನ್ನು ತನ್ನ ಲೋಕಕ್ಕೆ ಕರೆತರುವುದಕ್ಕಾಗಿ ಪಾಶಾಯುಧವನ್ನು ಕೈಯಲ್ಲಿ ಹಿಡಿದಿದ್ದ ದೂತನನ್ನು ಕುರಿತು, ಅವನ ಕಿವಿಯ

ಪರಿಹರ ಮಧುಸೂದನಪ್ರಪನ್ನಾನ್
ಪ್ರಭುರಹಮನ್ಯನೃಣಾಂ ನ ವೈಷ್ಣವಾನಾಂ ॥ ೧೪ ॥

ಅಹಮಮರಗಣಾರ್ಚಿತೇನ ಧಾತ್ರಾ
ಯಮ ಇತಿ ಲೋಕಹಿತಾಹಿತೇ ನಿಯುಕ್ತಃ ।
ಹರಿಗುರುವಶಗೋಽಸ್ಮಿ ನ ಸ್ವತಂತ್ರಃ
ಪ್ರಭವತಿ ಸಂಯಮನೇ ಮಮಾಪಿ ವಿಷ್ಣುಃ ॥ ೧೫ ॥

ಕಟಕಮುಕುಟಕರ್ಣಿಕಾದಿಭೇದೈಃ
ಕನಕಮಭೇದಮಪೀಷ್ಯತೇ ಯಥೈಕಂ ।
ಸುರಪಶುಮನುಜಾದಿಕಲ್ಪನಾಭಿಃ
ಹರಿರಖಿಲಾಭಿರುದೀರ್ಯತೇ ತಥೈಕಃ ॥ ೧೬ ॥

---

ಸಮೀಪದಲ್ಲಿ ವಿಷ್ಣುಭಕ್ತರನ್ನು ಬಿಟ್ಟುಬಿಡು. ನಾನು ಇತರ ಜೀವರುಗಳಿಗೆ ಸ್ವಾಮಿಯು. ವಿಷ್ಣುಭಕ್ತರಿಗಲ್ಲ.

೧೫. ನಾನು ಜನರ ಪುಣ್ಯ ಪಾಪಕರ್ಮಗಳಿಗೆ ಹಿತಾಹಿತ ರೂಪವಾದ ಶುಭಾಶುಭ ಫಲಗಳನ್ನು ಕೊಟ್ಟು ಅವರ ನಿಗ್ರಹಾನುಗ್ರಹಗಳನ್ನು ಮಾಡುವುದರಿಂದ ಯಮನೆಂಬ ಅಧಿಕಾರವನ್ನು ಬ್ರಹ್ಮನು ನನಗೆ ಕೊಟ್ಟಿರುವನು. ನಾನು ಸ್ವತಂತ್ರನಲ್ಲ. ಹರಿಗೂ, ಗುರುವಿಗೂ, ಅಧೀನನಾಗಿರುತ್ತೇನೆ. ವಿಷ್ಣುವು ನನಗೂ ಸ್ವಾಮಿಯಾಗಿ ಆಜ್ಞೆ ಮಾಡಕ್ಕವನಾಗಿರುವನು.

೧೬. ಚಿನ್ನವೆಂಬ ಲೋಹವೊಂದೇ ಕಡಗ, ಕಿರೀಟ, ಕರ್ಣಾಭರಣಾದಿಗಳ ರೂಪದಿಂದ ಒಂದೇ ಆಗಿರುವಂತೆ ವಿಷ್ಣುವೆಂಬ ಪರಮಾತ್ಮನೊಬ್ಬನೇ ಕಲ್ಪನೆಯಿಂದ ದೇವತೆ, ಪಶು, ಮನುಷ್ಯ ಮುಂತಾದ ರೂಪದಿಂದ ಬೇರೆ ಬೇರೆಯಾಗಿದ್ದರೂ ಪರಮಾತ್ಮಸ್ವರೂಪದಿಂದ ಒಬ್ಬನೇ ಆಗಿರುವನು.

ಕ್ಷಿತಿತಲಪರಮಾಣವೋಽನಿಲಾಂತೇ
ಪುನರಪಿ ಯಾಂತಿ ಯಥೈಕತಾಂ ಧರಿತ್ರ್ಯಾ ।
ಸುರಪಶುಮನುಜಾದಯಸ್ತಥಾಂತೇ
ಗುಣಕಲುಷೇಣ ಸನಾತನೇನ ತೇನ　　॥ ೧೭ ॥

ಹರಿಮಮರಗಣಾರ್ಚಿತಾಂಘ್ರಿಪದ್ಮಂ
ಪ್ರಣಮತಿ ಯಃ ಪರಮಾರ್ಥತೋ ಹಿ ಮರ್ತ್ಯಃ ।
ತಮಪಗತಸಮಸ್ತಪಾಪಬಂಧಂ
ವ್ರಜ ಪರಿಹೃತ್ಯ ಯಥಾಗ್ನಿಮಾಜ್ಯಸಿಕ್ತಂ　　॥ ೧೮ ॥

ಇತಿ ಯಮವಚನಂ ನಿಶಮ್ಯ ಪಾಶೀ
ಯಮಪುರುಷಸ್ತಮುವಾಚ ಧರ್ಮರಾಜಂ ।
ಕಥಯ ಮಮ ವಿಭೋಸ್ಸಮಸ್ತಧಾತುಃ
ಭವತಿ ಹರೇಃ ಖಲು ಯಾದೃಶೋಽಸ್ಯ ಭಕ್ತಃ　　॥ ೧೯ ॥

---

೧೭. ಗಾಳಿಬೀಸಿದಾಗ ಭೂಮಿಯಿಂದ ಎದ್ದ ದೂಳಿನ ಪರಮಾಣುಗಳು ಗಾಳಿ ನಿಂತಮೇಲೆ ಭೂಮಿಯಲ್ಲಿಯೇ ಸೇರುವಂತೆ ಗುಣಗಳ ಚಲನೆಯಿಂದ ಹುಟ್ಟಿದ ದೇವ, ಮನುಷ್ಯ, ಪಶು ಮುಂತಾದ ಜೀವರುಗಳು ಪ್ರಳಯದಲ್ಲಿ ಅಂದರೆ ಗುಣಗಳ ಚಾಂಚಲ್ಯವಿಲ್ಲದಿದ್ದಾಗ ಪರಮಾತ್ಮನಲ್ಲಿಯೇ ಲೀನರಾಗುವರು.

೧೮. ದೇವತೆಗಳ ಸಮೂಹಗಳು ಪೂಜಿಸುವ ಪಾದಗಳುಳ್ಳ ವಿಷ್ಣುವನ್ನು ಯಾರು ಪರಮಾರ್ಥತತ್ವವೆಂದು ತಿಳಿದು ಅವನಿಗೆ ನಮಸ್ಕರಿಸುವರೋ ಅಂತಹ ಸಮಸ್ತ ಪಾಪಗಳನ್ನೂ ಕಳೆದುಕೊಂಡ ಜೀವನನ್ನು ಬಿಟ್ಟು ಹೊರಟುಹೋಗು.

೧೯. ಹೀಗೆಂದು ಹೇಳಿದ ಯಮನ ಮಾತನ್ನು ಕೇಳಿ ಪಾಶಾಯುಧವನ್ನು ಹಿಡಿದ ಯಮದೂತನು ಧರ್ಮರಾಜನನ್ನು ಕುರಿತು 'ಎಲೈ ಸ್ವಾಮಿಯೇ! ಎಂತಹ ಜೀವನು ಸಮಸ್ತರನ್ನೂ ರಕ್ಷಿಸುವ ವಿಷ್ಣುವಿನ ಭಕ್ತನಾಗಿರುವನೆಂಬುದನ್ನು ನನಗೆ ಹೇಳಬೇಕು' ಎಂದನು.

॥ ಯಮಃ ॥

ನ ಚಲತಿ ನಿಜಧರ್ಮವರ್ಣತೋ ಯಃ
ಸಮಮತಿರಾತ್ಮಸುಹೃದ್ವಿಪಕ್ಷಪಕ್ಷೇ ।
ನ ಹರತಿ ನ ಚ ಹಂತಿ ಕಿಂಚಿದುಚ್ಚೈ
ಸ್ಸಿತಮನಸಂ ತಮವೈಹಿ ವಿಷ್ಣುಭಕ್ತಂ ॥ ೨೦ ॥

ಕಲಿಕಲುಷಮಲೇನ ಯಸ್ಯ ನಾತ್ಮಾ
ವಿಮಲಮತೇರ್ಮಲಿನೀಕೃತಸ್ತಮೇನಂ ।
ಮನಸಿ ಕೃತಜನಾರ್ದನಂ ಮನುಷ್ಯಂ
ಸತತಮವೇಹಿ ಹರೇರತೀವಭಕ್ತಂ ॥ ೨೧ ॥

ಸ್ಫಟಿಕಗಿರಿಶಿಲಾಮಲಃ ಕ್ವ ವಿಷ್ಣು
ರ್ಮನಸಿ ನೃಣಾಂ ಕ್ವ ಚ ಮತ್ಸರಾದಿದೋಷಃ ।

---

೨೦. ಯಮನು ಹೇಳುವನು :— ಯಾವನು ತನ್ನ ವರ್ಣಾಶ್ರಮಧರ್ಮಗಳನ್ನು ವಿಷ್ಣುವಿನ ಆಜ್ಞೆಯೆಂದು ತಿಳಿದು ಬಿಡದೆ ನಡೆಸಿಕೊಂಡು ಬರುವನೋ, ಯಾರು ತನ್ನ ಸ್ನೇಹಿತರಲ್ಲಿಯೂ ಶತ್ರುಗಳಲ್ಲಿಯೂ ಸಮಾನಭಾವದಿಂದಿರುವನೋ, ಯಾವನು ಪರರ ವಸ್ತುಗಳನ್ನು ತೆಗೆದುಕೊಳ್ಳುವುದಿಲ್ಲವೋ, ಯಾವನು ಪ್ರಾಣಿಗಳನ್ನು ಕೊಲ್ಲುವುದಿಲ್ಲವೋ, ಯಾವನಿಗೆ ಪ್ರೀತಿ, ದ್ವೇಷಗಳಿಲ್ಲದ ಧಾರಾಳವಾದ ಶುದ್ಧವಾದ ಮನಸ್ಸಿರುವುದೋ ಅವನನ್ನು ವಿಷ್ಣುಭಕ್ತನೆಂದು ತಿಳಿ.

೨೧. ರಾಗದ್ವೇಷಾದಿ ದೋಷಗಳಿಂದ ಯಾವನು ಮನಸ್ಸಿನಲ್ಲಿ ಸದಾ ಜನಾರ್ದನನನ್ನೇ ಧ್ಯಾನಿಸುತ್ತಿರುವನೋ ಅಂಥವನನ್ನು ವಿಷ್ಣುವಿಗೆ ಪ್ರೀತಿಪಾತ್ರನಾದ ಭಕ್ತನೆಂದು ತಿಳಿ.

೨೨. ಸ್ಫಟಿಕಪರ್ವತದ ಕಲ್ಲಿನಂತೆ ನಿರ್ಮಲವಾದ ವಿಷ್ಣುವು ಯಾರ ಮನಸ್ಸಿನಲ್ಲಿರುವನೋ ಅವರ ಮನಸ್ಸಿನಲ್ಲಿ ಮಾತ್ಸರ್ಯ ಮುಂತಾದ ದೋಷಗಳಿರುವುದಿಲ್ಲ.

ನಹಿ ತುಹಿನಮಯೂಖರಶ್ಮಿಪುಂಜೇ
ಭವತಿ ಹುತಾಶನದೀಪ್ತಿಜಃ ಪ್ರತಾಪಃ ॥ ೨೨ ॥

ವಿಮಲಮತಿರಮತ್ಸರಃ ಪ್ರಶಾಂತಃ
ಶುಚಿಚರಿತೋಽಖಿಲಸತ್ವಮಿತ್ರಭೂತಃ ।
ಪ್ರಿಯಹಿತವಚನೋಽಸ್ತಮಾನಮಾಯೋ
ವಸತಿ ಸದಾ ಹೃದಿ ತಸ್ಯ ವಾಸುದೇವಃ ॥ ೨೩ ॥

ವಸತಿ ಹೃದಿ ಸನಾತನೇ ಚ ತಸ್ಮಿನ್
ಭವತಿ ಪುಮಾನ್ ಜಗತೋಽಸ್ಯ ಸೌಮ್ಯರೂಪಃ ।
ಕ್ಷಿತಿರಸಮತಿರಮ್ಯಮಾತ್ಮನೋಽಂತಃ
ಕಥಯತಿ ಚಾರು ತಯೈವ ಸಾಲಪೋತಃ ॥ ೨೪ ॥

---

ಚಂದ್ರನ ಹಿಮಕಾಂತಿ ಸಮೂಹದಲ್ಲಿ ಬೆಂಕಿಯು ಉರಿಯುವುದರಿಂದುಂಟಾದ ಪ್ರತಾಪವು (ಶಕೆಯು) ಇರುವುದಿಲ್ಲ.

೨೩. ನಿರ್ಮಲವಾದ ಬುದ್ಧಿಯುಳ್ಳವನೂ, ಮಾತ್ಸರ್ಯವಿಲ್ಲದವನೂ, ಶಾಂತಚಿತ್ತನೂ, ಪರಿಶುದ್ಧವಾದ ನಡತೆಯುಳ್ಳವನೂ, ಸಮಸ್ತ ಪ್ರಾಣಿಗಳಿಗೂ ಸ್ನೇಹಿತನಾದವನೂ, ಪ್ರಿಯವಾಗಿಯೂ, ಹಿತವಾಗಿಯೂ ಮಾತನಾಡತಕ್ಕವನೂ ಗರ್ವ, ಮತ್ತು ಡಂಭಗಳಿಲ್ಲದವನೂ ಆದ ಮನುಷ್ಯನ ಮನಸ್ಸಿನಲ್ಲಿ ಯಾವಾಗಲೂ ವಾಸುದೇವನು ನೆಲೆಯಾಗಿರುವನು.

೨೪. ಎಳೆಯದಾದ ಸಾಲವೃಕ್ಷವು ತನ್ನ ಸೌಂದರ್ಯದಿಂದ ಭೂಮಿಯು ಮನೋಹರವಾದ ಸಾರವು ತನ್ನಲ್ಲಿರುವುದೆಂಬುದನ್ನು ಸೂಚಿಸುವಂತೆ ಅನಾದಿಯಾದ ವಿಷ್ಣುವು ತನ್ನ ಮನಸ್ಸಿನಲ್ಲಿರುವನೆಂಬುದನ್ನು ಮನುಷ್ಯನು ತನ್ನ ಸೌಮ್ಯರೂಪದಿಂದ ತೋರಿಸುವನು.

ಹೃದಿ ಯದಿ ಭಗವಾನನಾದಿರಾಸ್ತೇ
ಹರಿರಸಿಶಂಖಗದಾಧರೋಽವ್ಯಯಾತ್ಮಾ ।
ತದಘಮಘವಿಘಾತಕರ್ತೃಭಿನ್ನಂ
ಭವತಿ ಕಥಂ ಸತಿ ಚಾಂಧಕಾರಮರ್ಕೇ ॥ ೨೫ ॥

ಯಮನಿಯಮ ವಿಧೂತ ಕಲ್ಮಷಾಣಾಂ
ಅನುದಿನಮಚ್ಯುತಸಕ್ತ ಮಾನಸಾನಾಂ ।
ಅಪಗತಮದಮಾನಮತ್ಸರಾಣಾಂ
ವ್ರಜ ಭಟ ದೂರತರೇಣ ಮಾನವಾನಾಂ ॥ ೨೬ ॥

ಕನಕಮಪಿ ರಹಸ್ಯವೇಕ್ಷ್ಯಬುದ್ಧ್ಯಾ
ತೃಣಮಿವ ಯಸ್ಸಮವೈತಿ ವೈ ಪರಸ್ವಂ ।

---

೨೫. ಕತ್ತಿ, ಶಂಖ, ಗದೆಗಳನ್ನು ಧರಿಸಿದವನೂ ಮಹಾಮಹಿಮನೂ ಅನಾದಿಯಾದವನೂ ನಾಶರಹಿತನೂ ಆದ ಹರಿಯು ಯಾವನ ಮನಸ್ಸಿನಲ್ಲಿರುವನೋ ಅವನ ಪಾಪವು ಪಾಪನಾಶಕನಾದ ಅವನಿಂದ ನಾಶವಾಗುವುದು. ಸೂರ್ಯನಲ್ಲಿ ಕತ್ತಲೆಯು ಹೇಗಿರುವುದು ?

೨೬. ಎಲೈ ಭಟನೇ ! ಯಮನಿಯಮಾದಿ ಯೋಗಾಂಗಗಳ ಅಭ್ಯಾಸದಿಂದ ಪಾಪಗಳನ್ನು ಕಳೆದುಕೊಂಡ, ಪ್ರತಿದಿನವೂ ವಿಷ್ಣುವಿನಲ್ಲಿಯೇ ಮನಸ್ಸನ್ನು ನೆಲೆಗೊಳಿಸಿರುವ, ಗರ್ವ, ಡಂಭ, ಮಾತ್ಸರ್ಯಾದಿಗಳಿಲ್ಲದ ಮನುಷ್ಯರನ್ನು ಬಿಟ್ಟು ದೂರ ಹೋಗು.

೨೭. ಪರರ ವಸ್ತುವು ಚಿನ್ನವಾಗಿದ್ದರೂ ಏಕಾಂತವಾದ ತನ್ನ ಬುದ್ಧಿಯಲ್ಲಿ ಯೋಚಿಸಿ ಅದನ್ನು ಹುಲ್ಲಿನಂತೆ ಯಾವನು ತಿಳಿವನೋ, ಮಹಾಮಹಿಮನಾದ

ಭವತಿ ಚ ಭಗವತ್ಯನನ್ಯ ಚೇತಾಃ
ಪುರುಷವರಂ ತಮವೇಹಿ ವಿಷ್ಣುಭಕ್ತಂ ॥ ೨೭ ॥

ಹರತಿ ಪರಧನಂ ನಿಹಂತಿ ಜಂತೂನ್
ವದತಿ ತಥಾನೃತನಿಷ್ಠುರಾಣಿ ಯಶ್ಚ ।
ಅಶುಭಜನಿತದುರ್ಮದಸ್ಯ ಪುಂಸಃ
ಕಲುಷಮತೇರ್ಹೃದಿ ತಸ್ಯ ನಾಸ್ತ್ಯನಂತಃ ॥ ೨೮ ॥

ನ ಸಹತಿ ಪರಸಂಪದಂ ವಿನಿಂದಾಂ
ಕಲುಷಮತಿಃ ಕುರುತೇ ಸತಾಮಸಾಧುಃ
ನ ಯಜತಿ ನದದಾತಿ ಯಶ್ಚ ಸಂತಂ
ಮನಸಿ ನ ತಸ್ಯ ಜನಾರ್ದನೋಽಧಮಸ್ಯ ॥ ೨೯ ॥

---

ವಿಷ್ಣುವಿನಲ್ಲಿ ಮನಸ್ಸನ್ನು ನೆಲೆಗೊಳಿಸಿ ಇತರ ವಸ್ತುಗಳನ್ನು ಯಾವನು ಯೋಚಿಸದಿರುವನೋ ಅವನನ್ನು ವಿಷ್ಣುಭಕ್ತನೆಂದು ತಿಳಿ.

೨೮. ಪರರ ಧನವನ್ನು ಕದಿಯುವ, ಪ್ರಾಣಿಗಳನ್ನು ಕೊಲ್ಲುವ, ಸುಳ್ಳನ್ನು ಹೇಳುವ, ನಿಷ್ಠುರವಾದ ಮಾತನಾಡುವ, ಅಮಂಗಳವಾದ ಕಾರ್ಯಗಳನ್ನು ಮಾಡಿ ಅಹಂಕಾರಪಡುತ್ತಿರುವ ಕೆಟ್ಟ ಬುದ್ಧಿಯುಳ್ಳ ಮನುಷ್ಯನ ಮನಸ್ಸಿನಲ್ಲಿ ಅನಂತರೂಪನಾದ ವಿಷ್ಣುವು ಇರುವುದಿಲ್ಲ.

೨೯. ಪರರ ಸಂಪತ್ತನ್ನು ಸಹಿಸದ, ಕೆಟ್ಟ ಮನಸ್ಸಿನಿಂದ ಸಜ್ಜನರನ್ನು ನಿಂದೆ ಮಾಡುವ, ದುಷ್ಟನಾದ, ದೇವಪೂಜಾದಿಗಳನ್ನು ಮಾಡದ, ತನಗೆ ಸಂಪತ್ತಿದ್ದರೂ ದಾನಮಾಡದ, ನೀಚಮನುಷ್ಯನ ಮನಸ್ಸಿನಲ್ಲಿ ವಿಷ್ಣುವು ಇರುವುದಿಲ್ಲ.

ಪರಮಸುಹೃದಿ ಬಾಂಧವೇ ಕಳತ್ರೇ
ಸುತತನಯಾ ಪಿತೃಮಾತೃಭೃತ್ಯವರ್ಗೇ ।
ಶಠಮತಿರುಪಯಾತಿ ಯೋಽರ್ಥತೃಷ್ಣಾಂ
ತಮಧಮಚೇಷ್ಟಮವೇಹಿ ನಾಸ್ಯ ಭಕ್ತಂ ॥ ೩೦ ॥

ಅಶುಭಮತಿರಸತ್ಪ್ರವೃತ್ತಿಸಕ್ತಃ
ಸತತಮನಾರ್ಯ ಕುಶೀಲ ಸಂಗಮತ್ತಃ ।
ಅನುದಿನಕೃತಪಾಪಬಂಧಸಕ್ತಃ
ಪುರುಷಪಶುರ್ನಹಿ ವಾಸುದೇವಭಕ್ತಃ ॥ ೩೧ ॥

ಸಕಲಮಿದಮಹಂ ಚ ವಾಸುದೇವಃ
ಪರಮಪುಮಾನ್ ಪರಮೇಶ್ವರಸ್ಸ ಏಕಃ ।

---

೩೦. ಪ್ರೀತಿಪಾತ್ರನಾದ ಸ್ನೇಹಿತನಲ್ಲಿಯೂ, ನೆಂಟರು, ಪತ್ನಿ, ಮಗ, ಮಗಳು, ತಂದೆ ತಾಯಿಗಳು, ಸೇವಕರು, ಇವರ ವಿಷಯದಲ್ಲಿಯೂ ಯಾವ ಬುದ್ಧಿಹೀನನು ಹಣದಾಸೆಯನ್ನಿಟ್ಟುಕೊಂಡಿರುವನೋ ಇಂತಹ ನೀಚಕಾರ್ಯವನ್ನು ಮಾಡುವ ಮನುಷ್ಯನನ್ನು ಹರಿಭಕ್ತನಲ್ಲವೆಂದು ತಿಳಿ.

೩೧. ಅಮಂಗಳವಾದ ಬುದ್ಧಿಯುಳ್ಳವನಾಗಿ, ಅಯೋಗ್ಯವಾದ ಕಾರ್ಯಗಳಲ್ಲಾಸಕ್ತನಾಗಿ, ಯಾವಾಗಲೂ ದುಷ್ಟರೊಡನೆ ಹೆಚ್ಚುಕಾಲವಿದ್ದುದರಿಂದ ಅಹಂಕಾರದಿಂದ ಕೂಡಿದವನಾಗಿ ಪ್ರತಿ ದಿನವೂ ಪಾಪಕಾರ್ಯಗಳನ್ನು ಮಾಡುತ್ತಿರುವ ಮನುಷ್ಯ ಪಶುವು ವಾಸುದೇವನ ಭಕ್ತನಲ್ಲ.

೩೨. ಎಲೈ ದೂತನೇ, ಪ್ರಪಂಚದಲ್ಲಿರುವ ಸಮಸ್ತವೂ, ನಾನೂ, ವಾಸುದೇವಸ್ವರೂಪರು. ಅವನೊಬ್ಬನೇ ಪರಮಪುರುಷನೂ ಪರಮೇಶ್ವರನೂ ಆಗಿರುವನೆಂಬ

ಇತಿ ಮತಿರಚಲಾ ಭವತ್ಯನಂತೇ
ಹೃದಯಗತೇ ವ್ರಜ ತಾನ್ವಿಹಾಯ ದೂರಾತ್ ॥ ೩೨ ॥

ಕಮಲನಯನವಾಸುದೇವವಿಷ್ಣೋ
ಧರಣಿಧರಾಚ್ಯುತಶಂಖಚಕ್ರಪಾಣೇ ।
ಭವ ಶರಣಮಿತೀರಯಂತಿ ಯೇ ವೈ
ತ್ಯಜ ಭಟ ದೂರತರೇಣ ತಾನಪಾಪಾನ್ ॥ ೩೩ ॥

ವಸತಿ ಮನಸಿ ಯಸ್ಯ ಸೋಽವ್ಯಯಾತ್ಮಾ
ಪುರುಷವರಸ್ಯ ನ ತಸ್ಯ ದೃಷ್ಟಿಪಾತೇ ।
ತವ ಗತಿರಥವಾಮಮಾಸ್ತಿ ಚಕ್ರ
ಪ್ರತಿಹತವೀರ್ಯಬಲಸ್ಯ ಸೋಽನ್ಯಲೋಕ್ಯಃ ॥ ೩೪ ॥

---

ನಿಶ್ಚಯಬುದ್ಧಿಯುಂಟಾಗಿ ಮನಸ್ಸಿನಲ್ಲಿ ನಾಶರಹಿತನಾದ ವಿಷ್ಣುವನ್ನು ಧ್ಯಾನಿಸುತ್ತಿರುವ ಮನುಷ್ಯರನ್ನು ಬಿಟ್ಟು ದೂರಹೋಗು.

೩೩. ಎಲೈ ಭಟನೇ ಕಮಲನಯನ, ವಾಸುದೇವ, ವಿಷ್ಣು, ಧರಣೀಧರ, ಅಚ್ಯುತ, ಶಂಖಚಕ್ರಪಾಣಿ ನನ್ನನ್ನು ರಕ್ಷಿಸು, ಎಂದು ವಿಷ್ಣುವಿನ ನಾಮಗಳನ್ನು ಉಚ್ಚರಿಸುತ್ತ ಅವನನ್ನೇ ಶರಣುಹೊಂದಿದ ಮನುಷ್ಯರು ಪಾಪವಿಲ್ಲದವರಾದ್ದರಿಂದ ಅವರನ್ನು ಬಿಟ್ಟು ದೂರದಲ್ಲಿರು.

೩೪. ನಾಶರಹಿತನಾದ ವಿಷ್ಣುವು ಯಾವ ಮನುಷ್ಯನ ಮನಸ್ಸಿನಲ್ಲಿ ವಾಸವಾಗಿರುವನೋ ಅಂತಹ ಪುರುಷಶ್ರೇಷ್ಠನ ನೋಟವು ಎಲ್ಲಿಯವರೆಗೆ ಹಾಯುತ್ತಿರುವುದೋ ಅಲ್ಲಿಯ ಪರ್ಯಂತವಾಗಿ ವಿಷ್ಣು ಚಕ್ರವು ಸುತ್ತುತ್ತಿರುವುದು ಆದುದರಿಂದ ಆ ಚಕ್ರದಿದುರಿಗೆ ಬಲ ಪರಾಕ್ರಮವನ್ನು ಕಳೆದುಕೊಂಡ ನೀನಾಗಲೀ, ನಾನಾಗಲೀ ಪಾಪಿಗಳನ್ನು ಕರೆದುಕೊಂಡು ಬರುವುದಕ್ಕಾದರೂ ಹೋಗಬಾರದು. ಆ ಮನುಷ್ಯನು ವೈಕುಂಠಲೋಕಕ್ಕೆ ಹೋಗಲು ಯೋಗ್ಯನಾಗಿರುವನು.

॥ ಕಾಳಿಂಗಃ ॥

ಇತಿ ನಿಜಭಟಶಾಸನಾಯ ದೇವೋ
ರವಿತನಯಸ್ಸ ಕಿಲಾಹ ಧರ್ಮರಾಜಃ ।
ಮಮ ಕಥಿತಮಿದಂ ಚ ತೇನ ತುಭ್ಯಂ ।
ಕುರು ವರ ಸಮ್ಯಗಿದಂ ಮಯಾಪಿ ಚೋಕ್ತಂ ॥ ೩೫ ॥

॥ ಭೀಷ್ಮಃ ॥

ನ ಕುಲೈತನ್ಮಯಾಖ್ಯಾತಂ ಪೂರ್ವಂ ತೇನ ದ್ವಿಜನ್ಮನಾ ।
ಕಳಿಂಗದೇಶಾದಭ್ಯೇತ್ಯ ಪ್ರೀಯತಾ ಸುಮಹಾತ್ಮನಾ ॥ ೩೬ ॥

ಮಯಾ ಪ್ಯೇತದ್ಯಥಾನ್ಯಾಯ್ಯಂ ಸಮ್ಯಗ್ವತ್ಸ ತವೋದಿತಂ ।
ಯಥಾ ವಿಷ್ಣುಮೃತೇನಾನ್ಯತ್ತ್ರಾಣಂ ಸಂಸಾರಸಾಗರೇ ॥ ೩೭ ॥

---

೩೫. ಕಾಳಿಂಗನು "ಕುರುಶ್ರೇಷ್ಠನಾದ ಭೀಷ್ಮನೇ! ಹೀಗೆಂದು ತನ್ನ ದೂತನಿಗೆ ಆಜ್ಞೆಮಾಡುವುದಕ್ಕಾಗಿ ಸೂರ್ಯಪುತ್ರನಾದ ಯಮಧರ್ಮರಾಜನು ಹೇಳಿದನಂತೆ. ದೂತನು ಇದನ್ನು ನನಗೆ ಹೇಳಿದನು. ಅದನ್ನೇ ನಾನು ನಿನಗೆ ವಿಸ್ತಾರವಾಗಿ ಹೇಳಿರುವೆನು" ಎಂದನು.

೩೬. ಭೀಷ್ಮನು ' ಎಲೈ ನಕುಲನೇ ಹಿಂದೆ ಕಳಿಂಗದೇಶದಿಂದ ಬಂದು ನನಗೆ ಈ ಮಾತನ್ನು ಹೇಳಿ ಆ ಬ್ರಾಹ್ಮಣನು ನನ್ನನ್ನು ಸಂತೋಷಪಡಿಸಿದನು.

೩೭. ಪ್ರೀತಿಪಾತ್ರನಾದ ನಕುಲನೇ! ಪ್ರಶ್ನೆಮಾಡಿದ ನಿನಗೆ ನಾನೂ ಅದನ್ನು ವಿಸ್ತಾರವಾಗಿ ಹೇಳಿದೆನು. ಸಂಸಾರಸಮುದ್ರದಲ್ಲಿ ಬಿದ್ದವರನ್ನು ರಕ್ಷಿಸಲು ವಿಷ್ಣುವನ್ನು ಬಿಟ್ಟು ಮತ್ತೊಬ್ಬರಿಲ್ಲ.

ಕಿಂಕರಾ ದಂಡಪಾಶೌ ವಾ ನ ಯಮೋ ನ ಚ ಯಾತನಾಃ ।
ಸಮರ್ಥಾಸ್ತಸ್ಯ ಯಸ್ಯಾತ್ಮಾ ಕೇಶವಾಲಂಬನಸ್ಸದಾ ॥ ೩೮ ॥

ಶ್ರೀ ಪರಾಶರಃ

ಏತನ್ಮುನೇ ಸಮಾಖ್ಯಾತಂ ಗೀತಂ ವೈವಸ್ವತೇನ ಯತ್ ।
ತ್ವತ್ಪ್ರಶ್ನಾನುಗತಂ ಸಮ್ಯಕ್ಕಿಮನ್ಯತ್ಕಥಯಾಮಿ ತೇ ॥ ೩೯ ॥

ಇತಿ ಶ್ರೀ ವಿಷ್ಣುಪುರಾಣೇ ತೃತೀಯಾಂಶೇ ಸಪ್ತಮೋಽಧ್ಯಾಯಃ

---

೩೮. ಯಾರ ಮನಸ್ಸು ಸದಾ ವಿಷ್ಣುವನ್ನೇ ಆಶ್ರಯಿಸಿರುವುದೋ ಅವನನ್ನು ಯಮನಾಗಲಿ, ಯಮದೂತರಾಗಲಿ, ಅವರ ದಂಡಪಾಶಗಳಾಗಲಿ, ಯಮ ಯಾತನೆಗಳಾಗಲಿ ಬಾಧೆಪಡಿಸಲಾರವು ' ಎಂದು ಹೇಳಿದನು.

೩೦. ಪರಾಶರನು 'ಮೈತ್ರೇಯ ಮುನಿಯೇ! ನೀನು, ಕೇಳಿದ ಪ್ರಶ್ನೆಗೆ ಉತ್ತರವಾಗಿ ಯಮನು ಹೇಳಿದ ಮಾತುಗಳನ್ನೇ ವಿಸ್ತಾರವಾಗಿ ಹೇಳಿದೆನು. ಮತ್ತೇನನ್ನು ನಿನಗೆ ಹೇಳಬೇಕು ' ಎಂದು ಹೇಳಿದನು.

ಎಂಬಲ್ಲಿಗೆ ಶ್ರೀ ವಿಷ್ಣುಪುರಾಣದ ತೃತೀಯಾಂಶದಲ್ಲಿ

ಏಳನೆಯ ಅಧ್ಯಾಯವು ಮುಗಿದುದು.

ಶ್ರೀಃ

# ಶ್ರೀ ವಿಷ್ಣುಪುರಾಣೇ ತೃತೀಯಾಂಶೇ

## ಅಷ್ಟಮೋಽಧ್ಯಾಯಃ

॥ ಮೈತ್ರೇಯಃ ॥

ಭಗವನ್ ಭಗವಾನ್ ದೇವಸ್ಸಂಸಾರವಿಜಿಗೀಷುಭಿಃ ।
ಸಮಾಖ್ಯಾಹಿ ಜಗನ್ನಾಥೋ ವಿಷ್ಣುರಾರಾಧ್ಯತೇ ಯಥಾ ॥ ೧ ॥

ಆರಾಧಿತಾಚ್ಚ ಗೋವಿಂದಾದಾರಾಧನಪರೈರ್ನರೈಃ ।
ಯತ್ಪ್ರಾಪ್ಯತೇ ಫಲಂ ಶ್ರೋತುಂ ತಚ್ಚೇಚ್ಛಾಮಿ ಮಹಾಮುನೇ ॥ ೨ ॥

॥ ಶ್ರೀ ಪರಾಶರಃ ॥

ಯತ್ಪೃಚ್ಛತಿ ಭವಾನೇತತ್ ಸಗರೇಣ ಮಹಾತ್ಮನಾ ।
ಔರ್ವಃ ಪ್ರಾಹ ಯಥಾ ಪೃಷ್ಟಃ ತನ್ಮೇ ನಿಗದತಃ ಶೃಣು ॥ ೩ ॥

---

## ಎಂಟನೆಯ ಅಧ್ಯಾಯವು.

೧-೨. ಮೈತ್ರೇಯನು, 'ಗುರುಗಳೇ! ಮಹಾಮಹಿಮನೂ ಲೋಕಕ್ಕೆ ಒಡೆಯನೂ ಆದ ವಿಷ್ಣುವನ್ನು ಸಂಸಾರದುಃಖವನ್ನು ಜಯಿಸಬೇಕೆಂದು ಬಯಸುವ ಜನರು ಹೇಗೆ ಪೂಜಿಸುವರು? ಅದನ್ನು ಹೇಳಬೇಕು. ಪೂಜೆಯನ್ನು ಮಾಡಿದ ಜನರು ಪೂಜೆಯನ್ನು ಸ್ವೀಕರಿಸಿದ ಗೋವಿಂದನಿಂದ ಯಾವ ಫಲವನ್ನು ಪಡೆವರು? ಎಂಬುದನ್ನೂ ತಿಳಿಯಬೇಕೆಂದು ನನ್ನ ಅಪೇಕ್ಷೆಯಿರುವುದು' ಎಂದನು.

೩-೪. ಪರಾಶರನು ಹೇಳುವನು:—'ಮೈತ್ರೇಯನೇ! ನೀನು ಕೇಳಿದ ಪ್ರಶ್ನೆಯನ್ನೇ ಹಿಂದೆ ಸಗರನೆಂಬ ರಾಜನು ಔರ್ವನೆಂಬ ಋಷಿಯನ್ನು ಪ್ರಶ್ನೆ ಮಾಡಿದನು. ಸಗರನು ಭೃಗುವಂಶದಲ್ಲಿ ಹುಟ್ಟಿದ ಔರ್ವನೆಂಬ ಋಷಿಗೆ ನಮಸ್ಕರಿಸಿ

ಸಗರಃ ಪ್ರಣಿಪತ್ಯೇದಂ ಔರ್ವಂ ಪಪ್ರಚ್ಛ ಭಾರ್ಗವಂ ।
ವಿಷ್ಣೋರಾರಾಧನೋಪಾಯಸಂಬಂಧಂ ಮುನಿಸತ್ತಮ ॥ ೪ ॥

ಫಲಂ ಚಾರಾಧಿತೇ ವಿಷ್ಣೌ ಯತ್ಪುಂಸಾಮಭಿಜಾಯತೇ ।
ಸ ಚಾಹ ಪೃಷ್ಟೋ ಯತ್ತೇನ ತನ್ಮೈತ್ರೇಯಾಖಿಲಂ ಶೃಣು ॥ ೫ ॥

॥ ಔರ್ವಃ ॥

ಭೌಮಂ ಮನೋರಥಂ ಸರ್ಗಂ ಸ್ವರ್ಗಿ ವಂದ್ಯಂ ಚ ಯತ್ಪದಂ ।
ಪ್ರಾಪ್ನೋತ್ಯಾರಾಧಿತೇ ವಿಷ್ಣೌ ನಿರ್ವಾಣಮಪಿ ಚೋತ್ತಮಂ ॥ ೬ ॥

ಯದ್ಯದಿಚ್ಛತಿ ಯಾವಚ್ಚ ಫಲಮಾರಾಧಿತೇಽಚ್ಯುತೇ ।
ತತ್ತದಾಪ್ನೋತಿ ರಾಜೇಂದ್ರ ಭೂರಿಸ್ವಲ್ಪಮಥಾಪಿ ವಾ ॥ ೭ ॥

---

ವಿಷ್ಣುವನ್ನು ಪೂಜಿಸುವ ವಿಷಯದಲ್ಲಿಯೂ ವಿಷ್ಣುವು ತನ್ನನ್ನು ಪೂಜಿಸಿದ ಜನರಿಗೆ ಯಾವ ಫಲವನ್ನು ಕೊಡುವನೆಂಬ ವಿಷಯದಲ್ಲಿಯೂ ಪ್ರಶ್ನೆ ಮಾಡಿದುದಕ್ಕೆ ಔರ್ವನು ಏನು ಹೇಳಿದನೋ ಅದೆಲ್ಲವನ್ನೂ ನಾನು ಹೇಳುವೆನು ’ ಕೇಳು.

೬-೯. ಔರ್ವನು ಹೇಳಿದುದೇನೆಂದರೆ:-ಎಲೈ ರಾಜಶ್ರೇಷ್ಠನೇ! ಮನುಷ್ಯನು ವಿಷ್ಣುವನ್ನು ಪೂಜಿಸಿದರೆ ಭೂಲೋಕ ಸ್ವರ್ಗಲೋಕಗಳ ಸುಖಗಳನ್ನೂ ದೇವತೆಗಳೂ ಅಪೇಕ್ಷಿಸುವ ಬ್ರಹ್ಮಲೋಕಾದಿ ಸ್ಥಾನಗಳನ್ನೂ ಉತ್ತಮವಾದ ಮೋಕ್ಷವನ್ನೂ ಪಡೆಯುವನು. ಮತ್ತು ಹೆಚ್ಚಾಗಿಯೋ ಸ್ವಲ್ಪವಾಗಿಯೋ ತಾನು ಯಾವ ಫಲಗಳನ್ನಪೇಕ್ಷಿಸುವನೋ ಅವೆಲ್ಲವನ್ನೂ ಪಡೆಯುವನು. ಅವನನ್ನು ಹೇಗೆ ಪೂಜಿಸಬೇಕೆಂದು ಕೇಳಿದೆಯಷ್ಟೆ? ಈ ಕ್ರಮವನ್ನೆಲ್ಲವನ್ನೂ ನಿನಗೆ ಹೇಳುವೆನು ಕೇಳು. ವರ್ಣಾಶ್ರಮಾಚಾರವುಳ್ಳ ಪುರುಷನು ಆ ಮಾರ್ಗದಿಂದಲೇ ಅವನನ್ನು ಪೂಜಿಸಬೇಕು.

ಯತ್ತ್ವಂ ಪೃಚ್ಛಸಿ ಭೂಪಾಲ ಕಥಮಾರಾಧ್ಯತೇ ಹಿ ಸಃ ।
ತದಿದಂ ಸಕಲಂ ತುಭ್ಯಂ ಕಥಯಾಮಿ ನಿಬೋಧ ಮೇ ॥ ೮ ॥

ವರ್ಣಾಶ್ರಮಾಚಾರವತಾ ಪುರುಷೇಣ ಪರಃ ಪುಮಾನ್ ।
ವಿಷ್ಣುರಾರಾಧ್ಯತೇ ಪಂಥಾ ನಾನ್ಯಸ್ತತ್ತೋಷಕಾರಕಃ ॥ ೯ ॥

ಯಜನ್ ಯಜ್ಞಾನ್ ಯಜತ್ಯೇನಂ ಜಪತ್ಯೇನಂ ಜಪನ್ನೃಪ ।
ಘ್ನಂಸ್ತಥಾನ್ಯಾನ್ ಹಿನಸ್ತ್ಯೇನಂ ಸರ್ವಭೂತೋ ಯತೋ ಹರಿಃ ॥ ೧೦ ॥

ತಸ್ಮಾತ್ಸದಾಚಾರವತಾ ಪುರುಷೇಣ ಜನಾರ್ದನಃ ।
ಆರಾಧ್ಯತೇ ಸ್ವವರ್ಣೋಕ್ತಧರ್ಮಾನುಷ್ಠಾನಕಾರಿಣಾ ॥ ೧೧ ॥

ಬ್ರಾಹ್ಮಣಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಶ್ಚ ಪೃಥಿವೀಪತೇ ।
ಸ್ವಧರ್ಮತತ್ಪರೋ ವಿಷ್ಣುಮಾರಾಧಯತಿ ನಾನ್ಯಥಾ ॥ ೧೨ ॥

---

ಮತ್ತೊಂದು ಮಾರ್ಗವು ಅವನಿಗೆ ಸಂತೋಷವನ್ನುಂಟುಮಾಡುವುದಿಲ್ಲ. ಅಂದರೆ, (ವೇದಶಾಸ್ತ್ರಗಳಲ್ಲಿ ವಿಹಿತವಾದ ಸ್ವಧರ್ಮವಾದ ಸಂಧ್ಯಾದಿ ಕರ್ಮಗಳನ್ನು ಬಿಟ್ಟು ಬರಿಯ ವ್ರತಗಳು, ಕಥಾಶ್ರವಣಗಳು, ನಾಮಸಂಕೀರ್ತನೆಗಳು ಅವನಿಗೆ ಸಂತೋಷವನ್ನುಂಟುಮಾಡಲಾರವೆಂದು ಅಭಿಪ್ರಾಯ)

೧೦-೧೨. ಹರಿಯು ಸಮಸ್ತ ಭೂತಗಳಲ್ಲಿ ಇರುವುದರಿಂದ ಯಜ್ಞವನ್ನು ಮಾಡಿ ಇಂದ್ರಾದಿ ದೇವತೆಗಳಿಗೆ ಹವಿರ್ಭಾಗಗಳನ್ನು ಕೊಟ್ಟರೂ ಮಂತ್ರ ಜಪಾದಿಗಳನ್ನು ಮಾಡಿದರೂ ಅವನನ್ನೇ ಪೂಜಿಸಿದಂತೆ ಆಗುವುದು. ಇತರರನ್ನು ಕೊಂದರೂ ಹಿಂಸಿಸಿದರೂ ಅವನನ್ನೇ ಹಿಂಸಿಸಿದಂತೆ ಆಗುವುದು. ಆದುದರಿಂದ ಸದಾಚಾರವುಳ್ಳ ಮನುಷ್ಯನು ತನ್ನ ವರ್ಣಾಶ್ರಮಗಳಿಗೆ ವಿಹಿತವಾದ ಧರ್ಮಾನುಷ್ಠಾನದಿಂದ ಆ ವಿಷ್ಣುವನ್ನು ಪೂಜಿಸಬೇಕು. ಬ್ರಾಹ್ಮಣರೂ, ಕ್ಷತ್ರಿಯರೂ, ವೈಶ್ಯರೂ, ಶೂದ್ರರೂ ತಂತಮ್ಮ ಧರ್ಮದಲ್ಲಾಸಕ್ತರಾಗಿ ವಿಷ್ಣುವನ್ನು ಪೂಜಿಸಬೇಕು. ಒಂದು ವರ್ಣದವರು ಮತ್ತೊಂದು ವರ್ಣಧರ್ಮವನ್ನಾಚರಿಸಬಾರದು

ಪರಾಪವಾದಂ ಪೈಶುನ್ಯಮನೃತಂ ಚ ನ ಭಾಷತೇ ।
ಅನ್ಯೋದ್ವೇಗಕರಂ ಯಚ್ಚ ತೋಷ್ಯತೇ ತೇನ ಕೇಶವಃ ॥ ೧೩ ॥

ಪರದಾರಪರದ್ರವ್ಯಪರಹಿಂಸಾಸು ಯೋ ರತಿಂ ।
ನ ಕರೋತಿ ಪುಮಾನ್ ಭೂಪ ತೋಷ್ಯತೇ ತೇನ ಕೇಶವಃ ॥ ೧೪ ॥

ನ ತಾಡಯತಿ ನೋ ಹಂತಿ ಪ್ರಾಣಿನೋ ನಾಪದೇಹತೇ ।
ಯೋ ಮನುಷ್ಯೋ ಮನುಷ್ಯೇಂದ್ರ ತೋಷ್ಯತೇ ತೇನ ಕೇಶವಃ ॥ ೧೫ ॥

ದೇವದ್ವಿಜಗುರೂಣಾಂ ಯಶ್ಯುಶ್ರೂಷಾಸು ಸದೋದ್ಯತಃ ।
ತೋಷ್ಯತೇ ತೇನ ಗೋವಿಂದಃ ಪುರುಷೇಣ ನರೇಶ್ವರ ॥ ೧೬ ॥

ಯಥಾತ್ಮನಿ ಚ ಪುತ್ರೇಷು ಸರ್ವಭೂತೇಷು ಯಸ್ತಥಾ ।
ಹಿತಕಾಮೋ ಹರಿಸ್ತೇನ ಸರ್ವದಾ ತೋಷ್ಯತೇ ಸುಖಂ ॥ ೧೭ ॥

---

೧೩–೧೬. ಇತರರಲ್ಲಿ ಇಲ್ಲದ ದೋಷವನ್ನು ಆವರಿದುಂಗೇ ಹೇಳುವುದು ಪರಾಪವಾದವೆನಿಸುವುದು. ಪರೋಕ್ಷವಾಗಿ ಒಬ್ಬರ ದೋಷವನ್ನು ಮತ್ತೊಬ್ಬನಿಗೆ ಹೇಳುವುದು ಪಿಶುನತೆ (ಚಾಡಿಯ ಮಾತು) ಸುಳ್ಳು ಮಾತು, ಇತರರಿಗೆ ವ್ಯಸನ ವನ್ನುಂಟುಮಾಡುವ ಮಾತು, ಇವುಗಳನ್ನು ಯಾರು ಆಡುವುದಿಲ್ಲವೋ ಅವರಿಂದ ವಿಷ್ಣುವು ಸಂತೋಷಪಡುವನು. ಪರಸ್ತ್ರೀ, ಪರದ್ರವ್ಯ, ಪರಹಿಂಸೆಗಳಲ್ಲಿ ಆಸಕ್ತ ನಾಗದ ಮನುಷ್ಯನಿಂದ ವಿಷ್ಣುವು ಸಂತೋಷಪಡುವನು. ಪ್ರಾಣಿಗಳನು ಹೊಡೆಯದೆ, ಕೊಲ್ಲದೆ ಅವುಗಳನ್ನು ಹಿಂಸಿಸದೆ ಇರುವ ಮನುಷ್ಯನು ವಿಷ್ಣುವನ್ನು ಸಂತೋಷಪಡಿಸುವನು, ದೇವತೆಗಳು, ಬ್ರಾಹ್ಮಣರು, ಗುರುಗಳು ಇವರ ಸೇವೆಯನ್ನು ಯಾವಾಗಲೂ ಮಾಡುತ್ತಿರುವ ಮನುಷ್ಯನು ವಿಷ್ಣುವನ್ನು ಸಂತೋಷ ಪಡಿಸುವನು.

೧೭–೧೯. ತನ್ನ ಮತ್ತು ತನ್ನ ಪುತ್ರರ ಹಿತವನ್ನು ಬಯಸುವಂತೆ ಸಮಸ್ತ ಪ್ರಾಣಿಗಳಿಗೂ ಯಾವಾಗಲೂ ಹಿತವನ್ನು ಬಯಸುವ ಮನುಷ್ಯನು ಸುಲಭವಾಗಿ

ಯಸ್ಯ ರಾಗಾದಿದೋಷೇಣ ನ ದುಷ್ಟಂ ನೃಪ ಮಾನಸಂ ।
ವಿಶುದ್ಧಚೇತಸಾ ವಿಷ್ಣುಸ್ತೋಷ್ಯತೇ ತೇನ ಸರ್ವದಾ ॥ ೧೮ ॥

ವರ್ಣಾಶ್ರಮೇಷು ಯೇ ಧರ್ಮಾಶ್ಶಾಸ್ತ್ರೋಕ್ತಾ ನೃಪಸತ್ತಮ ।
ತೇಷು ತಿಷ್ಠನ್ನರೋ ವಿಷ್ಣುಮಾರಾಧಯತಿ ನಾನ್ಯಥಾ ॥ ೧೯ ॥

॥ ಸಗರಃ ॥

ತದಹಂ ಶ್ರೋತುಮಿಚ್ಛಾಮಿ ವರ್ಣಧರ್ಮಾನಶೇಷತಃ ।
ತಥೈವಾಶ್ರಮಧರ್ಮಾಂಶ್ಚ ದ್ವಿಜವರ್ಯ ಬ್ರವೀಹಿ ತಾನ್ ॥ ೨೦ ॥

॥ ಔರ್ವಃ ॥

ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚ ಯಥಾಕ್ರಮಂ ।
ತ್ವಮೇಕಾಗ್ರಮತಿರ್ಭೂತ್ವಾ ಶೃಣು ಧರ್ಮಾನ್ಮಯೋದಿತಾನ್ ॥ ೨೧ ॥

ದಾನಂ ದದ್ಯಾದ್ಯಜೇದ್ದೇವಾನ್ ಯಜ್ಞೈಸ್ಸ್ವಾಧ್ಯಾಯತತ್ಪರಃ ।
ನಿತ್ಯೋದಕೀ ಭವೇದ್ವಿಪ್ರಃ ಕುರ್ಯಾಚ್ಚಾಗ್ನಿಪರಿಗ್ರಹಂ ॥ ೨೨ ॥

---

ವಿಷ್ಣುವನ್ನು ಸಂತೋಷಪಡಿಸುವನು. ಯಾವನಿಗೆ ಕಾಮಕ್ರೋಧಾದಿ ದೋಷಗಳು ಮನಸ್ಸಿನಲ್ಲಿರುವುದಿಲ್ಲವೋ ಅಂತಹ ಪರಿಶುದ್ಧವಾದ ಮನಸ್ಸುಳ್ಳ ಮನುಷ್ಯನು ವಿಷ್ಣುವನ್ನು ಸದಾ ಸಂತೋಷಪಡಿಸುತ್ತಿರುವನು. ರಾಜಶ್ರೇಷ್ಠನೇ! ಶಾಸ್ತ್ರೋಕ್ತವಾದ ವರ್ಣಾಶ್ರಮ ಧರ್ಮಗಳನ್ನು ನಡೆಸುತ್ತಿರುವ ಮನುಷ್ಯನು ವಿಷ್ಣುವನ್ನು ಪೂಜಿಸುವನು. ಬೇರೆ ಮಾರ್ಗದಿಂದ ವಿಷ್ಣುಪೂಜೆಯು ಇಲ್ಲವೆಂಬುಭಾವವು.

೨೦. ಸಗರನು "ಬ್ರಾಹ್ಮಣ ಶ್ರೇಷ್ಠನೇ ವರ್ಣಧರ್ಮಗಳನ್ನೂ, ಆಶ್ರಮ ಧರ್ಮಗಳನ್ನೂ ಕೇಳಬೇಕೆಂದು ನನ್ನ ಅಪೇಕ್ಷೆಯಿರುವುದು. ಅವುಗಳನ್ನು ಸಂಪೂರ್ಣವಾಗಿ ನನಗೆ ಹೇಳಬೇಕು' ಎಂದನು.

೨೧-೨೫. ಔರ್ವನು ಹೇಳುವನು:—ರಾಜನೇ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರ ಧರ್ಮಗಳನ್ನು ಕ್ರಮವಾಗಿ ಹೇಳುವೆನು, ಏಕಾಗ್ರಚಿತ್ತದಿಂದ ಕೇಳು. ಬ್ರಾಹ್ಮಣನಾದವನು ಪ್ರತಿದಿನವೂ ಸ್ನಾನ ತರ್ಪಣಾದಿಗಳನ್ನು ಮಾಡುತ್ತ ಔಪಾಸನಾ

ವೃತ್ತ್ಯರ್ಥಂ ಯಾಜಯೇಚ್ಚಾನ್ಯಾನ್ ಅನ್ಯಾನಧ್ಯಾಪಯೇತ್ತಥಾ ।
ಕುರ್ಯಾತ್ಪ್ರತಿಗ್ರಹಾದಾನಂ ಶುಕ್ಲಾರ್ಥಾನ್ನ್ಯಾಯತೋ ದ್ವಿಜಃ ॥ ೨೩ ॥

ಸರ್ವಭೂತಹಿತಂ ಕುರ್ಯಾನ್ನಾಹಿತಂ ಕಸ್ಯಚಿದ್ದ್ವಿಜಃ ।
ಮೈತ್ರೀ ಸಮಸ್ತ ಭೂತೇಷು ಬ್ರಾಹ್ಮಣಸ್ಯೋತ್ತಮಂ ಧನಂ ॥ ೨೪ ॥

ಗ್ರಾವ್ಣಿ ರತ್ನೇ ಚ ಪಾರಕ್ಯೇ ಸಮಬುದ್ಧಿರ್ಭವೇದ್ದ್ವಿಜಃ ।
ಋತಾವಭಿಗಮಃ ಪತ್ನ್ಯಾಂ ಶಸ್ಯತೇ ಚಾಸ್ಯ ಪಾರ್ಥಿವ ॥ ೨೫ ॥

ದಾನಾನಿ ದದ್ಯಾದಿಚ್ಛಾತೋ ದ್ವಿಜೇಭ್ಯಃ ಕ್ಷತ್ರಿಯೋಽಪಿ ಹಿ ।
ಯಜತೇ ವಿವಿಧೈರ್ಯಜ್ಞೈರಧೀಯೇತ ಚ ಪಾರ್ಥಿವಃ ॥ ೨೬ ॥

ಶಸ್ತ್ರಾಜೀವೋ ಮಹೀರಕ್ಷಾ ಪ್ರವರಾ ತಸ್ಯ ಜೀವಿಕಾ ।
ತತ್ರಾಪಿ ಪ್ರಥಮೋ ಕಲ್ಪೋ ಪೃಥಿವೀಪರಿಪಾಲನಂ ॥ ೨೭ ॥

---

ಗ್ನಿಯನ್ನು ಇಟ್ಟು ಹೋಮಮಾಡುತ್ತ ಯಜ್ಞಗಳಿಂದ ದೇವತೆಗಳನ್ನು ತೃಪ್ತಿಪಡಿಸುತ್ತ ವೇದಾಭ್ಯಾಸವನ್ನೂ, ಶಕ್ತ್ಯಾನುಸಾರವಾಗಿ ದಾನವನ್ನೂ ಮಾಡುತ್ತಿರಬೇಕು. ಜೀವನಾರ್ಥವಾಗಿ ಇತರರಿಗೆ ಯಜ್ಞಗಳನ್ನು ಮಾಡಿಸುವುದೂ, ವೇದಗಳನ್ನು ಹೇಳಿಕೊಡುವುದೂ, ದಾನಮಾಡುವುದನ್ನು ಪ್ರತಿಗ್ರಹಿಸುವುದೂ, ನ್ಯಾಯಮಾರ್ಗದಿಂದ ಸಂಪಾದಿಸಿದ ಶುದ್ಧ ದ್ರವ್ಯದಿಂದ ಜೀವಿಸುವುದೂ ಬ್ರಾಹ್ಮಣನ ವೃತ್ತಿಗಳು. ಯಾವ ಪ್ರಾಣಿಗಳಿಗೂ ಕೆಟ್ಟದನ್ನು ಮಾಡದೆ ಸಮಸ್ತ ಭೂತಗಳಿಗೂ ಹಿತವನ್ನು ಮಾಡುತ್ತ ಅವುಗಳಲ್ಲಿ ಸ್ನೇಹದಿಂದಿರುವುದೇ ಬ್ರಾಹ್ಮಣನಿಗೆ ಉತ್ತಮವಾದ ಧನವೆನಿಸುವುದು. ಪರರ ರತ್ನಗಳನ್ನು ಕಲ್ಲಿಗೆ ಸಮಾನವೆಂದು ತಿಳಿದು ಋತುಕಾಲಗಳಲ್ಲಿ ಪತ್ನಿಯ ಸಂಗವನ್ನು ಮಾಡುತ್ತಲಿರುವುದು ಅವನ ಶ್ಲಾಘ್ಯವಾದ ಧರ್ಮವಾಗಿರುವುದು

೨೬–೨೭. ಕ್ಷತ್ರಿಯನು ಬಗೆಬಗೆಯ ಯಜ್ಞಗಳನ್ನು ಮಾಡಿ ಮನಃಪೂರ್ವಕವಾಗಿ ಬ್ರಾಹ್ಮಣಂಗೆ ದಾನಗಳನ್ನು ಕೊಟ್ಟು ವೇದಾಭ್ಯಾಸವನ್ನು ಮಾಡಬೇಕು. ಭೂಮಿಯನ್ನು ರಕ್ಷಿಸುವುದೂ, ಯುದ್ಧವೂ ಅವನ ಜೀವನವೃತ್ತಿಗಳು. ಅದರಲ್ಲಿಯೂ

ಧರಿತ್ರೀ ಪಾಲನೇನೈವ ಕೃತಕೃತ್ಯಾ ನರಾಧಿಪಾಃ ।
ಭವಂತಿ ನೃಪತೇರಂಶಾ ಯತೋ ಯಜ್ಞಾದಿಕರ್ಮಣಾಂ ॥ ೨೮ ॥

ದುಷ್ಟಾನಾಂ ಶಾಸನಾದ್ರಾಜಾ ಶಿಷ್ಟಾನಾಂ ಪರಿಪಾಲನಾತ್ ।
ಪ್ರಾಪ್ನೋತ್ಯಭಿಮತಾನ್ ಲೋಕಾನ್ ವರ್ಣಸಂಸ್ಥಾಂ ಕರೋತಿ ಯಃ

ಪಶುಪಾಲ್ಯಂ ಚ ವಾಣಿಜ್ಯಂ ಕೃಷಿಂ ಚ ಮನುಜೇಶ್ವರ ।
ವೈಶ್ಯಾಯ ಜೀವಿಕಾಂ ಬ್ರಹ್ಮಾ ದದೌ ಲೋಕಪಿತಾಮಹಃ ॥ ೩೦ ॥

ತಸ್ಯಾಪ್ಯಧ್ಯಯನಂ ಯಜ್ಞೋ ದಾನಂ ಧರ್ಮಶ್ಚ ಶಸ್ಯತೇ ।
ನಿತ್ಯನೈಮಿತ್ತಿಕಾದೀನಾಂ ಅನುಷ್ಠಾನಂ ಚ ಕರ್ಮಣಾಂ ॥ ೩೧ ॥

ದ್ವಿಜಾತಿಸಂಶ್ರಯಂ ಕರ್ಮ ತಾದರ್ಥ್ಯಂ ತೇನ ಪೋಷಣಂ ।
ಕ್ರಯವಿಕ್ರಯಜೈರ್ವಾಪಿ ಧನೈಃ ಕಾರೂದ್ಭವೇನ ವಾ ॥ ೩೨ ॥

---

ಯುದ್ಧದಿಂದ ಭೂಮಿಯನ್ನು ಜಯಿಸಿ ಆ ಭೂಮಿಯನ್ನು ರಕ್ಷಿಸುವುದೇ ಮುಖ್ಯ ಧರ್ಮವು. ಭೂ ರಕ್ಷಣೆಯಿಂದಲೇ ರಾಜರು ಕೃತಾರ್ಥರಾಗುವರು. ಅವನ ರಾಜ್ಯದಲ್ಲಿ ಯಾರು ಯಜ್ಞಾದಿ ಕರ್ಮಗಳನ್ನು ಮಾಡಿದರೂ ಆರನೆಯ ಒಂದು ಭಾಗ ಫಲವು ರಾಜನಿಗೆ ಬಂದೇ ಬರುವುದು. ದುಷ್ಟರನ್ನು ಶಿಕ್ಷಿಸಿ, ಶಿಷ್ಟರನ್ನು ಪಾಲಿಸುವ ವರ್ಣಾಶ್ರಮ ಧರ್ಮಗಳನ್ನು ನೆಲೆಗೊಳಿಸಿದ ರಾಜನು ತನಗಿಷ್ಟವಾದ ಸ್ವರ್ಗಾದಿ ಲೋಕಗಳಲ್ಲಿ ಸುಖವನ್ನನುಭವಿಸುವನು.

೩೦–೩೧. ವೈಶ್ಯನಿಗೆ ಕೃಷಿ, ಪಶುಪಾಲನೆ, ವ್ಯಾಪಾರ ಇವುಗಳು ಜೀವನಾರ್ಥವಾದ ವೃತ್ತಿಗಳೆಂದು ಬ್ರಹ್ಮನು ಗೊತ್ತುಮಾಡಿರುವನು. ಅವನೂ ನಿತ್ಯ ನೈಮಿತ್ತಿಕ ಕರ್ಮಗಳನ್ನೂ, ವೇದಾಧ್ಯಯನ, ಯಜ್ಞದಾನಗಳನ್ನೂ ಮಾಡಬೇಕು. ಇವೇ ಅವನ ಮುಖ್ಯ ಧರ್ಮಗಳು.

೩೨–೩೩. ಶೂದ್ರನಿಗೆ ದ್ವಿಜರಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೆಂಬ ಮೂರು ವರ್ಣದವರ ಸೇವೆಯನ್ನು ಮಾಡಿದುದರಿಂದ ಬಂದ ಧನದಿಂದಲೂ,

ದಾನಂ ದದ್ಯಾದ್ಯಜೇದ್ಯಜ್ಞೈಃ ಪಾಕಯಜ್ಞೈರ್ಯಜೇತ ಚ ।
ಪಿತ್ರ್ಯಾದಿಕಂಚವೈಸರ್ವಂ ಶೂದ್ರಃ ಕುರ್ವೀತ ತೇನ ವೈ ॥ ೩೩ ॥

ಭೃತ್ಯಾದಿಭರಣಾರ್ಥಾಯ ಸರ್ವೇಷಾಂ ಚ ಪರಿಗ್ರಹಃ ।
ಋತುಕಾಲಾಭಿಗಮನಂ ಸ್ವದಾರೇಷು ಮಹೀಪತೇ ॥ ೩೪ ॥

ದಯಾ ಸಮಸ್ತಭೂತೇಷು ತಿತಿಕ್ಷಾ ನಾತಿಮಾನಿತಾ ।
ಸತ್ಯಂ ಶೌಚಮನಾಯಾಸೋ ಮಂಗಳಂ ಪ್ರಿಯವಾದಿತಾ ॥ ೩೫ ॥

ಮೈತ್ರ್ಯಸ್ಪೃಹಾ ತಥಾ ತದ್ವದಕಾರ್ಪಣ್ಯಂ ನರೇಶ್ವರ ।
ಅನಸೂಯಾ ಚ ಸಾಮಾನ್ಯಾ ವರ್ಣಾನಾಂ ಕಥಿತಾ ಗುಣಾಃ ॥ ೩೬ ॥

ಆಶ್ರಮಾಣಾಂ ಚ ಸರ್ವೇಷಾಮೇತೇ ಸಾಮಾನ್ಯಲಕ್ಷಣಾಃ ।
ಗುಣಾಂಸ್ತಥಾಪಿ ಧರ್ಮಾಂಶ್ಚ ವಿಪ್ರಾದೀನಾಮಿಮಾನ್ ಶೃಣು ॥ ೩೭ ॥

---

ವ್ಯಾಪಾರದಿಂದಲೂ, ಕೈಗಾರಿಕೆಯಿಂದಲೂ ಜೀವನ ಮಾಡುವುದೇ ವಿಹಿತವಾಗಿರುವುದು. ಅವನು ಹೀಗೆ ಸಂಪಾದಿಸಿದ ಧನದಿಂದ ದಾನವನ್ನೂ, ಪಂಚಯಜ್ಞಗಳನ್ನೂ, ಪಿತೃಶ್ರಾದ್ಧಾದಿಗಳನ್ನೂ ಮಾಡಬೇಕು.

೩೪–೩೭ ಸಮಸ್ತ ವರ್ಣದವರಿಗೂ ಸೇವಕರು ಗೋವುಗಳು ಮುಂತಾದುವನ್ನು ರಕ್ಷಿಸುವುದಕ್ಕಾಗಿ ಇತರರದಲ್ಲದ ಹುಲ್ಲು ಕಟ್ಟಿಗೆ ಮುಂತಾದುವನ್ನು ತೆಗೆದುಕೊಳ್ಳುವುದೂ, ತಮ್ಮ ಪತ್ನಿಯರಲ್ಲಿ ಋತುಕಾಲ ಗಮನವೂ, ಸಮಸ್ತ ಭೂತಗಳ ವಿಷಯದಲ್ಲಿ ಕರುಣೆಯೂ, ಕ್ಷಮಾಗುಣವೂ, ಅಹಂಕಾರ ಪಡದಿರುವುದೂ, ಸತ್ಯಭಾಷಣವೂ, ಶುಚಿತ್ವವೂ ಶರೀರಕ್ಕೆ ವಿಶೇಷವಾಗಿ ಶ್ರಮವನ್ನು ಉಂಟುಮಾಡದಿರುವುದೂ, ಮಂಗಳ ಕಾರ್ಯಗಳನ್ನು ಮಾಡುವುದೂ, ಹಿತವಾದ ಮಾತುಗಳನ್ನಾಡುವುದೂ, ಸ್ನೇಹವೂ, ಆಸೆಪಡದಿರುವುದೂ, ಲೋಭವಿಲ್ಲದಿರುವುದೂ ಸಾಮಾನ್ಯ ಧರ್ಮಗಳಾಗಿರುವುವು. ಸಮಸ್ತ ಆಶ್ರಮದವರಿಗೂ ಈ ಗುಣಗಳು ಸಾಮಾನ್ಯ ಧರ್ಮಗಳಾಗಿರುವುವು. ಬ್ರಾಹ್ಮಣಾದಿ ವರ್ಣಗಳಿಗೆ ವಿಶೇಷ ಧರ್ಮಗಳನ್ನು ಹೇಳುವೆನು ಕೇಳು:—

ಕ್ಷಾತ್ರಂ ಕರ್ಮ ದ್ವಿಜಸ್ಯೋಕ್ತಂ ವೈಶ್ಯಕರ್ಮ ತಥಾಪದಿ ।
ರಾಜನ್ಯಸ್ಯ ಚ ವೈಶ್ಯೋಕ್ತಂ ಶೌದ್ರಕರ್ಮ ನ ಚೈತಯೋಃ ॥ ೩೮ ॥

ಸಾಮರ್ಥ್ಯೇ ಸತಿ ತತ್ತ್ಯಾಜ್ಯಮುಭಾಭ್ಯಾಮಪಿ ಪಾರ್ಥಿವ ।
ತದೇವಾಪದಿ ಕರ್ತವ್ಯಂ ನ ಕುರ್ಯಾತ್ಕರ್ಮಸಂಕರಂ ॥ ೩೯ ॥

ಇತ್ಯೇತೇ ಕಥಿತಾ ರಾಜನ್ವರ್ಣಧರ್ಮಾ ಮಯಾ ತವ ।
ಧರ್ಮಾನಾಶ್ರಮಿಣಾಂ ಸಮ್ಯಗ್ಬ್ರುವತೋ ಮೇ ನಿಶಾಮಯ ॥ ೪೦ ॥

ಇತಿ ಶ್ರೀ ವಿಷ್ಣುಪುರಾಣೇ ತೃತೀಯಾಂಶೇ ಅಷ್ಟಮೋಽಧ್ಯಾಯಃ

---

೩೮–೩೯. ಆಪತ್ಕಾಲದಲ್ಲಿ ಜೀವನಾರ್ಥವಾಗಿ ಬ್ರಾಹ್ಮಣನು ಕ್ಷತ್ರಿಯ. ವೈಶ್ಯರ ಕರ್ಮಗಳನ್ನೂ, ಕ್ಷತ್ರಿಯನು ವೈಶ್ಯನ ಕರ್ಮಗಳನ್ನೂ ಮಾಡಬಹುದು, ಇವರಿಬ್ಬರೂ ಶೂದ್ರ ಕರ್ಮಗಳನ್ನೆಂದಿಗೂ ಮಾಡಬಾರದು. ಇದರಿಂದ ವೈಶ್ಯನು ಶೂದ್ರ ಧರ್ಮಗಳನ್ನೂ, ಶೂದ್ರನು ಕ್ರಯ ವಿಕ್ರಯಾದಿಗಳನ್ನೂ ಆಪತ್ಕಾಲದಲ್ಲಿ ಧರ್ಮವಾಗಿ ಗ್ರಹಿಸಬಹುದೆಂದು ಅಭಿಪ್ರಾಯವು. ತನಗೆ ಜೀವನ ಸಾಮರ್ಥ್ಯ ವಿದ್ದಲ್ಲಿ ತನ್ನ ವರ್ಣ ಧರ್ಮವನ್ನೇ ಆಚರಿಸಬೇಕು. ಅನ್ಯಧರ್ಮಗಳನ್ನು ಗ್ರಹಿಸಿ ವರ್ಣಸಾಂಕರ್ಯವನ್ನುಂಟುಮಾಡಬಾರದು.

೪೦ ರಾಜನೇ, ನಾನು ವರ್ಣ ಧರ್ಮಗಳನ್ನು ನಿನಗೆ ಹೇಳಿದೆನು. ಇನ್ನು ಆಶ್ರಮ ಧರ್ಮಗಳನ್ನು ವಿಸ್ತಾರವಾಗಿ ಹೇಳುವೆನು ಕೇಳು.

ಎಂಬಲ್ಲಿಗೆ ವಿಷ್ಣುಪುರಾಣದ ತೃತೀಯಾಂಶದಲ್ಲಿ

ಎಂಟನೆಯ ಅಧ್ಯಾಯವು ಮುಗಿದುದು

---

ಶ್ರೀಃ

# ಶ್ರೀ ವಿಷ್ಣುಪುರಾಣೇ ತೃತೀಯಾಂಶೇ

## ನವಮೋಽಧ್ಯಾಯಃ

---

॥ ಔರ್ವಃ ॥

ಬಾಲಃ ಕೃತೋಪನಯನೋ ವೇದಾಹರಣತತ್ಪರಃ ।
ಗುರುಗೇಹೇ ವಸೇದ್ಭೂಪ ಬ್ರಹ್ಮಚಾರೀ ಸಮಾಹಿತಃ ॥ ೧ ॥

ಶೌಚಾಚಾರವತಾ ತತ್ರ ಕಾರ್ಯಂ ಶುಶ್ರೂಷಣಂ ಗುರೋಃ ।
ವ್ರತಾನಿ ಚರತಾ ಗ್ರಾಹ್ಯೋ ವೇದಶ್ಚ ಕೃತಬುದ್ಧಿನಾ ॥ ೨ ॥

ಉಭೇ ಸಂಧ್ಯೇ ರವಿಂ ಭೂಪ ತಥೈವಾಗ್ನಿಂ ಸಮಾಹಿತಃ ।
ಉಪತಿಷ್ಠೇತ್ತಥಾ ಕುರ್ಯಾತ್ ಗುರೋರಪ್ಯಭಿವಾದನಂ ॥ ೩ ॥

---

### ಒಂಭತ್ತನೆಯ ಅಧ್ಯಾಯ

೧–೬. ಔರ್ವನು ಹೇಳುವನು:—ಬಾಲಕನು ಉಪನಯನವಾದ ಮೇಲೆ ಬ್ರಹ್ಮಚರ್ಯಾಶ್ರಮದಲ್ಲಿ ವೇದಾಭ್ಯಾಸವನ್ನು ಮಾಡುವುದಕ್ಕಾಗಿ ಏಕಾಗ್ರಚಿತ್ತದಿಂದ ಗುರುವಿನ ಮನೆಯಲ್ಲಿಯೇ ವಾಸಮಾಡಬೇಕು. ಅಲ್ಲಿ ಅವನು ಸ್ನಾನಾದಿಗಳಿಂದ ಶುಚಿಯಾಗಿ ಸದಾಚಾರ ಪರನಾಗಿ ಗುರುವಿನ ಸೇವೆಯನ್ನು ಮಾಡುತ್ತಾ, ಗುರುವು ಹೇಳಿದ ವ್ರತಗಳನ್ನು ಆಚರಿಸುತ್ತಾ ವೇದಗಳನ್ನು ಕಲಿತು ಬುದ್ಧಿವಂತನಾಗಬೇಕು. ಅವನು ಎರಡು ಸಂಧ್ಯಾಕಾಲಗಳಲ್ಲಿಯೂ ಸಂಧ್ಯಾವಂದನೆಯನ್ನೂ, ಅಗ್ನಿ ಕಾರ್ಯವನ್ನೂ ಮಾಡಿ ಸೂರ್ಯನನ್ನೂ, ಅಗ್ನಿಯನ್ನೂ, ಪೂಜಿಸಿ ಬಳಿಕ ಗುರುವಿಗೆ ನಮಸ್ಕಾರವನ್ನು ಮಾಡಬೇಕು. ರಾಜನೇ, ಗುರುವು ನಿಂತಿದ್ದರೆ ಶಿಷ್ಯನು ನಿಂತರಬೇಕು. ಹೋಗು

ಸ್ಥಿತೇ ತಿಷ್ಠೇದ್ವ್ರಜೇದ್ಯಾತೇ ನೀಚೈರಾಸೀತ ಚಾಸತಿ ।
ಶಿಷ್ಯೋ ಗುರೋರ್ನೃಪಶ್ರೇಷ್ಠ ಪ್ರತಿಕೂಲಂ ನ ಸಂಚರೇತ್ ॥ ೪ ॥

ತೇನೈವೋಕ್ತಃ ಪಠೇದ್ವೇದಂ ನಾನ್ಯಚಿತ್ತಃ ಪುರಸ್ಥಿತಃ ।
ಅನುಜ್ಞಾತಂ ಚ ಭಿಕ್ಷಾನ್ನಮಶ್ನೀಯಾದ್ಗುರುಣಾ ತತಃ ॥ ೫ ॥

ಅವಗಾಹೇದಪಃ ಪೂರ್ವಮಾಚಾರ್ಯೇಣಾವಗಾಹಿತಾಃ ।
ಸಮಿಜ್ಜಲಾದಿಕಂ ಚಾಸ್ಯ ಕಾಲ್ಯಂ ಕಾಲ್ಯಮುಪಾನಯೇತ್ ॥ ೬ ॥

ಗೃಹೀತಗ್ರಾಹ್ಯವೇದಶ್ಚ ತತೋ ನುಜ್ಞಾಮವಾಪ್ಯ ವೈ ।
ಗಾರ್ಹಸ್ಥ್ಯಮಾವಿಶೇತ್ಪ್ರಾಜ್ಞೋ ನಿಷ್ಪನ್ನಗುರುನಿಷ್ಕೃತಿಃ ॥ ೭ ॥

ವಿಧಿನಾವಾಪ್ತದಾರಸ್ತು ಧನಂ ಪ್ರಾಪ್ಯ ಸ್ವಕರ್ಮಣಾ ।
ಗೃಹಸ್ಥಕಾರ್ಯಮಖಿಲಂ ಕುರ್ಯಾದ್ಭೂಪಾಲ ಶಕ್ತಿತಃ ॥ ೮ ॥

---

ತ್ತಿದ್ದರೆ ಹೋಗುತ್ತಿರಬೇಕು. ಕುಳಿತಿದ್ದರೆ ತಾನು ಅವರಿಗಿಂತ ತಗ್ಗಿನ ಪ್ರದೇಶದಲ್ಲಿ ಕುಳಿತುಕೊಳ್ಳಬೇಕು. ಇದಕ್ಕೆ ವಿರುದ್ಧವಾಗಿ ನಡೆಯಬಾರದು. ಗುರುವೇ ಹೇಳಿಕೊಟ್ಟಾಗ ಅವರೆದುರಿಗೆ ಏಕಾಗ್ರಚಿತ್ತದಿಂದ ವೇದವನ್ನು ಕಲಿಯಬೇಕು. ಆ ಮೇಲೆ ಗುರುವಿನ ಅಪ್ಪಣೆಯನ್ನು ಪಡೆದು ತಾನು ತಂದ ಭಿಕ್ಷಾನ್ನವನ್ನು ಭೋಜನ ಮಾಡಬೇಕು. ಪ್ರತಿದಿನ ಪ್ರಾತಃಕಾಲದಲ್ಲಿ ಗುರುವಿಗಿಂತ ಮುಂಚಿತವಾಗಿ ತಾನು ಸ್ನಾನವನ್ನು ಮಾಡಿ ಗುರುವಿಗೆ ಬೇಕಾದ ನೀರು, ಸಮಿತ್ತು ಮುಂತಾದುವುಗಳನ್ನು ತಂದು ಇರಿಸಬೇಕು.

೭–೧೦. ವೇದವನ್ನು ಅರ್ಥಸಹಿತವಾಗಿ ಅಭ್ಯಾಸ ಮಾಡಿದ ಮೇಲೆ ಜ್ಞಾನಿಯಾದ ಶಿಷ್ಯನು ಗುರುದಕ್ಷಿಣೆಯನ್ನು ಕೊಟ್ಟು, ಅವರ ಅಪ್ಪಣೆಯನ್ನು ಪಡೆದು ಗೃಹಸ್ಥಾಶ್ರಮವನ್ನು ಪ್ರವೇಶಿಸಬೇಕು. ಅವನು ವೇದ ವಿಧಿಯಂತೆ ವಿವಾಹ ಮಾಡಿಕೊಂಡು ವೇದವನ್ನು ಹೇಳಿಕೊಡುವುದೇ ಮುಂತಾದ ತನ್ನ ಕರ್ಮಗಳಿಂದ ಧನವನ್ನು ಸಂಪಾದಿಸಿ ಗೃಹಸ್ಥನು ಮಾಡಬೇಕಾದ ಕರ್ಮಗಳನ್ನೆಲ್ಲ ತನ್ನ ಶಕ್ತ್ಯನುಸಾರವಾಗಿ

ನಿವಾಪೇನ ಪಿತೄನರ್ಚನ್ ಯಜ್ಞೈರ್ದೇವಾಂಸ್ತಥಾತಿಥೀನ್ ।
ಅನ್ನೈರ್ಮುನೀಂಶ್ಚ ಸ್ವಾಧ್ಯಾಯೈರಪತ್ಯೇನ ಪ್ರಜಾಪತಿಂ ॥ ೯ ॥

ಬಲಿಕರ್ಮಣಾ ಚ ಭೂತಾನಿ ವಾತ್ಸಲ್ಯೇನಾಖಿಲಂ ಜಗತ್ ।
ಪ್ರಾಪ್ನೋತಿ ಲೋಕಾನ್ಪುರುಷೋ ನಿಜಕರ್ಮಸಮಾರ್ಜಿತಾನ್ ॥ ೧೦ ॥

ಭಿಕ್ಷಾಭುಜಸ್ತೇ ಯೇ ಕೇಚಿತ್ಪರಿವ್ರಾಡ್ಬ್ರಹ್ಮಚಾರಿಣಃ ।
ತೇಪ್ಯತ್ರೈವ ಪ್ರತಿಷ್ಠಂತೇ ಗಾರ್ಹಸ್ಥ್ಯಂ ತೇನ ವೈ ವರಂ ॥ ೧೧ ॥

ವೇದಾಹರಣಕಾರ್ಯೇಣ ತೀರ್ಥಸ್ನಾನಾಯ ಚ ಪ್ರಭೋ ।
ಅಟಂತಿ ವಸುಧಾಂ ವಿಪ್ರಾಃ ಪೃಥಿವೀದರ್ಶನಾಯ ಚ ॥ ೧೨ ॥

ಅನಿಕೇತಾ ಹ್ಯನಾಹಾರಾ ಯತ್ರ ಸಾಯಂ ಗೃಹಾಸ್ತು ಯೇ ।
ತೇಷಾಂ ಗೃಹಸ್ಥಸ್ಸರ್ವೇಷಾಂ ಪ್ರತಿಷ್ಠಾ ಯೋನಿರೇವ ಚ ॥ ೧೩ ॥

---

ಮಾಡುತ್ತಾ, ಶ್ರಾದ್ಧಾದಿಗಳಿಂದ ಪಿತೃಗಳನ್ನೂ, ಯಜ್ಞಾದಿಗಳಿಂದ ದೇವತೆಗಳನ್ನೂ ಅನ್ನದಾನದಿಂದ ಅತಿಥಿಗಳನ್ನೂ, ವೇದಪಾರಾಯಣದಿಂದ ಋಷಿಗಳನ್ನೂ, ಪುತ್ರೋತ್ಪಾದನೆಯಿಂದ ಬ್ರಹ್ಮನನ್ನೂ, ಬಲಿಹರಣ ಕರ್ಮದಿಂದ ಭೂತಗಳನ್ನೂ, ಪ್ರೀತಿಯಿಂದ ಸಮಸ್ತ ಜಗತ್ತನ್ನೂ ಸಂತೋಷಪಡಿಸುತ್ತಾ ಗೃಹಸ್ಥನಾದ ಪುರುಷನು ತನ್ನ ಕರ್ಮದಿಂದ ಸಂಪಾದಿಸಿದ ಉತ್ತಮ ಲೋಕಗಳನ್ನು ಪಡೆಯುವನು.

೧೧–೧೪. ಭಿಕ್ಷಾನ್ನವೇ ಆಹಾರವಾಗಿ ಉಳ್ಳ ಬ್ರಹ್ಮಚಾರಿಗಳೂ, ಯತಿಗಳೂ ಗೃಹಸ್ಥಾಶ್ರಮಿಗಳಿಂದಲೇ ಜೀವಿಸಬೇಕಾಗಿರುವುದರಿಂದ ಗೃಹಸ್ಥ ಧರ್ಮವು ಅತ್ಯಂತ ಶ್ರೇಷ್ಠವಾದುದಾಗಿರುವುದು. ವೇದಾಭ್ಯಾಸಕ್ಕಾಗಿಯೂ, ತೀರ್ಥಸ್ನಾನಕ್ಕಾಗಿಯೂ ದೇಶಗಳನ್ನು ನೋಡಬೇಕೆಂದೂ ಅನೇಕ ಬ್ರಾಹ್ಮಣರು ಸಂಚರಿಸುತ್ತಿರುವರು. ಅವರಿಗೆ ಗೊತ್ತಾದ ಸ್ಥಳವೂ, ಆಹಾರವೂ ಇಲ್ಲದೆ ಎಲ್ಲಿ ಸಂಧ್ಯಾಕಾಲವಾಗುವುದೋ ಅಲ್ಲಿಯೇ ಗೃಹಸ್ಥರ ಮನೆಯಲ್ಲಿ ನಿಲ್ಲಬೇಕಾಗುವುದು. ಅಂಥವರಿಗೆ ಗ್ರಹಸ್ಥಾಶ್ರಮಿಗಳೇ ತಾಯಿ

ತೇಷಾಂ ಸ್ವಾಗತದಾನಾದಿ ವಕ್ತವ್ಯಂ ಮಧುರಂ ನೃಪ ।
ಗೃಹಾಗತಾನಾಂ ದದ್ಯಾಚ್ಚ ಶಯನಾಸನಭೋಜನಂ ॥ ೧೪ ॥

ಅತಿಥಿರ್ಯಸ್ಯ ಭಗ್ನಾಶೋ ಗೃಹಾತ್ಪ್ರತಿನಿವರ್ತತೇ ।
ಸ ದತ್ವಾ ದುಷ್ಕೃತಂ ತಸ್ಮೈ ಪುಣ್ಯಮಾದಾಯ ಗಚ್ಛತಿ ॥ ೧೫ ॥

ಅವಜ್ಞಾನಮಹಂಕಾರೋ ದಂಭಶ್ಚೈವ ಗೃಹೇ ಸತಃ ।
ಪರಿತಾಪೋಪಘಾತಾ [illegible] ಪಾರುಷ್ಯಂ ಚ ನ ಶಸ್ಯತೇ ॥ ೧೬ ॥

ಯಸ್ತು ಸಮ್ಯಕ್ಕರೋತ್ಯೇವಂ ಗೃಹಸ್ಥಃ ಪರಮಂ ವಿಧಿಂ ।
ಸರ್ವಬಂಧವಿಮುಕ್ತೋಽಸೌ ಲೋಕಾನಾಪ್ನೋತ್ಯನುತ್ತಮಾನ್ ॥ ೧೭ ॥

ವಯಃ ಪರಿಣತೌ ರಾಜನ್ ಕೃತಕೃತ್ಯೋ ಗೃಹಾಶ್ರಮೀ ।
ಪುತ್ರೇಷು ಭಾರ್ಯಾಂ ನಿಕ್ಷಿಪ್ಯ ವನಂ ಗಚ್ಛೇತ್ಸಹೈವ ವಾ ॥ ೧೮ ॥

---

ಯಂತೆ ಆಶ್ರಯಸ್ಥಾನರಾಗಿರುವರು. ಅವರಿಗೆ ಗೃಹಸ್ಥರು ಮಧುರವಾದ ಸುಖಾಗಮನ ವಾಕ್ಯಗಳನ್ನು ಹೇಳಿ ಭೋಜನಾದಿಗಳಿಗೆ ಅನುಕೂಲವನ್ನು ಕಲ್ಪಿಸಬೇಕು.

೧೫–೧೮. ಯಾವ ಗೃಹಸ್ಥನ ಮನೆಯಿಂದ ಅತಿಥಿಯು ತನ್ನ ಆಸೆಯನ್ನು ಪಡೆಯದೆ ಹಿಂದಿರುಗಿ ಹೋಗುವನೋ ಅವನು ತನ್ನ ಪಾಪವನ್ನು ಗೃಹಸ್ಥನಿಗೆ ಕೊಟ್ಟು ಅವನ ಪುಣ್ಯವನ್ನು ತೆಗೆದುಕೊಂಡು ಹೋಗುವನು. ಗೃಹಸ್ಥಾಶ್ರಮದಲ್ಲಿರುವವನಿಗೆ ಅನಾದರವೂ, ಅಹಂಕಾರವೂ, ಜಂಭವೂ, ಅತಿಥಿಗಳಿಂದ ತನ್ನ ಧನವು ವೆಚ್ಚವಾಯಿತೆಂಬ ಸಂತಾಪವೂ, ಹೊಡೆಯುವ ಸ್ವಭಾವವೂ, ನಿಷ್ಠುರವಾದ ಮಾತನಾಡುವ ಸ್ವಭಾವವೂ ಇರಬಾರದು. ಯಾವ ಗೃಹಸ್ಥನು ತನ್ನ ಆಶ್ರಮ ವಿಧಿಯನ್ನು ಚೆನ್ನಾಗಿ ನಡೆಸಿಕೊಂಡು ಬರುವನೋ ಅವನು ಸಮಸ್ತ ದುಃಖಗಳನ್ನೂ ಕಳೆದುಕೊಂಡು ಉತ್ತಮ ಲೋಕಗಳನ್ನು ಪಡೆಯುವನು. ರಾಜನೇ, ಗೃಹಸ್ಥನು ವಯಸ್ಸಾದಮೇಲೆ ತನ್ನ ಪತ್ನಿಯ ರಕ್ಷಣೆಯ ಭಾರವನ್ನು ಮಕ್ಕಳಿಗೆ ವಹಿಸಿ, ಅಥವಾ ಪತ್ನಿಯೊಡನೆ ವಾನಪ್ರಸ್ಥಾಶ್ರಮವನ್ನು ವಹಿಸಬೇಕು.

ಪರ್ಣಮೂಲಫಲಾಹಾರಃ ಕೇಶಶ್ಮಶ್ರುಜಟಾಧರಃ ।
ಭೂಮಿಶಾಯೀ ಭವೇತ್ತತ್ರ ಮುನಿಸ್ಸರ್ವಾರ್ಥನಿಸ್ಸ್ಪೃಹಃ ॥ ೧೯ ॥

ಚರ್ಮಕಾಶಕುಶೈಃ ಕುರ್ಯಾತ್ಪರಿಧಾನೋತ್ತರೀಯಕೇ ।
ತದ್ವತ್ತ್ರಿಷವಣಂ ಸ್ನಾನಂ ಶಸ್ತಮಸ್ಯ ನರೇಶ್ವರ ॥ ೨೦ ॥

ದೇವತಾಭ್ಯರ್ಚನಂ ಹೋಮಸ್ಸರ್ವಾಭ್ಯಾಗತಪೂಜನಂ ।
ಭಿಕ್ಷಾಬಲಿಪ್ರದಾನಂ ಚ ಶಸ್ತಮಸ್ಯ ನರೇಶ್ವರ ॥ ೨೧ ॥

ವನ್ಯಸ್ನೇಹೇನ ಗಾತ್ರಾಣಾಂ ಅಭ್ಯಂಗಶ್ಚಾಸ್ಯ ಶಸ್ಯತೇ ।
ತಪಶ್ಚ ತಸ್ಯ ರಾಜೇಂದ್ರ ಶೀತೋಷ್ಣಾದಿ ಸಹಿಷ್ಣುತಾ ॥ ೨೨ ॥

ಯಸ್ತ್ವೇತಾಂ ನಿಯತಶ್ಚರ್ಯಾಂ ವಾನಪ್ರಸ್ಥಶ್ಚರೇನ್ಮುನಿಃ ।
ಸ ದಹತ್ಯಗ್ನಿವದ್ದೋಷಾನ್ ಜಯೆಲ್ಲೋಕಾಂಶ್ಚ ಶಾಶ್ವತಾನ್ ॥ ೨೩ ॥

---

೧೯–೨೩. ವಾನಪ್ರಸ್ಥಾಶ್ರಮಿಯು ಸೊಪ್ಪುಗಳು, ಗೆಡ್ಡೆಗೆಣಸು, ಹಣ್ಣುಗಳನ್ನು ಆಹಾರಮಾಡುತ್ತಾ ಗಡ್ಡಮೀಸೆಗಳನ್ನೂ, ಜಟೆಗಳನ್ನೂ ಧರಿಸಿ ಭೂಮಿಯಮೇಲೆ ಮಲಗುತ್ತಾ ವೈರಾಗ್ಯವುಳ್ಳವನಾಗಿರಬೇಕು. ಚರ್ಮಗಳು, ಹುಲ್ಲು, ದರ್ಭೆ ಇವುಗಳಿಂದ ಉಡುವ ಮತ್ತು ಹೊದೆಯುವ ವಸ್ತ್ರಗಳನ್ನು ಮಾಡಿಕೊಳ್ಳಬೇಕು. ಮೂರು ಕಾಲಗಳಲ್ಲಿ ಸ್ನಾನಮಾಡಬೇಕು. ದೇವರ ಪೂಜೆ, ಹೋಮ, ಅಭ್ಯಾಗತರ ಪೂಜೆ, ಭಿಕ್ಷೆ, ಬಲಿಹರಣ ಇವು ಅವನ ಕೆಲಸಗಳು, ಕಾಡಿನಲ್ಲಿ ದೊರೆತ ಜಿಡ್ಡು ಪದಾರ್ಥಗಳಿಂದ ಅಭ್ಯಂಗಸ್ನಾನವನ್ನು ಮಾಡಿ, ಶೀತೋಷ್ಣಗಳನ್ನು ಸಹಿಸಿ ತಪಸ್ಸನ್ನು ಮಾಡುವುದು ಅವನ ಶ್ರೇಷ್ಠವಾದ ಕೆಲಸವಾಗಿರುವುದು, ಈ ನಿಯತವಾದ ಧರ್ಮಗಳನ್ನು ಮೌನದಿಂದ ಯಾವ ವಾನಪ್ರಸ್ಥಾಶ್ರಮಿಯು ನಡೆಸುವನೋ ಅವನು ಅಗ್ನಿಯಂತೆ ಸಮಸ್ತ ದೋಷಗಳನ್ನೂ ಸುಟ್ಟುಬಿಡುವನು. ಮತ್ತು ಶಾಶ್ವತವಾದ ಪುಣ್ಯಲೋಕಗಳನ್ನು ಪಡೆಯುವನು.

ಚತುರ್ಥಶ್ಚಾಶ್ರಮೋ ಭಿಕ್ಷೋಃ ಪ್ರೋಚ್ಯತೇ ಯೋ ಮನೀಷಿಭಿಃ ।
ತಸ್ಯ ಸ್ವರೂಪಂ ಗದತೋ ಮಮ ಶ್ರೋತುಂ ನೃಪಾರ್ಹಸಿ ॥ ೨೪ ॥

ಪುತ್ರದ್ರವ್ಯಕಳತ್ರೇಷು ತ್ಯಕ್ತಸ್ನೇಹೋ ನರಾಧಿಪ ।
ಚತುರ್ಥಮಾಶ್ರಮಸ್ಥಾನಂ ಗಚ್ಛೇನ್ನಿರ್ಧೂತಮತ್ಸರಃ ॥ ೨೫ ॥

ತ್ರೈವರ್ಗಿಕಾಂಸ್ತ್ಯಜೇತ್ಸರ್ವಾನ್ ಆರಂಭಾವನನೀಪತೇ ।
ಮಿತ್ರಾರಿಷು ಸಮೋ ಮೈತ್ರ ಸ್ಸಮಸ್ತೇಷ್ವೇವ ಜಂತುಷು ॥ ೨೬ ॥

ಜರಾಯುಜಾಂಡಜಾದೀನಾಂ ವಾಙ್ಮನಃ ಕರ್ಮಭಿಃ ಕ್ವಚಿತ್ ।
ಯುಕ್ತಃ ಕುರ್ವೀತ ನ ದ್ರೋಹಂ ಸರ್ವಸಂಗಾಂಶ್ಚ ವರ್ಜಯೇತ್ ॥ ೨೭ ॥

ಏಕರಾತ್ರ ಸ್ಥಿತಿರ್ಗ್ರಾಮೇ ಪಂಚರಾತ್ರಸ್ಥಿತಿಃ ಪುರೇ ।
ತಥಾ ತಿಷ್ಠೇದ್ಯಥಾ ಪ್ರೀತಿರ್ದ್ವೇಷೋವಾಪ್ಯಭಿಜಾಯತೇ ॥ ೨೮ ॥

ಪ್ರಾಣಯಾತ್ರಾನಿಮಿತ್ತಂ ಚ ವ್ಯಂಗಾರೇ ಭುಕ್ತವಜ್ಜನೇ ।
ಕಾಲೇ ಪ್ರಶಸ್ತವರ್ಣಾನಾಂ ಭಿಕ್ಷಾರ್ಥಂ ಪರ್ಯಟೇದ್ಗೃಹಾನ್ ॥ ೨೯ ॥

---

೨೪–೨೯. ಎಲೈ ರಾಜನೇ! ನಾಲ್ಕನೆಯದಾದ ಸನ್ಯಾಸಾಶ್ರಮದ ಸ್ವರೂಪ ವನ್ನು ಹೇಳುವೆನು, ಕೇಳು. ಮನುಷ್ಯನು "ಪುತ್ರೇಷಣಾಯಾಶ್ಚ ವಿತ್ತೇಷಣಾಯಾಶ ದಾರೈಷಣಾಯಾಶ್ಚವ್ಯುತ್ಥಾಯ" ಎಂಬ ವೇದ ವಚನದಂತೆ ಮಕ್ಕಳು, ದ್ರವ್ಯ, ಪತ್ನಿ ಎಂಬ ಮೂರು ಅಪೇಕ್ಷೆಗಳನ್ನೂ ಬಿಟ್ಟು ಸಮಸ್ತ ಪ್ರಾಣಿಗಳ ವಿಷಯದಲ್ಲಿಯೂ ಮಾತ್ಸರ್ಯಾದಿ ದೋಷಗಳಿಲ್ಲದೆ ಧರ್ಮಾರ್ಥ ಕಾಮಗಳೆಂಬ ಮೂರು ವರ್ಗಗಳ ಫಲವನ್ನಪೇಕ್ಷಿಸದೆ, ಅವುಗಳ ಕಾರ್ಯಗಳನ್ನೂ ಬಿಟ್ಟು, ಮಿತ್ರ ಶತ್ರುಗಳಲ್ಲಿಯೂ, ಸಮಸ್ತ ಪ್ರಾಣಿಗಳಲ್ಲಿಯೂ ಸಮಾನವಾದ ಪ್ರೀತಿಯನ್ನಿಟ್ಟು ಸಮಸ್ತ ಸಂಗಗಳನ್ನೂ ತ್ಯಾಗಮಾಡಿ ಗ್ರಾಮದಲ್ಲಿ ಒಂದು ರಾತ್ರಿಯೂ, ಪಟ್ಟಣಗಳಲ್ಲಿ ಐದು ರಾತ್ರಿಯೂ ಪ್ರೀತಿ ದ್ವೇಷಗಳಿಲ್ಲದಂತೆ ವಾಸಮಾಡುತ್ತಾ ಪ್ರಾಣಧಾರಣೆಗೋಸ್ಕರವಾಗಿ ಅಡಿಗೆ ಮಾಡಿದ ಬೆಂಕಿಯು ಶಾಂತವಾಗಿ ಜನರೆಲ್ಲರೂ ಊಟಮಾಡುತ್ತಿರುವ ಸಮಯದಲ್ಲಿ ಶ್ರೇಷ್ಠರಾದ ಬ್ರಹ್ಮ, ಕ್ಷತ್ರಿಯ, ವೈಶ್ಯರ ಮನೆಗಳಿಗೆ ಭಿಕ್ಷೆಗಾಗಿ ಹೋಗಬೇಕು.

ಕಾಮಃ ಕ್ರೋಧಸ್ತಥಾ ದರ್ಪಲೋಭಮೋಹಾದಯಶ್ಚ ಯೇ ।
ತಾಂಸ್ತು ದೋಷಾನ್ಪರಿತ್ಯಜ್ಯ ಪರಿವ್ರಾಣ್ಣಿರ್ಮಮೋ ಭವೇತ್ ॥ ೩೦ ॥

ಅಭಯಂ ಸರ್ವಭೂತೇಭ್ಯೋ ದತ್ವಾ ಯಶ್ಚರತೇ ಮುನಿಃ ।
ತಸ್ಯಾಪಿ ಸರ್ವಭೂತೇಭ್ಯೋ ನ ಭಯಂ ವಿದ್ಯತೇ ಕ್ವಚಿತ್ ॥ ೩೧ ॥

ಕೃತ್ವಾಗ್ನಿಹೋತ್ರಂ ಸ್ವಶರೀರಸಂಸ್ಥಂ
ಶಾರೀರಮಗ್ನಿಂ ಸ್ವಮುಖೇ ಜುಹೋತಿ ।
ವಿಪ್ರಸ್ತು ಭೈಕ್ಷ್ಯೋಪಗತೈರ್ಹವಿರ್ಭಿ
ಶ್ಚಿತಾಗ್ನಿನಾಂ ಸಂವ್ರಜತಿಸ್ಮ ಲೋಕಾನ್ ॥ ೬೨ ॥

---

೩೦-೩೧. ಸನ್ಯಾಸಿಯಾದವನು ಕಾಮ ಕ್ರೋಧ, ಡಂಭ, ಲೋಭ, ಮೋಹ ಮುಂತಾದ ದೋಷಗಳನ್ನು ಬಿಟ್ಟು ತನ್ನದೆಂಬ ಅಭಿಮಾನವನ್ನು ಬಿಟ್ಟಿರಬೇಕು. ಸಮಸ್ತ ಪ್ರಾಣಿಗಳಿಗೂ ಅಭಯವನ್ನು ಕೊಟ್ಟು ಸಂಚರಿಸುತ್ತಿರುವ ಸನ್ಯಾಸಿಗೆ ಸಮಸ್ತ ಪ್ರಾಣಿಗಳಿಂದಲೂ ಎಲ್ಲಿಯೂ ಭಯವುಂಟಾಗುವುದಿಲ್ಲ.

೩೨. ಬ್ರಾಹ್ಮಣನಾದವನು ಪ್ರಾಜಾಪತ್ಯೇಷ್ಟಿಯನ್ನು ಮಾಡಿದಮೇಲೆ ಅಗ್ನಿಯನ್ನು ತನ್ನ ಶರೀರದಲ್ಲಿಯೇ ಆತ್ಮಸಮಾರೋಪಣೆಯನ್ನು ಮಾಡಿಕೊಂಡು ಸನ್ಯಾಸವನ್ನು ಗ್ರಹಿಸಿದಮೇಲೆ ಪ್ರತಿದಿನವೂ ಪ್ರಾಣಾಗ್ನಿಹೋತ್ರವನ್ನು ಮಾಡುವನು. ಹೇಗೆಂದರೆ? ಶರೀರದಲ್ಲಿರುವ ಜಠರಾಗ್ನಿಯೇ ಅಗ್ನಿಯು, ಬಾಯಿಯೇ ಅಗ್ನಿಕುಂಡವು. ಭಿಕ್ಷಾನ್ನವೇ ಹವಿಸ್ಸು, ಪಂಚ ಪ್ರಾಣಗಳೇ ದೇವತೆಗಳು, ಪ್ರಾಣಾದಿ ದೇವತೆಗಳಿಂದ ಕೂಡಿದ ಜಠರಾಗ್ನಿಯೇ ಭೋಜನ ಮಾಡುವವನು. ನಾನಲ್ಲ ಎಂದು ಭಾವಿಸಿ ಯಾವ ಬ್ರಾಹ್ಮಣನು ಭೋಜನವನ್ನು ಮಾಡುವನೋ ಅವನು ಜ್ಞಾನಾಗ್ನಿಯಿಂದ ಪ್ರಾಪ್ತವಾದ ಲೋಕಗಳನ್ನು ಪಡೆಯುವನು.

ಮೋಕ್ಷಾಶ್ರಮಂ ಯಶ್ಚರತೇ ಯಥೋಕ್ತಂ
ಶುಚಿಸ್ಸುಸಂಕಲ್ಪಿತ ಬುದ್ಧಿಯುಕ್ತಃ ।
ಅನಿಂಧನಂ ಜ್ಯೋತಿರಿವ ಪ್ರಶಾಂತಂ
ಸ ಬ್ರಹ್ಮಲೋಕಂ ಶ್ರಯತೇ ದ್ವಿಜಾತಿಃ ॥ ೩೩ ॥

ಇತಿ ಶ್ರೀ ವಿಷ್ಣುಪುರಾಣೇ ತೃತೀಯಾಂಶೇ ನವಮೋಽಧ್ಯಾಯಃ

---

೩೧. ಯಾವ ಬ್ರಾಹ್ಮಣನು ವೇದವಿಹಿತವಾದ ರೀತಿಯಲ್ಲಿ ಪರಿಶುದ್ಧನಾಗಿ ಒಳ್ಳೆಯ ಸಂಕಲ್ಪಗಳಿಂದ ಕೂಡಿದ ಮನಸ್ಸುಳ್ಳವನಾಗಿ ಸನ್ಯಾಸಾಶ್ರಮಧರ್ಮವನ್ನಾಚರಿಸುವನೋ ಅವನು ಜ್ಞಾನಿಯಾಗಿ ಕಟ್ಟಿಗೆ ಮುಂತಾದುವುಗಳಿಲ್ಲದೆ ಪ್ರಕಾಶಿಸುತ್ತಿರುವ ಅಗ್ನಿಯಂತಿರುವ ಶಾಂತವಾದ ಬ್ರಹ್ಮಲೋಕಕ್ಕೇ ಹೋಗುವನು.

ಎಂಬಲ್ಲಿಗೆ ಶ್ರೀ ವಿಷ್ಣುಪುರಾಣದ ತೃತೀಯಾಂಶದಲ್ಲಿ

ಒಂಭತ್ತನೆಯ ಅಧ್ಯಾಯವು ಮುಗಿದುದು.

---

ಶ್ರೀಃ

# ಶ್ರೀ ವಿಷ್ಣುಪುರಾಣೇ ತೃತೀಯಾಂಶೇ

## ದಶಮೋಽಧ್ಯಾಯಃ

॥ ಸಗರಃ ॥

ಕಥಿತಂ ಚಾತುರಾಶ್ರಮ್ಯಂ ಚಾತುರ್ವರ್ಣ್ಯಕ್ರಿಯಾಸ್ತಥಾ ।
ಪುಂಸಃ ಕ್ರಿಯಾಮಹಂ ಶ್ರೋತುಮಿಚ್ಛಾಮಿ ದ್ವಿಜಸತ್ತಮ ॥ ೧ ॥

ನಿತ್ಯಾಂ ನೈಮಿತ್ತಿಕಾಂ ಕಾಮ್ಯಾಂ ಕ್ರಿಯಾಂ ಪುಂಸಾಮಶೇಷತಃ ।
ಸಮಾಚಕ್ಷ್ವ ಭೃಗುಶ್ರೇಷ್ಠ ಧರ್ಮಜ್ಞೋ ಹ್ಯಸಿ ಮೇ ಮತಃ ॥ ೨ ॥

॥ ಔರ್ವಃ ॥

ಯದೇತದುಕ್ತಂ ಭವತಾ ನಿತ್ಯನೈಮಿತ್ತಿಕಾಶ್ರಿತಂ ।
ತದಹಂ ಕಥಯಿಷ್ಯಾಮಿ ಶೃಣುಷ್ವೈಕಮನಾ ಮಮ ॥ ೩ ॥

---

### ಹತ್ತನೆಯ ಅಧ್ಯಾಯವು.

೧-೨. ಸಗರನು, ಭೃಗುಶ್ರೇಷ್ಠನೇ! ವರ್ಣಗಳ ಮತ್ತು ಆಶ್ರಮಗಳ ಧರ್ಮಗಳನ್ನು ಹೇಳಿದಿರಿ. ಪುರುಷನಿಗೆ ಆಗಬೇಕಾಗಿರುವ ಷೋಡಶಸಂಸ್ಕಾರ ರೂಪವಾದ ಕರ್ಮಗಳನ್ನೂ, ನಿತ್ಯನೈಮಿತ್ತಿಕಕಾಮ್ಯಕರ್ಮಗಳನ್ನೂ ನನಗೆ ಹೇಳಬೇಕು. ನೀವು ಧರ್ಮವನ್ನು ತಿಳಿದವರೆಂಬ ಅಭಿಪ್ರಾಯವು ನನಗಿರುವುದು, ಎಂದನು.

೩-೪. ಔರ್ವನು ಹೇಳುವನು :—ಎಲೈ ರಾಜನೇ! ನೀನು ಹೇಳಿದಂತೆ ನಿತ್ಯನೈಮಿತ್ತಿಕ ಕರ್ಮಗಳ ವಿಚಾರವನ್ನು ಹೇಳುವೆನು. ಏಕಾಗ್ರಚಿತ್ತದಿಂದ ಕೇಳು. ಹುಟ್ಟಿದ ಮಗನಿಗಾಗಿ ತಂದೆಯಾದವನು ಮಗನು ಹುಟ್ಟುವುದಕ್ಕಿಂತ ಮುಂಚಿತ

ಜಾತಸ್ಯ ಜಾತಕರ್ಮಾದಿಕ್ರಿಯಾಕಾಂಡಮಶೇಷತಃ ।
ಪುತ್ರಸ್ಯ ಕುರ್ವೀತ ಪಿತಾ ಶ್ರಾದ್ಧಂ ಚಾಭ್ಯುದಯಾತ್ಮಕಂ ॥ ೪ ॥

ಯುಗ್ಮಾಂಸ್ತು ಪ್ರಾಙ್ಮುಖಾನ್ವಿಪ್ರಾನ್ಭೋಜಯೇನ್ಮನುಜೇಶ್ವರ ।
ಯಥಾತೃಪ್ತಿಸ್ತಥಾ ಕುರ್ಯಾದ್ದೈವಂ ಪಿತ್ರ್ಯಂ ದ್ವಿಜನ್ಮನಾಂ ॥ ೫ ॥

ದಧ್ನಾ ಯವೈಸ್ಸಬದರೈರ್ಮಿಶ್ರಾನ್ಪಿಂಡಾನ್ಮುದಾ ಯುತಃ ।
ನಾಂದೀಮುಖೇಭ್ಯಸ್ತೀರ್ಥೇನ ದದ್ಯಾದ್ದೈವೇನ ಪಾರ್ಥಿವ ॥ ೬ ॥

ಪ್ರಾಜಾಪತ್ಯೇನ ವಾ ಸರ್ವಮುಪಚಾರಂ ಪ್ರದಕ್ಷಿಣಂ ।
ಪ್ರಕುರ್ವೀತ ತಥಾಽಶೇಷವೃದ್ಧಿಕಾಲೇಷು ಭೂಪತೇ ॥ ೭ ॥

---

ವಾಗಿಯೇ ಗರ್ಭಾಧಾನಾದಿ ಸಂಸ್ಕಾರಗಳನ್ನೂ, ಹುಟ್ಟಿದಮೇಲೆ ಜಾತಕರ್ಮಾದಿ ಸಂಸ್ಕಾರಗಳನ್ನೂ ಮಾಡಬೇಕು. ಇದಕ್ಕಾಗಿ ಅಭ್ಯುದಯಕ ಶ್ರಾದ್ಧವೆಂಬ ನಾಂದಿಯನ್ನು ಮಾಡಬೇಕು. ನಾಂದಿ ಶ್ರಾದ್ಧದಲ್ಲಿ ಇಬ್ಬರು ಬ್ರಾಹ್ಮಣರು ಮೊದಲಾಗಿ ಇಪ್ಪತ್ತ ನಾಲ್ಕು ಜನ ಬ್ರಾಹ್ಮಣರವರೆಗೆ ಸಮಸಂಖ್ಯೆಯ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು. ಬ್ರಾಹ್ಮಣರು ನಾಂದೀಶ್ರಾದ್ಧದಲ್ಲಿ ಪೂರ್ವಾಭಿಮುಖವಾಗಿಯೇ ಕುಳಿತು ಭೋಜನಮಾಡಬೇಕು. ಬ್ರಾಹ್ಮಣರಿಗೆ ತೃಪ್ತಿಯಾಗುವಂತೆ ದೇವತೆಗಳ ಮತ್ತು ಪಿತೃಗಳ ಕಾರ್ಯಗಳನ್ನು ಮಾಡಬೇಕು.

೬-೭. ನಾಂದೀಶ್ರಾದ್ಧದಲ್ಲಿ ಪಿತೃಗಳಿಗೆ ಮೊಸರು ಎಲಚಿಹಣ್ಣುಗಳಿಂದ ಕೂಡಿದ ಪಿಂಡವನ್ನು ದೇವತೀರ್ಥದಿಂದ (ಬೆರಳುಗಳ ತುದಿಯಿಂದ) ಕೊಡಬೇಕು. ಅಥವಾ ಪ್ರಾಜಾಪತ್ಯತೀರ್ಥವೆಂದರೆ ಕಿರುಬೆರಳಿನ ಬುಡದಿಂದ ಕೊಡಬೇಕು. ಸಮಸ್ತ ವೃದ್ಧಿಶ್ರಾದ್ಧಗಳಲ್ಲಿ ಅಂದರೆ ಕನ್ಯಾಪುತ್ರರ ವಿವಾಹಾದಿ ಕಾಲಗಳಲ್ಲಿ ಮಾಡುವ ನಾಂದೀಶ್ರಾದ್ಧಗಳಲ್ಲಿಯೂ ಸಮಸ್ತ ಉಪಚಾರಗಳನ್ನೂ ಪ್ರದಕ್ಷಿಣಾಕಾರವಾಗಿಯೇ ಮಾಡಬೇಕು.

ತತಶ್ಚ ನಾಮ ಕುರ್ವೀತ ಪಿತೈವ ದಶಮೇಽಹನಿ ।
ದೇವಪೂರ್ವಂ ನರಾಖ್ಯಂ ಹಿ ಶರ್ಮವರ್ಮಾದಿಸಂಯುತಂ ॥ ೮ ॥

ಶರ್ಮೇತಿ ಬ್ರಾಹ್ಮಣಸ್ಯೋಕ್ತಂ ವರ್ಮೇತಿ ಕ್ಷತ್ರಸಂಶ್ರಯಂ ।
ಗುಪ್ತದಾಸಾತ್ಮಕಂ ನಾಮ ಪ್ರಶಸ್ತಂ ವೈಶ್ಯಶೂದ್ರಯೋಃ ॥ ೯ ॥

ನಾರ್ಥಹೀನಂ ನ ಚಾಶಸ್ತಂ ನಾಪಶಬ್ದಯುತಂ ತಥಾ ।
ನಾಮಂಗಲ್ಯಂ ಜುಗುಪ್ಸ್ಯಂ ವಾ ನಾಮ ಕುರ್ಯಾತ್ಸಮಾಕ್ಷರಂ ॥ ೧೦ ॥

ನಾತಿದೀರ್ಘಂ ನಾತಿಹ್ರಸ್ವಂ ನಾತಿಗುರ್ವಕ್ಷರಾನ್ವಿತಂ ।
ಸುಖೋಚ್ಚಾರ್ಯಂ ತು ತನ್ನಾಮ ಕುರ್ಯಾದ್ಯತ್ಪ್ರವಣಾಕ್ಷರಂ ॥ ೧೧ ॥

ತತೋಽನಂತರಸಂಸ್ಕಾರಸಂಸ್ಕೃತೋ ಗುರುವೇಶ್ಮನಿ ।
ಯಥೋಕ್ತವಿಧಿಮಾಶ್ರಿತ್ಯ ಕುರ್ಯಾದ್ವಿದ್ಯಾಪರಿಗ್ರಹಂ ॥ ೧೨ ॥

---

೮-೧೧. ಮಗನು ಹುಟ್ಟಿದ ಮೇಲೆ ಹತ್ತನೆಯ ದಿನದಲ್ಲಿ ತಂದೆಯೇ ನಾಮಕರಣವನ್ನು ಮಾಡಬೇಕು. ಪುರುಷ ಶಿಶುವಿಗೆ ತನ್ನ ಕುಲದೇವತೆಯ ಹೆಸರನ್ನು ಕ್ರಮವಾಗಿ ವರ್ಣಾನುಸಾರವಾದ ಶರ್ಮ, ಮರ್ಮ, ಗುಪ್ತ, ದಾಸ ಎಂಬ ಪದಗಳೊಡನೆ ಕೂಡಿಸಿ ಹೆಸರನ್ನಿಡಬೇಕು. ಬ್ರಾಹ್ಮಣನಿಗೆ ಶರ್ಮಶಬ್ದವೂ, ಕ್ಷತ್ರಿಯನಿಗೆ ಮರ್ಮಶಬ್ದವೂ, ವೈಶ್ಯನಿಗೆ ಗುಪ್ತಶಬ್ದವೂ, ಶೂದ್ರನಿಗೆ ದಾಸಶಬ್ದವೂ ಪ್ರಶಸ್ತವಾದುದಾಗಿರುವುದು. ಅರ್ಥವಿಲ್ಲದ ದೇಶಭಾಷೆಯಲ್ಲಿ ಹಾಸ್ಯಾಸ್ಪದವಾದ ಅಪಶಬ್ದವೂ, ಅಮಂಗಳವೂ, ಅಸಹ್ಯವೂ ಆದ ಹೆಸರನ್ನು ಇಡತಕೂಡದು. ಹೆಸರಿನ ಅಕ್ಷರಗಳು ಸಮಸಂಖ್ಯೆಯದಾಗಿ ವಿಶೇಷವಾಗಿ ದೀರ್ಘವೂ (ಉದ್ದ) ಹ್ರಸ್ವ (ತುಂಡು) ವೂ ಅಲ್ಲದೆ ಸುಲಭವಾಗಿ ಉಚ್ಚರಿಸುವುದಕ್ಕೆ ಆಗತಕ್ಕುದಾಗಿರಬೇಕು. ಹೆಸರಿನ ಕೊನೆಯ ಅಕ್ಷರವು ಲಘುವಾಗಿರಬೇಕು.

೧೨-೧೩. ಆಮೇಲೆ ಕ್ರಮವಾಗಿ ಮಗನಿಗೆ ನಿಷ್ಕ್ರಮಣ ಅನ್ನಪ್ರಾಶನ ಚೌಲ ಉಪನಯನ ಸಂಸ್ಕಾರಗಳನ್ನು ಮಾಡಿ ಗುರುಗಳ ಮನೆಯಲ್ಲಿ ವಿಧಿಗನುಸಾರವಾಗಿ

ಗೃಹೀತವಿದ್ಯೋ ಗುರವೇ ದತ್ವಾ ಚ ಗುರುದಕ್ಷಿಣಾಂ ।
ಗಾರ್ಹಸ್ಥ್ಯಮಿಚ್ಛನ್ ಭೂಪಾಲ ಕುರ್ಯಾದ್ದಾರಪರಿಗ್ರಹಂ ॥ ೧೩ ॥

ಬ್ರಹ್ಮಚರ್ಯೇಣ ವಾ ಕಾಲಂ ಕುರ್ಯಾತ್ಸಂಕಲ್ಪಪೂರ್ವಕಂ ।
ಗುರೋಶ್ಶುಶ್ರೂಷಣಂ ಕುರ್ಯಾತ್ತತ್ಪುತ್ರಾದೇರಥಾಪಿ ವಾ ॥ ೧೪ ॥

ವೈಖಾನಸೋ ವಾಪಿ ಭವೇತ್ಪರಿವ್ರಾಡಥವೇಚ್ಛಯಾ ।
ಪೂರ್ವಂ ಸಂಕಲ್ಪಿತಂ ಯಾದೃಕ್ ತಾದೃಕ್ಕುರ್ಯಾನ್ಮಹೀಪತೇ ॥ ೧೫ ॥

ವರ್ಷೈರೇಕಗುಣಾಂ ಭಾರ್ಯಾಮುದ್ವಹೇತ್ತ್ರಿಗುಣಸ್ಸ್ವಯಂ ।
ನಾತಿಕೇಶಾಮಕೇಶಾಂ ವಾ ನಾತಿ ಕೃಷ್ಣಾಂ ನ ಪಿಂಗಳಾಂ ॥ ೧೬ ॥

---

ವಿದ್ಯಾಭ್ಯಾಸವನ್ನು ಮಾಡಿಸಬೇಕು. ವಿದ್ಯೆಯನ್ನು ಕಲಿತಮೇಲೆ ಗುರುವಿಗೆ ದಕ್ಷಿಣೆಯನ್ನು ಕೊಟ್ಟು ಗೃಹಸ್ಥಾಶ್ರಮವನ್ನಪೇಕ್ಷಿಸಿ ವಿವಾಹವನ್ನು ಮಾಡಿಕೊಳ್ಳಬೇಕು. ವಿವಾಹಾಪೇಕ್ಷೆಯಿಲ್ಲದಿದ್ದರೆ ಬ್ರಹ್ಮಚರ್ಯಾಶ್ರಮದಲ್ಲೇ ಇದ್ದು ಗುರುಗಳ ಮತ್ತು ಗುರುಪುತ್ರರ ಸೇವೆಯನ್ನು ಮಾಡಿಕೊಂಡು ಕಾಲವನ್ನು ಕಳೆಯಬಹುದು. ಅಥವಾ ಇಚ್ಛೆಯಿದ್ದರೆ ವಾನಪ್ರಸ್ಥಾಶ್ರಮವನ್ನಾಗಲೀ, ಸನ್ಯಾಸಾಶ್ರಮವನ್ನಾಗಲಿ ಗ್ರಹಿಸಬಹುದು. ಹಿಂದೆಯೇ ತಾನು ಜೀವಿಸಿರುವವರೆಗೂ ಯಾವ ಆಶ್ರಮದಲ್ಲಿರಬೇಕೆಂದು ಸಂಕಲ್ಪಮಾಡುವನೋ ಆ ಆಶ್ರಮದಲ್ಲಿರಬಹುದು.

೧೬. ವಿವಾಹ ಮಾಡಿಕೊಳ್ಳಬೇಕೆಂಬ ಇಷ್ಟವುಳ್ಳವನು ತನ್ನ ವಯಸ್ಸಿನ ಮೂರನೆಯ ಒಂದು ಭಾಗ ವಯಸ್ಸುಳ್ಳ ಕನ್ಯೆಯನ್ನು ವಿವಾಹ ಮಾಡಿಕೊಳ್ಳಬೇಕು. ಕನ್ಯೆಯ ಅವಯವಗಳಲ್ಲಿ ವಿಶೇಷವಾಗಿ ಕೂದಲುಗಳಿರಬಾರದು. ಕೂದಲುಗಳಿಲ್ಲದೆಯೂ ಇರಬಾರದು. ಬಣ್ಣವು ವಿಶೇಷ ಕಪ್ಪಾಗಿರಬಾರದು. ವಿಶೇಷ ಕೆಂಪಾಗಿಯೂ ಇರಬಾರದು.

ನಿಸರ್ಗತೋಽಧಿಕಾಂಗಾಂ ವಾ ನ್ಯೂನಾಂಗಾಂ ವಾಪಿ ನೋದ್ವಹೇತ್ ।
ನಾವಿಶುದ್ಧಾಂ ಸರೋಮಾಂ ವಾ ಕುಲಜಾಂ ವಾತಿರೋಗಿಣೀಂ ॥ ೧೭ ॥

ನ ದುಷ್ಟಾಂ ದುಷ್ಟವಾಕ್ಯಾಂ ವಾ ವ್ಯಂಗಿನೀಂ ಪಿತೃಮಾತೃತಃ ।
ನ ಶ್ಮಶ್ರುವ್ಯಂಜನವತೀಂ ನ ಚೈವ ಪುರುಷಾಕೃತಿಂ ॥ ೧೮ ॥

ನ ಘುರ್ಘುರಸ್ವರಾಂ ಕ್ಷಾಮಾಂ ತಥಾ ಕಾಕಸ್ವರಾಂ ನ ಚ ।
ನಾ ನಿಬಂಧೇಕ್ಷಣಾಂ ತದ್ವದ್ವೃತ್ತಾಕ್ಷೀಂ ನೋದ್ವಹೇದ್ಬುಧಃ ॥ ೧೯ ॥

ಯಸ್ಯಾಶ್ಚ ರೋಮಶೇ ಜಂಘೇ ಗುಲ್ಫೌ ಯಸ್ಯಾಸ್ತಥೋನ್ನತೌ ।
ಗಂಡಯೋಃ ಕೂಬರೌ ಯಸ್ಯಾ ಹಸಂತ್ಯಾಸ್ತಾಂ ಚ ನೋದ್ವಹೇತ್ ॥೨೦॥

ನಾತಿರೂಕ್ಷಚ್ಛವಿಂ ಪಾಂಡುಕರಜಾಮರುಣೇಕ್ಷಣಾಂ ।
ಆಪೀನಹಸ್ತಪಾದಾಂ ಚ ನ ಕನ್ಯಾಮುದ್ವಹೇದ್ಬುಧಃ ॥ ೨೧ ॥

---

೧೭-೧೯. ಸ್ವಾಭಾವಿಕವಾಗಿ ಆರು ಬೆರಳು ಮುಂತಾದ ಅಧಿಕಾಂಗದ ಕನ್ಯೆಯನ್ನೂ, ಅಂಗಹೀನವಾದ ಕನ್ಯೆಯನ್ನೂ ಶೂದ್ರಾದಿಗಳು ಕಾಪಾಡಿದುದರಿಂದ ಶುದ್ಧಳಲ್ಲದವಳನ್ನೂ ಮೈಯಲ್ಲಿ ವಿಶೇಷವಾಗಿ ರೋಮಗಳುಳ್ಳವಳನ್ನೂ, ದುಷ್ಟಕುಲದಲ್ಲಿ ಹುಟ್ಟಿದವಳನ್ನೂ, ರೋಗಗಳುಳ್ಳವಳನ್ನೂ, ದುಷ್ಟಳನ್ನೂ, ಕೆಟ್ಟ ಮಾತಾಡುವವಳನ್ನೂ, ತಾಯಿತಂದೆಗಳಿಂದ ಬಂದ ವಿಕಾರವಾದ ಚರ್ಮದೋಷವುಳ್ಳವಳನ್ನೂ, ಮೀಸೆಯು ಕೂದಲು ಮುಂತಾದ ಪುರುಷ ಚಿಹ್ನೆಯುಳ್ಳವಳನ್ನೂ, ಪುರುಷನ ಆಕಾರವಿರುವವಳನ್ನೂ, ವಿರುದ್ಧವಾದ ಕಂಠಧ್ವನಿಯುಳ್ಳವಳನ್ನೂ, ಕೃಶಳಾದವಳನ್ನೂ, ಕಾಗೆಯ ಧ್ವನಿಯುಳ್ಳವಳನ್ನೂ, ಕಣ್ಣಿನ ರೆಪ್ಪೆಯ ಕೂದಲಿಲ್ಲದವಳನ್ನೂ, ಗುಂಡಾದ ಕಣ್ಣುಗಳುಳ್ಳವಳನ್ನೂ ವಿವಾಹ ಮಾಡಿಕೊಳ್ಳಬಾರದು.

೨೦-೨೨. ಮೊಳಕಾಲುಗಳಲ್ಲಿ ವಿಶೇಷ ಕೂದಲುಗಳುಳ್ಳವಳು, ಎತ್ತರವಾದ ಕಾಲಿನ ಹರಡುಗಳಿರುವವಳು ಇಂಥವರನ್ನು ಮದುವೆಯಾಗಬಾರದು. ಕ್ರೂರವಾದ ವಿಶೇಷ ಕಾಂತಿಯುಳ್ಳವಳು, ಬೆಳ್ಳಗಿರುವ ಉಗುರುಗಳುಳ್ಳವಳು, ಕೆಂಗಣ್ಣಿನವಳು,

ನ ವಾಮನಾಂ ನಾತಿದೀರ್ಘಾಂ ನೋದ್ವಹೇತ್ಸಂಹತಭ್ರುವಂ ।
ನ ಚಾತಿಚ್ಛಿದ್ರದಶನಾಂ ನ ಕರಾಳಮುಖೀಂ ನರಃ ॥ ೨೨ ॥

ಪಂಚಮೀಂ ಮಾತೃಪಕ್ಷಾಚ್ಚ ಪಿತೃಪಕ್ಷಾಚ್ಚ ಸಪ್ತಮೀಂ ।
ಗೃಹಸ್ಥಶ್ಚೋದ್ವಹೇತ್ಕನ್ಯಾಂ ನ್ಯಾಯೇನ ವಿಧಿನಾ ನೃಪ ॥ ೨೩ ॥

ಬ್ರಾಹ್ಮೋ ದೈವಸ್ತಥೈವಾರ್ಷಃ ಪ್ರಾಜಾಪತ್ಯಸ್ತಥಾಸುರಃ ।
ಗಾಂಧರ್ವರಾಕ್ಷಸೌ ಚಾನ್ಯೌ ಪೈಶಾಚಶ್ಚಾಷ್ಟಮೋಽಧಮಃ ॥ ೨೪ ॥

---

ದಪ್ಪವಾದ ಕೈಕಾಲುಗಳುಳ್ಳವಳು, ಇಂಥವರನ್ನು ಮದುವೆಯಾಗಬಾರದು. ಹೆಚ್ಚು ಕುಳ್ಳಾಗಿರುವವಳು ಅಥವಾ ಹೆಚ್ಚು ಎತ್ತರವಾಗಿರುವವಳು, ಕೂಡಿದ ಹುಬ್ಬುಗಳುಳ್ಳವಳು ಹಲ್ಲುಗಳಲ್ಲಿ ವಿಶೇಷ ರಂಧ್ರಗಳಿರುವವಳು, ಕ್ರೂರವಾದ ಮುಖವುಳ್ಳವಳು ಇಂಥವರನ್ನು ಮದುವೆಯಾಗಬಾರದು.

೨೩–೨೪. ತಾಯಿಯ ವಂಶದಲ್ಲಿ ತಾಯಿಯ ಪ್ರಪಿತಾಮಹನಾದ ಕೂಟಸ್ಥ ಪುರುಷನಿಂದ ಐದನೆಯ ತಲೆಯವಳನ್ನೂ ತಂದೆಯ ಪ್ರಪಿತಾಮಹನಾದ ಕೂಟಸ್ಥನಿಂದ ಏಳನೆಯ ತಲೆಯವಳನ್ನೂ ವಿವಾಹವಿಧಿಗನುಸಾರವಾಗಿ ಗೃಹಸ್ಥನಾಗತಕ್ಕವನು ವಿವಾಹಮಾಡಿಕೊಳ್ಳಬಹುದು. ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ, ಅಸುರ, ಗಾಂಧರ್ವ, ರಾಕ್ಷಸ, ಪೈಶಾಚ ಎಂದು ಎಂಟು ವಿಧವಾದ ವಿವಾಹವಿಧಿಗಳಿರುವುವು. ಈ ವಿಧಿಗಳಲ್ಲಿ ಯಾವ ವರ್ಣದವರಿಗೆ ಯಾವ ವಿಧಿಯು ಶ್ರೇಷ್ಠವೆಂದು ಶಾಸ್ತ್ರದಲ್ಲಿ ಹೇಳಿದೆಯೋ ಆ ವರ್ಣದವರು ಆ ವಿಧಿಯಲ್ಲಿಯೇ ವಿವಾಹಮಾಡಿಕೊಳ್ಳಬೇಕು. ಮಿಕ್ಕ ವಿಧಿಗಳನ್ನು ಬಿಡಬೇಕು. (೧. ವರನನ್ನು ಕರೆದು ತನ್ನ ಶಕ್ತಿಗನುಸಾರವಾಗಿ ಕನ್ಯೆಗೆ ಅಲಂಕಾರವನ್ನು ಮಾಡಿ ದಾನಮಾಡುವುದು ಬ್ರಾಹ್ಮವಿವಾಹವು. ೨. ಯಜ್ಞ ಕರ್ಮದಲ್ಲಿ ದಕ್ಷಿಣೆಯನ್ನು ಕೊಡುವಾಗ ಕನ್ಯೆಯನ್ನು ಶಕ್ತಿಗನುಸಾರವಾಗಿ ಅಲಂಕರಿಸಿ ಋತ್ವಿಜನಾದ ಬ್ರಾಹ್ಮಣನಿಗೆ ದಕ್ಷಿಣಾರೂಪವಾದ ಕನ್ಯೆಯನ್ನು ಕೊಡುವುದು ದೈವ ವಿವಾಹವು. ೩. ಯಾವಜ್ಜೀವವೂ ಸಹ ಧರ್ಮವನ್ನು ಆಚರಿಸಬೇಕೆಂದು ಹೇಳಿ ಕನ್ಯಾದಾನವನ್ನು ಮಾಡುವುದು ಪ್ರಾಜಾಪತ್ಯ ವಿವಾಹವು. ಈ ಬಗೆಯ ವಿವಾಹ

ಅತೇಷಾಂ ಯಸ್ಯ ಯೋ ಧರ್ಮೋ ವರ್ಣಸ್ಯೋಕ್ತೋ ಮಹರ್ಷಿಭಿಃ ।
ಕುರ್ವೀತ ದಾರಗ್ರಹಣಂ ತೇನಾನ್ಯಂ ಪರಿವರ್ಜಯೇತ್ ॥ ೨೫ ॥

ಸಧರ್ಮಚಾರಿಣೀಂ ಪ್ರಾಪ್ಯ ಗಾರ್ಹಸ್ಥ್ಯಂ ಸಹಿತಸ್ತಯಾ ।
ಸಮುದ್ವಹೇದ್ದದಾತ್ಯೇತತ್ಸಮ್ಯಗೂಢಂ ಮಹತ್ಫಲಂ ॥ ೨೬ ॥

ಇತಿ ಶ್ರೀ ವಿಷ್ಣುಪುರಾಣೇ ತೃತೀಯಾಂಶೇ ದಶಮೋಽಧ್ಯಾಯಃ

---

ಮಾಡಿಕೊಂಡವನು ಬೇರೆ ಆಶ್ರಮವನ್ನು ಗ್ರಹಿಸಲಾಗದು. ಮತ್ತೊಬ್ಬ ಸ್ತ್ರೀಯನ್ನು ವಿವಾಹಮಾಡಿಕೊಳ್ಳಲಾಗದು. ೪. ಗೋವನ್ನೋ, ಎತ್ತನ್ನೋ ಕನ್ಯಾದಾನಮಾಡು ವವನಿಗೆ ಕೊಟ್ಟು ಕನ್ಯೆಯನ್ನು ಪರಿಗ್ರಹಿಸುವುದು ಆರ್ಷವಿವಾಹವು. ೫. ಕನ್ಯಾವರರು ಮೊದಲೇ ಗೋಪ್ಯವಾಗಿ ತಾವು ದಂಪತಿಗಳಾಗಬೇಕೆಂದು ನಿಶ್ಚಯಿಸಿಕೊಂಡು ಆಮೇಲೆ ಬಂಧುಜನರ ಅನುಮತಿಯಿಂದ ವಿವಾಹಮಾಡಿಕೊಳ್ಳುವುದು ಗಾಂಧರ್ವ ವಿವಾಹವು. ೬. ಕನ್ಯಾಪಿತೃವಿಗೆ ಅವನು ಕೇಳಿದಷ್ಟು ಧನವನ್ನು ಕೊಟ್ಟು ಸಂತೋಷಪಡಿಸಿ ಕನ್ಯೆಯನ್ನು ವಿವಾಹಮಾಡಿಕೊಳ್ಳುವುದು ಅಸುರವಿವಾಹವು. ೭. ಕನ್ಯಾರಕ್ಷಕರು ನಿದೆ ಮಾಡುತ್ತಿರುವಾಗ ಕನ್ಯೆಯನ್ನಪಹರಿಸಿಕೊಂಡು ಹೋಗಿ ವಿವಾಹ ಮಾಡಿಕೊಳುವುದು ಪೈಶಾಚವಿವಾಹವು. ೮. ಸಹಾಯಕರೊಡನೆ ಬಂದು ಕನ್ಯೆಯ ರಕ್ಷಕರಾಗಿ ಬಂದವರನ್ನು ಹೊಡೆದು ಕೊಂದು ತಂದೆ ತಾಯಿಗಳೂ ಕನ್ಯೆಯೂ ಅಳುತ್ತಿರುವಾಗ ಕನ್ಯೆಯನ್ನು ಅಪಹರಿಸಿಕೊಂಡು ಹೋಗಿ ವಿವಾಹ ಮಾಡಿಕೊಳ್ಳುವುದು ರಾಕ್ಷಸ ವಿವಾಹವು.)

೨೬. ಧರ್ಮಾಚರಣೆಗಾಗಿ ವಿವಾಹಮಾಡಿಕೊಂಡ ಪತ್ನಿಯೊಡನೆ ಗೃಹಸ್ಥಾಶ್ರಮಧರ್ಮವನ್ನಾಚರಿಸುವ ಮನುಷ್ಯನಿಗೆ ಸ್ವರ್ಗಾದಿ ಉತ್ತಮಲೋಕಗಳಲ್ಲಿ ಮಹಾಫಲಪ್ರಾಪ್ತವಾಗುವುವು.

ಎಂಬಲ್ಲಿಗೆ ಶ್ರೀ ವಿಷ್ಣುಪುರಾಣದ ತೃತೀಯಾಂಶದಲ್ಲಿ

ಹತ್ತನೆಯ ಅಧ್ಯಾಯವು ಮುಗಿದುದು.

ಶ್ರೀಃ

# ಶ್ರೀ ವಿಷ್ಣುಪುರಾಣೇ ತೃತೀಯಾಂಶೇ

## ಏಕಾದಶೋಽಧ್ಯಾಯಃ

॥ ಸಗರಃ ॥

ಗೃಹಸ್ಥಸ್ಯ ಸದಾಚಾರಂ ಶ್ರೋತುಮಿಚ್ಛಾಮ್ಯಹಂ ಮುನೇ ।
ಲೋಕಾದಸ್ಮಾತ್ಪರಸ್ಮಾಚ್ಚ ಯಮಾತಿಷ್ಠನ್ನ ಹೀಯತೇ ॥ ೧ ॥

॥ ಔರ್ವಃ ॥

ಶ್ರೂಯತಾಂ ಪೃಥಿವೀಪಾಲ ಸದಾಚಾರಸ್ಯ ಲಕ್ಷಣಂ ।
ಸದಾಚಾರವತಾ ಪುಂಸಾ ಜಿತೌ ಲೋಕಾವುಭಾವಪಿ ॥ ೨ ॥

ಸಾಧವಃ ಕ್ಷೀಣದೋಷಾಸ್ತು ಸಚ್ಛಬ್ದಃ ಸಾಧುವಾಚಕಃ ।
ತೇಷಾಮಾಚರಣಂ ಯತ್ತು ಸದಾಚಾರಸ್ಸ ಉಚ್ಯತೇ ॥ ೩ ॥

---

### ಹನ್ನೊಂದನೆಯ ಅಧ್ಯಾಯವು.

೧. ಸಗರನು 'ಔರ್ವಮುನಿಯೇ! ಗೃಹಸ್ಥಾಶ್ರಮಧರ್ಮವನ್ನಾಚರಿಸುವವನಿಗೆ ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ಹೀನತೆಯಿಲ್ಲವಾದುದರಿಂದ ಗೃಹಸ್ಥನ ಸದಾಚಾರವನ್ನು ಕೇಳಬೇಕೆಂದು ಅಪೇಕ್ಷಿಸುವೆನು ಅದನ್ನು ವಿಸ್ತಾರವಾಗಿ ಹೇಳಬೇಕು' ಎಂದನು.

೨–೪. ಔರ್ವನು ಹೇಳುವನು :—ರಾಜನೇ! ಸದಾಚಾರದ ಲಕ್ಷಣವನ್ನು ಹೇಳುವೆನು ಕೇಳು. ಸದಾಚಾರವುಳ್ಳ ಪುರುಷನು ಇಹಲೋಕ, ಪರಲೋಕಗಳೆರಡನ್ನೂ ಜಯಿಸುವನು. ದೋಷವಿಲ್ಲದವರನ್ನು ಸಾಧುಗಳೆಂದು ಹೇಳುವರು.

ಸಪ್ತರ್ಷಯೋಽಥ ಮನವಃ ಪ್ರಜಾನಾಂಪತಯಸ್ತಥಾ ।
ಸದಾಚಾರಸ್ಯ ವಕ್ತಾರಃ ಕರ್ತಾರಶ್ಚ ಮಹೀಪತೇ ॥ ೪ ॥

ಬ್ರಾಹ್ಮೇ ಮುಹೂರ್ತ ಉತ್ಥಾಯ ಮನಸಾ ಮತಿಮಾನ್ನೃಪ ।
ವಿಬುಧಶ್ಚಿಂತಯೇದ್ಧರ್ಮಮರ್ಥಂ ಚಾಸ್ಯ ವಿರೋಧಿನಂ ॥ ೫ ॥

ಅಪೀಡಯಾ ತಯೋಃ ಕಾಮಮುಭಯೋರಪಿ ಚಿಂತಯೇತ್ ।
ದೃಷ್ಟಾದೃಷ್ಟಾವಿನಾಶಾಯ ತ್ರಿವರ್ಗಸಮದರ್ಶನಃ ॥ ೬ ॥

ಪರಿತ್ಯಜೇದರ್ಥಕಾಮೌ ಧರ್ಮಪೀಡಾಕರೌ ನೃಪ ।
ಧರ್ಮಮಪ್ಯ ಸುಖೋದರ್ಕಂ ಲೋಕವಿದ್ವಿಷ್ಟಮೇವ ಚ ॥ ೭ ॥

---

ಸತ್ ಎಂಬ ಶಬ್ದವು ಸಾಧು ಎಂಬ ಅರ್ಥವನ್ನು ಹೇಳುವುದು. ಸಾಧುಗಳ ನಡತೆಯೇ ಸದಾಚಾರವೆನಿಸುವುದು. ಸಪ್ತರ್ಷಿಗಳೂ, ಮನುಗಳೂ, ಪ್ರಜಾಪತಿಗಳೂ ಸದಾಚಾರಗಳನ್ನು ಹೇಳಿರುವರು. ಮತ್ತು ಅವನ್ನು ಆಚರಿಸಿರುವರು.

೫-೭. ಗೃಹಸ್ಥನಾದವನು ಬ್ರಾಹ್ಮಮುಹೂರ್ತವೆಂದರೆ ಸೂರ್ಯೋದಯಕ್ಕೆ ಹಿಂದೆ ಮೂರನೆಯ ಮುಹೂರ್ತದಲ್ಲಿ ನಿದ್ರೆಯಿಂದ ಎದ್ದು ದಿನ ಮಾಡಬೇಕಾಗಿರುವ ಧರ್ಮಕಾರ್ಯಗಳನ್ನೂ, ಅರ್ಥಸಂಪಾದನೆಯ ಕ್ರಮವನ್ನೂ ಒಂದಕ್ಕೊಂದು ವಿರೋಧವಿಲ್ಲದಂತೆ ಹೇಗೆ ಮಾಡಬೇಕೆಂಬುದನ್ನು ತನ್ನ ಮನಸ್ಸಿನಲ್ಲಿಯೇ ಯೋಚಿಸಬೇಕು. ಧರ್ಮಾರ್ಥಗಳಿಗೆ ತೊಂದರೆಯುಂಟಾಗದಂತೆ ಇಷ್ಟಾರ್ಥವನ್ನು ಪಡೆಯುವ ಮಾರ್ಗವನ್ನೂ ಯೋಚಿಸಬೇಕು. ದೃಷ್ಟಫಲವೂ ಅದೃಷ್ಟವಾದ ಸ್ವರ್ಗಾದಿಫಲಗಳೂ ನಾಶವಾಗದಿರುವುದಕ್ಕಾಗಿ ಧರ್ಮಾರ್ಥಕಾಮಗಳೆಂಬ ಮೂರು ವರ್ಗಗಳೂ ಸಮಾನವಾದುವುಗಳೆಂದು ಭಾವಿಸಬೇಕು. ರಾಜನೇ! ಧರ್ಮಕ್ಕೆ ಹಾನಿಯನ್ನುಂಟು ಮಾಡುವ ಅರ್ಥಕಾಮಗಳನ್ನು ಬಿಡಬೇಕು. ಜನರು ದ್ವೇಷಿಸುವ ಮತ್ತು ಮುಂದೆ ಸುಖವನ್ನುಂಟುಮಾಡದ ಧರ್ಮವನ್ನೂ ತ್ಯಾಗಮಾಡಬೇಕು.

ತತಃ ಕಾಲ್ಯಂ ಸಮುತ್ಥಾಯ ಕುರ್ಯಾನ್ಮೂತ್ರಂ ನರೇಶ್ವರ ॥ ೮ ॥

ನೈಋತ್ಯಾಮಿಷುವಿಕ್ಷೇಪಮತೀತ್ಯಾಭ್ಯಧಿಕಂ ಭುವಃ ।
ದೂರಾದಾವಸಥಾನ್ಮೂತ್ರಂ ಪುರೀಷಂ ಚ ವಿಸರ್ಜಯೇತ್ ॥ ೯ ॥

ಪಾದಾವಸೇಚನೋಚ್ಛಿಷ್ಟೇ ಪ್ರಕ್ಷಿಪೇನ್ನ ಗೃಹಾಂಗಣೇ ॥ ೧೦ ॥

ಆತ್ಮಚ್ಛಾಯಾಂ ತರುಚ್ಛಾಯಾಂ ಗೋಸೂರ್ಯಾಗ್ನ್ಯನಿಲಾಂಸ್ತಥಾ ।
ಗುರುದ್ವಿಜಾತೀಂಶ್ಚ ಬುಧೋ ನ ಮೇಹೇತ ಕದಾಚನ ॥ ೧೧ ॥

ನ ಕೃಷ್ಟೇ ಸಸ್ಯಮಧ್ಯೇ ವಾ ಗೋವ್ರಜೇ ಜನಸಂಸದಿ ।
ನ ವರ್ತ್ಮನಿ [illegible] ನದ್ಯಾದಿತೀರ್ಥೇಷು ಪುರುಷರ್ಷಭ ॥ ೧೨ ॥

ನಾಪ್ಸು ನೈವಾಂಭಸಸ್ತೀರೇ ನ ಶ್ಮಶಾನೇ ಸಮಾಚರೇತ್ ।
ಉತ್ಸರ್ಗಂ ವೈ ಪುರೀಷಸ್ಯ ಮೂತ್ರಸ್ಯ ಚ ವಿಸರ್ಜನಂ ॥ ೧೩ ॥

ಉದಙ್ಮುಖೋ ದಿವಾ ಮೂತ್ರಂ ವಿಪರೀತಮುಖೋ ನಿಶಿ ।
ಕುರ್ವೀತಾನಾಪದಿ ಪ್ರಾಜ್ಞೋ ಮೂತ್ರೋತ್ಸರ್ಗಂ ಚ ಪಾರ್ಥಿವ ॥ ೧೪ ॥

---

೮-೧೦. ಆಮೇಲೆ ಪ್ರಾತಃಕಾಲದಲ್ಲಿ ಎದ್ದು ತನ್ನ ವಾಸದ ಮನೆಯ ನೈರುತ್ಯ ದಿಕ್ಕಿನಲ್ಲಿ ದೂರವಾಗಿ ಹೋಗಿ ಮಲಮೂತ್ರ ವಿಸರ್ಜನೆಗಳನ್ನು ಮಾಡಬೇಕು. ಮನೆಯ ಅಂಗಳದಲ್ಲಿ ಉಗುಳಬಾರದು. ಕಾಲನ್ನು ತೊಳೆದುಕೊಳ್ಳಬಾರದು.

೧೧-೧೪. ತನ್ನ ನೆರಳು ಮರದ ನೆರಳು ಗೋವು ಸೂರ್ಯ ಅಗ್ನಿ ಗಾಳಿ ಗುರುಗಳು ಬ್ರಾಹ್ಮಣರು ಇವರನ್ನು ತನ್ನೆದುರಿಗೆ ಇಟ್ಟುಕೊಂಡು ಮಲಮೂತ್ರ ವಿಸರ್ಜನೆಯನ್ನು ಮಾಡಬಾರದು. ಹಾಗೆಯೇ ಉತ್ತಭೂಮಿ, ಸಸ್ಯಗಳು ಬೆಳೆದಿರುವ ಭೂಮಿ, ಗೋವುಗಳನ್ನು ಕಟ್ಟುವ ಸ್ಥಳ, ಜನರ ಗುಂಪಿರುವ ಸ್ಥಳ, ದಾರಿ, ನದಿ ಮುಂತಾದ ತೀರ್ಥಪ್ರದೇಶಗಳು, ನೀರು ಮತ್ತು ನೀರಿನ ದಡ, ಶ್ಮಶಾನ ಇವುಗಳಲ್ಲಿ ಮಲ ಮೂತ್ರ ವಿಸರ್ಜನೆಯನ್ನು ಮಾಡಬಾರದು. ಹಗಲಿನಲ್ಲಿಯೂ, ಸಂಧ್ಯಾಕಾಲ ದಲ್ಲಿಯೂ ಉತ್ತರಾಭಿಮುಖವಾಗಿಯೂ, ರಾತ್ರಿಯಲ್ಲಿ ದಕ್ಷಿಣಾಭಿಮುಖವಾಗಿಯೂ,

ತೃಣೈರಾಸ್ತೀರ್ಯ ವಸುಧಾಂ ವಸ್ತ್ರಪ್ರಾವೃತಮಸ್ತಕಃ ।
ತಿಷ್ಠೇನ್ನಾತಿ ಚಿರಂ ತತ್ರ ನೈವ ಕಿಂಚಿದುದೀರಯೇತ್ ॥ ೧೫ ॥

ವಲ್ಮೀಕಮೂಷಿಕೋತ್ಖಾತಾಂ ಮೃದಂ ನಾಂತರ್ಜಲಾತ್ತಥಾ ।
ಶೌಚಾವಶಿಷ್ಟಾಂ ಗೇಹಾಚ್ಚ ನಾದದ್ಯಾಲ್ಲೇಪಸಂಭವಾಂ ॥ ೧೬ ॥

ಅಣ್ವಪ್ರಾಣ್ಯುಪಪನ್ನಾಂ ಚ ಹಲೋತ್ಖಾತಾಂ ಚ ಪಾರ್ಥಿವ ।
ಪರಿತ್ಯಜೇನ್ಮೃದಶ್ಚೈತಾಸ್ಸಕಲಾಶ್ಶೌಚಸಾಧನೇ ॥ ೧೭ ॥

ಏಕಾ ಲಿಂಗೇ ಗುದೇ ತಿಸ್ರಃ ದಶವಾಮಕರೇ ನೃಪ ।
ಹಸ್ತದ್ವಯೇ ಸಪ್ತ ಚಾನ್ಯಾ ಮೃದಶ್ಶೌಚೋಪಪಾದಿತಾಃ ॥ ೧೮ ॥

ಅಚ್ಛೇನಾಗಂಧಫೇನೇನ ಜಲೇನಾಬುದ್ಬುದೇನ ಚ ।
ಆಚಾಮೇಚ್ಚ ಮೃದಂ ಭೂಯಸ್ತದಾ ದದ್ಯಾತ್ಸಮಾಹಿತಃ ॥ ೧೯ ॥

---

ಕುಳಿತು ಮೂತ್ರ ವಿಸರ್ಜನೆಯನ್ನು ಮಾಡಬೇಕು. ಭೂಮಿಯ ಮೇಲೆ ಹುಲ್ಲನ್ನು ಹಾಸಿ ತಲೆಗೆ ಬಟ್ಟೆಯನ್ನು ಸುತ್ತಿಕೊಂಡು ಅಲ್ಲಿ ಮಲವಿಸರ್ಜನೆಯನ್ನು ಮಾಡಿ ಹೆಚ್ಚು ಹೊತ್ತು ಅಲ್ಲಿರದೆ ಮೌನವಾಗಿ ಶುಚಿಮಾಡಿಕೊಳ್ಳಬೇಕು.

೧೬–೨೦. ಶೌಚಕ್ಕಾಗಿ ಹುತ್ತದ ಮಣ್ಣು, ಇಲಿಯ ಬಿಲದ ಮಣ್ಣು, ನೀರಿನಲ್ಲಿರುವ ಮಣ್ಣು, ಶೌಚಕ್ಕಾಗಿ ಉಪಯೋಗಿಸಿ ಮಿಕ್ಕ ಮಣ್ಣು, ಮೂತ್ರಾದಿಗಳ ಸಂಬಂಧವುಳ್ಳ ಮಣ್ಣು, ಸಣ್ಣ ಪ್ರಾಣಿಗಳಿರುವ ಮಣ್ಣು, ನೇಗಿಲಿನಿಂದ ಉತ್ತಮಣ್ಣು, ಇವುಗಳನ್ನು ಉಪಯೋಗಿಸಬಾರದು. ಈ ಮಣ್ಣನ್ನು ಬಿಟ್ಟು ಬೇರೆ ಮಣ್ಣನ್ನು ಉಪಯೋಗಿಸಬೇಕು. ಲಿಂಗದಲ್ಲಿ ಒಂದು, ಗುದದಲ್ಲಿ ಮೂರು, ಎಡಗೈಯಲ್ಲಿ ಹತ್ತು, ಎರಡು ಕೈಗಳಲ್ಲಿ ಏಳು ಮೃತ್ತಿಕಾ ಶೌಚವನ್ನು ಮಾಡಿಕೊಂಡು ವಾಸನೆಯೂ ನೊರೆಯೂ, ಗುಳ್ಳೆಗಳೂ ಇಲ್ಲದ ಶುದ್ಧವಾದ ನೀರಿನಿಂದ ತೊಳೆದುಕೊಂಡು ಪುನಃ

ಸಿಕ್ತ್ವಾದಿತಾಂಘ್ರಿಶೌಚಸ್ತು ಪಾದಾವಭ್ಯುಕ್ಷ್ಯ ವೈ ಪುನಃ ।
ತ್ರಿಃ ಪಿಬೇತ್ಸಲಿಲಂ ತೇನ ತಥಾ ದ್ವಿಃ ಪರಿಮಾರ್ಜಯೇತ್ ॥ ೨೦ ॥

ಶೀರ್ಷಣ್ಯಾನಿ ತತಃ ಖಾನಿ ಮೂರ್ಧಾನಂ ಚ ಸಮಾಲಭೇತ್ ।
ಬಾಹೂ ನಾಭಿಂ ಚ ತೋಯೇನ ಹೃದಯಂ ಚಾಪಿ ಸಂಸ್ಪೃಶೇತ್ ॥ ೨೧ ॥

ಸ್ವಾಚಾಂತಶ್ಚ ತತಃ ಕುರ್ಯಾತ್ಪುಮಾನ್ಕೇಶಪ್ರಸಾಧನಂ ।
ಆದರ್ಶಾಂಜನಮಾಂಗಲ್ಯದೂರ್ವಾದ್ಯಾಲಂಬನಾನಿ ಚ ॥ ೨೨ ॥

ತತಸ್ಸ್ವವರ್ಣಧರ್ಮೇಣ ವೃತ್ತ್ಯರ್ಥಂ ಚ ಧನಾರ್ಜನಂ ।
ಕುರ್ವೀತ ಶ್ರುತಿಸಂಪನ್ನೋ ಯಜೇಚ್ಚ ಪೃಥಿವೀಪತೇ ॥ ೨೩ ॥

ಸೋಮಸಂಸ್ಥಾ ಹವಿಸ್ಸಂಸ್ಥಾಃ ಪಾಕಸಂಸ್ಥಾಶ್ಚ ಸಂಸ್ಥಿತಾಃ ।
ಧನೇ ಯತೋ ಮನುಷ್ಯಾಣಾಂ ಯತೇತಾತೋ ಧನಾರ್ಜನೇ ॥ ೨೪

---

ಮಣ್ಣಿನಿಂದ ಪಾದಶೌಚವನ್ನು ಮಾಡಿ ಕಾಲುಗಳನ್ನು ತೊಳೆದುಕೊಂಡು ಪುನಃ ಮೂರಾವೃತ್ತಿ ನೀರನ್ನು ಕುಡಿದು ಎರಡು ಬಾರಿ ಕೈಗಳನ್ನು ತೊಳೆದುಕೊಳ್ಳಬೇಕು.

೨೧–೨೪. ಆಮೇಲೆ ಆ ನೀರಿನಿಂದ ತಲೆಯಲ್ಲಿರುವ ಇಂದ್ರಿಯಗಳನ್ನೂ, ನೆತ್ತಿಯನ್ನೂ, ಎರಡು ತೋಳುಗಳು, ಹೊಕ್ಕುಳು, ಎದೆ ಇವುಗಳನ್ನು ಸ್ಪರ್ಶಮಾಡಬೇಕು. ಹೀಗೆ ಆಚಮನವನ್ನು ಮಾಡಿದ ಮೇಲೆ ಸ್ನಾನ ಸಂಧ್ಯಾದಿ ಕರ್ಮಗಳನ್ನು ಮಾಡಿ ಅಲಂಕಾರ ಮಾಡಿಕೊಂಡು ತನ್ನ ವರ್ಣಧರ್ಮವನ್ನು ಅನುಸರಿಸಿ ಜೀವನಾರ್ಥವಾದ ಧನಾರ್ಜನೆಯ ಕಾರ್ಯವನ್ನು ಮಾಡಬೇಕು. ಗೃಹಸ್ಥನು ಮಾಡಬೇಕಾದ ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಉಕ್ಥ್ಯ, ಷೋಡಶಿ, ವಾಜಪೇಯ, ಅತಿರಾತ್ರ, ಅಪ್ತೋರ್ಯಾಮ ಎಂಬ ಏಳು ಸೋಮ ಯಜ್ಞಗಳೂ, ಅಗ್ನ್ಯಾಧೇಯ, ಅಗ್ನಿಹೋತ್ರ, ದರ್ಶಪೂರ್ಣಮಾಸ, ಆಗ್ರಯಣ, ಚಾತುರ್ಮಾಸ, ನಿರೂಢ, ಪಶುಬಂಧ, ಸೌತ್ರಾಮಣಿ ಎಂಬ ಏಳು ಹವಿರ್ಯಜ್ಞಗಳೂ. ಔಪಾಸನ, ಅಷ್ಟಕಾಶ್ರಾದ್ಧ, ಪಾರ್ವಣಶ್ರಾದ್ಧ, ಶ್ರಾವಣಿ, ಅಗ್ರಹಾಯಣಿ, ಚೈತ್ರ, ಆಶ್ವಯುಜೀ ಎಂಬ ಏಳು ಪಾಕ ಯಜ್ಞಗಳೂ ಧನಸಾಧ್ಯಗಳಾದುದರಿಂದ ಮನುಷ್ಯರು ಧನಸಂಪಾದನೆಯ ಪ್ರಯತ್ನವನ್ನು ಮಾಡಬೇಕು.

ನದೀನದತಟಾಕೇಷು ದೇವಖಾತತಟೇಷು ।
ನಿತ್ಯಕ್ರಿಯಾರ್ಥಂ ಸ್ನಾಯೀತ ಗಿರಿಪ್ರಸ್ರವಣೇಷು ಚ ॥ ೨೫ ॥

ಕೂಪೇಷೂದ್ಧೃತತೋಯೇನ ಸ್ನಾನಂ ಕುರ್ವೀತ ವಾ ಭುವಿ ।
ಸ್ನಾಯೀತೋದ್ಧೃತತೋಯೇನ ಹ್ಯಥವಾ ಭುವ್ಯಸಂಭವೇ ॥ ೨೬ ॥

ಶುಚಿವಸ್ತ್ರಧರಸ್ನಾತೋ ದೇವರ್ಷಿಪಿತೃತರ್ಪಣಂ ।
ತೇಷಾಮೇವಾ ಹಿ ತೀರ್ಥೇನ ಕುರ್ವೀತ ಸುಸಮಾಹಿತಃ ॥ ೨೭ ॥

ತ್ರಿರಪಃ ಪ್ರೀಣನಾರ್ಥಾಯ ದೇವಾನಾಮುಪವರ್ಜಯೇತ್ ।
ತಥರ್ಷೀಣಾಂ ಯಥಾನ್ಯಾಯಂ ಸಕೃಚ್ಚಾಪಿ ಪ್ರಜಾಪತೇಃ ॥ ೨೮ ॥

ಪಿತೄಣಾಂ ಪ್ರೀಣನಾರ್ಥಾಯ ತ್ರಿರಪಃ ಪೃಥಿವೀಪತೇ ।
ಪಿತಾಮಹೇಭ್ಯಶ್ಚ ತಥಾ ಪ್ರೀಣಯೇತ್ಪ್ರಪಿತಾಮಹಾನ್ ॥ ೨೯ ॥

ಮಾತಾಮಹಾಯ ತತ್ಪಿತ್ರೇ ತತ್ಪಿತ್ರೇ ಚ ಸಮಾಹಿತಃ ।
ದದ್ಯಾತ್ಪೈತ್ರೇಣ ತೀರ್ಥೇನ ಕಾಮ್ಯಂ ಚಾನ್ಯಚ್ಛೃಣುಷ್ವ ಮೇ ॥ ೩೦ ॥

---

೨೫–೩೦. ಮಧ್ಯಾಹ್ನಕಾಲದಲ್ಲಿ ಗೃಹಸ್ಥನು ನದಿ, ಕೆರೆ, ಕೊಳ, ಸರೋವರ, ಬೆಟ್ಟದ ಜರಿ, ಮುಂತಾದುವುಗಳಲ್ಲಿ ಸ್ನಾನಮಾಡಬೇಕು. ಇವುಗಳಿಲ್ಲದಿದ್ದರೆ ಭಾವಿಯ ನೀರಿನಲ್ಲಾದರೂ ಪಾತ್ರೆಯಿಂದ ತುಂಬಿದ ನೀರಿನಲ್ಲಿ ಸ್ನಾನ ಮಾಡಬೇಕು. ಬಳಿಕ ಶುದ್ಧವಾದ ವಸ್ತ್ರವನ್ನುಟ್ಟು ದೇವ, ಋಷಿ, ಪಿತೃ ತೀರ್ಥಗಳಿಂದ ದೇವ, ಋಷಿ, ಪಿತೃ ತರ್ಪಣಗಳನ್ನು ಮಾಡಬೇಕು. ಭೂಃದೇವಾನ್ ತರ್ಪಯಾಮಿ. ಭುವಃದೇವಾನ್ ತರ್ಪಯಾಮಿ, ಸುವಃ ದೇವಾನ್ ತರ್ಪಯಾಮಿ ಎಂದು ಮೂರು ಭಾರಿಯೂ ಇದರಂತೆ ಭೂಃ ಋಷೀನ್ ತರ್ಪಯಾಮಿ ಇತ್ಯಾದಿಯಾಗಿ ಮೂರು ಬಾರಿಯೂ ದೇವ, ಋಷಿ ತರ್ಪಣವನ್ನು ಮಾಡಿ "ಪ್ರಜಾಪತಿಂ ತರ್ಪಯಾಮಿ" ಎಂದು ಒಂದು ಭಾರಿ ತರ್ಪಣವನ್ನು ಮಾಡಬೇಕು. ಪಿತೃ ಪಿತಾಮಹಪ್ರಪಿತಾಮಹರಿಗಾಗಿ ಮೂರು ಮೂರು ಬಾರಿ ತರ್ಪಣವನ್ನು ಮಾಡಬೇಕು. ಮಾತಾಮಹ ಮಾತುಃಪಿತಾಮಹ, ಮಾತುಃಪ್ರಪಿತಾಮಹರಿಗೂ ಪಿತೃತೀರ್ಥದಿಂದ ಮೂರು ಮೂರು ಭಾರಿ ನೀರಿನಿಂದ ತರ್ಪಣವನ್ನು ಮಾಡಬೇಕು.

ಮಾತ್ರೇ ಪ್ರಮಾತ್ರೇ ತನ್ಮಾತ್ರೇ ಗುರುಪತ್ನ್ಯೈ ತಥಾ ನೃಪ ।
ಗುರವೇ ಮಾತುಲಾದೀನಾಂ ಸ್ನಿಗ್ಧಮಿತ್ರಾಯ ಭೂಭುಜೇ ॥ ೩೧ ॥

ಇದಂ ಚಾಪಿ ಜಪೇದಂಬು ದದ್ಯಾದಾತ್ಮೇಚ್ಛಯಾ ನೃಪ ।
ಉಪಕಾರಾಯ ಭೂತಾನಾಂ ಕೃತದೇವಾದಿತರ್ಪಣಂ ॥ ೩೨ ॥

ದೇವಾಸುರಾಸ್ತಥಾ ಯಕ್ಷಾಃ ನಾಗಾ ಗಂಧರ್ವರಾಕ್ಷಸಾಃ ।
ಪಿಶಾಚಾ ಗುಹ್ಯಕಾಸ್ಸಿದ್ಧಾಃ ಕೂಶ್ಮಾಂಡಾಸ್ತರವಃ ಖಗಾಃ ॥ ೩೩ ॥

ಜಲೇಚರಾ ಭೂನಿಲಯಾ ವಾಯ್ವಾಧಾರಾಶ್ಚ ಜಂತವಃ ।
ತೃಪ್ತಿಮೇತೇ ನ ಯಾಂತ್ವಾಶು ಮದ್ದತ್ತೇನಾಂಬುನಾಖಿಲಾಃ ॥ ೩೪ ॥

ನರಕೇಷು ಸಮಸ್ತೇಷು ಯಾತನಾಸು ಚ ಯೇ ಸ್ಥಿತಾಃ ।
ತೇಷಾಮಾಪ್ಯಾಯನಾಯೈತದ್ದೀಯತೇ ಸಲಿಲಂ ಮಯಾ ॥ ೩೫ ॥

ಯೇ ಬಾಂಧವಾಬಾಂಧವಾ ಯೇ ಹ್ಯನ್ಯಜನ್ಮನಿ ಬಾಂಧವಾ ।
ತೇ ತೃಪ್ತಿಮಖಿಲಾ ಯಾಂತು ಯೇ ಚಾಸ್ಮತ್ತೋಽಂಬುಕಾಂಕ್ಷಿಣಃ ॥ ೩೬ ॥

---

೩೧–೩೬. ರಾಜನೇ! ತಾಯಿಗೂ, ಪಿತಾಮಹಿ, ಪ್ರಪಿತಾಮಹಿ, ಗುರುಪತ್ನಿ, ಗುರು, ಸೋದರಮಾವ, ಸ್ನೇಹಿತ, ರಾಜ, ಇವರಿಗೂ ನೀರಿನಿಂದ ತರ್ಪಣವನ್ನು ಮಾಡಬೇಕು. ಸಮಸ್ತ ಭೂತಗಳ ಉಪಕಾರಕ್ಕಾಗಿ ದೇವಾದಿಗಳಿಗೆ ತರ್ಪಣವನ್ನು ಮಾಡಬೇಕು. ದೇವತೆಗಳು, ಅಸುರರು, ಯಕ್ಷರು, ನಾಗರು, ಗಂಧರ್ವರು, ರಾಕ್ಷಸರು, ಪಿಶಾಚರು, ಗುಹ್ಯರು, ಸಿದ್ಧರು, ಕೂಷ್ಮಾಂಡಗ್ರಹಗಳು, ವೃಕ್ಷಗಳು, ಪಕ್ಷಿಗಳು ಜಲಚರ, ಭೂಚರ ಪ್ರಾಣಿಗಳು, ಗಾಳಿಯಲ್ಲಿರುವ ಪ್ರಾಣಿಗಳು ಇವುಗಳೆಲ್ಲವೂ ನಾನು ಕೊಟ್ಟ ನೀರಿನ ತರ್ಪಣದಿಂದ ತೃಪ್ತಿಹೊಂದಲಿ ಎಂದೂ ನರಕಗಳಲ್ಲಿ ಯಾತನೆಯನ್ನನುಭವಿಸುವ ಸಮಸ್ತ ಪ್ರಾಣಿಗಳೂ, ಬಂಧುಗಳೂ, ಬಂಧುಗಳಲ್ಲದವರೂ, ಜನ್ಮಾಂತರಗಳಲ್ಲಿ ಬಂಧುಗಳಾಗಿದ್ದವರೂ ಅವರೆಲ್ಲರೂ ತೃಪ್ತಿ ಹೊಂದಲೆಂದೂ ತರ್ಪಣವನ್ನು ಮಾಡಬೇಕು.

ಯತ್ರ ಕ್ವಚನಸಂಸ್ಥಾನಾಂ ಕ್ಷುತ್ತೃಷ್ಣೋಪಹತಾತ್ಮನಾಂ ।
ಇದಮಾಪ್ಯಾಯನಂ ಯಾತು ಮಯಾ ದತ್ತಂ ತಿಲೋದಕಂ　　॥ ೩೭ ॥

ಕಾಮ್ಯೋದಕಪ್ರದಾನಂ ತೇ ಮಯೈತತ್ಕಥಿತಂ ನೃಪ ।
ಯದ್ದತ್ವಾ ಪ್ರೀಣಯತ್ಯೇತನ್ಮನುಷ್ಯಸ್ಸಕಲಂ ಜಗತ್ ॥
ಜಗದಾಪ್ಯಾಯನೋದ್ಭೂತಂ ಪುಣ್ಯಮಾಪ್ನೋತಿ ಚಾನಘ　　॥ ೩೮ ॥

ದತ್ವಾ ಕಾಮ್ಯೋದಕಂ ಸಮ್ಯಕ್ ಏತೇಭ್ಯಃ ಶ್ರದ್ಧಯಾ ದ್ವಿಜಃ ।
ಆಚಮ್ಯ ಚ ತತೋ ದದ್ಯಾತ್ಸೂರ್ಯಾಯ ಸಲಿಲಾಂಜಲಿಂ　　॥ ೩೯ ॥

ನಮೋ ವಿವಸ್ವತೇ ಬ್ರಹ್ಮ ಭಾಸ್ವತೇ ವಿಷ್ಣುತೇಜಸೇ ।
ಜಗತ್ಸವಿತ್ರೇ ಶುಚಯೇ ಸವಿತ್ರೇ ಕರ್ಮದಾಯಿನೇ　　॥ ೪೦ ॥

---

೩೭–೩೮. ಹಸಿವು ಬಾಯಾರಿಕೆಗಳಿಂದ ಕೂಡಿದ ಜೀವರು ಪ್ರಪಂಚದಲ್ಲಿ ಯಾವ ಸ್ಥಳದಲ್ಲಿದ್ದರೂ ನಾನು ಕೊಟ್ಟ ತಿಲೋದಕವು ಅವರಿಗೆ ತೃಪ್ತಿಯಾಗಲೆಂದು ಕಾಮ್ಯವಾದ ಉದಕದಾನ ರೂಪವಾದ ತರ್ಪಣವನ್ನು ಮಾಡಿದ ಮನುಷ್ಯನು ಸಕಲ ಜಗತ್ತನ್ನೂ ತೃಪ್ತಿಪಡಿಸಿದವನಾಗುವನು. ಇದರಿಂದ ಬಂದ ಪುಣ್ಯ ಫಲವನ್ನು ಅವನು ಅನುಭವಿಸುವನು.

೩೯–೪೦. ಬ್ರಾಹ್ಮಣನು ಈ ರೀತಿಯಲ್ಲಿ ಕಾಮ್ಯವಾದ ಉದಕ ತರ್ಪಣವನ್ನು ಮಾಡಿ ಆಚಮನ ಮಾಡಿದಮೇಲೆ ವೇದದಿಂದ ಪ್ರಕಾಶಮಾನನಾದವನೂ, ವಿಷ್ಣುವಿನ ತೇಜೋರೂಪನೂ, ಜಗತ್ತನ್ನು ಸೃಷ್ಟಿಸಿದವನೂ, ಶುದ್ಧ ಸ್ವರೂಪನೂ, ಸಮಸ್ತ ಭೂತಗಳೂ ಕರ್ಮ ಮಾಡುವಂತೆ ಪ್ರೇರಿಸತಕ್ಕವನೂ ಆದ ಸವಿತೃ ದೇವತಾ ರೂಪನಾದ ಸೂರ್ಯನಿಗೆ ನಮಸ್ಕಾರ ಮಾಡುವೆನು, ಎಂದು ಹೇಳಿ ಸೂರ್ಯನಿಗೆ ಅರ್ಘ್ಯವನ್ನು ಕೊಡಬೇಕು.

ತತೋ ಗೃಹಾರ್ಚನಂ ಕುರ್ಯಾದಭೀಷ್ಟಸುರಪೂಜನಂ ।
ಜಲಾಭಿಷೇಕೈಃ ಪುಷ್ಪೈಶ್ಚ ಧೂಪಾದ್ಯೈಶ್ಚ ನಿವೇದನೈಃ ॥ ೪೧ ॥

ಅಪೂರ್ವಮಗ್ನಿಹೋತ್ರಂ [redacted] ಕುರ್ಯಾತ್ಪ್ರಾಗ್ಬ್ರಹ್ಮಣೇ ನೃಪ ॥ ೪೨ ॥

ಪ್ರಜಾಪತಿಂ ಸಮುದ್ದಿಶ್ಯ ದದ್ಯಾದಾಹುತಿಮಾದರಾತ್ ।
ಗೃಹೇಭ್ಯಃ ಕಾಶ್ಯಪಾಯಾಥ ತತೋಽನುಮತಯೇ ಕ್ರಮಾತ್ ॥ ೪೩ ॥

ತಚ್ಛೇಷಂ ಮಣಿಕೇ ಪೃಥ್ವೀಪರ್ಜನ್ಯಾಭ್ಯಾಂ ಕ್ಷಿಪೇತ್ತತಃ ।
ದ್ವಾರೇ ಧಾತುರ್ವಿಧಾತುಶ್ಚ ಮಧ್ಯೇ ಚ ಬ್ರಹ್ಮಣಃ ಕ್ಷಿಪೇತ್ ॥ ೪೪ ॥

ಗೃಹಸ್ಯ ಪುರುಷವ್ಯಾಘ್ರ ದಿಗ್ದೇವಾನಪಿ ಮೇ ಶೃಣು ॥ ೪೫ ॥

ಇಂದ್ರಾಯ ಧರ್ಮರಾಜಾಯ ವರುಣಾಯ ತಥೇಂದವೇ ।
ಪ್ರಾಚ್ಯಾದಿಷು ಬುಧೋ ದದ್ಯಾದ್ಧುತಶೇಷಾತ್ಮಕಂ ಬಲಿಂ ॥ ೪೬ ॥

---

೪೧–೪೩. ಆ ಮೇಲೆ ಮನೆಯಲ್ಲಿ ಇಷ್ಟದೇವತೆಯನ್ನು ಅಭಿಷೇಕ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯಗಳಿಂದ ಪೂಜಿಸಿ ಅಸಮಾನವಾದ ವೈಶ್ವದೇವವೆಂಬ ದರ್ವೀಹೋಮವನ್ನು ಬ್ರಹ್ಮಾದಿ ಪಂಚ ದೇವತೆಗಳನ್ನುದ್ದೇಶಿಸಿ ಮಾಡಬೇಕು. ಬ್ರಹ್ಮಣೇ, ಪ್ರಜಾಪತಯೇ, ಗೃಹೇಭ್ಯಃ, ಇಂದ್ರಾ, ಅನುಮತಯೇ ಎಂದು ಐದು ಚತುರ್ಥ್ಯಂತ ನಾಮಗಳ ಮುಂದೆ ಸ್ವಾಹಾಕಾರವನ್ನು ಪ್ರಯೋಗಿಸಿ ಹೋಮವನ್ನು ಮಾಡಬೇಕು.

೪೪–೫೦. ಬಳಿಕ ಮಿಕ್ಕ ಅನ್ನದಿಂದ ಬಲಿಹರಣವೆಂಬ ಭೂತಯಜ್ಞವನ್ನು ಅದೇ ಬಳಿಯಲ್ಲಿಯೇ ಮಂಡಲವನ್ನು ರಚಿಸಿ ಪೃಥಿವ್ಯೈ, ಪರ್ಜನ್ಯಾಯ ಎಂದು ಬಲಿಯನ್ನು ಹಾಕಿ ದ್ವಾರದೇಶದಲ್ಲಿ ಧಾತ್ರೇ, ವಿಧಾತ್ರೇ ಎಂದೂ, ನಡುವೆ ಬ್ರಹ್ಮಣೇ ಎಂದೂ ಆ ಮಂಡಲದ ನಾಲ್ಕು ದಿಕ್ಕುಗಳಲ್ಲಿ ಇಂದ್ರಾಯ, ಧರ್ಮರಾಜಾಯ, ವರು

ಪ್ರಾಗುತ್ತರೇ ಚ ದಿಗ್ಭಾಗೇ ಧನ್ವಂತರಿಬಲಿಂ ಬುಧಃ ।
ನಿರ್ವಪೇದ್ವೈಶ್ವದೇವಂ ಚ ಕರ್ಮ ಕುರ್ಯಾದತಃ ಪರಂ ॥ ೪೭ ॥

ವಾಯವ್ಯಾಂ ವಾಯವೇ ದಿಕ್ಷು ಸಮಸ್ತಾಸು ತಥಾನಿಶಂ ।
ಬ್ರಹ್ಮಣೇ ಚಾಂತರಿಕ್ಷಾಯ ಭಾನವೇ ಚ ಕ್ಷಿಪೇದ್ಬಲಿಂ ॥ ೪೮ ॥

ವಿಶ್ವೇದೇವಾನ್ ವಿಶ್ವಭೂತಾಂಸ್ತಥಾ ವಿಶ್ವಪತಿಂ ಪಿತೄನ್ ।
ಯಕ್ಷಾಣಾಂ ಚ ಸಮುದ್ದಿಶ್ಯ ಬಲಿಂ ದದ್ಯಾನ್ನರೇಶ್ವರ ॥ ೪೯ ॥

ತತೋಽನ್ಯದನ್ನಮಾದಾಯ ಭೂಮಿಭಾಗೇ ಶುಚೌ ಬುಧಃ ।
ದದ್ಯಾದಶೇಷಭೂತೇಭ್ಯಸ್ಸ್ವೇಚ್ಛಯಾ ತತ್ಸಮಾಹಿತಃ ॥ ೫೦ ॥

ದೇವಾ ಮನುಷ್ಯಾಃ ಪಶವೋ ವಯಾಂಸಿ
ಸಿದ್ಧಾಶ್ಚ ಯಕ್ಷೋರಗದೈತ್ಯಸಂಘಾಃ ।
ಪ್ರೇತಾಃ ಪಿಶಾಚಾಸ್ತರವಸ್ಸಮಸ್ತಾ
ಯೇ ಚಾನ್ನಮಿಚ್ಛಂತಿ ಮಯಾತ್ರ ದತ್ತಂ ॥ ೫೧ ॥

---

ಣಾಯ, ಸೋಮಾಯ ಎಂದೂ ಈಶಾನ್ಯದಲ್ಲಿ ಧನ್ವಂತರಯೇ ಎಂದೂ ವಾಯವ್ಯದಲ್ಲಿ ವಾಯವೇ ಎಂದೂ ಬಲಿಹರಣವನ್ನು ಮಾಡಿದಮೇಲೆ ಬ್ರಹ್ಮಣೇ, ಅಂತರಿಕ್ಷಾಯ, ಸೂರ್ಯಾಯ, ವಿಶ್ವೇಭ್ಯೋದೇವೇಭ್ಯಃ ವಿಷ್ಣವೇ ವಿಶ್ವಭ್ಯಃ, ಯಕ್ಷೇಭ್ಯಃ, ಅಶೇಷ ಭೂತೇಭ್ಯಃ ಎಂದು ಚತುರ್ಥ್ಯಂತ ಶಬ್ದಗಳಿಗೆ ನಮಃ ಶಬ್ದವನ್ನು ಸೇರಿಸಿ ತಮ್ಮ ಗೃಹ್ಯಸೂತ್ರದಲ್ಲಿ ಹೇಳಿದಂತೆ ಬಲಿಹರಣವನ್ನು ಮಾಡಬೇಕು.

೫೧-೫೩. ದೇವತೆಗಳು, ಮನುಷ್ಯರು, ಪಶುಗಳು, ಪಕ್ಷಿಗಳು, ಸಿದ್ಧರು, ಯಕ್ಷರು, ಉರಗರು, ದೈತ್ಯರು, ಪ್ರೇತಪಿಶಾಚಗಳು, ಮರಗಳು, ಇರುವೆಗಳು, ಹುಳುಗಳು, ಚಿಟ್ಟೆಗಳು ಇವೇ ಮುಂತಾದ ಸಮಸ್ತ ಪ್ರಾಣಿಗಳೂ ಇವುಗಳಲ್ಲದೆ ಕರ್ಮಾ

ಪಿಪೀಲಿಕಾ ಕೀಟಪತಂಗಕಾದ್ಯಾ
ಬುಭುಕ್ಷಿತಾಃ ಕರ್ಮನಿಬಂಧಬದ್ಧಾಃ ।
ಪ್ರಯಾಂತು ತೇ ತೃಪ್ತಿಮಿದಂ ಮಯಾನ್ನಂ
ತೇಭ್ಯೋ ನಿಸೃಷ್ಟಂ ಸುಖಿನೋ ಭವಂತು ॥ ೫೨ ॥

ಯೇಷಾಂ ನ ಮಾತಾ ನ ಪಿತಾ ನ ಬಂಧು
ರ್ನೈವಾನ್ನಸಿದ್ಧಿರ್ನ ತಥಾನ್ಯದಸ್ತಿ ।
ತತ್ತೃಪ್ತಯೇಽನ್ನಂ ಭುವಿ ದತ್ತಮೇತತ್
ತೇ ಯಾಂತು ತೃಪ್ತಿಂ ಮುದಿತಾ ಭವಂತು ॥ ೫೩ ॥

ಭೂತಾನಿ ಸರ್ವಾಣಿ ತಥಾನ್ನಮೇತ
ದಹಂ [illegible] ವಿಷ್ಣುರ್ನ ಯತೋಽನ್ಯದಸ್ತಿ ।
ತಸ್ಮಾದಹಂ ಭೂತನಿಕಾಯಭೂತಮನ್ನಂ
ಪ್ರಯಚ್ಛಾಮಿ ಭವಾಯ ತೇಷಾಂ ॥ ೫೪ ॥

---

ಧೀನವಾಗಿ ಹಸಿವಿನಿಂದ ಕೂಡಿದ ಸಮಸ್ತ ಪ್ರಾಣಿಗಳೂ ನಾನು ಕೊಟ್ಟ ಈ ಬಲಿಹರಣ ರೂಪವಾದ ಅನ್ನದಿಂದ ತೃಪ್ತಿಪಟ್ಟು ಸುಖವನ್ನು ಹೊಂದಲಿ.

೫೩. ಯಾವ ಪ್ರಾಣಿಗಳಿಗೆ ತಾಯಿ ತಂದೆ ಬಂಧುಬಳಗಗಳಿಲ್ಲವೋ, ಇದ್ದರೂ ಅಡಿಗೆಯ ಸಾಧನಗಳಿಲ್ಲದೆ ಆಹಾರವು ದೊರೆಯದೋ ಅಂತಹ ಪ್ರಾಣಿಗಳೆಲ್ಲಾ ನಾನು ಈ ಭೂಮಿಯಲ್ಲಿ ಹಾಕಿದ ಬಲಿಹರಣದಿಂದ ತೃಪ್ತಿಯನ್ನು ಹೊಂದಿ ಸಂತೋಷ ಪಡಲಿ.

೫೪. ಸಮಸ್ತ ಭೂತಗಳೂ, ಅನ್ನವೂ, ನಾನೂ ವಿಷ್ಣುಸ್ವರೂಪರು. ವಿಷ್ಣು ಸ್ವರೂಪಕ್ಕಿಂತ ಬೇರೆಯಾದುದು ಪ್ರಪಂಚದಲ್ಲಾವುದೂ ಇರುವುದಿಲ್ಲ. ಆದುದರಿಂದ ನಾನು ಸಮಸ್ತ ಭೂತಗಳ ಸ್ಥಿತಿಗಾಗಿ ಭೂತಸ್ವರೂಪವಾದ ಅನ್ನವನ್ನೇ ದಾನ ಮಾಡುವೆನು.

ಚತುರ್ದಶೋ ಭೂತಗಣೋ ಯ ಏಷ
ಸ್ತತ್ರ ಸ್ಥಿತಾ ಯೇಽಖಿಲಭೂತಸಂಘಾಃ ।
ತೃಪ್ತ್ಯರ್ಥಮನ್ನಂ ಹಿ ಮಯಾ ನಿಸೃಷ್ಟಂ
ತೇಷಾಮಿದಂ ತೇ ಮುದಿತಾ ಭವಂತು ॥ ೫೫ ॥

ಇತ್ಯುಚ್ಚಾರ್ಯ ನರೋ ದದ್ಯಾದನ್ನಂ ಶ್ರದ್ಧಾಸಮನ್ವಿತಃ ।
ಭುವಿ ಭೂತೋಪಕಾರಾಯ ಗೃಹೀ ಸರ್ವಾಶ್ರಯೋ ಯತಃ ॥ ೫೬ ॥

ಶ್ವಚಂಡಾಲವಿಹಂಗಾನಾಂ ಭುವಿ ದದ್ಯಾತ್ತತೋ ನರಃ ।
ಯೇ ಚಾನ್ಯೇ ಪತಿತಾಃ ಕೇಚಿದಪುತ್ರಾ ಭುವಿ ಮಾನವಾಃ ॥ ೫೭ ॥

ತತೋ ಗೋದೋಹಮಾತ್ರಂ ವೈ ಕಾಲಂ ತಿಷ್ಠೇದ್ಗೃಹಾಂತರೇ ।
ಅತಿಥಿಗ್ರಹಣಾರ್ಥಾಯ ತದೂರ್ಧ್ವಂ ವಾ ಯಥೇಚ್ಛಯಾ ॥ ೫೮ ॥

---

೫೫. ಮೇಲೆ ಹೇಳಿದ ದೇವತೆಗಳೇ ಮೊದಲಾದ ಹದಿನಾಲ್ಕು ಗುಂಪಿನ ಭೂತಗಣಗಳು ಆ ಗುಂಪಿನಲ್ಲಿರುವ ಸಮಸ್ತ ಪ್ರಾಣಿಗಳು ಇವುಗಳ ತೃಪ್ತಿಗಾಗಿ ನಾನು ಈ ಬಲಿಹರಣದ ಅನ್ನವನ್ನು ಹಾಕಿರುವೆನು. ಇದರಿಂದ ಅವುಗಳೆಲ್ಲ ಸಂತೋಷವನ್ನು ಹೊಂದಲಿ.

೫೬-೫೭. ಹೀಗೆಂದು ಹೇಳಿ ಗೃಹಸ್ಥನು ಭೂತಗಳ ಉಪಕಾರಕ್ಕಾಗಿ ಪ್ರೀತಿಯಿಂದ ಭೂಮಿಯಮೇಲೆ ಅನ್ನವನ್ನು ಹಾಕಬೇಕು. ಗೃಹಸ್ಥನು ಸಮಸ್ತರಿಗೂ ಜೀವನಾಧಾರನಾಗಿರುವುದರಿಂದ ನಾಯಿ, ಚಾಂಡಾಲ, ಪಕ್ಷಿಗಳು, ಪತಿತರು, ಪುತ್ರಹೀನರು ಮುಂತಾದವರಿಗೆ ಭೂಮಿಯಮೇಲೆ ಅನ್ನವನ್ನು ಹಾಕಬೇಕು.

೫೮-೬೦. ಆಮೇಲೆ ಹಸುವಿನಲ್ಲಿ ಹಾಲನ್ನು ಕರೆಯುವಷ್ಟು ಹೊತ್ತಿನವರೆಗೆ ಅಂದರೆ ಕಾಲುಗಳಿಗೆ ಅಥವಾ ಅದರಮೇಲೆ ತನ್ನ ಇಷ್ಟಬಂದಷ್ಟು ಹೊತ್ತಿನವರೆಗೆ

ಅತಿಥಿಂ ತತ್ರ ಸಂಪ್ರಾಪ್ತಂ ಪೂಜಯೇತ್ಸ್ವಾಗತಾದಿನಾ ।
ತದಾಸನಪ್ರದಾನೇನ ಪಾದಪ್ರಕ್ಷಾಳನೇನ ಚ ॥ ೫೯ ॥

ಶ್ರದ್ಧಯಾ ಚಾನ್ನದಾನೇನ ಪ್ರಿಯಪ್ರಶ್ನೋತ್ತರೇಣ ಚ ।
ಗಚ್ಛತಶ್ಚಾನುಯಾನೇನ ಪ್ರೀತಿಮುತ್ಪಾದಯೇದ್ಗೃಹೀ ॥ ೬೦ ॥

ಅಜ್ಞಾತಕುಲನಾಮಾನಮನ್ಯತಸ್ಸಮುಪಾಗತಂ ।
ಪೂಜಯೇದತಿಥಿಂ ಸಮ್ಯಕ್ ನೈಕಗ್ರಾಮನಿವಾಸಿನಂ ॥ ೬೧ ॥

ಅಕಿಂಚನಮಸಂಬಂಧಮನ್ಯದೇಶಾದುಪಾಗತಂ ।
ಅಸಂಭೋಜ್ಯಾತಿಥಿಂ ಭುಂಜನ್ ಭೋಕ್ತುಕಾಮಂ ವ್ರಜತ್ಯಧಃ ॥ ೬೨ ॥

ಸ್ವಾಧ್ಯಾಯಗೋತ್ರಚರಣಮಪೃಷ್ಟ್ವಾ ಚ ತಥಾ ಕುಲಂ ।
ಹಿರಣ್ಯಗರ್ಭಬುದ್ಧ್ಯಾ ತಂ ಮನ್ಯೇತಾಭ್ಯಾಗತಂ ಗೃಹೀ ॥ ೬೩ ॥

---

ಅತಿಥಿಯನ್ನು ನಿರೀಕ್ಷಿಸುತ್ತಿದ್ದು ಆ ಕಾಲಕ್ಕೆ ಸರಿಯಾಗಿ ಬಂದ ಅತಿಥಿಯನ್ನು ಪಾದಪ್ರಕ್ಷಾಲನಾದಿ ಉಪಚಾರಗಳಿಂದ ಪೂಜಿಸಿ ಪೀಠದಮೇಲೆ ಕುಳ್ಳಿರಿಸಿ ಭೋಜನಮಾಡಿಸಿ ಪ್ರಿಯವಾದ ಮಾತುಗಳಿಂದ ಅವನನ್ನು ಸಂತೋಷಪಡಿಸಿ ಅವನು ಪ್ರಯಾಣಮಾಡುವಾಗ ಸ್ವಲ್ಪ ದೂರ ಅವನೊಡನೆ ಹೋಗಿ ಕಳುಹಿಸಿಕೊಡಬೇಕು. ಹೀಗೆ ಗೃಹಸ್ಥನು ಅತಿಥಿಗಳಿಗೆ ಸಂತೋಷವನ್ನುಂಟುಮಾಡಬೇಕು.

೬೧-೬೨. ಒಂದೇ ಊರಿನಲ್ಲಿ ವಾಸವಾಗಿರುವವನು ಅತಿಥಿಯಲ್ಲ. ಕುಲವೂ ಹೆಸರೂ ತಿಳಿಯದಿರುವ ಅನ್ಯದೇಶದಿಂದ ಬಂದವನೂ ನೆಂಟನಲ್ಲದವನೂ ಆದ ಅತಿಥಿಗೆ ಭೋಜನವನ್ನು ಮಾಡಿಸದೆ ತಾನು ಊಟಮಾಡುವ ಗೃಹಸ್ಥನು ನರಕಕ್ಕೆ ಹೋಗುವನು.

೬೩-೬೪. ಗೃಹಸ್ಥನು ವಿದ್ಯೆ, ಕುಲ, ಗೋತ್ರ, ಆಚಾರ ಮುಂತಾದುವುಗಳನ್ನು ವಿಚಾರಮಾಡದೆ ಅತಿಥಿಯನ್ನು ಬ್ರಹ್ಮನೆಂದು ತಿಳಿದು ಪೂಜಿಸಬೇಕು. ಪ್ರತಿ

ಪಿತ್ರರ್ಥಂ ಚಾಪರಂ ವಿಪ್ರಮೇಕಮಪ್ಯಾಶಯೇನ್ನೃಪ ।
ತದ್ದೇಶ್ಯಂ ವಿದಿತಾಚಾರಸಂಭೂತಿಂ ಪಾಂಚಯಜ್ಞಿಕಂ ॥ ೬೪ ॥

ಅನ್ನಾಗ್ರಂ ಚ ಸಮುದ್ಧೃತ್ಯ ಹಂತಕಾರೋಪಕಲ್ಪಿತಂ ।
ನಿರ್ವಾಪಭೂತಂ ಭೂಪಾಲ ಶ್ರೋತ್ರಿಯಾಯೋಪಪಾದಯೇತ್ ॥ ೬೫ ॥

ದದ್ಯಾಚ್ಚ ಭಿಕ್ಷಾತ್ರಿತಯಂ ಪರಿವ್ರಾಡ್ಬ್ರಹ್ಮಚಾರಿಣಾಂ ।
ಇಚ್ಛಯಾ ಚ ಬುಧೋ ದದ್ಯಾದ್ವಿಭವೇ ಸತ್ಯವಾರಿತಂ ॥ ೬೬ ॥

ಇತ್ಯೇತೇಽತಿಥಯಃ ಪ್ರೋಕ್ತಾಃ ಪ್ರಾಗುಕ್ತಾ ಭಿಕ್ಷವಶ್ಚ ಯೇ ।
ಚತುರಃ ಪೂಜಯನ್ನೇತಾನ್ನ ತು ಕೃಚ್ಛ್ರಾತ್ಪ್ರಮುಚ್ಯತೇ ॥ ೬೭ ॥

ಅತಿಥಿರ್ಯಸ್ಯ ಭಗ್ನಾಶೋ ಗೃಹಾತ್ಪ್ರತಿನಿವರ್ತತೇ ।
ಸ ತಸ್ಮೈ ದುಷ್ಕೃತಂ ದತ್ವಾ ಪುಣ್ಯಮಾದಾಯ ಗಚ್ಛತಿ ॥ ೬೮ ॥

---

ದಿನವೂ ಪಿತೃಗಳ ಪ್ರೀತ್ಯರ್ಥವಾಗಿ ಅದೇ ಸ್ಥಳದಲ್ಲಿ ವಾಸಮಾಡುವವನೂ ಸದಾಚಾರವಂತನೂ ಪಂಚ ಯಜ್ಞಗಳನ್ನು ಮಾಡತಕ್ಕವನೂ ಆದ ಒಬ್ಬ ಬ್ರಾಹ್ಮಣನನ್ನಾದರೂ ಭೋಜನಮಾಡಿಸಬೇಕು.

೬೫-೬೬. ಭೋಜನಾದಿಗಳನ್ನು ಮಾಡುವುದಕ್ಕಿಂತ ಮುಂಚಿತವಾಗಿಯೇ ಸ್ವಲ್ಪ ಭಾಗ ಅನ್ನವನ್ನು ಶ್ರೋತ್ರಿಯರಿಗೆ ಭಿಕ್ಷೆ ಅಗ್ರಹಂತಕಾರಕ್ಕಾಗಿ ತೆಗೆದಿಡಬೇಕು. (ಒಂದು ಗ್ರಾಸವೆಂದರೆ, ಒಂದು ತುತ್ತು ಅನ್ನಕ್ಕೆ ಭಿಕ್ಷೆಯೆಂದೂ ಇದರ ನಾಲ್ಕರಷ್ಟು ಅಗ್ರವೆಂದೂ ಅಗ್ರದ ನಾಲ್ಕರಷ್ಟಕ್ಕೆ ಹಂತಕಾರವೆಂದೂ ಹೆಸರಿರುವುದು) ಸನ್ಯಾಸಿಗೂ, ಬ್ರಹ್ಮಚಾರಿಗೂ ಮೂರು ಭಿಕ್ಷೆಯನ್ನು ಹಾಕಬೇಕು. ಐಶ್ವರ್ಯವಿದ್ದವನು ತನ್ನ ಇಷ್ಟಾನುಸಾರವಾಗಿ ಯಾವ ನಿರ್ಬಂಧವೂ ಇಲ್ಲದೆ ಅನ್ನದಾನವನ್ನು ಮಾಡಬೇಕು.

೬೭-೭೦. ಗೃಹಸ್ಥನು ಅತಿಥಿಗಳು, ಶ್ರೋತ್ರಿಯ, ಸನ್ಯಾಸಿ, ಬ್ರಹ್ಮಚಾರಿ ಈ ನಾಲ್ಕು ಬಗೆಯವರನ್ನು ಪೂಜಿಸಿ ಅನ್ನದಾನವನ್ನು ಮಾಡಿದರೆ ಅವನ ಕಷ್ಟಗಳು ಬಿಡುಗಡೆಯಾಗುವುವು. ಅತಿಥಿಯು ಗೃಹಸ್ಥನ ಮನೆಯಲ್ಲಿ ಅನ್ನವನ್ನು ಪಡೆಯದೆ

ಧಾತಾ ಪ್ರಜಾಪತಿಶ್ಶಕ್ರೋ ವಹ್ನಿರ್ವಸುಗಣೋಽರ್ಯಮಾ ।
ಪ್ರವಿಶ್ಯಾತಿಥಿಮೇತೇ ವೈ ಭುಂಜತೇಽನ್ನಂ ನರೇಶ್ವರ ॥ ೬೯ ॥

ತಸ್ಮಾದತಿಥಿಪೂಜಾಯಾಂ ಯತೇತ ಸತತಂ ನರಃ ।
ಸ ಕೇವಲಮಘಂ ಭುಂಕ್ತೇ ಯೋ ಭುಂಕ್ತೇ ಹ್ಯತಿಥಿಂ ವಿನಾ ॥ ೭೦ ॥

ತತಸ್ಸ್ವವಾಸಿನೀಂ ದುಃಖೀಂ ಗರ್ಭಿಣೀಂ ವೃದ್ಧಬಾಲಕಾನ್ ।
ಭೋಜಯೇತ್ಸಂಸ್ಕೃತಾನ್ನೇನ ಪ್ರಥಮಂ ಚರಮಂ ಗೃಹೀ ॥ ೭೧ ॥

ಅಭುಕ್ತವತ್ಸು ಚೈತೇಷು ಭುಂಜನ್ ಭುಂಕ್ತೇ ಸ ದುಷ್ಕೃತಂ ।
ಮೃತಶ್ಚ ಗತ್ವಾ ನರಕಂ ಶ್ಲೇಷ್ಮಭುಗ್ಜಾಯತೇ ನೃಪ ॥ ೭೨ ॥

---

ಹಿಂದಿರುಗಿ ಹೋದರೆ ಅವನು ತನ್ನ ಪಾಪವನ್ನು ಗೃಹಸ್ಥನಿಗೆ ಕೊಟ್ಟು ಅವನ ಪುಣ್ಯವನ್ನು ತೆಗೆದುಕೊಂಡು ಹೋಗುವನು. ರಾಜನೇ! ಪ್ರಜಾಪತಿ, ಇಂದ್ರ, ಅಗ್ನಿ, ವಸುಗಣಗಳು, ಸೂರ್ಯ ಇವರೆಲ್ಲರೂ ಅತಿಥಿಗಳನ್ನು ಪ್ರವೇಶಿಸಿ ಅನ್ನವನ್ನು ಭೋಜನಮಾಡುವರು. ಆದುದರಿಂದ ಮನುಷ್ಯನು ಯಾವಾಗಲೂ ಅತಿಥಿಸತ್ಕಾರದಲ್ಲಾಸಕ್ತನಾಗಬೇಕು. ಅತಿಥಿಯನ್ನು ಬಿಟ್ಟು ಊಟಮಾಡತಕ್ಕವನು ತನ್ನ ಪಾಪಫಲವನ್ನೇ ಉಣ್ಣುವನು.

೭೧-೭೨. ಗೃಹಸ್ಥನು ವಿವಾಹವಾದಮೇಲೆ ತನ್ನ ಮನೆಯಲ್ಲಿಯೇ ಇರುವ ಕನ್ಯೆಗೂ, ದುಃಖ ಮತ್ತು ಕಷ್ಟಗಳನ್ನನುಭವಿಸುವ ಸ್ತ್ರೀಗೂ, ಗರ್ಭಿಣಿಯುಂಗೂ ಮುದುಕರಿಗೂ, ಬಾಲಕರಿಗೂ ಮೊದಲು ಭೋಜನ ಮಾಡಿಸಿ ಕೊನೆಯಲ್ಲಿ ತಾನು ಭೋಜನಮಾಡಬೇಕು. ಇವರು ಭೋಜನಮಾಡುವುದಕ್ಕಿಂತ ಮುಂಚಿತವಾಗಿ ತಾನೇ ಭೋಜನವನ್ನು ಮಾಡಿದರೆ ಪಾಪಫಲವನ್ನನುಭವಿಸುವನು. ಮತ್ತು ಮರಣ ಹೊಂದಿದಮೇಲೆ ನರಕದಲ್ಲಿ ಶ್ಲೇಷ್ಮವನ್ನು ಭೋಜನಮಾಡಬೇಕು.

ಅಸ್ನಾತಾಶೀ ಮಲಂ ಭುಂಕ್ತೇ ಅಜಪಃ ಪೂಯಶೋಣಿತಂ ।
ಅಸಂಸ್ಕೃತಾನ್ನಭುಙ್ಮೂತ್ರಂ ಬಾಲಾದೇಃ ಪ್ರಥಮಂ ಶಕೃತ್ ॥ ೭೩ ॥

ಅಹೋಮೀ ಚ ಕ್ರಿಮೀನ್ ಭುಂಕ್ತೇ ಅದತ್ವಾ ವಿಷಮಶ್ನುತೇ ॥ ೭೪ ॥

ತಸ್ಮಾಚ್ಛೃಣುಷ್ವ ರಾಜೇಂದ್ರ ಯಥಾ ಭುಂಜೀತ ವೈ ಗೃಹೀ ।
ಭುಂಜತಶ್ಚ ಯಥಾ ಪುಂಸಃ ಪಾಪಬಂಧೋ ನ ಜಾಯತೇ ॥ ೭೫ ॥

ಇಹ ಚಾರೋಗ್ಯಮತುಲಂ ಬಲವೃದ್ಧಿಸ್ತಥಾ ನೃಪ ।
ಭವತ್ಯನಿಷ್ಟಶಾಂತಿಶ್ಚ ವೈರಿಪಕ್ಷಾಭಿಚಾರತಃ ॥ ೭೬ ॥

ಸ್ನಾತೋ ಯಥಾವತ್ಕೃತ್ವಾ ಚ ದೇವರ್ಷಿಪಿತೃತರ್ಪಣಂ ।
ಪ್ರಶಸ್ತರತ್ನಪಾಣಿಸ್ತು ಭುಂಜೀತ ಪ್ರಯತೋ ಗೃಹೀ ॥ ೭೭ ॥

---

೭೩–೭೪. ಸ್ನಾನಮಾಡದೆ ಭೋಜನಮಾಡಿದವನು ಮಲವನ್ನೂ, ಜಪ ಮಾಡದೆ ಭೋಜನಮಾಡಿದವನು ಕೀವು ರಕ್ತಗಳನ್ನೂ, ದೇವಪೂಜಾ ವೈಶ್ವದೇವಾದಿ ಸಂಸ್ಕಾರಗಳಿಲ್ಲದ ಅನ್ನವನ್ನು ಭೋಜನಮಾಡಿದವನು ಮೂತ್ರವನ್ನೂ, ಬಾಲಕರೇ ಮುಂತಾದವರಿಗಿಂತ ಮೊದಲು ಭೋಜನಮಾಡಿದವನು ಸಗಣಿಯನ್ನೂ, ಹೋಮ ಮಾಡದೆ ಭೋಜನಮಾಡಿದವನು ಕ್ರಿಮಿಯನ್ನೂ, ದಾನಮಾಡದೆ ಭೋಜನ ಮಾಡಿದವನು ವಿಷವನ್ನೂ ಭೋಜನ ಮಾಡಿದಂತೆ ಆಗುವುದು.

೭೫. ಆದುದರಿಂದ ರಾಜಶ್ರೇಷ್ಠನೇ! ಗೃಹಸ್ಥನು ಹೇಗೆ ಭೋಜನಮಾಡ ಬೇಕೆಂಬುದನ್ನೂ ಭೋಜನ ಮಾಡುತ್ತಿರುವ ಪುರುಷನಿಗೆ ಪಾಪಸಂಬಂಧವು ಉಂಟಾ ಗದ ರೀತಿಯನ್ನೂ ಹೇಳುವೆನು, ಕೇಳು.

೭೬-೭೭. ಈ ಭೋಜನ ನಿಯಮದಿಂದ ಗೃಹಸ್ಥನಿಗೆ ಅಸಮಾನವಾದ ಆರೋಗ್ಯವೂ, ಶರೀರದಲ್ಲಿ ಬಲದ ಅಭಿವೃದ್ಧಿಯೂ ಶತ್ರುಪಕ್ಷದವರ ಅಭಿಚಾರ ಕರ್ಮ ದಿಂದುಂಟಾದ ಅನಿಷ್ಟ ಶಾಂತಿಯೂ ಉಂಟಾಗುವುದು. ಗೃಹಸ್ಥನು ಸ್ನಾನಮಾಡಿ ವಿಧಿನುಗಸಾರವಾಗಿ ದೇವ ಋಷಿ ಪಿತೃ ತರ್ಪಣಗಳನ್ನು ಮಾಡಿ ಶ್ರೇಷ್ಠವಾದ ರತ್ನ ವನ್ನು ಕೈಯಲ್ಲಿ ಧರಿಸಿ ಭೋಜನವನ್ನು ಮಾಡಬೇಕು.

ಕೃತೇ ಜಪೇ ಹುತೇ ವಹ್ನೌ ಶುದ್ಧವಸ್ತ್ರಧರೋ ನೃಪ ।
ದತ್ವಾತಿಥಿಭ್ಯೋ ವಿಪ್ರೇಭ್ಯೋ ಗುರುಭ್ಯಸ್ಸಂಶ್ರಿತಾಯ ।

ಪುಣ್ಯಗಂಧಧರಶ್ಶಸ್ತಮಾಲ್ಯಧಾರೀ ನರೇಶ್ವರ ॥ ೭೮ ॥

ನೈಕವಸ್ತ್ರಧರೋ ನಾದ್ರ್ರಪಾಣಿಪಾದೋ ನರೇಶ್ವರ ।
ವಿಶುದ್ಧವದನಃ ಪ್ರೀತೋ ಭುಂಜೀತ ನ ವಿದಿಙ್ಮುಖಂ ॥ ೭೯ ॥

ಪ್ರಾಙ್ಮುಖೋದಙ್ಮುಖೋ ವಾಪಿ ನ ಚೈವಾನ್ಯಮನಾ ನರಃ ।
ಅನ್ನಂ ಪ್ರಶಸ್ತಂ ಪಥ್ಯಂ ಚ ಪ್ರೋಕ್ಷಿತಂ ಪ್ರೋಕ್ಷಣೋದಕೈಃ ॥ ೮೦ ॥

ನ ಕುತ್ಸಿತಾಹೃತಂ ನೈವ ಜುಗುಪ್ಸಾವದಸಂಸ್ಕೃತಂ ।
ದತ್ವಾ ತು ಭುಂಕ್ತೇ ಶಿಷ್ಯೇಭ್ಯಃ ಕ್ಷುಧಿತೇಭ್ಯಸ್ತಥಾ ಗೃಹೀ ॥ ೮೧ ॥

ಪ್ರಶಸ್ತಶುದ್ಧಪಾತ್ರೇಷು ಭುಂಜೀತಾಕುಪಿತೋ ನೃಪ ॥ ೮೨ ॥

---

೭೮-೮೨. ನಿತ್ಯಕರ್ಮ ಸಂಬಂಧವಾದ ಮಂತ್ರ ಜಪವನ್ನು ಮಾಡಿ ಅಗ್ನಿಯಲ್ಲಿ ಹೋಮವನ್ನು ಮಾಡಿ ಶುದ್ಧ ವಸ್ತ್ರವನ್ನು ಧರಿಸಿದವನಾಗಿ ಅತಿಥಿಗಳಿಗೂ, ಬ್ರಾಹ್ಮಣರಿಗೂ, ಗುರುಗಳಿಗೂ ತನ್ನನ್ನಾಶ್ರಯಿಸಿದವರಿಗೂ ಅನ್ನದಾನವನ್ನು ಮಾಡಿ ಸುಗಂಧವನ್ನೂ ಪುಷ್ಪಮಾಲೆಯನ್ನೂ ಧರಿಸಿದವನಾಗಿ ಒಂದೇ ವಸ್ತ್ರವನ್ನು ಧರಿಸದೆ ನೀರಿನಿಂದ ನೆನೆದ ಕೈಕಾಲುಗಳುಳ್ಳವನಾಗಿರದೆ, ವಿದಿಕ್ಕುಗಳಿಗಭಿಮುಖನಾಗಿರದೆ, ಪೂರ್ವ ಅಥವಾ ಉತ್ತರಾಭಿಮುಖವಾಗಿ ಶುದ್ಧವಾದ ಮುಖವುಳ್ಳವನಾಗಿ ಸಂತೋಷದಿಂದ ಮನಸ್ಸಿನಲ್ಲಿ ಮತ್ತೊಂದನ್ನು ಯೋಚಿಸದೆ ಹಿತವೂ ಪರಿಶುದ್ಧವೂ ಆದ ಅನ್ನವನ್ನು ಉದಕದಿಂದ ಪ್ರೋಕ್ಷಿಸಿ ಸಂಸ್ಕಾರವಿಲ್ಲದುದೂ, ಅಸಹ್ಯವಾದುದೂ, ನೀಚರು ಸ್ಪರ್ಶಮಾಡಿದುದೂ, ಆದ ಅನ್ನವನ್ನು ಬಿಟ್ಟು, ಯೋಗ್ಯರೂ, ಹಸಿದವರೂ ಆದ ಸಜ್ಜನರಿಗೆ ಅನ್ನದಾನವನ್ನು ಮಾಡಿ ಶ್ರೇಷ್ಠವೂ ಪರಿಶುದ್ಧವೂ ಆದ ಭೋಜನ ಪಾತ್ರೆಯಲ್ಲಿ ಕೋಪವನ್ನು ಮಾಡಿಕೊಳ್ಳದೆ ಭೋಜನವನ್ನು ಮಾಡಬೇಕು.

ನಾಸಂದಿಸಂಸ್ಥಿತೇ ಪಾತ್ರೇ ನಾದೇಶೇ ಚ ನರೇಶ್ವರ ।
ನಾಕಾಲೇ ನಾತಿಸಂಕೀರ್ಣೇ ದತ್ವಾಗ್ರಂ ಚ ನರೋಽಗ್ನಯೇ ॥ ೮೩ ॥

ಮಂತ್ರಾಭಿಮಂತ್ರಿತಂ ಶಸ್ತಂ ನ ಚ ಪರ್ಯುಷಿತಂ ನೃಪ ।
ಅನ್ಯತ್ರ ಫಲಮೂಲೇಭ್ಯಶ್ಶುಷ್ಕಶಾಖಾದಿಕಾಸ್ತಥಾ ॥ ೮೪ ॥

ತದ್ವದ್ಧಾರೀತಕೇಭ್ಯಶ್ಚ ಗುಡಭಕ್ಷ್ಯೇಭ್ಯ ಏವ ಚ ।
ಭುಂಜೀತೋದ್ಧೃತಸಾರಾಣಿ ನ ಕದಾಚಿನ್ನರೇಶ್ವರ ॥ ೮೫ ॥

ನ ಶೇಷಂ ಪುರುಷೋಽಶ್ನೀಯಾದನ್ಯತ್ರ ಜಗತೀಪತೇ ।
ಮಧ್ವಂಬುದಧಿಸರ್ಪಿಭ್ಯಸ್ಸಕ್ತುಭ್ಯಶ್ಚ ವಿವೇಕವಾನ್ ॥ ೮೬ ॥

ಅಶ್ನೀಯಾತ್ತನ್ಮಯೋ ಭೂತ್ವಾ ಪೂರ್ವಂ ತು ಮಧುರಂ ರಸಂ ।
ಲವಣಾಮ್ಲೌ ತಥಾ ಮಧ್ಯೇ ಕಟುತಿಕ್ತಾದಿಕಾಂಸ್ತತಃ ॥ ೮೭ ॥

---

೮೩-೮೬. ಮರದಿಂದ ಮಾಡಿದ ಮೂರು ಕಾಲಿನ ಮಣೆ ಮುಂತಾದುವುಗಳ ಮೇಲಿರುವ ಪಾತ್ರೆಯಲ್ಲಿಯೂ, ಅಯೋಗ್ಯ ಪ್ರದೇಶದಲ್ಲಿಯೂ, ಸಂಧ್ಯಾಕಾಲವೇ ಮುಂತಾದ ಅಕಾಲಗಳಲ್ಲಿಯೂ, ವಿಶೇಷವಾದ ಜನರಗುಂಪಿನಲ್ಲಿಯೂ ಭೋಜನ ಮಾಡಬಾರದು. ಅಗ್ನಿಗೆ ಸ್ವಲ್ಪ ಹೋಮವನ್ನು ಮಾಡಿ ಮಿಕ್ಕ ಅನ್ನವನ್ನು ಮಂತ್ರ ದಿಂದ ಅಭಿಮಂತ್ರಿಸಿ ಭೋಜನ ಮಾಡುವುದು ಪ್ರಶಸ್ತವಾದುದು. ಒಬ್ಬರಿಗೆ ಬಡಿಸಿ ಮಿಕ್ಕುದನ್ನು ಭೋಜನ ಮಾಡಬಾರದು. ಗೆಡ್ಡೆಗೆಣಸುಗಳು, ಹಣ್ಣುಗಳು, ಒಣಗಿದ ಕಾಯಿ ಪಲ್ಯಗಳು, ಅಪಕ್ವವಾದವಸ್ತುಗಳು, ಬೆಲ್ಲದಿಂದಮಾಡಿದ ಭಕ್ಷ್ಯಗಳು ಇವು ಗಳಿಗೆ ಈ ದೋಷವಿಲ್ಲ ಸಾರವಿಲ್ಲದ ಪದಾರ್ಥಗಳನ್ನೆಂದಿಗೂ ಭೋಜನಮಾಡಬಾರದು. ತಿಳಿವಳಿಕೆಯುಳ್ಳ ಮನುಷ್ಯನು ಜೇನುತುಪ್ಪ, ನೀರು, ಮೊಸರು, ತುಪ್ಪ, ಹಿಟ್ಟು ಇವು ಗಳನ್ನು ಬಿಟ್ಟು, ಮಿಕ್ಕ ಆಹಾರ ವಸ್ತುಗಳಲ್ಲಿ ಒಬ್ಬರು ಉಪಯೋಗಿಸಿ ಮಿಕ್ಕುದನ್ನು ಮತ್ತೊಬ್ಬರು ಉಪಯೋಗಿಸಬಾರದು.

೮೭-೯೧. ಊಟಮಾಡುವಾಗ ಅನ್ನದಲ್ಲಿಯೇ ಮನಸ್ಸುಳ್ಳವನಾಗಿ ಮೊದಲು ಸಿಹಿಯಾದುದನ್ನೂ, ಉಪ್ಪು, ಹುಳಿ ಇವುಗಳನ್ನು ನಡುವೆಯೂ ಕಾರ ಕಹಿ

ಪ್ರಾಗ್ದ್ರವಂ ಪುರುಷೋಽಶ್ನೀಯಾನ್ಮಧ್ಯೇ ಚ ಕಠಿನಾಶನಂ ।
ಅಂತೇ ಪುನರ್ದ್ರವಾಶೀ ತು ಬಲಾರೋಗ್ಯೇ ನ ಮುಂಚತಿ ॥ ೮೮ ॥

ಅನಿಂದ್ಯಂ ಭಕ್ಷಯೇನ್ನಿತ್ಯಂ ವಾಗ್ಯತೋಽನ್ನಮಕುತ್ಸಯನ್ ।
ಪಂಚಗ್ರಾಸಂ ಮಹಾಮೌನಂ ಪ್ರಾಣಾದ್ಯಾಪ್ಯಾಯನಾಯ ತತ್ ॥ ೮೯ ॥

ಭುಕ್ತ್ವಾ ಸಮ್ಯಗಥಾಚಮ್ಯ ಪ್ರಾಙ್ಮುಖೋದಙ್ಮುಖೋಽಪಿ ವಾ ।
ಯಥಾವತ್ಪುನರಾಚಾಮೇತ್ಪಾಣೀ ಪ್ರಕ್ಷಾಳ್ಯ ಮೂಲತಃ ॥ ೯೦ ॥

ಸ್ವಸ್ಥಃ ಪ್ರಶಾಂತಚಿತ್ತಸ್ತು ಕೃತಾಸನಪರಿಗ್ರಹಃ ।
ಅಭೀಷ್ಟದೇವತಾನಾಂ ತು ಕುರ್ವೀತ ಸ್ಮರಣಂ ನರಃ ॥ ೯೧ ॥

ಅಗ್ನಿರಾಪ್ಯಾಯಯೇದ್ಧಾತುಂ ಪಾರ್ಥಿವಂ ಪವನೇರಿತಃ ।
ದತ್ತಾವಕಾಶಂ ನಭಸಾ ಜರಯತ್ವಸ್ತು ಮೇ ಸುಖಂ ॥ ೯೨ ॥

ಅನ್ನಂ ಬಲಾಯ ಮೇ ಭೂಮೇರಪಾಮಗ್ನ್ಯನಿಲಸ್ಯ ಚ ।
ಭವತ್ವೇತತ್ಪರಿಣತಂ ಮಮಾಸ್ತ್ವವ್ಯಾಹತಂ ಸುಖಂ ॥ ೯೩ ॥

---

ಮುಂತಾದವನ್ನು ಮೇಲೆಯೂ ಭೋಜನಮಾಡಬೇಕು. ಮನುಷ್ಯನು ಮೊದಲು ದ್ರವಪದಾರ್ಥಗಳನ್ನೂ, ನಡುವೆ ಕಠಿನಪದಾರ್ಥಗಳನ್ನೂ ಕೊನೆಯಲ್ಲಿ ಮತ್ತೆ ದ್ರವಪದಾರ್ಥಗಳನ್ನೂ ಭೋಜನ ಮಾಡಿದರೆ ಬಲವೂ ಆರೋಗ್ಯವೂ ಉಂಟಾಗುವುದು. ಪ್ರತಿದಿನವೂ ಶುದ್ಧವಾದ ಅನ್ನವನ್ನು ದೂಷಿಸದೆ ಮೌನವಾಗಿ ಐದು ಗ್ರಾಸಗಳನ್ನು ಪ್ರಾಣಾದಿಗಳ ತೃಪ್ತಿಗೋಸ್ಕರವಾಗಿ ಭೋಜನಮಾಬೇಕು. ಹೊಟ್ಟೆ ತುಂಬುವಷ್ಟು ಭೋಜನಮಾಡಿದ ಮೇಲೆ ಕೈತೊಳೆದು ಕೊಂಡು ಪುನಃ ಆಚಮನವನ್ನು ಮಾಡಬೇಕು. ಬಳಿಕ ಶಾಂತಚಿತ್ತನಾಗಿ ಪೀಠದ ಮೇಲೆ ಕುಳಿತು ಇಷ್ಟದೇವತಾಧ್ಯಾನವನ್ನು ಮಾಡಬೇಕು.

೯೨-೯೮. ಗಾಳಿಯಿಂದ ಪ್ರೇರಿತನಾದ ಅಗ್ನಿಯು ಆಕಾಶದಲ್ಲಿರುವ ನಾನು ಊಟ ಮಾಡಿದ ಭೂಮಿಯ ಸಂಬಂಧವಾದ ಅನ್ನವನ್ನು ಜೀರ್ಣಮಾಡಿ ರಸರೂಪವಾದ ಆಹಾರವು ನನ್ನ ಶರೀರದ ಧಾತುಗಳಾಗಿ ಪರಿಣಮಿಸಿ ನನಗೆ ಸುಖವನ್ನುಂಟು

ಪ್ರಾಣಾಪಾನಸಮಾನಾನಾಮುದಾನವ್ಯಾನಯೋಃಸ್ತಥಾ ।
ಅನ್ನಂ ಪುಷ್ಟಿಕರಂ ಚಾಸ್ತು ಮಮಾಪ್ಯವ್ಯಾಹತಂ ಸುಖಂ ॥ ೮೪ ॥

ಅಗಸ್ತಿರಗ್ನಿರ್ಬಡಬಾನಲಶ್ಚ
ಭುಕ್ತಂ ಮಯಾನ್ನಂ ಜರಯಂತ್ವಶೇಷಂ ।
ಸುಖಂ ಚ ಮೇ ತತ್ಪರಿಣಾಮಜಾತಂ
ಯಚ್ಛನ್ತ್ವರೋಗಂ ಮಮ ಚಾಸ್ತು ದೇಹೇ ॥ ೮೫ ॥

ವಿಷ್ಣುಸ್ಸಮಸ್ತೇಂದ್ರಿಯದೇಹದೇಹೀ
ಪ್ರಧಾನಭೂತೋ ಭಗವಾನ್ಯಥೈಕಃ
ಸತ್ಯೇನ ತೇನಾತ್ತಮಶೇಷಮನ್ನಂ
ಆರೋಗ್ಯದಂ ಮೇ ಪರಿಣಾಮಮೇತು ॥ ೮೬ ॥

ವಿಷ್ಣುರತ್ತಾ ತಥೈವಾನ್ನಂ ಪರಿಣಾಮಶ್ಚ ವೈ ತಥಾ ।
ಸತ್ಯೇನ ತೇನ ಮೇ ಭುಕ್ತಂ ಜೀರ್ಯತ್ವನ್ನಮಿದಂ ತಥಾ ॥ ೮೭ ॥

---

ಮಾಡಲಿ. ಅನ್ನವು ಪ್ರಾಣಾಪಾನ ಸಮಾನ ಉದಾನ ವ್ಯಾನಗಳೆಂಬ ಪಂಚಪ್ರಾಣ ವಾಯುಗಳಿಗೆ ಬಲವನ್ನು ಕೊಟ್ಟು ನನಗೆ ಸುಖವನ್ನುಂಟುಮಾಡಲಿ. ಅಗಸ್ತ್ಯ ಮುನಿಯೂ ಬಡಬಾಗ್ನಿಯೂ ನಾನು ಊಟ ಮಾಡಿದ ಅನ್ನವನ್ನು ಸಂಪೂರ್ಣವಾಗಿ ಜೀರ್ಣಿಸುವಂತೆ ಮಾಡಿ ನನಗೆ ಸುಖವನ್ನುಂಟುಮಾಡುವುದರಿಂದ ನನ್ನ ದೇಹದಲ್ಲಿ ರೋಗವುಂಟಾಗದೆ ಇರಲಿ. ಸಮಸ್ತ ಇಂದ್ರಿಯಗಳಿಗೂ ಶರೀರಕ್ಕೂ ಸ್ವಾಮಿಯಾದ ವಿಷ್ಣುವು ಮಹಾಮಹಿಮನೂ ಅದ್ವಿತೀಯನಾದ ಪರಮಾತ್ಮನೂ ಎಂಬುದು ಸತ್ಯ ವಾದುದರಿಂದ ಅವನ ಅನುಗ್ರಹದಿಂದ ನಾನು ಊಟಮಾಡಿದ ಅನ್ನವು ಜೀರ್ಣವಾಗಿ ಆರೋಗ್ಯಕರವಾಗಿ ಪರಿಣಮಿಸಲಿ. ಭೋಜನ ಮಾಡುವವನೂ ವಿಷ್ಣುವು. ಅನ್ನವೂ ವಿಷ್ಣುವು. ಅದರ ಪರಿಣಾಮವೂ ವಿಷ್ಣುಸ್ವರೂಪವು ಎಂಬ ಸತ್ಯವಾದ ಜ್ಞಾನದಿಂದ ನಾನು ಭೋಜನ ಮಾಡಿದ ಅನ್ನವು ಜೀರ್ಣವಾಗಲಿ. ಹೀಗೆಂದು ಹೇಳಿ ತನ್ನ

ಇತ್ಯುಚ್ಚಾರ್ಯಸ್ವಹಸ್ತೇನ ಪರಿಮಾರ್ಜ್ಯ ತಥೋದರಂ ।
ಅನಾಯಾಸಪ್ರದಾಯೀನಿ ಕುರ್ಯಾತ್ಕರ್ಮಾಣ್ಯತಂದ್ರಿತಃ ॥ ೯೮ ॥

ಸಚ್ಛಾಸ್ತ್ರಾದಿವಿನೋದೇನ ಸನ್ಮಾರ್ಗಾದವಿರೋಧಿನಾ ।
ದಿನಂ ನಯೇತ್ತತಸ್ಸಂಧ್ಯಾಮುಪತಿಷ್ಠೇತ್ಸಮಾಹಿತಃ ॥ ೯೯ ॥

ದಿನಾಂತಸಂಧ್ಯಾಂ ಸೂರ್ಯೇಣ ಪೂರ್ವಾಮೃಕ್ಷೈರ್ಯುತಾಂ ಬುಧಃ ।
ಉಪತಿಷ್ಠೇದ್ಯಥಾ ನ್ಯಾಯ್ಯಂ ಸಮ್ಯಗಾಚಮ್ಯ ಪಾರ್ಥಿವ ॥ ೧೦೦ ॥

ಸರ್ವಕಾಲಮುಪಸ್ಥಾನಂ ಸಂಧ್ಯಯೋಃ ಪಾರ್ಥಿವೇಷ್ಯತೇ ।
ಅನ್ಯತ್ರ ಸೂತಕಾಶೌಚವಿಭ್ರಮಾತುರಭೀತಿತಃ ॥ ೧೦೧ ॥

ಸೂರ್ಯೇಣಾಭ್ಯುದಿತೋ ಯಶ್ಚ ತ್ಯಕ್ತಸ್ಸೂರ್ಯೇಣ ವಾ ಸ್ವಪನ್ ।
ಅನ್ಯತ್ರಾತುರಭಾವಾತ್ತು ಪ್ರಾಯಶ್ಚಿತ್ತೀಯತೇ ನರಃ ॥ ೧೦೨ ॥

---

ಕೈಯಿಂದ ಹೊಟ್ಟೆಯನ್ನು ಸವರಿಕೊಂಡು ಅನಾಯಾಸವಾದ ಕಾರ್ಯಗಳನ್ನು ಬೇಜಾರುಪಡದೆ ಮಾಡಬೇಕು.

೯೯–೧೦೦ ಸನ್ಮಾರ್ಗಕ್ಕೆ ವಿರೋಧವಿಲ್ಲದ ಸಚ್ಛಾಸ್ತ್ರಾಭ್ಯಾಸವೇ ಮುಂತಾದ ವಿನೋದಗಳಿಂದ ಹಗಲನ್ನು ಕಳೆದು ಸಂಧ್ಯಾವಂದನೆಯನ್ನು ಮಾಡಬೇಕು. ಗೃಹಸ್ಥನು ಸಾಯಂ ಸಂಧ್ಯೆಯನ್ನು ಸೂರ್ಯಾಸ್ತಮಾನಕ್ಕೆ ಸ್ವಲ್ಪ ಮುಂಚೆಯೇ ಪ್ರಾರಂಭಿಸಿ ನಕ್ಷತ್ರಗಳು ಕಾಣುವ ಪರ್ಯಂತವಾಗಿ ಮಂತ್ರ ಜಪಾದಿಗಳನ್ನು ಮಾಡುತ್ತಿರಬೇಕು.

೧೦೧-೧೦೨, ರಾಜನೇ! ಜಾತಾಶೌಚ, ಮೃತಾಶೌಚ, ಬುದ್ಧಿಭ್ರಾಂತಿ, ರೋಗ, ಭಯಕಾಲಗಳನ್ನು ಬಿಟ್ಟು ಮಿಕ್ಕ ಎಲ್ಲ ದಿನಗಳಲ್ಲಿಯೂ ಪ್ರಾತಸ್ಸಾಯಂ ಸಂಧ್ಯೆಗಳಲ್ಲಿ ಉಪಸ್ಥಾನವನ್ನು ಮಾಡಬೇಕು. ಸೂರ್ಯೋದಯ, ಸೂರ್ಯಾಸ್ತಗಳಲ್ಲಿ ಶರೀರದಲ್ಲಿ ರೋಗವಿಲ್ಲದಿರುವ ಗೃಹಸ್ಥನು ಮಲಗಿದ್ದರೆ ಸಂಧ್ಯಾಕರ್ಮ

ತಸ್ಮಾದನುದಿತೇ ಸೂರ್ಯೇ ಸಮುತ್ಥಾಯ ಮಹೀಪತೇ ।
ಉಪತಿಷ್ಠೇನ್ನರಃ ಸಂಧ್ಯಾಮಸ್ತಪಂಕ್ತ್ಯ ದಿನಾಂತಜಾಂ ॥ ೧೦೩ ॥

ಉಪತಿಷ್ಠಂತಿ ವೈ ಸಂಧ್ಯಾಂ ಯೇ ನ ಪೂರ್ವಾಂ ನ ಪಶ್ಚಿಮಾಂ ।
ವ್ರಜಂತಿ ತೇ ದುರಾತ್ಮಾನಸ್ತಾಮಿಸ್ರಂ ನರಕಂ ನೃಪ ॥ ೧೦೪ ॥

ಪುನಃ ಪಾಕಮುಪಾದಾಯ ಸಾಯಮಪ್ಯವನೀಪತೇ ।
ವೈಶ್ವದೇವನಿಮಿತ್ತಂ ವೈ ಪತ್ನ್ಯಾ ಸಾರ್ಧಂ ಬಲಿಂ ಹರೇತ್ ॥ ೧೦೫ ॥

ತತ್ರಾಪಿ ಶ್ವಪಚಾದಿಭ್ಯಸ್ತಥೈವಾನ್ನವಿಸರ್ಜನಂ ॥ ೧೦೬ ॥

ಅತಿಥಿಂ ಚಾಗತಂ ತತ್ರ ಸ್ವಶಕ್ತ್ಯಾ ಪೂಜಯೇದ್ಬುಧಃ ।
ಪಾದಶೌಚಾಸನಪ್ರಹ್ವಾ ಸ್ವಾಗತೋಕ್ತ್ಯಾ ಚ ಪೂಜಿತಂ ॥
ತತಶ್ಚಾನ್ನಪ್ರದಾನೇನ ಶಯನೇನ ಚ ಪಾರ್ಥಿವ ॥ ೧೦೭ ॥

ದಿವಾತಿಥೌ ತು ವಿಮುಖೇ ಗತೇ ಯತ್ಪಾತಕಂ ನೃಪ ।
ತದೇವಾಷ್ಟಗುಣಂ ಪುಂಸಾ ಸೂರ್ಯೋಢೇ ವಿಮುಖೇ ಗತೇ ॥ ೧೦೮ ॥

---

ಮಾಡದಿದ್ದುದಕ್ಕಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕಾಗುವುದು. ಆದುದರಿಂದ ಸೂರ್ಯೋದಯಕ್ಕೆ ಪೂರ್ವದಲ್ಲಿಯೂ, ಸೂರ್ಯಾಸ್ತಮಯಕ್ಕೆ ಮುಂಚಿತವಾಗಿಯೂ ಸಂಧ್ಯಾಕರ್ಮವನ್ನು ಮಾಡಬೇಕು. ಹಾಗೆ ಸಂಧ್ಯೆಯನ್ನು ಮಾಡದ ಜನರಿಗೆ ತಾಮಿಸ್ರ ವೆಂಬ ನರಕವು ಪ್ರಾಪ್ತವಾಗುವುದು.

೧೦೫–೧೦೮. ರಾಜನೇ! ಗೃಹಸ್ಥನು ಪುನಃ ಸಾಯಂಕಾಲದಲ್ಲಿ ಅಡಿಗೆಯನ್ನು ಮಾಡಿಸಿ ವೈಶ್ವದೇವಕ್ಕಾಗಿ ಮಂತ್ರರಹಿತವಾಗಿ ಪತ್ನಿಯಿಂದಲೇ ಬಲಿಹರಣವನ್ನು ಹಾಕಿಸಬೇಕು. ಆ ಸಂದರ್ಭದಲ್ಲಿಯೂ ಶ್ವಪಚಾದಿ ನೀಚಜಾತಿಯವರಿಗೂ ಅನ್ನ ವನ್ನು ಹಾಕಿಸಬೇಕು. ಬಂದ ಅತಿಥಿಗೆ ತನ್ನ ಶಕ್ತ್ಯನುಸಾರವಾಗಿ ಪೂಜಿಸಿ ಕೈಕಾಲಿಗೆ ನೀರನ್ನು ಕೊಟ್ಟು ಪೀಠದಮೇಲೆ ಕುಳ್ಳಿರಿಸಿ ಭೋಜನಮಾಡಿದಮೇಲೆ ಮಲಗು ವುದಕ್ಕೆ ಅನುಕೂಲ ಮಾಡಿಕೊಡಬೇಕು. ಹಗಲಿನಲ್ಲಿ ಅತಿಥಿಯು ಹಿಂದಿರುಗಿ ಹೋದರೆ ಎಷ್ಟು ಪಾಪವೋ ರಾತ್ರಿಯಲ್ಲಿ ಹಿಂದಿರುಗಿ ಹೋದರೆ ಅದರ ಎಂಟರಷ್ಟು ಪಾಪವುಂಟಾಗುವುದು.

ತಸ್ಮಾತ್ಸ್ವಶಕ್ತ್ಯಾ ರಾಜೇಂದ್ರ ಸೂರ್ಯೋಢಮತಿಥಿಂ ನರಃ ।
ಪೂಜಯೇತ್ಪೂಜಿತೇ ತಸ್ಮಿನ್ಪೂಜಿತಾಸ್ಸರ್ವದೇವತಾಃ ॥ ೧೦೯ ॥

ಅನ್ನಶಾಕಾಂಬುದಾನೇನ ಸ್ವಶಕ್ತ್ಯಾ ಪ್ರೀಣಯೇತ್ಪುಮಾನ್ ।
ಶಯನಪ್ರಸ್ತರಮಹೀಪ್ರದಾನೈರಥವಾಪಿ ತಂ ॥ ೧೧೦ ॥

ಕೃತಪಾದಾದಿಶೌಚಶ್ಚ ಭುಕ್ತ್ವಾ ಸಾಯಂ ತತೋ ಗೃಹೀ ।
ಗಚ್ಛೇಚ್ಛಯ್ಯಾಮಸ್ಫುಟಿತಾಮಪಿ ದಾರುಮಯೀಂ ನೃಪ ॥ ೧೧೧ ॥

ನಾವಿಶಾಲಾಂ ನ ವೈ ಭಗ್ನಾಂ ನಾಸಮಾಂ ಮಲಿನಾಂ ನ ಚ ।
ನ ಚ ಜಂತುಮಯೀಂ ಶಯ್ಯಾಮಧಿತಿಷ್ಠೇದನಾಸ್ತೃತಾಂ ॥ ೧೧೨ ॥

ಪ್ರಾಚ್ಯಾಂ ದಿಶಿ ಶಿರಶ್ಶಸ್ತಂ ಯಾಮ್ಯಾಯಾಮಥವಾ ನೃಪ ।
ಸದೈವ ಸ್ವಪತಃ ಪುಂಸೋ ವಿಪರೀತಂ ತು ರೋಗದಂ ॥ ೧೧೩ ॥

---

೧೦೯–೧೧೦. ಆದುದರಿಂದ ರಾಜಶ್ರೇಷ್ಠನೇ ರಾತ್ರಿಯಲ್ಲಿ ಬಂದ ಅತಿಥಿಯನ್ನು ತನ್ನ ಶಕ್ತ್ಯನುಸಾರವಾಗಿ ಪೂಜಿಸಿದರೆ ಸಮಸ್ತ ದೇವತೆಗಳನ್ನೂ ಪೂಜಿಸಿದಂತಾಗುವುದು. ಅನ್ನ ನೀರನ್ನು ಕೊಡುವುದರಿಂದಾಗಲಿ ಮಲಗುವುದಕ್ಕೆ ಭೂಮಿ ಹಾಸಿಗೆ ಇವುಗಳನ್ನು ಕೊಡುವುದರಿಂದಲಾಗಲಿ ಅತಿಥಿಯನ್ನು ತೃಪ್ತಿಪಡಿಸಬೇಕು.

೧೧೧–೧೧೩. ಗೃಹಸ್ಥನು ಸಂಧ್ಯಾಕಾಲದ ನಿತ್ಯಕರ್ಮವನ್ನು ಮಾಡಿದಮೇಲೆ ಊಟಮಾಡಿ ಮರದಿಂದ ಮಾಡಿ ಮುರಿಯದೆ ಸಮವಾಗಿ ವಿಸ್ತಾರವಾಗಿರುವ ಮಂಚದಮೇಲೆ ಹಾಸಿ ಕೊಳೆಯಿಲ್ಲದೆ, ತಗಣೆ ಮುಂತಾದುವುಗಳಿಲ್ಲದ ಹಾಸಿಗೆಯಲ್ಲಿ ಮಲಗಬೇಕು. ಮನುಷ್ಯನು ಯಾವಾಗಲೂ ಪೂರ್ವ ಅಥವಾ ದಕ್ಷಿಣಕ್ಕೆ ತಲೆಯನ್ನಿಟ್ಟು ಮಲಗುವುದು ಪ್ರಶಸ್ತವಾದುದು. ಉತ್ತರ ಪಶ್ಚಿಮಗಳಿಗೆ ತಲೆಯಿಟ್ಟು ಮಲಗುವುದರಿಂದ ರೋಗವುಂಟಾಗುವುದು.

ಋತಾವುಪಗಮಃ ಶಸ್ತಸ್ಸ್ವಪತ್ನ್ಯಾಮವನೀಪತೇ ।
ಪುನ್ನಾಮರ್ಕ್ಷೇ ಶುಭೇ ಕಾಲೇ ಜ್ಯೇಷ್ಠಾಯುಗ್ಮಾಸು ರಾತ್ರಿಷು ॥ ೧೧೪ ॥

ನಾದ್ಯೂನಾಂ ತು ಸ್ತ್ರಿಯಂ ಗಚ್ಛೇನ್ನಾತುರಾಂ ನ ರಜಸ್ವಲಾಂ ।
ನಾನಿಷ್ಟಾಂ ನ ಪ್ರಕುಪಿತಾಂ ನಾಪ್ರಶಸ್ತಾಂ ನ ಗುರ್ವಿಣೀಂ ॥ ೧೧೫ ॥

ನಾದಕ್ಷಿಣಾಂ ನಾನ್ಯಕಾಮಾಂ ನಾಕಾಮಾಂ ನಾನ್ಯಯೋಷಿತಂ ।
ಕ್ಷುತ್ಕ್ಷಾಮಾಂ ನಾತಿಭುಕ್ತಾಂ ವಾ ಸ್ವಯಂ ಚೈಭಿರ್ಗುಣೈರ್ಯುತಃ॥ ೧೧೬ ॥

ಸ್ನಾತಸ್ಸ್ರಗ್ಗಂಧಧೃಕ್ಪ್ರೀತೋ ನಾಧ್ಮಾತಃ ಕ್ಷುಧಿತೋಽಪಿ ವಾ ।
ನ ಕಾಮಸ್ಸಾನುರಾಗಶ್ಚ ವ್ಯವಾಯಂ ಪುರುಷೋ ವ್ರಜೇತ್ ॥ ೧೧೭ ॥

ಚತುರ್ದಶ್ಯಷ್ಟಮೀ ಚೈವ ಅಮಾವಾಸ್ಯಾಥಪೂರ್ಣಿಮಾ ।
ಪರ್ವಾಣ್ಯೇತಾನಿ ರಾಜೇಂದ್ರ ರವಿಸಂಕ್ರಾಂತಿರೇವ ಚ ॥ ೧೧೮ ॥

---

೧೧೪–೧೧೬. ಗೃಹಸ್ಥನು ಸ್ತ್ರೀಸಂಗ ಮಾಡಬೇಕಾದರೆ ತನ್ನ ಪತ್ನಿಯು ಋತುಮತಿಯಾದ ನಾಲ್ಕನೆಯ ದಿನದಿಂದ ಹದಿನಾರನೆಯ ದಿನದವರೆಗೆ ಸಮದಿನದಲ್ಲಿ ಪುರುಷನಕ್ಷತ್ರವಿರುವ ಶುಭ ದಿನದಲ್ಲಿ ರಾತ್ರಿಯಲ್ಲಿ ಸಂಗಮಾಡಬೇಕು. ತನಗೆ ಅನುಕೂಲವಿಲ್ಲದವಳೂ, ರೋಗವುಳ್ಳವಳೂ, ರಜಸ್ವಲೆಯೂ, ಇಷ್ಟಪಡದವಳೂ, ಕೋಪದಿಂದಿರುವವಳೂ, ಗರ್ಭಿಣಿಯಾದವಳೂ, ತನ್ನ ಮನಸ್ಸನ್ನನುಸರಿಸದವಳೂ, ಮತ್ತೊಬ್ಬ ಪುರುಷನಲ್ಲಾಸಕ್ತಳೂ ಇಷ್ಟವಿಲ್ಲದವಳೂ, ಹಸಿದವಳೂ, ಹೆಚ್ಚಾಗಿ ಊಟ ಮಾಡಿದವಳೂ, ಪರಸ್ತ್ರೀಯಾದವಳು ಇಂಥವರನ್ನು ಕೂಡಬಾರದು. ತಾನೂ ಈ ಗುಣಗಳಿಂದ ಕೂಡಿರಬಾರದು.

೧೧೭–೧೨೦. ಸ್ನಾನಮಾಡಿ ಗಂಧ ಹೂಗಳನ್ನು ಧರಿಸಿ ಸಂತೋಷದಿಂದ ಹೆಚ್ಚು ಊಟಮಾಡದೆ ಹಸಿದಿರದೆ ಕಾಮಿಯಾಗಿ ಸ್ತ್ರೀಸಂಗಮಾಡಬೇಕು. ಚತುರ್ದಶಿ, ಅಷ್ಟಮಿ, ಅಮಾವಾಸ್ಯೆ, ಪೂರ್ಣಿಮೆ, ಸಂಕ್ರಮಣ ಈ ದಿನಗಳು ಪರ್ವಗಳೆನಿಸುವುವು. ಈ ದಿನಗಳಲ್ಲಿ ಅಭ್ಯಂಜನ, ಸ್ತ್ರೀಸಂಗ, ಮಾಂಸಭೋಜನಗಳನ್ನು ಮಾಡಿದ

ತೈಲಸ್ತ್ರೀಮಾಂಸಭೋಗೀ ಸರ್ವೇಷ್ವೇತೇಷು ವೈ ಪುಮಾನ್ ।
ವಿಣ್ಮೂತ್ರ ಭೋಜನಂ ನಾಮ ಪ್ರಯಾತಿನರಕಂ ಮೃತಃ ॥ ೧೧೯ ॥

ಅಶೇಷಪರ್ವಸ್ವೇತೇಷು ತಸ್ಮಾತ್ಸಂಯಮಿಭಿರ್ಬುಧೈಃ ।
ಭಾವ್ಯಂ ಸಚ್ಛಾಸ್ತ್ರ ವೇದೇಜ್ಯಾ ಧ್ಯಾನಜಪ್ಯಪರೈರ್ನರೈಃ ॥ ೧೨೦ ॥

ನಾನ್ಯಯೋನೌ ವಿಯೋನೌ ವಾ ನೋಪಯುಕ್ತೌಷಧಸ್ತಥಾ ।
ದೇವದ್ವಿಜಗುರೂಣಾಂ ವ್ಯವಾಯೀ ನಾಶ್ರಯೇ ಭವೇತ್ ॥ ೧೨೧ ॥

ಚೈತ್ಯಚತ್ವರತೀರ್ಥೇಷು ನೈವ ಗೋಷ್ಠೇ ಚತುಷ್ಪಥೇ ।
ನೈವ ಶ್ಮಶಾನೋಪವನೇ ಸಲಿಲೇಷು ಮಹೀಪತೇ ॥ ೧೨೨ ॥

ಪ್ರೋಕ್ತಸರ್ವಸ್ವಶೇಷೇಷು ನೈವ ಭೂಪಾಲಸಂಧ್ಯಯೋಃ ।
ಗಚ್ಛೇದ್ವ್ಯವಾಯಂ ಮನಸಾ ನ ಮೂತ್ರೋಚ್ಚಾರಪೀಡಿತಾಂ ॥ ೧೨೩ ॥

---

ಮನುಷ್ಯನು ಸತ್ತಮೇಲೆ ಮಲಮೂತ್ರ ಭೋಜನವೆಂಬ ನರಕಕ್ಕೆ ಹೋಗುವನು. ಆದುದರಿಂದ ಈ ಪರ್ವತಿಥಿಗಳಲ್ಲೆಲ್ಲ ಬುದ್ಧಿವಂತನಾ(ರಾ)ದ ಮನುಜನು(ರು) ಇಂದ್ರಿಯ ನಿಗ್ರಹವುಳ್ಳವನಾ(ರಾ)ಗಿ ಶಾಸ್ತ್ರವಿಚಾರಗಳನ್ನು ಮಾಡುತ್ತಾ ದೇವರ ಪೂಜೆ, ಧ್ಯಾನ, ಜಪ ಮುಂತಾದುವುಗಳಲ್ಲಾಸಕ್ತನಾ(ರಾ)ಗಿರಬೇಕು.

೧೨೧–೧೨೩. ತನ್ನ ವರ್ಣವನ್ನು ಬಿಟ್ಟು ಬೇರೆ ವರ್ಣದ ಸ್ತ್ರೀಯಲ್ಲಿಯೂ ದೇವತೆಗಳು, ಬ್ರಾಹ್ಮಣರು, ಗುರುಗಳು ಇರುವ ಸ್ಥಳದಲ್ಲಿಯೂ, ತಿರ್ಯಗ್ಯೋನಿಯಲ್ಲಿಯೂ, ವೀರ್ಯವೃದ್ಧಿಯ ಔಷಧಗಳನ್ನುಪಯೋಗಿಸದೆಯೂ, ಸುರತಕ್ರೀಡೆಯನ್ನು ಮಾಡಬಾರದು. ದೇವಾಲಯ, ಅಂಗಳ, ತೀರ್ಥಕ್ಷೇತ್ರಗಳು, ಗೋವಿನಕೊಟ್ಟಿಗೆ, ನಾಲ್ಕು ಬೀದಿಗಳು ಕೂಡುವ ಸ್ಥಳ, ಸ್ಮಶಾನ, ಉಪವನ, ನೀರುಳ್ಳಪ್ರದೇಶ, ಪರ್ವಕಾಲಗಳು, ಸಂಧ್ಯಾಕಾಲಗಳು ಇವುಗಳಲ್ಲಿಯೂ, ಮಲ ಮೂತ್ರವಿಸರ್ಜನೆಯ ಬಾಧೆಯುಳ್ಳ ಸ್ತ್ರೀಯಲ್ಲಿಯೂ ಸುರತಕ್ರೀಡೆಯನ್ನು ಮಾಡಬಾರದು.

ಪರ್ವಸ್ವಭಿಗಮೋಽನಿಂದ್ಯೋ ದಿವಾ ಪಾಪಪ್ರದೋ ನೃಪ ।
ಭುವಿರೋಗಾವಹೋ ನೄಣಾಂ ಅಪ್ರಶಸ್ತೋ ಜಲಾಶಯೇ ॥ ೧೨೪ ॥

ಪರದಾರಾನ್ನ ಗಚ್ಛೇತ ಮನಸಾಪಿ ಕಥಂಚನ ।
ಕಿಮು ವಾಚಾಸ್ಥಿಬಂಧೋಽಪಿ ನಾಸ್ತಿ ತೇಷು ವ್ಯವಾಯಿನಾಂ ॥ ೧೨೫ ॥

ಮೃತೋ ನರಕಮಭ್ಯೇತಿ ಹೀಯತೇಽತ್ರಾಪಿ ಚಾಯುಷಃ ।
ಪರದಾರರತಿಃ ಪುಂಸಾಮುಭಯತ್ರಾಪಿ ಭೀತಿದಾ ॥ ೧೨೬ ॥

ಇತಿ ಮತ್ವಾ ಸ್ವದಾರೇಷು ಋತುಮತ್ಸು ಬುಧೋ ವ್ರಜೇತ್ ।
ಯಥೋಕ್ತದೋಷಹೀನೇಷು ಸಕಾಮೇಷ್ವನೃತಾವಪಿ ॥ ೧೨೭ ॥

ಇತಿ ಶ್ರೀವಿಷ್ಣುಪುರಾಣೇ ತೃತೀಯಾಂಶೇ ಏಕಾದಶೋಽಧ್ಯಾಯಃ

---

೧೨೪-೧೨೬. ಪರ್ವಕಾಲಗಳಲ್ಲಿಯೂ, ಹಗಲಿನಲ್ಲಿಯೂ, ಸುರತವು ನಿಂದ್ಯ ವಾದುದೂ, ಪಾಪಫಲವನ್ನು ಕೊಡತಕ್ಕುದೂ, ಆಗಿರುವುದು. ಭೂಮಿಯ ಮೇಲೆಯೂ, ಜಲಾಶಯ ಸಮೀಪದಲ್ಲಿಯೂ ರೋಗವನ್ನುಂಟುಮಾಡತಕ್ಕುದಾಗಿರುವುದು. ಮನಸ್ಸಿನಲ್ಲಿಯೂ ಪರಸ್ತ್ರೀ ಸಂಗವನ್ನು ಮಾಡಬಾರದು. ಹಾಗೆಮಾಡಿದವನು ಮೂಳೆಯಿಲ್ಲದ ಕ್ರಿಮಿಗಳ ಸಮೂಹದಲ್ಲಿ ಜನ್ಮವನ್ನೆತ್ತುವನು. ಇಲ್ಲಿದ್ದಾಗ ಅವನ ಆಯುಸ್ಸು ಕಡಿಮೆಯಾಗುವುದು. ಮರಣಹೊಂದಿದಮೇಲೆ ನರಕಕ್ಕೆ ಹೋಗುವನು ಆದುದರಿಂದ ಪರಸ್ತ್ರೀ ಗಮನವು ಇಹ ಪರಗಳೆರಡರಲ್ಲೂ ಭಯವನ್ನುಂಟುಮಾಡುವು

೧೨೭. ಇವುಗಳನ್ನೆಲ್ಲ ತಿಳಿದು ಬುದ್ಧಿವಂತನಾದ ಮನುಷ್ಯನು ಮೇಲೆ ಹೇಳಿದ ದೋಷಗಳುಂಟಾಗದಂತೆ ಋತುಮತಿಯಾದ ತನ್ನ ಸ್ತ್ರೀಸಂಗವನ್ನು ಮಾಡಬೇಕು. ಋತುಕಾಲವಲ್ಲದಿದ್ದರೂ ಕಾಮುಕಳಾದ ತನ್ನ ಸ್ತ್ರೀಯಲ್ಲಿ ಸುರತಕ್ರೀಡೆಯನ್ನು ಮಾಡಬಹುದು.

ಎಂಬಲ್ಲಿಗೆ ಶ್ರೀ ವಿಷ್ಣುಪುರಾಣದ ತೃತೀಯಾಂಶದಲ್ಲಿ

ಹನ್ನೊಂದನೆಯ ಅಧ್ಯಾಯವು ಮುಗಿದುದು.

ಶ್ರೀಃ

# ಶ್ರೀ ವಿಷ್ಣುಪುರಾಣೇ ತೃತೀಯಾಂಶೇ

## ದ್ವಾದಶೋಽಧ್ಯಾಯಃ

॥ ಔರ್ವಃ ॥

ದೇವಗೋಬ್ರಾಹ್ಮಣಾನ್ಸಿದ್ಧ ವೃದ್ಧಾಚಾರ್ಯಾಂಸ್ತಥಾರ್ಚಯೇತ್ ।
ದ್ವಿಕಾಲಂ ಚ ನಮೇತ್ಸಂಧ್ಯಾಮಗ್ನೀನುಪಚರೇತ್ತಥಾ ॥ ೧ ॥

ಸದಾನುಪಹತೇ ವಸ್ತ್ರೇ ಪ್ರಶಸ್ತಾಶ್ಚ ತಥೌಷಧೀಃ ।
ಗಾರುಡಾನಿ ಚ ರತ್ನಾನಿ ಬಿಭೃಯಾತ್ಪ್ರಯತೋ ನೃಪ ॥ ೨

ಪ್ರಸಿದ್ಧಾಮಲಕೇಶಶ್ಚ ಸುಗಂಧಶ್ಚಾರುವೇಷಧೃತ್ ।
ಸಿತಾಸ್ಸುಮನಸೋ ಹೃದ್ಯಾ ಬಿಭೃಯಾಚ್ಚ ನರಸ್ಸದಾ ॥ ೩ ॥

---

### ಹನ್ನೆರಡನೆಯ ಅಧ್ಯಾಯವು

೧-೩. ಗೃಹಸ್ಥನು ದೇವತೆಗಳು, ಗೋವುಗಳು, ಬ್ರಾಹ್ಮಣರು, ಸಿದ್ಧರು, ವೃದ್ಧರು, ಗುರುಗಳು, ಇವರನ್ನು ಪೂಜಿಸಿ ಎರಡು ಸಂಧ್ಯಾಕಾಲಗಳಲ್ಲಿಯೂ ಸಂಧ್ಯಾ ವಂದನೆಯನ್ನು ಮಾಡಿ ಅಗ್ನಿಯಲ್ಲಿ ಹೋಮವನ್ನು ಮಾಡಬೇಕು. ಯಾವಾಗಲೂ ಎರಡು ಶುದ್ಧವಸ್ತ್ರವನ್ನೂ ಪ್ರಶಸ್ತವಾದ ವಿಷ್ಣುಕ್ರಾಂತಿ ದೂರ್ವೆ ಮೊದಲಾದ ಓಷಧಿ ಗಳನ್ನೂ ಗರುಡರತ್ನವೇ ಮುಂತಾದ ರತ್ನಗಳನ್ನೂ ಧರಿಸಿರಬೇಕು. ತಲೆಯಲ್ಲಿ ಶುದ್ಧವೂ ನಯವೂ ಆದ ಕೂದಲುಗಳನ್ನು ಧರಿಸಿ ಸುಗಂಧವನ್ನೂ, ಬಿಳಿದಾದ, ಸುವಾಸನೆಯಾದ ಹೂಗಳನ್ನೂ ಅಲಂಕರಿಸಿಕೊಂಡಿರಬೇಕು.

ಕಿಂಚಿತ್ಪರಸ್ವಂ ನ ಹರೇನ್ನಾಲ್ಪಮಪ್ಯಪ್ರಿಯಂ ವದೇತ್ ।
ಪ್ರಿಯಂ ಚ ನಾನೃತಂ ಬ್ರೂಯಾನ್ನಾನ್ಯದೋಷಾನುದೀರಯೇತ್ ॥ ೪ ॥

ನಾನ್ಯಸ್ತ್ರಿಯಂ ತಥಾ ವೈರಂ ರೋಚಯೇತ್ಪುರುಷರ್ಷಭ ।
ನ ದುಷ್ಟಂ ಯಾನಮಾರೋಹೇತ್ಕೂಲಚ್ಛಾಯಾಂ ನ ಸಂಶ್ರಯೇತ್ ॥ ೫ ॥

ವಿದ್ವಿಷ್ಟ ಪತಿತೋನ್ಮತ್ತಬಹುವೈರಾತಿಕೀಟಕೈಃ ।
ಬಂಧಕೀವರ್ಧಕೀ ಭರ್ತೃ ಕ್ಷುದ್ರಾನೃತಕಥೈಸ್ಸಹ ॥ ೬ ॥

ತಥಾತಿವ್ಯಯಶೀಲೈಶ್ಚ ಪರಿವಾದರತೈಶ್ಶಠೈಃ ।
ಬುಧೋ ಮೈತ್ರೀಂ ನ ಕುರ್ವೀತ ನೈಕಃ ಪಂಥಾನಮಾವ್ರಜೇತ್ ॥ ೭ ॥

ನಾವಗಾಹೇಜ್ಜಲೌಘಸ್ಯ ವೇಗಮಗ್ರೇ ನರೇಶ್ವರ ।
ಪ್ರದೀಪ್ತಂ ವೇಶ್ಮ ನ ವಿಶೇನ್ನಾರೋಹೇಚ್ಛಿಖರಂ ತರೋಃ ॥ ೮ ॥

---

೪–೫. ಪರರ ವಸ್ತುವನ್ನು ಸ್ವಲ್ಪವಾದರೂ ತೆಗೆದುಕೊಳ್ಳಬಾರದು. ಅಪ್ರಿಯವಾದ ಮಾತನ್ನಾಡಬಾರದು. ಪ್ರಿಯವಾದರೂ ಸುಳ್ಳನ್ನು ಹೇಳಬಾರದು. ಮತ್ತೊಬ್ಬರ ದೋಷವನ್ನು ಹೇಳಬಾರದು. ಪರಸ್ತ್ರೀಯನ್ನಪೇಕ್ಷಿಸಬಾರದು. ಯಾವಲ್ಲಿಯೂ ದ್ವೇಷವನ್ನು ಮಾಡಬಾರದು. ದುಷ್ಟವಾದ ವಾಹನಗಳನ್ನೇರಬಾರದು. ನೀರಿನ ದಡದಲ್ಲಿರುವ ನೆರಳಿನಲ್ಲಿ ಕೂಡಬಾರದು.

೬—೧೨. ದ್ವೇಷಿ, ಪಾಪಿ, ಹುಚ್ಚ, ಅನೇಕರಲ್ಲಿ ದ್ವೇಷವುಳ್ಳವನು, ಹಿಂಸಕ, ಪತಿವ್ರತೆಯಲ್ಲದವಳು, ಗಂಡನ ಮೇಲೆ ಚಾಡಿಯನ್ನು ಹೇಳುವಳು, ಸುಳ್ಳು ಹೇಳುವರು, ಹೆಚ್ಚಾಗಿ ವೆಚ್ಚಮಾಡುವ ಸ್ವಭಾವದವರು, ನಿಂದೆ ಮಾಡುವರು, ಮೂರ್ಖರು ಇವರೊಡನೆ ಸ್ನೇಹವನ್ನು ಮಾಡಬಾರದು. ಒಬ್ಬನೇ ದಾರಿಯನ್ನು ನಡೆಯಬಾರದು. ವೇಗವಾಗಿ ಪ್ರವಹಿಸುವ ನೀರಿಗೆ ಎದುರಾಗಿ ಸ್ನಾನಮಾಡಬಾರದು. ಉರಿಯುತ್ತಿರುವ ಮನೆಯೊಳಕ್ಕೆ ಪ್ರವೇಶಿಸಬಾರದು, ಮರದ ತುದಿಯ ಕೊಂಬೆಗೆ ಏರಬಾರದು,

ನ ಕುರ್ಯಾದ್ದಂತಸಂಘರ್ಷಂ ನ ಕೃಷ್ಣೀಯಾಚ್ಚ ನಾಸ್ತಿಕಾಂ ।
ನಾಸಂವೃತಮುಖೋ ಜೃಂಭೇ ಚ್ಛ್ವಾಸಕಾಸೌ ವಿವರ್ಜಯೇತ್ ॥ ೯ ॥

ನೋಚ್ಚೈರ್ಹಸೇತ್ಸಶಬ್ದಂ ಚ ನ ಮುಂಚೇತ್ಪವನಂ ಬುಧಃ ।
ನಖಾನ್ನ ಖಾದಯೇಚ್ಛಿಂದ್ಯಾನ್ನ ತೃಣಂ ನಮಹೀಂ ಲಿಖೇತ್ ॥ ೧೦ ॥

ನ ಶ್ಮಶ್ರು ಭಕ್ಷಯೇಲ್ಲೋಷ್ಟಂ ನ ಮೃದ್ನೀಯಾದ್ವಿಚಕ್ಷಣಃ ।
ಜ್ಯೋತೀಂಷ್ಯಮೇಧ್ಯಶಸ್ತಾನಿ ನಾಭಿವೀಕ್ಷೇತ ಚ ಪ್ರಭೋ ॥ ೧೧ ॥

ನಗ್ನಾಂ ಪರಸ್ತ್ರಿಯಂ ಚೈವ ಸೂರ್ಯಂ ಚಾಸ್ತಮಯೋದಯೇ ।
ನ ಹುಂಕುರ್ಯಾಚ್ಛವಂ ಚೈವ ಶವಗಂಧೋ ಹಿ ಸೋಮಜಃ ॥ ೧೨ ॥

ಚತುಷ್ಪಥಂ ಚೈತ್ಯತರುಂ ಶ್ಮಶಾನೋಪವನಾನಿ ಚ ।
ದುಷ್ಟಸ್ತ್ರೀಸನ್ನಿಕರ್ಷಂ ಚ ವರ್ಜಯೇನ್ನಿಶಿ ಸರ್ವದಾ ॥ ೧೩ ॥

---

ಹಲ್ಲುಗಳನ್ನು ಕಡಿಯಬಾರದು, ಮೂಗನ್ನು ಕೆರೆಯಬಾರದು, ಬಾಯನ್ನು ಮುಚ್ಚಿಕೊಳ್ಳದೆ ಆಕಳಿಸಬಾರದು, ಕೆಮ್ಮಬಾರದು, ಗಟ್ಟಿಯಾಗಿ ಧ್ವನಿಯಾಗುವಂತೆ ನಗಬಾರದು, ಶರೀರದಿಂದ ವಾಯುವನ್ನು ಬಿಡಬಾರದು, ಉಗುರುಗಳನ್ನು ಕಚ್ಚಬಾರದು, ಹುಲ್ಲನ್ನು ಕತ್ತರಿಸಬಾರದು, ಭೂಮಿಯಲ್ಲಿ ಬರೆಯಬಾರದು, ಮೀಸೆಯ ಕೂದಲನ್ನು ತಿನ್ನಬಾರದು, ಮಣ್ಣು ಹೆಂಟೆಯನ್ನು ಹುಡಿಮಾಡಬಾರದು, ಅಶುಚಿಯಾದ ಬೆಳಕನ್ನು ನೋಡಬಾರದು, ಬೆತ್ತಲೆಯಾದ ಪರಸ್ತ್ರೀಯನ್ನೂ, ಉದಯಾಸ್ತಮಯವಾಗುತ್ತಿರುವ ಸೂರ್ಯನನ್ನೂ ನೋಡಬಾರದು ಶವಶರೀರವು ಸೋಮರಸರೂಪವಾದುದರಿಂದ ಅದನ್ನೂ ಶರೀರವು ಉರಿಯುತ್ತಿರುವಾಗ ಹುಟ್ಟಿದ ವಾಸನೆಯು ಅಗ್ನೀಷೋಮ ಸ್ವರೂಪವಾದುದರಿಂದ ಅದನ್ನೂ ಕಂಡು ಅಸಹ್ಯಪಡಬಾರದು.

೧೩–೧೫. ರಾತ್ರಿಯ ಕಾಲದಲ್ಲಿ ರಾಜಮಾರ್ಗದಲ್ಲಿಯೂ, ಪೂಜ್ಯವೃಕ್ಷದ ಜಗಲಿಯ ಮೇಲೆಯೂ, ಸ್ಮಶಾನ, ಉಪವನಗಳಲ್ಲಿಯೂ, ದುಷ್ಟ ಸ್ತ್ರೀಯ ಸಮೀಪದಲ್ಲಿಯೂ ಇರಬಾರದು. ಪೂಜ್ಯರಾದ ದೇವತೆಗಳು, ಬ್ರಾಹ್ಮಣರು, ಪ್ರಕಾಶ,

ಪೂಜ್ಯದೇವದ್ವಿಜಜ್ಯೋತಿಶ್ಛಾಯಾಂ ನಾತಿ ಕ್ರಮೇದ್ಬುಧಃ ।
ನೈಕಶ್ಶೂನ್ಯಾಟವೀಂ ಗಚ್ಛೇನ್ನ ಚ ಶೂನ್ಯಗೃಹೇ ವಸೇತ್ ॥ ೧೪ ॥

ಕೇಶಾಸ್ಥಿಕಂಟಕಾಮೇಧ್ಯಬಲಿಭಸ್ಮತುಷಾಂಸ್ತಥಾ ।
ಸ್ನಾನಾದ್ರ್ರ ಧರಣೀಂ ಚೈವ ದೂರತಃ ಪರಿವರ್ಜಯೇತ್ ॥ ೧೫ ॥

ನಾನಾರ್ಯಾನಾಶ್ರಯೇತ್ಕಾಂಶ್ಚಿನ್ನ ಜಿಹ್ಮಂ ರೋಚಯೇದ್ಬುಧಃ ।
ಉಪಸರ್ಪೇಚ್ಚ ನ ವ್ಯಾಳಾಂಶ್ಚಿರಂ ತಿಷ್ಠೇನ್ನ ಚೋತ್ಥಿತಃ ॥ ೧೬ ॥

ಅತೀವಜಾಗರಸ್ವಪ್ನೌ ತದ್ವತ್ಸ್ಥಾನಾಸನೇ ಬುಧಃ ।
ನ ಸೇವೇತ ತಥಾ ಶಯ್ಯಾಂ ವ್ಯಾಯಾಮಂ ಚ ನರೇಶ್ವರ ॥ ೧೭

ದಂಷ್ಟ್ರಿಣಶ್ಶೃಂಗೀಣಶ್ಚೈವ ಪ್ರಾಜ್ಞೋ ದೂರೇಣ ವರ್ಜಯೇತ್ ।
ಅವಶ್ಯಾಯಂ ಚ ರಾಜೇಂದ್ರ ಪುರೋ ವಾತಾತಪೌ ತಥಾ ॥ ೧೮ ॥

---

ನೆರಳು ಇವುಗಳನ್ನು ಅತಿಕ್ರಮಿಸಿ ಹೋಗಬಾರದು. ಜನಸಂಚಾರವಿಲ್ಲದ ಅಡವಿಯಲ್ಲಿಯೂ, ಮನೆಯಲ್ಲಿಯೂ ಒಬ್ಬನೇ ಇರಬಾರದು. ಕೂದಲು, ಮೂಳೆ, ಮುಳ್ಳುಗಳು, ಅಮೇಧ್ಯ, ಬಲಿಯ ಅನ್ನ, ಬೂದಿ ಹೊಟ್ಟು, ಸ್ನಾನ ಮಾಡಿದುದರಿಂದ ನೆನೆದ ಭೂಮಿ, ಇವುಗಳನ್ನು ದೂರದಲ್ಲಿ ಬಿಟ್ಟಿರಬೇಕು.

೧೬–೨೦. ವಿದ್ವಾಂಸನಾದವನು ಅಯೋಗ್ಯರನ್ನು ಆಶ್ರಯಿಸಬಾರದು. ಕುಟಿಲತೆಯನ್ನು ಅಪೇಕ್ಷಿಸಬಾರದು. ದುಷ್ಟವಾದ ಆನೆಯ ಅಥವಾ ಸರ್ಪದ ಹತ್ತಿರಕ್ಕೆ ಹೋಗಬಾರದು. ಅಥವಾ ಅವುಗಳೆದುರಿಗೆ ಬಹಳ ಹೊತ್ತು ನಿಂತು ಇರಬಾರದು. ಹೆಚ್ಚು ನಿದ್ರೆ, ಎಚ್ಚರ, ವ್ಯಾಯಾಮ, ಕುಳಿತಿರುವುದು, ಮಲಗಿರುವುದು ಇವುಗಳನ್ನು ಅಭ್ಯಾಸಮಾಡಬಾರದು. ಹಲ್ಲುಳ್ಳ ಪ್ರಾಣಿಗಳು, ಕೊಂಬುಳ್ಳ ಪ್ರಾಣಿಗಳು, ಹಿಮ, ಎದುರು ಗಾಳಿ, ಬಿಸಿಲುಗಳನ್ನು ದೂರದಲ್ಲಿಯೇ ಬಿಡಬೇಕು.

ನ ಸ್ನಾಯಾನ್ನ ಸ್ವಪೇನ್ನಗ್ನೋ ನ ಚೈವೋಪಸ್ಪೃಶೇದ್ಬುಧಃ ।
ಮುಕ್ತಕಚ್ಛಶ್ಚ ನಾ ಚಾಮೇದ್ದೇವಾದ್ಯರ್ಚಾಶ್ಚ ವರ್ಜಯೇತ್ ॥ ೧೯ ॥

ಹೋಮದೇವಾರ್ಚನಾದ್ಯಾಸು ಕ್ರಿಯಾಸ್ವಾಚಮನೇ ತಥಾ ।
ನೈಕವಸ್ತ್ರಃ ಪ್ರವರ್ತೇತ ದ್ವಿಜವಾಚನಿಕೇ ಜಪೇ ॥ ೨೦ ॥

ನಾಸಮಂಜಸಶೀಲೈಸ್ತು ಸಹಾಸೀತ ಕದಾಚನ ।
ಸದ್ವೃತ್ತಸನ್ನಿಕರ್ಷೋ ಹಿ ಕ್ಷಣಾರ್ಧಮಪಿ ಶಸ್ಯತೇ ॥ ೨೧ ॥

ವಿರೋಧಂ ನೋತ್ತಮೈರ್ಗಚ್ಛೇನ್ನಾಧಮೈಶ್ಚ ಸದಾ ಬುಧಃ ।
ವಿವಾಹಶ್ಚ ವಿವಾದಶ್ಚ ತುಲ್ಯಶೀಲೈರ್ನೃಪೇಷ್ಯತೇ ॥ ೨೨ ॥

ನಾರಭೇತ ಕಲಿಂ ಪ್ರಾಜ್ಞಶ್ಶುಷ್ಕ ವೈರಂ ವಿವರ್ಜಯೇತ್ ।
ಅತ್ಯಲ್ಪಹಾನಿಸ್ಸೋಢವ್ಯಾ ವೈರೇಣಾರ್ಥಾಗಮಂ ತ್ಯಜೇತ್ ॥ ೨೩ ॥

---

ಬೆತ್ತಲೆಯಾಗಿ ಮಲಗುವುದು, ಸ್ನಾನ, ಆಚಮನಗಳನ್ನು ಮಾಡಬಾರದು. ಕಚ್ಚೆಯನ್ನು ಹಾಕಿಕೊಳ್ಳದೆ ದೇವರಪೂಜೆ ಆಚಮನಗಳನ್ನು ಮಾಡಬಾರದು. ಒಂದೇ ವಸ್ತ್ರವನ್ನುಟ್ಟು ಹೋಮ, ದೇವತಾರ್ಚನೆ ಮುಂತಾದಕರ್ಮಗಳು, ಆಚಮನ, ಜಪ ಇವುಗಳನ್ನು ಮಾಡಬಾರದು.

೨೧–೨೩. ಅಯೋಗ್ಯವಾದ ನಡೆತೆಯುಳ್ಳವರೊಡನೆ ಎಂದಿಗೂ ಇರಬಾರದು. ಸಜ್ಜನರ ಸಹವಾಸವು ಒಂದು ಅರ್ಧ ಕ್ಷಣಕಾಲವಾದರೂ ಪ್ರಶಸ್ತವಾದುದು. ಉತ್ತಮರೊಡನೆಯೂ, ನೀಚರೊಡನೆಯೂ ವಿರೋಧಮಾಡಿಕೊಳ್ಳಬಾರದು. ವಿವಾಹ ವಿವಾದಗಳು ಸಮಾನವಾದ ನಡತೆಯುಳ್ಳವರಲ್ಲಿ ಶ್ಲಾಘ್ಯವಾದುವು. ಜಗಳ ಮಾಡಬಾರದು. ಫಲವಿಲ್ಲದ ವೈರವನ್ನು ಬಿಡಬೇಕು. ಅಲ್ಪವಾದ ನಷ್ಟವನ್ನು ಸಹಿಸಬೇಕು. ದ್ವೇಷದಿಂದ ಹಣ ಸಂಪಾದಿಸುವುದನ್ನು ಬಿಡಬೇಕು.

ಸ್ನಾತೋ ನಾಂಗಾನಿ ನಿರ್ಮಾರ್ಜೇತ್ಸ್ನಾನಶಾಟ್ಯಾ ನ ಪಾಣಿನಾ ।
ನ ಚ ನಿರ್ಧೂನಯೇತ್ಕೇಶಾನಾಚಾಮೇಚ್ಚೈವ ನೋಚ್ಛ್ರಿತಃ ॥ ೨೪ ॥

ಪಾದೇನ ನಾಕ್ರಮೇತ್ಪಾದಂ ನ ಪೂಜ್ಯಾಭಿಮುಖಂ ನಯೇತ್ ।
ಶಯ್ಯಾಸನೇ ಗುರೋರಗ್ರೇ ಭಜೇತ ವಿನಯಾನ್ವಿತಃ ॥ ೨೫ ॥

ಅಪಸವ್ಯಂ ನ ಗಚ್ಛೇಚ್ಚ ದೇವಾಗಾರಚತುಷ್ಪಥಾನ್ ।
ಮಂಗಳ್ಯಪೂಜ್ಯಾಂಶ್ಚ ತಥಾ ವಿಪರೀತಾನ್ನ ದಕ್ಷಿಣಂ ॥ ೨೬ ॥

ಸೋಮಾರ್ಕಾಗ್ನ್ಯಂಬುವಾಯೂನಾಂ ಪೂಜ್ಯಾನಾಂ ಚ ನ ಸಂಮುಖಂ ।
ಕುರ್ಯಾತ್ಷ್ಠೀವನವಿಣ್ಮೂತ್ರಸಮುತ್ಸರ್ಗಂ [illegible] ಪಂಡಿತಃ ॥ ೨೭ ॥

ತಿಷ್ಠನ್ನ ಮೂತ್ರಯೇತ್ತದ್ವತ್ಪಂಥಾನಂ ನೈವ ಮೂತ್ರಯೇತ್ ।
ಶ್ಲೇಷ್ಮವಿಣ್ಮೂತ್ರರಕ್ತಾನಿ ಸರ್ವದೈವ ನ ಲಂಘಯೇತ್ ॥ ೨೮ ॥

---

೨೪-೨೬. ಸ್ನಾನಮಾಡಿದಮೇಲೆ ಕೈಗಳಿಂದಲಾಗಲಿ, ಸ್ನಾನಮಾಡಿದ ವಸ್ತ್ರದಿಂದಾಗಲಿ ಮೈಯನ್ನು ಒರಸಿಕೊಳ್ಳಬಾರದು. ತಲೆಯ ಕೂದಲುಗಳನ್ನು ಕೊಡಹಬಾರದು. ನಿಂತುಕೊಂಡೇ ಆಚಮನ ಮಾಡಬಾರದು. ಒಂದು ಕಾಲಿನ ಮೇಲೆ ಮತ್ತೊಂದು ಕಾಲನ್ನಿಟ್ಟು ತುಳಿಯಬಾರದು. ಪೂಜ್ಯರ ಎದುರಿಗೆ ಕಾಲುಗಳನ್ನು ಚಾಚಬಾರದು. ಗುರುವಿನ ಎದುರಿಗೆ ಕುಳಿತು. ಮಲಗಿ ಇರಬಾರದು. ವಿನಯದಿಂದಿರಬೇಕು. ದೇವಸ್ಥಾನ ರಾಜಬೀದಿಗಳಲ್ಲಿ ಅಪಸವ್ಯವಾಗಿ ಹೋಗಬಾರದು ಮಂಗಳಕರವಾದ ಪೂಜ್ಯ ವಸ್ತುಗಳನ್ನು ಪ್ರದಕ್ಷಿಣ ಮಾಡಬೇಕು. ಅಪೂಜ್ಯ ವಸ್ತುಗಳನ್ನು ಪ್ರದಕ್ಷಿಣ ಮಾಡಬಾರದು.

೨೭-೨೮. ಸೂರ್ಯ, ಚಂದ್ರ, ಅಗ್ನಿ, ನೀರು, ವಾಯು ಮುಂತಾದ ಪೂಜ್ಯ ವಸ್ತುಗಳಿಗೆ ಇದಿರಾಗಿ ಉಗುಳುವುದು ಮಲಮೂತ್ರ ವಿಸರ್ಜನೆಗಳನ್ನು ಮಾಡಬಾರದು. ನಿಂತುಕೊಂಡೂ, ದಾರಿ ನಡೆಯುತ್ತಲೂ ಮೂತ್ರವಿಸರ್ಜನೆಯನ್ನು ಮಾಡಬಾರದು. ಶ್ಲೇಷ್ಮ, ಮಲಮೂತ್ರಗಳು, ರಕ್ತ ಇವುಗಳನ್ನು ಯಾವಾಗಲೂ

ಶ್ಲೇಷ್ಮಶಿಂಘಾಣಕೋತ್ಸರ್ಗೋ ನಾನ್ನಕಾಲೇ ಪ್ರಶಸ್ಯತೇ ।
ಬಲಿಮಂಗಳಜಪ್ಯಾದೌ ನ ಹೋಮೇ ನ ಮಹಾಜನೇ ॥ ೨೯ ॥

ಯೋಷಿತೋ ನಾವಮನ್ಯೇತ ನ ಚಾಸಾಂ ವಿಶ್ವಸೇದ್ಬುಧಃ ।
ನ ಚೈವೇರ್ಷ್ಯುರ್ಭವೇತ್ತಾಸು ನ ಧಿಕ್ಕುರ್ಯಾತ್ಕದಾಚನ ॥ ೩೦ ॥

ಮಂಗಳ್ಯಪುಷ್ಪರತ್ನಾನಿ ಪೂಜ್ಯಾನನಭಿವಾದ್ಯ ಚ ।
ನ ನಿಷ್ಕ್ರಮೇದ್ಗೃಹಾತ್ಪ್ರಾಜ್ಞಸ್ಸದಾಚಾರಪರೋ ನರಃ ॥ ೩೧ ॥

ಚತುಷ್ಪಥಂ ನಮಸ್ಕುರ್ಯಾತ್ಕಾಲೇ ಹೋಮಪರೋ ಭವೇತ್ ।
ದೀನಾನಭ್ಯುದ್ಧರೇತ್ಸಾಧೂನುಪಾಸೀತ ಬಹುಶ್ರುತಾನ್ ॥ ೩೨ ॥

ದೇವರ್ಷಿಪೂಜಕಸ್ಸಮ್ಯಕ್ಪಿತೃಪಿಂಡೋದಕಪ್ರದಃ ।
ಸತ್ಕರ್ತಾ ಚಾತಿಥೀನಾಂ ಯಃ ಸಲೋಕಾನುತ್ತಮಾನ್ವ್ರಜೇತ್ ॥ ೩೩ ॥

---

ದಾಟಿಹೋಗಬಾರದು. ಊಟಮಾಡುವಾಗಲೂ ಬಲಿಹರಣಮಾಡುವಾಗಲೂ ಮಂಗಳ ಕಾರ್ಯಗಳನ್ನು ಮಾಡುವಾಗಲೂ ಜಪಕಾಲದಲ್ಲಿಯೂ ಹೋಮಮಾಡುವಾಗಲೂ ಮಹಾಜನರ ಗುಂಪಿನಲ್ಲಿಯೂ ಉಗುಳುವುದು ಶೀನುವುದು ಮೂಗಿನ ಮಲವಿಸರ್ಜನೆ ಗಳನ್ನು ಮಾಡುವುದು ಪ್ರಶಸ್ತವಾದುದಲ್ಲ.

೩೦-೩೩. ವಿದ್ವಾಂಸನಾದವನು ಸ್ತ್ರೀಯರನ್ನು ಅಪಮಾನಪಡಿಸಬಾರದು. ಅವರ ಮಾತಿನಲ್ಲಿ ನಂಬಿಕೆಯನ್ನಿಡಬಾರದು. ಅವರಲ್ಲಿ ಅಸಹಿಷ್ಣುತೆಯಿರಬಾರದು. ಅವರನ್ನು ಯಾವಾಗಲೂ ತಿರಸ್ಕಾರಮಾಡಬಾರದು. ಸದಾಚಾರದಲ್ಲಾಸಕ್ತನಾದ ಮನುಷ್ಯನು ಮನೆಯಿಂದ ಹೊರಗೆ ಹೊರಡುವಾಗ ಮಂಗಳಕರವಾದ ಹೂ ರತ್ನಾದಿ ಪೂಜ್ಯ ವಸ್ತುಗಳಿಗೆ ನಮಸ್ಕಾರ ಮಾಡದೆ ಹೊರಡಬಾರದು. ಕಾಲಕಾಲಕ್ಕೆ ಹೋಮ ಮಾಡಬೇಕು. ಬಡವರನ್ನು ಕಾಪಾಡಬೇಕು. ಶಾಸ್ತ್ರಜ್ಞರಾದ ಸಜ್ಜನರ ಸೇವೆಯನ್ನು ಮಾಡಬೇಕು. ದೇವತೆಗಳನ್ನೂ ಋಷಿಗಳನ್ನೂ ಪೂಜಿಸಿ ಪಿತೃಗಳಿಗೆ ಪಿಂಡ ತರ್ಪಣ ಗಳನ್ನು ಕೊಟ್ಟು ಅತಿಥಿಸತ್ಕಾರವನ್ನು ಮಾಡುವವನು ಉತ್ತಮ ಲೋಕವನ್ನು ಪಡೆಯುವನು.

ಹಿತಂ ಮಿತಂ ಪ್ರಿಯಂ ಕಾಲೇ ವಶ್ಯಾತ್ಮಾ ಯೋಭಿಭಾಷತೇ ।
ಸ ಯಾತಿ ಲೋಕಾನಾಹ್ಲಾದಹೇತುಭೂತಾನ್ನೃಪಾಕ್ಷಯಾನ್ ॥ ೩೪ ॥

ಧೀಮಾನ್ ಹ್ರೀಮಾನ್ ಕ್ಷಮಾಯುಕ್ತೋ ಹ್ಯಾಸ್ತಿಕೋ ವಿನಯಾನ್ವಿತಃ ।
ವಿದ್ಯಾಭಿಜನವೃದ್ಧಾನಾಂ ಯಾತಿ ಲೋಕಾನನುತ್ತಮಾನ್ ॥ ೩೫ ॥

ಅಕಾಲಗರ್ಜಿತಾದೌ ತು ಪರ್ವಸ್ವಾಶೌಚ ಕಾದಿಷು ।
ಅನಧ್ಯಾಯಂ ಬುಧಃ ಕುರ್ಯಾದುಪರಾಗಾದಿಕೇ ತಥಾ ॥ ೩೬ ॥

ಶಮಂ ನಯತಿ ಯಃ ಕ್ರುದ್ಧಾನ್ ಸರ್ವಬಂಧುರಮತ್ಸರೀ ।
ಭೀತಾಶ್ವಾಸನಕೃತ್ಸಾಧುಸ್ಸ್ವರ್ಗಸ್ತಸ್ಯಾಲ್ಪಕಂ ಫಲಂ ॥ ೩೭ ॥

---

೩೪-೩೫. ಮನಸ್ಸನ್ನು ತನ್ನಧೀನದಲ್ಲಿಟ್ಟುಕೊಂಡು ಕಾಲಕ್ಕೆ ತಕ್ಕ ಹಿತವೂ ಮಿತವೂ ಪ್ರಿಯವೂ ಆದ ಮಾತುಗಳನ್ನಾಡುವವನು ಆನಂದಾನುಭವಕ್ಕೆ ಕಾರಣವಾದ ನಾಶರಹಿತವಾದ ಲೋಕವನ್ನು ಸೇರುವನು. ಬುದ್ಧಿವಂತನೂ ನಾಚಿಕೆಯುಳ್ಳವನೂ ಆಸ್ತಿಕನೂ ನಮ್ರತೆಯುಳ್ಳವನೂ ಆದ ಮನುಷ್ಯನು ವಿದ್ಯಾವಂತರೂ ಸತ್ಕುಲಪ್ರಸೂತರೂ ಜ್ಞಾನವೃದ್ಧರೂ ಇರುವ ಶ್ರೇಷ್ಠವಾದ ಲೋಕಗಳಿಗೆ ಹೋಗುವನು.

೩೬. ವಿದ್ವಾಂಸನಾದವನು ಅಕಾಲದಲ್ಲಿ ಮೇಘಧ್ವನಿಯಾದಾಗಲೂ ಪರ್ವತಿಥಿಗಳಲ್ಲಿಯೂ ಅಶೌಚಾದಿಗಳಲ್ಲಿಯೂ ಗ್ರಹಣಕಾಲದಲ್ಲಿಯೂ ವೇದಾಧ್ಯಯನವನ್ನು ಮಾಡಬಾರದು.

೩೭. ಕೋಪಹೊಂದಿದವನನ್ನು ಶಾಂತನಾಗುವಂತೆ ಮಾಡುವ, ಎಲ್ಲರಿಗೂ ನಂಟನಂತಿರುವ ಮತ್ತೊಬ್ಬರಲ್ಲಿ ಮಾತ್ಸರ್ಯವಿಲ್ಲದ, ಭಯಪಟ್ಟವರನ್ನು ಸಮಾಧಾನಪಡಿಸುವ ಸಜ್ಜನನಿಗೆ ಸ್ವರ್ಗ ಫಲವು ಬಂದರೆ ಅದು ಅತ್ಯಲ್ಪವೆನಿಸುವುದು.

ವರ್ಷಾತಪಾದಿಕೇ ಛತ್ರೀ ದಂಡೀ ರಾತ್ರ್ಯಟವೀಷು ಚ ।
ಶರೀರತ್ರಾಣಕಾಮೋ ವೈ ಸೋಪಾನತ್ಕಸ್ಸದಾ ವ್ರಜೇತ್ ॥ ೩೮ ॥

ನೋರ್ಧ್ವಂ ನ ತಿರ್ಯಗ್ದೂರಂ ವಾ ನಿರೀಕ್ಷನ್ಪರ್ಯಟೇದ್ಬುಧಃ ।
ಯುಗಮಾತ್ರಂ ಮಹೀಪೃಷ್ಠಂ ನರೋ ಗಚ್ಛೇದ್ವಿಲೋಕಯನ್ ॥ ೩೯ ॥

ದೋಷಹೇತೂನಶೇಷಾಂಶ್ಚ ವಶ್ಯಾತ್ಮಾ ಯೋ ನಿರಸ್ಯತಿ ।
ತಸ್ಯ ಧರ್ಮಾರ್ಥಕಾಮಾನಾಂ ಹಾನಿರ್ನಾಲ್ಪಾಪಿ ಜಾಯತೇ ॥ ೪೦ ॥

ಸದಾಚಾರರತಃ ಪ್ರಾಜ್ಞೋ ವಿದ್ಯಾವಿನಯಶಿಕ್ಷಿತಃ ।
ಪಾಪೇಽಪ್ಯಪಾಪಃ ಪರುಷೇ ಹ್ಯಭಿಧತ್ತೇ ಪ್ರಿಯಾಣಿ ಯಃ ।
ಮೈತ್ರೀದ್ರವಾಂತಃಕರಣಸ್ತಸ್ಯ ಮುಕ್ತಿಃ ಕರೇ ಸ್ಥಿತಾ ॥ ೪೧ ॥

---

೩೮. ಮಳೆ ಮತ್ತು ಬಿಸಿಲಿನಲ್ಲಿ ಛತ್ರಿಯನ್ನೂ, ರಾತ್ರಿಯಲ್ಲಿಯೂ ಅಡವಿಯಲ್ಲಿಯೂ ಸಂಚರಿಸುವಾಗ ದಂಡವನ್ನೂ ಕಾಲಿಗೆ ಜೋಡನ್ನೂ ಶರೀರರಕ್ಷಣೆಗಾಗಿ ಧರಿಸಿ ಸಂಚರಿಸಬೇಕು.

೩೯. ಮನುಷ್ಯನು ಸಂಚರಿಸುವಾಗ ಮೇಲೂ ಅಡ್ಡವಾಗಿಯೂ ದೃಷ್ಟಿಯಿಡದೆ ನಾಲ್ಕು ಮೊಳ ದೂರದಲ್ಲಿ ಭೂಭಾಗವನ್ನು ನೋಡುತ್ತಾ ಸಂಚರಿಸಬೇಕು.

೪೦. ದೋಷಕಾರಣವಾದ ಸಮಸ್ತ ಕಾರ್ಯಗಳನ್ನೂ ಬಿಟ್ಟು ಮನಸ್ಸನ್ನು ತನ್ನ ವಶಮಾಡಿಕೊಂಡಿರುವ ಮನುಷ್ಯನಿಗೆ ಧರ್ಮಾರ್ಥಕಾಮಗಳೆಂಬ ತ್ರಿವರ್ಗಗಳ ಹಾನಿಯು ಸ್ವಲ್ಪವೂ ಉಂಟಾಗುವುದಿಲ್ಲ.

೪೧. ವಿದ್ಯಾವಿನಯಗಳನ್ನಭ್ಯಾಸಮಾಡಿದ ಸದಾಚಾರದಲ್ಲಾಸಕ್ತನಾದ, ಜ್ಞಾನಿಯು ದುಷ್ಟರ ವಿಷಯದಲ್ಲಿಯೂ ಒಳ್ಳೆಯವನಾಗಿರುತ್ತ, ಅಪಕಾರಮಾಡಿದವನಿಗೂ ಉಪಕಾರಮಾಡುತ್ತ, ಕಠಿನ ಮಾತನಾಡಿದವರಲ್ಲಿಯೂ ಪ್ರಿಯವಾದ ಮಾತನ್ನಾಡುತ್ತ, ಸ್ನೇಹದಿಂದ ಕರಗಿದ ಮನಸ್ಸುಳ್ಳವನಾಗಿರುವನು. ಅವನಿಗೆ ಮೋಕ್ಷವು ಅಧೀನವಾಗಿರುವುದು.

ಯೇ ಕಾಮಕ್ರೋಧಲೋಭಾನಾಂ ವೀತರಾಗಾನಗೋಚರೇ ।
ಸದಾಚಾರಸ್ಥಿತಾಸ್ತೇಷಾಮನುಭಾವೈರ್ಧೃತಾ ಮಹೀ ॥ ೪೨ ॥

ತಸ್ಮಾತ್ಸತ್ಯಂ ವದೇತ್ಪ್ರಾಜ್ಞೋ ಯತ್ಪರಪ್ರೀತಿ ಕಾರಣಂ ।
ಸತ್ಯಂ ಯತ್ಪರದುಃಖಾಯ ತತ್ರ ಮೌನಪರೋ ಭವೇತ್ ॥ ೪೩ ॥

ಪ್ರಿಯಮುಕ್ತಂ ಹಿತಂ ನೈತದಿತಿ ಮತ್ವಾ ನ ತದ್ವದೇತ್ ।
ಶ್ರೇಯಸ್ತತ್ರ ಹಿತಂ ವಾಚ್ಯಂ ಯದ್ಯಪ್ಯತ್ಯಂತಮಪ್ರಿಯಂ ॥ ೪೪ ॥

ಪ್ರಾಣಿನಾಮುಪಕಾರಾಯ ಯದೇವೇಹಪರತ್ರ ಚ ।
ಕರ್ಮಣಾ ಮನಸಾ ವಾಚಾ ತದೇವಮತಿಮಾನ್ವಹೇತ್ ॥ ೪೫ ॥

ಇತಿ ಶ್ರೀ ವಿಷ್ಣುಪುರಾಣೇ ತೃತೀಯಾಂಶೇ ದ್ವಾದಶೋಽಧ್ಯಾಯಃ

---

೪೨ ಯಾರು ಕಾಮ ಕ್ರೋಧ ಲೋಭಗಳಿಗೆ ಅವಕಾಶ ಕೊಡುವುದಿಲ್ಲವೋ ಸದಾಚಾರದಿಂದಿರುವರೋ ಅವರ ಸತ್ಯಾದಿ ಮಹಿಮೆಯಿಂದ ಈ ಪ್ರಪಂಚವಿರುವುದು.

೪೩. ಆದುದರಿಂದ ಬುದ್ಧಿವಂತನಾದವನು ಪರರಿಗೆ ಹಿತವನ್ನುಂಟುಮಾಡುವ ಸತ್ಯವನ್ನು ಹೇಳಬೇಕು. ಸತ್ಯಭಾಷಣವು ಪರರ ದುಃಖ ಕಾರಣವಾಗಿದ್ದರೆ ಮೌನ ವನ್ನಾಶ್ರಯಿಸಬೇಕು.

೪೪. ಪ್ರಿಯವಾದ ಮಾತನಾಡಿದರೆ ಮತ್ತೊಬ್ಬರಿಗೆ ಹಿತವಾಗದ ಸಂದರ್ಭ ದಲ್ಲಿ ಆ ಮಾತನ್ನಾಡಬಾರದು. ಶ್ರೇಯಸ್ಸುಂಟಾಗುವ ಸಂದರ್ಭದಲ್ಲಿ ಅಪ್ರಿಯವಾದರೂ ಹಿತವಾಗುವ ಮಾತನ್ನಾಡಬೇಕು.

೪೫. ಇಹ ಪರಲೋಕಗಳಲ್ಲಿ ಪ್ರಾಣಿಗಳಿಗೆ ಉಪಕಾರಕ್ಕಾಗಿ ಮನೋವಾ ಕ್ಕಾಯಗಳೆಂಬ ತ್ರಿಕರಣಗಳಿಂದ ಶುದ್ಧವಾದ ಮಾತನ್ನೇ ಹೇಳಬೇಕು.

ಎಂಬಲ್ಲಿಗೆ ಶ್ರೀ ವಿಷ್ಣುಪುರಾಣದ ತೃತೀಯಾಂಶದಲ್ಲಿ

ಹನ್ನೆರಡನೆಯ ಅಧ್ಯಾಯವು ಮುಗಿದುದು.

ಶ್ರೀಃ

# ಶ್ರೀ ವಿಷ್ಣುಪುರಾಣೇ ತೃತೀಯಾಂಶೇ

## ತ್ರಯೋದಶೋಽಧ್ಯಾಯಃ

---

॥ ಔರ್ವಃ ॥

ಸಚೇಲಸ್ಯ ಪಿತುಃ ಸ್ನಾನಂ ಜಾತೇ ಪುತ್ರೇ ವಿಧೀಯತೇ ।
ಜಾತಕರ್ಮ ತಥಾಕುರ್ಯಾಚ್ಛ್ರಾದ್ಧಮಭ್ಯುದಯಂ ಚ ಯತ್ ॥ ೧ ॥

ಯುಗ್ಮಾನ್ ದೇವಾಂಶ್ಚ ಪಿತ್ರ್ಯಾಂಶ್ಚ ಸಮ್ಯಕ್ಸವ್ಯಕ್ರಮಾದ್ದ್ವಿಜಃ ।
ಪೂಜಯೇದ್ಭೋಜಯೇಚ್ಚೈವ ತನ್ಮನಾ ನಾನ್ಯಮಾನಸಃ ॥ ೨ ॥

ದಧ್ಯಕ್ಷತೈಸ್ಸಬದರೈಃ ಪ್ರಾಙ್ಮುಖೋದಙ್ಮುಖೋಽಪಿ ವಾ ।
ದೇವತೀರ್ಥೇನ ವೈ ಪಿಂಡಾನ್ ದದ್ಯಾತ್ಕಾಯೇನ ವಾ ನೃಪ ॥ ೩ ॥

---

### ಹದಿಮೂರನೆಯ ಅಧ್ಯಾಯ

೧-೬. ಔರ್ವನು ಹೇಳುವನು:—ಪುತ್ರನು ಹುಟ್ಟಿದಾಗ ತಂದೆಯಾದವನು ಉಟ್ಟ ಬಟ್ಟೆಯೊಡನೆ ಸ್ನಾನಮಾಡಿ ನಾಂದೀ ಶ್ರಾದ್ಧವನ್ನೂ ಜಾತಕರ್ಮವನ್ನೂ ಮಾಡಬೇಕು. ನಾಂದೀ ಶ್ರಾದ್ಧದಲ್ಲಿ ದೇವತೆಗಳಿಗಾಗಿಯೂ, ಪಿತೃಗಳಿಗಾಗಿಯೂ ಸಮಸಂಖ್ಯೆಯ ಬ್ರಾಹ್ಮಣರಿಗೆ ಪ್ರದಕ್ಷಿಣ ಕ್ರಮದಿಂದ ಪೂಜೆಯನ್ನು ಮಾಡಿ ಏಕಾಗ್ರ ಚಿತ್ತದಿಂದ ಭೋಜನವನ್ನು ಮಾಡಿಸಬೇಕು. ಮೊಸರು, ಮಂತ್ರಾಕ್ಷತೆ, ಎಲಚಿಯ ಹಣ್ಣು, ಇವುಗಳಿಂದ ಪಿಂಡವನ್ನು ಮಾಡಿ ಪೂರ್ವಾಭಿಮುಖವಾಗಿಯಾಗಲೀ, ಉತ್ತರಾಭಿಮುಖವಾಗಿಯಾಗಲೀ, ಕುಳಿತು ದೇವತೀರ್ಥದಿಂದ ಪಿಂಡವನ್ನು ಕೊಡಬೇಕು. ಇದರಿಂದ ನಾಂದೀ ಮುಖರಾದ ಪಿತೃಗಣಗಳು ಸಂತೋಷಪಡುವರು

ನಾಂದೀಮುಖಃ ಪಿತೃಗಣಸ್ತೇನ ಶ್ರಾದ್ಧೇನ ಪಾರ್ಥಿವ ।
ಪ್ರೀಯತೇ ತತ್ತು ಕರ್ತವ್ಯಂ ಪುರುಷೈಸ್ಸರ್ವವೃದ್ಧಿಷು ॥ ೪ ॥

ಕನ್ಯಾಪುತ್ರವಿವಾಹೇಷು ಪ್ರವೇಶೇಷು ಚ ವೇಶ್ಮನಃ ।
ನಾಮಕರ್ಮಣಿ ಬಾಲಾನಾಂ ಚೂಡಾಕರ್ಮಾದಿಕೇ ತಥಾ ॥ ೫ ॥

ಸೀಮಂತೋನ್ನಯನೇ ಚೈವ ಪುತ್ರಾದಿಮುಖದರ್ಶನೇ ।
ನಾಂದೀಮುಖಂ ಪಿತೃಗಣಂ ಪೂಜಯೇತ್ಪ್ರಯತೋ ಗೃಹೀ ॥ ೬ ॥

ಪಿತೃಪೂಜಾಕ್ರಮಃ ಪ್ರೋಕ್ತೋ ವೃದ್ಧಾವೇಷಸಮಾಸತಃ ।
ಶ್ರೂಯತಾಮವನೀಪಾಲ ಪ್ರೇತಕರ್ಮಕ್ರಿಯಾವಿಧಿಃ ॥ ೭ ॥

ಪ್ರೇತದೇಹಂ ಶುಭೈಸ್ಸ್ನಾನೈಃ ಸ್ನಾಪಿತಂ ಸ್ರಗ್ವಿಭೂಷಿತಂ ।
ದಗ್ಧ್ವಾ ಗ್ರಾಮಾದ್ಬಹಿಃ ಸ್ನಾತ್ವಾ ಸಚೇಲಾಸ್ಸಲಿಲಾಶಯೇ ॥ ೮ ॥

---

ಕನ್ಯಾಪುತ್ರರ ವಿವಾಹಗಳಲ್ಲಿಯೂ, ಗೃಹಪ್ರವೇಶ ಕರ್ಮದಲ್ಲಿಯೂ ನಾಮಕರಣ, ಚೂಡಾಕರ್ಮ, ಸೀಮಂತೋನ್ನಯನ, ಜಾತಕರ್ಮ ಮುಂತಾದ ಸಮಸ್ತ ವೃದ್ಧಿ ಕಾರ್ಯಗಳಲ್ಲಿಯೂ ಗೃಹಸ್ಥನಾದ ಮನುಷ್ಯನು ಪ್ರಯತ್ನಪೂರ್ವಕವಾಗಿ ನಾಂದೀ ಮುಖರಾದ ಪಿತೃಗಣಗಳನ್ನು ಪೂಜಿಸಬೇಕು.

೭-೧೦. ವೃದ್ಧಿಶ್ರಾದ್ಧದಲ್ಲಿ ಪಿತೃಗಳ ಪೂಜಾಕ್ರಮವನ್ನು ಸಂಕ್ಷೇಪವಾಗಿ ಹೇಳಿಯಾಯಿತು. ರಾಜನೇ! ಇನ್ನು ಮುಂದೆ ಪ್ರೇತಕರ್ಮ ಕ್ರಿಯಾ ವಿಧಿಯನ್ನು ಹೇಳುವೆನು ಕೇಳು. ಬಂಧುಗಳು ಪ್ರೇತ ದೇಹಕ್ಕೆ ಸ್ನಾನಮಾಡಿಸಿ, ಹೂಗಳಿಂದ ಅಲಂಕರಿಸಿ ಗ್ರಾಮದಿಂದ ಹೊರಗೆ ಶುದ್ಧಪ್ರದೇಶದಲ್ಲಿ ಅಗ್ನಿಯಲ್ಲಿ ದಹಿಸಿ, ಜಲಾಶಯದಲ್ಲಿ ವಸ್ತ್ರಸಹಿತವಾಗಿ ಸ್ನಾನ ಮಾಡಿ ಮರಣಹೊಂದಿದವನ ಗೋತ್ರ ನಾಮಗಳನ್ನುಚ್ಚರಿಸಿ

ಯತ್ರ ತತ್ರ ಸ್ಥಿತಾ ಯ್ಯೈತದಮುಕಾಯೇತಿ ವಾದಿನಃ ।
ದಕ್ಷಿಣಾಭಿಮುಖಾ ದದ್ಯುರ್ಬಾಂಧವಾಸ್ಸಲಿಲಾಜಲಿಂ ॥ ೯ ॥

ಪ್ರವಿಷ್ಟಾಶ್ಚ ಸಮಂ ಗೋಭಿರ್ಗ್ರಾಮಂ ನಕ್ಷತ್ರದರ್ಶನೇ ।
ಕಟಕರ್ಮ ತತಃ ಕುರ್ಯುರ್ಭೂಮೌ ಪ್ರಸ್ತರಶಾಯಿನಃ ॥ ೧೦ ॥

ದಾತವ್ಯೋಽನುದಿನಂ ಪಿಂಡಃ ಪ್ರೇತಾಯ ಭುವಿ ಪಾರ್ಥಿವ ।
ದಿವಾ ಚ ಭಕ್ತಂ ಭೋಕ್ತವ್ಯಮಮಾಂಸಂ ಮನುಜರ್ಷಭ ॥ ೧೧ ॥

ದಿನಾನಿ ತಾನಿ ಚೇಚ್ಛಾತಃ ಕರ್ತವ್ಯಂ ದ್ವಿಜಭೋಜನಂ ।
ಪ್ರೇತಸ್ತೃಪ್ತಿಂ ತಥಾ ಯಾತಿ ಬಂಧುವರ್ಗೇಣ ಭುಂಜತಾ ॥ ೧೨ ॥

ಪ್ರಥಮೇಽಹ್ನಿ ತೃತೀಯೇಽಹ್ನಿ ಸಪ್ತಮೇ ನವಮೇ ತಥಾ ।
ವಸ್ತ್ರತ್ಯಾಗಬಹಿಃಸ್ನಾನೇ ಕೃತ್ವಾ ದದ್ಯಾತ್ತಿಲೋದಕಂ ॥ ೧೩ ॥

---

ದಕ್ಷಿಣಾಭಿಮುಖವಾಗಿ ತರ್ಪಣವನ್ನು ಕೊಡಬೇಕು. ತರುವಾಯ ಗೋವುಗಳು ಗ್ರಾಮವನ್ನು ಪ್ರವೇಶಿಸುವಾಗ ಅಥವಾ ನಕ್ಷತ್ರಗಳು ಕಾಣಿಸುವಾಗ ಗ್ರಾಮವನ್ನು ಪ್ರವೇಶಿಸಿ ಹುಲ್ಲು ಮುಂತಾದುವನ್ನು ನೆಲದ ಮೇಲೆ ಹಾಸಿ ಮಲಗಿಕೊಂಡು ಪ್ರೇತಾಶೌಚದಿಂದಿರಬೇಕು.

೧೧–೧೨. ಆಶೌಚವು ಮುಗಿಯುವವರೆಗೂ ಮರಣಹೊಂದಿದವನಿಗೆ ಪ್ರತಿ ದಿನವೂ ಭೂಮಿಯ ಮೇಲೆ ಪಿಂಡವನ್ನು ಕೊಡಬೇಕು. ಪ್ರೇತಕರ್ಮವನ್ನು ಮಾಡುವವನು ಹಗಲು ಒಂದು ಹೊತ್ತು ಅನ್ನವನ್ನು ಭೋಜನ ಮಾಡಬೇಕು. ಮಾಂಸವನ್ನು ಭೋಜನ ಮಾಡಬಾರದು. ಪ್ರೇತಕರ್ಮವು ಮುಗಿಯುವವರೆಗೂ ಪ್ರತಿ ದಿನವೂ ಇಷ್ಟಬಂದಷ್ಟು ಬ್ರಾಹ್ಮಣ ಭೋಜನವನ್ನು ಮಾಡಿಸಬೇಕು ಬಂಧು ವರ್ಗಗಳ ಭೋಜನದಿಂದ ಪ್ರೇತನಿಗೆ ತೃಪ್ತಿಯಾಗುವುದು.

೧೩–೧೬. ಪ್ರೇತನಿಗೆ ಸಪಿಂಡರಾದ ಜ್ಞಾತಿಗಳು ಮೊದಲನೆಯ ದಿನವೂ ಮೂರು, ಏಳು, ಒಂಬತ್ತನೆಯ ದಿನಗಳಲ್ಲೂ ಸ್ನಾನವನ್ನು ಮಾಡಿ, ತಿಲೋದಕವನ್ನು

ಚತುರ್ಥೇಽಹ್ನಿ ತತಃ ಕುರ್ಯಾದಸ್ಥಿ ಸಂಚಯನಂ ನೃಪ ।
ತದೂರ್ಧ್ವಮಂಗಸಂಸ್ಪರ್ಶಸ್ಸಪಿಂಡಾನಾಮಪೀಷ್ಯತೇ ॥ ೧೪ ॥

ಯೋಗ್ಯಾಸ್ಸರ್ವಕ್ರಿಯಾಣಾಂ ತು ಸಮಾನಸಲಿಲಾಸ್ತಥಾ ।
ಅನುಲೇಪನಪುಷ್ಪಾದಿ ಭೋಗಾದನ್ಯತ್ರ ಪಾರ್ಥಿವ ॥ ೧೫ ॥

ಶಯ್ಯಾಸನೋಪಭೋಗಶ್ಚ ಸ ಪಿಂಡಾನಾಮಪೀಷ್ಯತೇ ।
ಭಸ್ಮಾಸ್ಥಿ ಚಯನಾದೂರ್ಧ್ವಂ ಸಂಯೋಗೋ ನ ತು ಯೋಷಿತಾಂ ॥ ೧೬ ॥

ಬಾಲೇ ದೇಶಾಂತರಸ್ಥೇ ಚ ಪತಿತೇ ಚ ಮುನೌ ಮೃತೇ ।
ಸದ್ಯಶ್ಶೌಚಂ ತಥೇಚ್ಛಾತೋ ಜಲಾಗ್ನ್ಯುದ್ಬಂಧನಾದಿಷು ॥ ೧೭ ॥

ಮೃತಬಂಧೋರ್ದಶಾಹಾನಿ ಕುಲಸ್ಯಾನ್ನಂ ನ ಭುಜ್ಯತೇ ।
ದಾನಂ ಪ್ರತಿಗ್ರಹೋ ಯಜ್ಞ ಸ್ಸ್ವಾಧ್ಯಾಯಶ್ಚ ನಿ ವರ್ತತೇ ॥ ೧೮ ॥

---

ಕೊಡಬೇಕು. ನಾಲ್ಕನೆಯ ದಿನ ಅಸ್ತಿ ಸಂಚಯನವನ್ನು ಮಾಡಬೇಕು. ಆಶೌಚ ರೂಪವಾದ ಹತ್ತು ದಿನಗಳು ಕಳೆದ ಮೇಲೆ, ಇತರರು ಸಪಿಂಡರಾದ ಜ್ಞಾತಿಗಳ ಅಂಗ ಸಂಸ್ಪರ್ಶವನ್ನು ಮಾಡಬಹುದು. ಆಗ ಸಪಿಂಡರೂ ಸಮಾನೋದಕರೂ ಸಂಧ್ಯೋಪಾಸನಾದಿ ಸಮಸ್ತ ಕ್ರಿಯೆಗಳನ್ನು ಮಾಡಲು ಯೋಗ್ಯರಾಗುವರು. ಸಂಚಯನವಾದ ಮೇಲೆ ಜ್ಞಾತಿಗಳೂ ಗಂಧ ಹೂವುಗಳನ್ನೂ, ಸ್ತ್ರೀ ಸಂಗವನ್ನೂ ಬಿಟ್ಟು, ಹಾಸಿಗೆ ಪೀಠಗಳನ್ನು ಉಪಯೋಗಿಸಬಹುದು.

೧೭-೧೯. ಪತಿತನೂ, ಸಂನ್ಯಾಸಿಯೂ ಮರಣ ಹೊಂದಿದರೆ ಅವರ ಮಕ್ಕಳು ದೇಶಾಂತರದಲ್ಲಿದ್ದರೆ ಅವರು ಮರಣವಾರ್ತೆಯನ್ನು ಕೇಳಿದೊಡನೆ ಸ್ನಾನಮಾಡಿದರೆ ಶುದ್ಧರಾಗುವರು. ನೀರು ಅಗ್ನಿ ಮುಂತಾದ ದುರ್ಮರಣಗಳನ್ನು ಹೊಂದಿದವರ ಬಂಧುಗಳು ಹತ್ತು ದಿನ ಆಶೌಚವಿರಬೇಕು. ಅವರ ಮನೆಯಲ್ಲಿ ಯಾರೂ ಭೋಜನ ಮಾಡಬಾರದು. ಅವನು ದಾನ ಪ್ರತಿಗ್ರಹ, ಯಜ್ಞ, ವೇದಾಧ್ಯಯನಗಳನ್ನು ಮಾಡಬಾರದು. ಬ್ರಾಹ್ಮಣನಿಗೆ ಹತ್ತು ದಿನ, ಕ್ಷತ್ರಿಯನಿಗೆ ಹನ್ನೆರಡು ದಿನ, ವೈಶ್ಯನಿಗೆ

ವಿಪ್ರಸ್ಯೈತದ್ದ್ವಾದಶಾಹಂ ರಾಜನ್ಯಸ್ಯಾಪ್ಯ ಶೌಚಕಂ ।
ಅರ್ಧಮಾಸಂ ತು ವೈಶ್ಯಸ್ಯ ಮಾಸಂ ಶೂದ್ರಸ್ಯ ಶುದ್ಧಯೇ ॥ ೧೯ ॥

ಅಯುಜೋ ಭೋಜಯೇತ್ಕಾಮಂ ದ್ವಿಜಾನಂತೇ ತತೋದಿನೇ ।
ದದ್ಯಾದ್ದರ್ಭೇಷು ಪಿಂಡಂ ಚ ಪ್ರೇತಾಯೋಚ್ಛಿಷ್ಟಸನ್ನಿಧೌ ॥ ೨೦ ॥

ವಾಯ್ವಾಯುಧಪ್ರತೋದಾಸ್ತು ದಂಡಶ್ಚ ದ್ವಿಜಭೋಜನಾತ್ ।
ಸ್ಪ್ರಷ್ಟವ್ಯೋನಂತರಂ ವರ್ಣೈಶ್ಶುದ್ಧ್ಯೇರಂಸ್ತೇ ತತಃ ಕ್ರಮಾತ್ ॥ ೨೧

ತತಸ್ಸ್ವವರ್ಣಧರ್ಮಾ ಯೇ ವಿಪ್ರಾದೀನಾಮುದಾಹೃತಾಃ ।
ತಾನ್ಕುರ್ವೀತ ಪುಮಾನ್ ಜೀವೇನ್ನಿಜಧರ್ಮಾರ್ಜನೈಸ್ತಥಾ ॥ ೨೨ ॥

ಮೃತಾಹನಿ ಚ ಕರ್ತವ್ಯಮೇಕೋದ್ದಿಷ್ಟಮತಃ ಪರಂ ।
ಆಹ್ವಾನಾದಿ ಕ್ರಿಯಾದೈವನಿಯೋಗರಹಿತಂ ಹಿ ತತ್ ॥ ೨೩ ॥

---

ಹದಿನೈದು ದಿನ, ಶೂದ್ರನಿಗೆ ಒಂದು ತಿಂಗಳು ಅಶೌಚವಿರುವುದು. ಆ ಕಾಲವು ಕಳೆದ ಮೇಲೆ ಅವರು ಶುದ್ಧರು.

೨೦-೨೫. ಹನ್ನೊಂದನೆಯ ದಿನ ಮಾಡುವ ಆದ್ಯೇಕೋದ್ದಿಷ್ಟ ಶ್ರಾದ್ಧದಲ್ಲಿ ಒಬ್ಬರು ಅಥವಾ ಮೂವರು ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು. ಬ್ರಾಹ್ಮಣರ ಉಚ್ಛಿಷ್ಟದ ಸಮೀಪದಲ್ಲಿ ದರ್ಭೆಯ ಮೇಲೆ ಒಂದು ಪ್ರೇತಪಿಂಡವನ್ನು ಹಾಕಬೇಕು. ಬ್ರಾಹ್ಮಣ ಭೋಜನವಾದ ಮೇಲೆ ಬ್ರಾಹ್ಮಣನು ನೀರನ್ನೂ, ಕ್ಷತ್ರಿಯನು ಆಯುಧವನ್ನೂ, ವೈಶ್ಯನು ಕೋಡೆಯನ್ನೂ, ಶೂದ್ರನು ದಂಡವನ್ನೂ ಮುಟ್ಟಿದರೆ ಶುದ್ಧರಾಗುವರು. ಬ್ರಾಹ್ಮಣಾದಿ ವರ್ಣದವರು ತಮ್ಮ ಧರ್ಮಗಳನ್ನಾಚರಿಸಿ ಸರಳತೆಯಿಂದ ಜೀವಿಸಬೇಕು. ಏಕೋದ್ದಿಷ್ಟಶ್ರಾದ್ಧವಾದಮೇಲೆ ಪ್ರತಿ ತಿಂಗಳಲ್ಲಿಯೂ ಮೃತ ತಿಥಿಯ ದಿನ ವೈಶ್ವದೇವವಿಲ್ಲದೆ ಆವಾಹನ ಅಗ್ನೌಕರಣಾದಿ ಶ್ರಾದ್ಧಕ್ರಿಯೆ

ಏಕೋಽರ್ಘ್ಯಸ್ತತ್ರ ದಾತವ್ಯಸ್ತಥೈವೈಕಪವಿತ್ರಕಂ ।
ಪ್ರೇತಾಯ ಪಿಂಡೋ ದಾತವ್ಯೋ ಭುಕ್ತವತ್ಸು ದ್ವಿಜಾತಿಷು ॥ ೨೪ ॥

ಪ್ರಶ್ನಶ್ಚ ತತ್ರಾಭಿರತಿರ್ಯಜಮಾನದ್ವಿಜನ್ಮನಾಂ ।
ಅಕ್ಷಯ್ಯಮಮುಕಸ್ಯೇತಿ ವಕ್ತವ್ಯಂ ವಿರತೌ ತಥಾ ॥ ೨೫ ॥

ಏಕೋದ್ದಿಷ್ಟಮಯೋ ಧರ್ಮ ಇತ್ಥಮಾವತ್ಸರಾತ್ಸ್ಮೃತಃ ।
ಸಪಿಂಡೀಕರಣಂ ತಸ್ಮಿನ್ ಕಾಲೇ ರಾಜೇಂದ್ರ ತಚ್ಛೃಣು ॥ ೨೬ ॥

ಏಕೋದ್ದಿಷ್ಟವಿಧಾನೇನ ಕಾರ್ಯಂ ತದಪಿ ಪಾರ್ಥಿವ ।
ಸಂವತ್ಸರೇಽಥ ಷಷ್ಠೇ ವಾ ಮಾಸಿ ವಾ ದ್ವಾದಶೇಽಹ್ನಿ ತತ್ ॥ ೨೭ ॥

ತಿಲಗಂಧೋದಕೈರ್ಯುಕ್ತಂ ತತ್ರ ಪಾತ್ರಚತುಷ್ಟಯಂ ॥ ೨೮ ॥

ಪಾತ್ರಂ ಪ್ರೇತಸ್ಯ ತತ್ರೈಕಂ ಪೈತ್ರಂ ಪಾತ್ರತ್ರಯಂ ತಥಾ ।
ಸೇಚಯೇತ್ಪಿತೃಪಾತ್ರೇಷು ಪ್ರೇತಪಾತ್ರಂ ನೃಪ ತ್ರಿಷು ॥ ೨೯ ॥

---

ಗಳನ್ನು ಮಾಡಬೇಕು. ಪ್ರೇತಶ್ರಾದ್ಧವನ್ನು ಮಾಡುವಾಗ ಒಂದೇ ದರ್ಭೆಯ ಪವಿತ್ರ, ಒಂದೇ ಅರ್ಘ್ಯ, ಒಂದೇ ಪಿಂಡ ಅಭಿರಮ್ಯತಾಂ ಎಂದೂ ಉಪತಿಷ್ಠತು ಎಂದೂ ಹೇಳಬೇಕು.

೨೬-೩೦. ಹೀಗೆ ಏಕೋದ್ದಿಷ್ಟ ಧರ್ಮವು ಒಂದು ವರ್ಷ ಪರ್ಯಂತವಾಗಿರುವುದು. ವರ್ಷವಾದಮೇಲೆ ಸಪಿಂಡೀಕರಣ ಶ್ರಾದ್ಧವನ್ನು ಮಾಡಬೇಕು. ಸಪಿಂಡೀಕರಣ ಶ್ರಾದ್ಧವನ್ನು ಏಕೋದ್ದಿಷ್ಟ ವಿಧಾನದಿಂದ ವರ್ಷಾಂತರದಲ್ಲಾಗಲೀ, ಆರನೆಯ ತಿಂಗಳಲ್ಲಾಗಲೀ, ಹನ್ನೆರಡನೆಯ ದಿನದಲ್ಲಾಗಲೀ ಮಾಡಬಹುದು. ಆ ಶ್ರಾದ್ಧದಲ್ಲಿ ತಿಲ ಗಂಧೋದಕವನ್ನು ನಾಲ್ಕು ಅರ್ಘ್ಯ ಪಾತ್ರೆಗಳಲ್ಲಿಟ್ಟು ಒಂದು ಪ್ರೇತಪಾತ್ರೆಯನ್ನಾಗಿಯೂ, ಮೂರು ಪಿತೃಪಾತ್ರೆಯನ್ನಾಗಿಯೂ, ಗ್ರಹಿಸಿ ಪ್ರೇತ ಪಾತ್ರೆಯ

ತತಃ ಪಿತೃತ್ವಮಾಪನ್ನೇ ತಸ್ಮಿನ್ ಪ್ರೇತೇ ಮಹೀಪತೇ ।
ಶ್ರಾದ್ಧಧರ್ಮೈರಶೇಷೈಸ್ತು ತತ್ಪೂರ್ವಾನರ್ಚಯೇತ್ಪಿತೄನ್ ॥ ೩೦ ॥

ಪುತ್ರಃ ಪೌತ್ರಃ ಪ್ರಪೌತ್ರೋ ವಾ ಭ್ರಾ, ತಾ ವಾ ಭ್ರಾತೃಸಂತತಿಃ ।
ಸಪಿಂಡಸಂತತಿರ್ವಾಪಿ ಕ್ರಿಯಾರ್ಹಾ ನೃಪ ಜಾಯತೇ ॥ ೩೧ ॥

ತೇಷಾಮಭಾವೇ ಸರ್ವೇಷಾಂ ಸಮಾನೋದಕಸಂತತಿಃ ।
ಮಾತೃಪಕ್ಷಸಪಿಂಡೇನ ಸಂಬಂಧಾ ಯೇ ಜಲೇನ ವಾ ॥ ೩೨ ॥

ಕುಲದ್ವಯೇಪಿ ಚೋಚ್ಛಿನ್ನೇ ಸ್ತ್ರೀಭಿಃ ಕಾರ್ಯಾ ನೃಪ ಕ್ರಿಯಾಃ ।
ಪಿತೃಮಾತೃಸಪಿಂಡೈಸ್ತು ಸಮಾನಸಲಿಲೈಸ್ತಥಾ । ॥ ೩೩ ॥

---

ನೀರನ್ನು ಮೂರು ಪಿತೃಪಾತ್ರೆಗಳ ನೀರಿನೊಡನೆ ಸೇರಿಸಬೇಕು. ಆಗ ಪ್ರೇತನು ಪಿತೃರೂಪನಾಗುವನು. ಆಮೇಲೆ ಅವನನ್ನೇ ಪಿತೃರೂಪನಾಗಿ ಮಾಡಿಕೊಂಡು ಮುಂದಿನ ಶ್ರಾದ್ಧಧರ್ಮಗಳಿಂದ ಪಿತೃಗಳನ್ನು ಪೂಜಿಸಬೇಕು.

೩೧–೩೪. ರಾಜನೇ ! ಮರಣ ಹೊಂದಿದವನಿಗೆ ಮಗನಾಗಲಿ, ಮೊಮ್ಮಗನಾಗಲಿ, ಮರಿಮಗನಾಗಲಿ, ಸಹೋದರನಾಗಲಿ, ಸಹೋದರನ ಸಂತತಿಯವರಾಗಲಿ, ಸಪಿಂಡಸಂತತಿಯವರಾಗಲಿ ಪ್ರೇತ ಕರ್ಮವನ್ನು ಮಾಡುವ ಕರ್ತೃಗಳಾಗಬಹುದು. ಇವರಾರೂ ಇಲ್ಲದೆ ಹೋದರೆ ಸಮಾನೋದಕ ಸಂತತಿಯವರು ಅಥವಾ ಮಾತೃಪಕ್ಷದಲ್ಲಿ ಸಪಿಂಡಸಂತತಿಯುವರಾಗಲಿ, ಸಮಾನೋದಕ ಸಂತತಿಯುವರಾಗಲಿ ಕರ್ಮವನ್ನು ಮಾಬೇಕು. ಎರಡು ಕುಲದಲ್ಲಿಯೂ ಕರ್ತೃಗಳಿಲ್ಲದಿದ್ದರೆ ಅವನ ಪತ್ನಿಯರು ಕರ್ತೃಗಳಾಗಿ ಕರ್ಮ ಮಾಡಬೇಕು. ತಂದೆ ತಾಯಿಗಳ ಸಪಿಂಡ ಸಂಬಂಧವುಳ್ಳವರು ಅಥವಾ ಸಮಾನೋದಕ ಸಂಬಂಧವುಳ್ಳವರೂ, ಆದರೂ ಸಹಾಧ್ಯಾಯಿಗಳ ಗುಂಪಿನಲ್ಲಿರುವವರೂ, ಯಾತ್ರಿಕರ ಗುಂಪಿನಲ್ಲಿರುವವರೂ ಪ್ರೇತಕರ್ಮವನ್ನು ಮಾಡಬೇಕು.

ತತ್ಸಂಘಾತಾಂತಸ್ಥೈರ್ವಾಪಿ ಕಾರ್ಯಾಃ ಪ್ರೇತಸ್ಯ ತಾಃ ಕ್ರಿಯಾಃ ।
ಉತ್ಸನ್ನಬಂಧೋರಿಕ್ಥಾದ್ವಾ ಕಾರಯೇದವನೀಪತಿಃ ॥ ೩೪ ॥

ಪೂರ್ವಾಃ ಕ್ರಿಯಾ ಮಧ್ಯಮಾಶ್ಚ ತಥಾ ಚೈವೋತ್ತರಾಃ ಕ್ರಿಯಾಃ ।
ತ್ರಿಪ್ರಕಾರಾಃ ಕ್ರಿಯಾಹ್ಯೇತಾಸ್ತಾಸಾಂ ಭೇದಂ ಶೃಣುಷ್ವ ಮೇ ॥ ೩೫ ॥

ಆದಾಹವಾರ್ಯಾಯುಧಾದಿ ಸ್ಪರ್ಶಾದ್ಯಂತಾಸ್ತು ಯಾಃ ಕ್ರಿಯಾಃ ।
ತಾಃ ಪೂರ್ವಾ ಮಧ್ಯಮಾ ಮಾಸಿ ಮಾಸ್ಯೇಕೋದ್ದಿಷ್ಟಸಂಜ್ಞಿತಾಃ ॥ ೩೬ ॥

ಪ್ರೇತೇ ಪಿತೃತ್ವಮಾಪನ್ನೇ ಸಪಿಂಡೀಕರಣಾದನು ।
ಕ್ರಿಯಂತೇ ಯಾಃ ಕ್ರಿಯಾಃ ಪಿತ್ರ್ಯಾಃ ಪ್ರೋಚ್ಯಂತೇ ತಾಃ ನೃಪೋತ್ತರಾಃ

ಪಿತೃಮಾತೃಸಪಿಂಡೈಸ್ತು ಸಮಾನಸಲಿಲೈಸ್ತಥಾ ।
ಸಂಘಾತಾಂತರ್ಗತೈರ್ವಾಪಿ ರಾಜ್ಞಾ ವಾ ಧನಹಾರಿಣಾ ॥ ೩೮ ॥

---

ಯಾವ ಬಂಧುಗಳ ಸಂಬಂಧವೂ ಇಲ್ಲದಿದ್ದರೆ ಮೃತನ ಧನದಿಂದಲಾದರೂ ಪ್ರೇತ, ಕರ್ಮವನ್ನು ಮಾಡಿಸಬೇಕು.

೩೫-೩೭. ಮೃತಪಟ್ಟವಂಗೆ ಮಾಡಬೇಕಾದ ಕ್ರಿಯೆಗಳಲ್ಲಿ ಪೂರ್ವಕ್ರಿಯೆ ಮಧ್ಯಮಕ್ರಿಯೆ, ಉತ್ತರಕ್ರಿಯೆ ಎಂದು ಮೂರು ಬಗೆಯ ಕ್ರಿಯೆಗಳಿರುವುವು. ದಾಹ ಮೊದಲಾಗಿ ಹನ್ನೆರಡು ದಿನಗಳವರೆಗೆ ಅಂದರೆ ಆ ಶೌಚ ಮುಗಿಯುವವರೆಗೆ ಮಾಡುವ ಕ್ರಿಯೆಗಳು ಪೂರ್ವಕ್ರಿಯೆಗಳು, ಸಪಿಂಡೀಕರಣವಾದ ಮೇಲೆ ಪ್ರೇತನು ಪಿತೃಗಳ ಗುಂಪಿಗೆ ಸೇರಿದ ಮೇಲೆ ಉತ್ತರಕ್ರಿಯೆಗಳು, ಪ್ರತಿ ತಿಂಗಳಲ್ಲೂ ಮಾಡುವ ಏಕೋದ್ದಿಷ್ಟ ಕ್ರಿಯೆಗಳು ಮಧ್ಯಮ ಕ್ರಿಯೆಗಳೆನಿಸುವುವು.

೩೮-೪೦. ಮೃತನಿಗೆ ತಾಯಿ ತಂದೆಗಳ ಸಪಿಂಡರಾಗಲಿ, ಅವನ ಧನವನ್ನು ತೆಗೆದುಕೊಳ್ಳುವ ರಾಜನಾಗಲೀ ಪೂರ್ವಕ್ರಿಯೆಗಳನ್ನೂ ಮಧ್ಯಕ್ರಿಯೆಗಳನ್ನೂ ಮಾಡ

ಪೂರ್ವಾಃ ಕ್ರಿಯಾಸ್ತು ಕರ್ತವ್ಯಾ ಪುತ್ರಾದ್ಯೈರೇವ ಚೋತ್ತರಾಃ ।
ದೌಹಿತ್ರೈರ್ವಾ ನೃಪಶ್ರೇಷ್ಠ ಕಾರ್ಯಾಸ್ತತ್ತನಯೈಸ್ತಥಾ ॥ ೩೯ ॥

ಮೃತಾಹನಿ ಚ ಕರ್ತವ್ಯಾ ಸ್ತ್ರೀಣಾಮಪ್ಯುತ್ತರಾಃ ಕ್ರಿಯಾಃ ।
ಪ್ರತಿಸಂವತ್ಸರಂ ರಾಜನ್ ಏಕೋದ್ದಿಷ್ಟವಿಧಾನತಃ ॥ ೪೦ ॥

ತಸ್ಮಾದುತ್ತರಸಂಜ್ಞಾಯಾಃ ಕ್ರಿಯಾಸ್ತಾಃ ಶೃಣು ಪಾರ್ಥಿವ ।
ಯದಾ ಯದಾ ಚ ಕರ್ತವ್ಯಾ ವಿಧಿನಾ ಯೇನ ಚಾನಘ ॥ ೪೧ ॥

ಇತಿ ಶ್ರೀ ವಿಷ್ಣುಪುರಾಣೇ ತೃತೀಯಾಂಶೇ ತ್ರಯೋದಶೋಽಧ್ಯಾಯಃ

---

ಬೇಕು. ಉತ್ತರ ಕ್ರಿಯೆಗಳನ್ನು ಅವನ ವಂಶದಲ್ಲಿ ಹುಟ್ಟಿದ ಮಕ್ಕಳು ಮುಂತಾದವರಾಗಲಿ ದೌಹಿತ್ರನೇ ಮುಂತಾದವರಾಗಲಿ ಮಾಡಬೇಕು. ಸ್ತ್ರೀಯರಿಗೂ ಪ್ರತಿಸಂವತ್ಸರದಲ್ಲಿಯೂ ಮೃತ ತಿಥಿಯ ದಿನ ಉತ್ತರ ಕ್ರಿಯೆಗಳನ್ನು ಮಾಡಬೇಕು.

೪೧. ಆದುದರಿಂದ ಎಲೈರಾಜನೇ ! ಉತ್ತರದಲ್ಲಿ ಮಾಡಬೇಕಾದ ಕ್ರಿಯೆಗಳನ್ನು ಯಾವ ಯಾವ ಕಾಲಗಳಲ್ಲಿ ಯಾವ ಯಾವ ವಿಧಿಯಿಂದ ಮಾಡಬೇಕೆಂಬುದನ್ನು ಮುಂದಿನ ಅಧ್ಯಾಯದಲ್ಲಿ ಹೇಳುವೆನು ; ಕೇಳು.

ಎಂಬಲ್ಲಿಗೆ ಶ್ರೀ ವಿಷ್ಣುಪುರಾಣದ ತೃತೀಯಾಂಶದಲ್ಲಿ

ಹದಿಮೂರನೆಯ ಅಧ್ಯಾಯವು ಮುಗಿದುದು.

ಶ್ರೀಃ

# ಶ್ರೀ ವಿಷ್ಣುಪುರಾಣೇ ತೃತೀಯಾಂಶೇ

## ಚತುರ್ದಶೋಽಧ್ಯಾಯಃ

॥ ಔರ್ವಃ ॥

ಬ್ರಹ್ಮೇಂದ್ರರುದ್ರನಾಸತ್ಯ ಸೂರ್ಯಾಗ್ನಿವಸುಮಾರುತಾನ್ ।
ವಿಶ್ವೇದೇವಾನ್ಪಿತೃಗಣಾನ್ವಯಾಂಸಿ ಮನುಜಾನ್ಪಶೂನ್ ॥ ೧ ॥

ಸರೀಸೃಪಾನ್ಋಷಿಗಣಾನ್ಯಚ್ಚಾನ್ಯದ್ಭೂತಸಂಜ್ಞಿತಂ ।
ಶ್ರಾದ್ಧಂ ಶ್ರದ್ಧಾನ್ವಿತಃ ಕುರ್ವನ್ಪ್ರೀಣಯತ್ಯಖಿಲಂ ಜಗತ್ ॥ ೨ ॥

ಮಾಸಿ ಮಾಸ್ಯಸಿತೇ ಪಕ್ಷೇ ಪಂಚದಶ್ಯಾಂ ನರೇಶ್ವರ ।
ತಥಾಷ್ಟಕಾಸು ಕುರ್ವೀತ ಕಾಮ್ಯಾನ್ಕಾಲಾನ್ ಶೃಣುಷ್ವ ಮೇ ॥ ೩ ॥

---

### ಹದಿನಾಲ್ಕನೆಯ ಅಧ್ಯಾಯವು

೧-೨. ಔರ್ವನು ಹೇಳುವನು :— ಮನುಷ್ಯನು ತಾನು ಮಾಡತಕ್ಕ ಕರ್ಮದಲ್ಲಿ ನಂಬಿಕೆಯುಳ್ಳವನಾಗಿ ಶ್ರಾದ್ಧ ಕರ್ಮವನ್ನು ಮಾಡಿ ಬಹ್ಮ, ಇಂದ್ರ, ರುದ್ರ, ಅಶ್ವಿನೀದೇವತೆಗಳು, ಸೂರ್ಯ, ಅಗ್ನಿ, ಅಷ್ಟವಸುಗಳು, ವಾಯು, ವಿಶ್ವೇದೇವತೆಗಳು, ಪಿತೃಗಳು, ಪಕ್ಷಿಗಳು, ಮನುಜರು, ಪಶುಗಳು, ಹಾವುಗಳು, ಋಷಿಗಣಗಳು, ಪ್ರಾಣಿಗಳೆಂಬ ಹೆಸರುಳ್ಳ ಸಮಸ್ತ ಜಗತ್ತನ್ನೂ ತೃಪ್ತಿಪಡಿಸುವನು.

೩-೬. ರಾಜನೇ! ಪ್ರತಿ ತಿಂಗಳ ಕೃಷ್ಣಪಕ್ಷದ ಒಂದು ತಿಥಿಯಲ್ಲಿಯೂ, ಅಮಾವಾಸ್ಯೆಯ ದಿನವೂ, ಹಿಮಂತ, ಶಿಶಿರ ಋತುಗಳಲ್ಲಿ ಬರುವ ನಾಲ್ಕು ಕೃಷ್ಣ

ಶ್ರಾದ್ಧಾರ್ಹಮಾಗತಂ ದ್ರವ್ಯಂ ವಿಶಿಷ್ಟಮಥವಾ ದ್ವಿಜಂ ।
ಶ್ರಾದ್ಧಂ ಕುರ್ವೀತ ವಿಜ್ಞಾಯ ವ್ಯತೀಪಾತೇಯನೇ ತಥಾ ॥ ೪ ॥

ವಿಷುವೇ ಚಾಪಿ ಸಂಪ್ರಾಪ್ತೇ ಗ್ರಹಣೇ ಶಶಿಸೂರ್ಯಯೋಃ ।
ಸಮಸ್ತೇಷ್ವಪಿ ಭೂಪಾಲ ರಾಶಿಷ್ವರ್ಕೇ ಚ ಗಚ್ಛತಿ ॥ ೫ ॥

ನಕ್ಷತ್ರಗ್ರಹಪೀಡಾಸು ದುಷ್ಟಸ್ವಪ್ನಾವಲೋಕನೇ ।
ಇಚ್ಛಾಶ್ರಾದ್ಧಾನಿ ಕುರ್ವೀತ ನವಸಸ್ಯಾಗಮೇ ತಥಾ ॥ ೬ ॥

ಅಮಾವಾಸ್ಯಾ ಯದಾ ಮೈತ್ರವಿಶಾಖಾಸ್ವಾತಿಯೋಗಿನೀ ।
ಶ್ರಾದ್ಧೈಃ ಪಿತೃಗಣಸ್ತೃಪ್ತಿಂ ತದಾಪ್ನೋತ್ಯಷ್ಟವಾರ್ಷಿಕೀಂ ॥ ೭ ॥

ಅಮಾವಾಸ್ಯಾ ಯದಾ ಪುಷ್ಯೇ ರೌದ್ರೇಽಥರ್ಕ್ಷೇ ಪುನರ್ವಸೌ ।
ದ್ವಾದಶಾಬ್ದಂ ತದಾ ತೃಪ್ತಿಂ ಪ್ರಯಾಂತಿ ಪಿತರೋಽರ್ಚಿತಾಃ ॥ ೮ ॥

---

ಪಕ್ಷದ ಅಷ್ಟಮಿಯ ತಿಥಿಯಲ್ಲಿಯೂ ಕಾಮ್ಯ ಶ್ರಾದ್ಧಗಳನ್ನು ಮಾಡಬೇಕು ಶ್ರಾದ್ಧಕ್ಕೆ ಬೇಕಾದ ವಸ್ತುವು ಒದಗಿದಾಗಲೂ, ಯೋಗ್ಯವಾದ ಬ್ರಾಹ್ಮಣನು ಸಿಕ್ಕಿದಾಗಲೂ ಅಯನವ್ಯತೀಪಾತ ದಿನಗಳಲ್ಲಿಯೂ ವಿಷುವಪುಣ್ಯಕಾಲಗಳಲ್ಲಿಯೂ, ಚಂದ್ರ, ಸೂರ್ಯ ಗ್ರಹಣ ಕಾಲದಲ್ಲಿಯೂ ಸಮಸ್ತ ರಾಶಿಗಳಲ್ಲಿಯೂ, ಸೂರ್ಯನು ಪ್ರವೇಶಿಸುವ ಸಂಕ್ರಮಣ ದಿವಸಗಳಲ್ಲಿಯೂ ನಕ್ಷತ್ರ, ಪೀಡಾಕಾಲಗಳಲ್ಲಿಯೂ ದುಸ್ಸ್ವಪ್ನವನ್ನು ಕಂಡಾಗಲೂ ಹೊಸದಾಗಿರುವ ಸಸ್ಯಗಳು ಬಂದಾಗಲೂ ಕಾಮ್ಯಶ್ರಾದ್ಧವನ್ನು ಮಾಡಬೇಕು.

೭-೧೦. ಅನೂರಾಧಾ, ವಿಶಾಖಾ, ಸ್ವಾತೀ ನಕ್ಷತ್ರಗಳಿಂದ ಕೂಡಿದ ಅಮಾವಾಸ್ಯೆಯ ದಿನ ಶ್ರಾದ್ಧಮಾಡಿದರೆ ಪಿತೃಗಳು ಎಂಟು ವರ್ಷದವರೆಗೆ ತೃಪ್ತರಾಗಿರುವರು. ಪುಷ್ಯ, ಆರಿದ್ರಾ, ಪುನರ್ವಸು ನಕ್ಷತ್ರಗಳಿಂದ ಕೂಡಿದ ಅಮಾವಾಸ್ಯೆಯ ದಿನ ಪಿತೃಗಳನ್ನು ಪೂಜಿಸಿದರೆ ಹನ್ನೆರಡು ವರುಷದವರೆಗೆ ತೃಪ್ತರಾಗಿರುವರು. ಧನಿಷ್ಠಾ,

ವಾಸವಾಜೈಕಪಾದರ್ಕ್ಷೇ ಪಿತ್ರೂಣಾಂ ತೃಪ್ತಿಮಿಚ್ಛತಾಂ ।
ವಾರುಣೇ ಚಾಪ್ಯಮಾವಾಸ್ಯಾ ದೈವಾನಾಮಪಿ ದುರ್ಲಭಾ ॥ ೯ ॥

ನವಸ್ವೃಕ್ಷೇಷ್ವಮಾವಾಸ್ಯಾ ಯದೈತೇಷ್ವವನೀಪತೇ ।
ತದಾ ತು ತೃಪ್ತಿದಂ ಶ್ರಾದ್ಧಂ ಪಿತ್ರೂಣಾಂ ಶೃಣು ಚಾಪರಂ ॥ ೧೦ ॥

ಗೀತಂ ಸನತ್ಕುಮಾರೇಣ ಯಥೈಳಾಯ ಮಹಾತ್ಮನೇ ।
ಪೃಚ್ಛತೇ ಪಿತೃಭಕ್ತಾಯ ಪ್ರಶ್ರಯಾವನತಾಯ ಚ ॥ ೧೧ ॥

॥ ಸನತ್ಕುಮಾರಃ ॥

ವೈಶಾಖಮಾಸಸ್ಯ ಚ ಯಾ ತೃತೀಯಾ
ನವಮ್ಯಸೌ ಕಾರ್ತಿಕ ಶುಕ್ಲಪಕ್ಷೇ ।
ನಭಸ್ಯಮಾಸಸ್ಯ ತು ಕೃಷ್ಣಪಕ್ಷೇ
ತ್ರಯೋದಶೀ ಪಂಚದಶೀ ಚ ಮಾಘೇ ॥ ೧೨ ॥

---

ಪೂರ್ವಾಭಾದ್ರಾ, ಶತಭಿಷಾ ನಕ್ಷತ್ರಗಳಿಂದ ಕೂಡಿದ ಅಮಾವಾಸ್ಯೆಯು ದೇವತೆಗಳಿಗೂ ದುರ್ಲಭವಾದುದು. ಎಂದರೆ ಈ ತಿಥಿಯಲ್ಲಿ ಮಾಡಿದ ಶ್ರಾದ್ಧವು ಪಿತೃಗಳಿಗೆ ಪರಮ ತೃಪ್ತಿಯನ್ನುಂಟುಮಾಡುವುದೆಂದು ಅಭಿಪ್ರಾಯವು. ಈ ಮೇಲೆ ಹೇಳಿದ ಒಂಭತ್ತು ನಕ್ಷತ್ರಗಳೊಡನೆ ಕೂಡಿದ ಅಮಾವಾಸ್ಯೆಯಲ್ಲಿ ಶ್ರಾದ್ಧವನ್ನು ಮಾಡಿದರೆ ಪಿತೃಗಳಿಗೆ ತೃಪ್ತಿಯುಂಟಾಗುವುದು.

೧೧. ಈ ವಿಷಯದಲ್ಲಿ ಪುರೂರವಸ್ಸೆಂಬ ರಾಜನು ಪ್ರಶ್ನೆಮಾಡಿದುದಕ್ಕೆ ಸನತ್ಕುಮಾರನು ವಿಧೇಯತೆಯಿಂದ ನಮಸ್ಕರಿಸಿದ ಪಿತೃಭಕ್ತನಾದ ಆ ರಾಜನಿಗೆ ಹೇಳಿದುದನ್ನೇ ಹೇಳುವೆನು ಕೇಳು.

೧೨-೧೪. ವೈಶಾಖ ಶುದ್ಧ ತದಿಗೆ, ಕಾರ್ತಿಕ ಶುದ್ಧ ನವಮಿ, ಭಾದ್ರಪದ ಮಾಸದ ಕೃಷ್ಣತ್ರಯೋದಶಿ, ಮಾಘ ಬಹುಳ ಅಮಾವಾಸ್ಯೆ ಈ ನಾಲ್ಕು ಯುಗಾದಿ

ಏತಾ ಯುಗಾದ್ಯಾ ಕಥಿತಾಃ ಪುರಾಣೈಃ
ಅನಂತಪುಣ್ಯಾಸ್ತಿಥಯಶ್ಚತಸ್ರಃ ।
ಉಪಪ್ಲವೇ ಚಂದ್ರಮಸೋ ರವೇಶ್ಚ
ತ್ರಿಷ್ವಷ್ಟಕಾಸ್ವಪ್ಯಯನದ್ವಯೇ ಚ ॥ ೧೩ ॥

ಪಾನೀಯಮಪ್ಯತ್ರ ತಿಲೈರ್ವಿಮಿಶ್ರಂ
ದದ್ಯಾತ್ಪಿತೃಭ್ಯಃ ಪ್ರಯತೋ ಮನುಷ್ಯಃ ।
ಶ್ರಾದ್ಧಂ ಕೃತಂ ತೇನ ಸಮಾ ಸಹಸ್ರಂ
ರಹಸ್ಯಮೇತತ್ಪಿತರೋ ವದಂತಿ ॥ ೧೪ ॥

ಮಾಘಾಸಿತೇ ಪಂಚದಶೀ ಕದಾಚಿ
ದುಪೈತಿ ಯೋಗಂ ಯದಿ ವಾರುಣೇನ
ಋಕ್ಷೇಣ ಕಾಲಃ ಸ ಪರಃ ಪಿತೄಣಾಂ
ನ ಹ್ಯಲ್ಪಪುಣ್ಯೈರ್ನೃಪ ಲಭ್ಯತೇಽಹ ॥ ೧೫ ॥

---

ಗಳು ಈ ತಿಥಿಗಳು ಅನಂತ ಪುಣ್ಯಗಳನ್ನು ಕೊಡತಕ್ಕುವು. ಸೂರ್ಯ ಚಂದ್ರ ಗ್ರಹಣಗಳು, ಮೂರು ಅಷ್ಟಕಗಳು, ಎರಡು ಅಯನಗಳು ಈ ತಿಥಿಗಳಲ್ಲಿ ಪಿತೃಗಳಿಗೆ ಪ್ರಯತ್ನ ಪೂರ್ವಕವಾಗಿ ತಿಲತರ್ಪಣವನ್ನು ಮಾಡಿದರೆ ಸಾವಿರ ವರ್ಷ ಶ್ರಾದ್ಧ ಮಾಡಿದ ಪುಣ್ಯವು ಬರುವುದು. ಇದು ಅತ್ಯಂತ ಗೋಪ್ಯವಾದ ವಿಷಯವೆಂದು ಪಿತೃಗಳು ಹೇಳುವರು.

೧೫–೧೭. ಮಾಘ ಬಹುಳ ಅಮಾವಾಸ್ಯೆಯ ದಿನ ಶತಭಿಷಾ ನಕ್ಷತ್ರದ ಯೋಗವು ಅನೇಕ ದಿನಗಳಿಗೊಂದು ಬಾರಿ ಬರುವುದು. ಆ ಕಾಲವು ಪಿತೃಗಳಿಗೆ ಶ್ರೇಷ್ಠವಾದುದು. ಅಲ್ಪ ಪುಣ್ಯ ಮಾಡಿದವನಿಗೆ ಇಂತಹ ಕಾಲವು ದೊರೆವುದಿಲ್ಲ. ಅದೇ ಅಮಾವಾಸ್ಯೆಯು ಧನಿಷ್ಠಾ ನಕ್ಷತ್ರದೊಡನೆ ಕೂಡಿದರೆ ಆ ದಿನ ಪಿತೃಗಳಿಗೆ

ಕಾಲೇ ಧನಿಷ್ಠಾ ಯದಿ ನಾಮ ತಸ್ಮಿನ್
ಭವೇತ್ತು ಭೂಪಾಲ ತದಾ ಪಿತೃಭ್ಯಃ ।
ದತ್ತಂ ಜಲಾನ್ನಂ ಪ್ರದದಾತಿ ತೃಪ್ತಿಂ
ವರ್ಷಾಯುತಂ ತತ್ಕುಲಜೈರ್ಮನುಷ್ಯೈಃ ॥ ೧೬ ॥

ತತ್ರೈವ ಚೇದ್ಭಾದ್ರಪದಾಸ್ತು ಪೂರ್ವಾಃ
ಕಾಲೇ ಯದಾ ತತ್ಕ್ರಿಯತೇ ಪಿತೃಭ್ಯಃ ।
ಶ್ರಾದ್ಧಂ ಪರಾಂ ತೃಪ್ತಿಮುಪೈತ್ಯನೇನ
ಯುಗಂ ಸಹಸ್ರಂ ಪಿತರಸ್ಸ್ವಪಂತಿ । ॥ ೧೭ ॥

ಗಂಗಾಂ ಶತದ್ರೂಂ ಯಮುನಾಂ ವಿಪಾಶಾಂ
ಸರಸ್ವತೀಂ ನೈಮಿಷಗೋಮತೀಂ ವಾ ।
ತಥಾವಗಾಹ್ಯಾರ್ಚನ ಮಾದರೇಣ
ಕೃತ್ವಾ ಪಿತೄಣಾಂ ದುರಿತಾನಿ ಹಂತಿ ॥ ೧೮ ॥

---

ಕೊಟ್ಟ ಅನ್ನ ನೀರುಗಳು ಅವರಿಗೆ ಹತ್ತು ಸಾವಿರ ವರ್ಷಗಳವರೆಗೆ ತೃಪ್ತಿಯನ್ನುಂಟು ಮಾಡುವುದು. ಅದೇ ಅಮಾವಾಸ್ಯೆಯು ಪೂರ್ವಾಭಾದ್ರಪದಾ ನಕ್ಷತ್ರದೊಡನೆ ಕೂಡಿದರೆ ಆ ದಿನ ಪಿತೃಗಳಿಗಾಗಿ ಮಾಡಿದ ಶ್ರಾದ್ಧವು ಅವರಿಗೆ ವಿಶೇಷ ತೃಪ್ತಿಯನ್ನು ಉಂಟುಮಾಡುವುದರಿಂದ ಪಿತೃಗಳು ಸಾವಿರ ಯುಗಗಳವರೆಗೆ ಸುಖವಾಗಿ ನಿದ್ರೆಮಾಡುತ್ತಿರುವರು.

೧೮–೧೯. ಗಂಗಾ, ಶತದ್ರು, ಯಮುನ, ವಿಪಾಶ, ಸರಸ್ವತಿ, ಗೋಮತಿ, ಮುಂತಾದ ತೀರ್ಥಗಳಲ್ಲಿ ಸ್ನಾನಮಾಡಿ ಪ್ರೀತಿಯಿಂದ ಪಿತೃಗಳನ್ನು ಪೂಜಿಸಿದರೆ ಸಮಸ್ತ ಪಾಪಗಳೂ ನಾಶವಾಗುವುವು. ಭಾದ್ರಪದ ಮಾಸದ ಅಪರ ಪಕ್ಷದಲ್ಲಿ ಮಘಾ ನಕ್ಷತ್ರದಿಂದ ಕೂಡಿದ ತ್ರಯೋದಶಿಯ ದಿನ ಮಕ್ಕಳು ಮುಂತಾದವರು ಶುಭಕರವಾದ

ಗಾಯಂತಿ ಚೈತತ್ಪಿತರಃ ಕದಾ ನು
ವರ್ಷಾಮಘಾ ತೃಪ್ತಿಮವಾಪ್ಯ ಭೂಪ ।
ಮಾಘಾಸಿತಾಂತೇ ಶುಭತೀರ್ಥತೋಯೈ
ರ್ಯಾಸ್ಯಾಮ ತೃಪ್ತಿಂ ತನಯಾದಿ ದತ್ತೈಃ ॥ ೧೯ ॥

ಚಿತ್ತಂ ಚ ವಿತ್ತಂ ಚ ನೃಣಾಂ ವಿಶುದ್ಧಂ
ಶಸ್ತಶ್ಚ ಕಾಲಃ ಕಥಿತೋ ವಿಧಿಶ್ಚ ।
ಪಾತ್ರಂ ಯಥೋಕ್ತಂ ಪರಮಾ ಚ ಭಕ್ತಿಃ
ನೃಣಾಂ ಪ್ರಯಚ್ಛಂತ್ಯಭಿವಾಂಛಿತಾನಿ ॥ ೨೦ ॥

ಪಿತೃಗೀತಾಂಸ್ತಥೈವಾತ್ರ ಶ್ಲೋಕಾಂಸ್ತಾನ್ ಶೃಣು ಪಾರ್ಥಿವ ।
ಕೃತ್ವಾ ತಥೈವ ಭವತಾ ಭಾವ್ಯಂ ತತ್ರ ಧೃತಾತ್ಮನಾ ॥ ೨೧ ॥

---

ತೀರ್ಥೋದಕದಲ್ಲಿ ತರ್ಪಣವನ್ನು ಯಾವಾಗ ಮಾಡುವರೋ, ನಾವು ಯಾವಾಗ ತೃಪ್ತಿಹೊಂದುವೆವೋ ಎಂದು ಪಿತೃಗಳು ಗಾನಮಾಡುತ್ತಿರುವರು.

೨೦. ಮನುಷ್ಯರ ಚಿತ್ತವೂ, ಹಣವೂ, ಶುದ್ಧವಾದುದಾಗಿ ಪ್ರಶಸ್ತವಾದ ಕಾಲವೂ, ಪಾತ್ರವೂ, ಭಕ್ತಿಯೂ ಕೂಡಿ ವಿಧಿಗನುಸಾರವಾಗಿ ಕರ್ಮವನ್ನು ಮಾಡಿದರೆ ಅದು ಮನುಷ್ಯರಿಗೆ ಇಷ್ಟಾರ್ಥವನ್ನು ಕೊಡತಕ್ಕದ್ದಾಗಿರುವುದು.

೨೧. ಎಲೈ ರಾಜನೇ! ಈ ವಿಷಯದಲ್ಲಿ ಪಿತೃಗಳೇ ಗಾನಮಾಡಿರುವ ಶ್ಲೋಕಗಳನ್ನು ಕೇಳು. ನೀನೂ ಆ ಪಿತೃಗೀತೆಯಲ್ಲಿ ಹೇಳಿದಂತೆ ಆಚರಿಸಿ ಏಕಾಗ್ರ ಚಿತ್ತದಿಂದ ಧ್ಯಾನವನ್ನು ಮಾಡು.

ಅಪಿ ಧನ್ಯಃ ಕುಲೇ ಜಾಯೇದಸ್ಮಾಕಂ ಮತಿಮಾನ್ನರಃ ।
ಅಕುರ್ವನ್ ವಿತ್ತಶಾಠ್ಯಂ ಯಃ ಪಿಂಡಾನ್ನೋ ನಿರ್ವಪಿಷ್ಯತಿ ॥ ೨೨ ॥

ರತ್ನಂ ವಸ್ತ್ರಂ ಮಹಾಯಾನಂ ಸರ್ವಭೋಗಾದಿಕಂ ವಸು ।
ವಿಭವೇ ಸತಿ ವಿಪ್ರೇಭ್ಯೋ ಯೋಽಸ್ಮಾನುದ್ದಿಶ್ಯ ದಾಸ್ಯತಿ ॥ ೨೩ ॥

ಅನ್ನೇನ ವಾ ಯಥಾಶಕ್ತ್ಯಾ ಕಾಲೇಽಸ್ಮಿನ್ ಭಕ್ತಿನಮ್ರಧೀಃ ।
ಭೋಜಯಿಷ್ಯತಿ ವಿಪ್ರಾಗ್ರ್ಯಾಂಸ್ತನ್ಮಾತ್ರವಿಭವೋ ನರಃ ॥ ೨೪ ॥

ಅಸಮರ್ಥೋಽನ್ನದಾನಸ್ಯ ಧಾನ್ಯಮಾಮಂ ಸ್ವಶಕ್ತಿತಃ ।
ಪ್ರದಾಸ್ಯತಿ ದ್ವಿಜಾಗ್ರೇಭ್ಯಸ್ಸ್ವಲ್ಪಾಲ್ಪಾಂ ವಾಪಿ ದಕ್ಷಿಣಾಂ ॥ ೨೫ ॥

ತತ್ರಾಪ್ಯಸಾಮರ್ಥ್ಯಯುತಃ ಕರಾಗ್ರಾಗ್ರಸ್ಥಿತಾಂಸ್ತಿಲಾನ್ ।
ಪ್ರಣಮ್ಯ ದ್ವಿಜಮುಖ್ಯಾಯ ಕಸ್ಮೈಚಿದ್ಭೂಪ ದಾಸ್ಯತಿ ॥ ೨೬ ॥

ತಿಲೈಸ್ಸಪ್ತಾಷ್ಟಭಿರ್ವಾಪಿ ಸಮವೇತಾಂ ಜಲಾಂಜಲಿಂ ।
ಭಕ್ತಿನಮ್ರಸ್ಸಮುದ್ದಿಶ್ಯ ಭುವ್ಯಸ್ಮಾಕಂ ಪ್ರದಾಸ್ಯತಿ ॥ ೨೭ ॥

---

೨೨-೨೭. ಪಿತೃಗಳು ಹೇಳುವುದೇನೆಂದರೆ :– ನಮ್ಮ ವಂಶದಲ್ಲಿ ಬುದ್ಧಿವಂತನೂ ಕೃತಾರ್ಥನೂ ಆದ ಮನುಷ್ಯನು ಹುಟ್ಟುವನೇ, ಧನಲೋಭವನ್ನು ಮಾಡದೆ ನಮಗೆ ಪಿಂಡದಾನವನ್ನು ಮಾಡುವನೇ, ಐಶ್ವರ್ಯವಿದ್ದರೆ ನಮಗಾಗಿ ವಸ್ತ್ರಗಳು, ರತ್ನಗಳು, ವಾಹನಗಳು, ಭೋಗ್ಯವಸ್ತುಗಳು ಇವುಗಳನ್ನು ಬ್ರಾಹ್ಮಣರಿಗೆ ದಾನಮಾಡುವನೇ, ತನ್ನ ಶಕ್ತ್ಯನುಸಾರವಾಗಿ ಪಿತೃ ತಿಥಿಗಳಲ್ಲಿ ಭಕ್ತಿಯಿಂದ ಬ್ರಾಹ್ಮಣ ಶ್ರೇಷ್ಠರ ಭೋಜನವನ್ನು ಮಾಡಿಸುವನೇ, ಅನ್ನದಾನಮಾಡಲು ಶಕ್ತಿಯಿಲ್ಲದಿದ್ದರೆ ಪಕ್ವಮಾಡದ ಧಾನ್ಯಗಳನ್ನೇ ಸ್ವಲ್ಪವಾದರೂ ಅತ್ಯಲ್ಪ ದಕ್ಷಿಣೆಯೊಡನೆ ದಾನಮಾಡುವನೇ, ಅದಕ್ಕೂ ಶಕ್ತಿಯಿಲ್ಲದಿದ್ದರೆ ಕೈಯಲ್ಲಿ ಸ್ವಲ್ಪ ಎಳ್ಳನ್ನು ತೆಗೆದುಕೊಂಡು ಬ್ರಾಹ್ಮಣ ಶ್ರೇಷ್ಠನಿಗೆ ನಮಸ್ಕಾರಮಾಡಿ ದಾನಮಾಡುವನೇ, ಅಥವಾ ಭಕ್ತಿಯಿಂದ ಏಳೆಂಟು ಬಾರಿ ನಮಗಾಗಿ ತಿಲೋದಕವನ್ನು ಭೂಮಿಯಲ್ಲಿ ದಾನ ಮಾಡುವನೇ, ಇವಕ್ಕೂ ಶಕ್ತಿಯಿಲ್ಲದಿದ್ದರೆ ನಮ್ಮನ್ನುದ್ದೇಶಿಸಿ ಎಲ್ಲಿಯಾದರೂ ಹಸು

ಯತಃ ಕುತಶ್ಚಿತ್ಸಂಪ್ರಾಪ್ಯ ಗೋಭ್ಯೋ ವಾಪಿ ಗವಾಹ್ನಿಕಂ ।
ಅಭಾವೇ ಪ್ರೀಣಯನ್ನಸ್ಮಾನ್ ಶ್ರದ್ಧಾಯುಕ್ತಃ ಪ್ರದಾಸ್ಯತಿ ॥ ೨೮ ॥

ಸರ್ವಾಭಾವೇ ವನಂ ಗತ್ವಾ ಕಕ್ಷಮೂಲಪ್ರದರ್ಶಕಃ ।
ಸೂರ್ಯಾದಿಲೋಕಪಾಲಾನಾಮಿದಮುಚ್ಚೈಃ ಪಠಿಷ್ಯತಿ ॥ ೨೯ ॥

ನ ಮೇಽಸ್ತಿ ವಿತ್ತಂ ನ ಧನಂ ನ ಚಾನ್ಯತ್
ಶ್ರಾದ್ಧೋಪಯುಕ್ತಂ ಸ್ವಪಿತೄನ್ನತೋಽಸ್ಮಿ ।
ತೃಪ್ಯಂತು ಭಕ್ತ್ಯಾ ಪಿತರೋ ಮಯ್ಯೈತೌ
ಕೃತೌ ಭುಜೌ ವರ್ತ್ಮನಿ ಮಾರುತಸ್ಯ ॥ ೩೦ ॥

---

ವಿಗೆ ಒಂದು ದಿನಕ್ಕೆ ಆಗುವಷ್ಟು ಹುಲ್ಲನ್ನು ತಂದು ಹಾಕುವನೇ, ಇವುಗಳಲ್ಲೊಂದೂ ಸಾಧ್ಯವಾಗದಿದ್ದರೆ ಕಾಡಿಗೆ ಹೋಗಿ ತನ್ನ ದಾರಿದ್ರ್ಯವನ್ನು ಪ್ರಕಟಪಡಿಸುತ್ತಾ ಎರಡು ಕೈಗಳನ್ನೂ ಮೇಲಕ್ಕೆತ್ತಿಕೊಂಡು ಸೂರ್ಯ ಲೋಕ ಪಾಲಕರೇ ಮುಂತಾದ ದೇವತೆಗಳನ್ನು ಕುರಿತು ಮುಂದಿನ ಶ್ಲೋಕಾಭಿಪ್ರಾಯವನ್ನು ಗಟ್ಟಿಯಾಗಿ ಹೇಳುವನೇ ಎಂಬದಾಗಿ ಪಿತೃಗಳು ಗಾನಮಾಡಿರುವರು.

೩೦. ಪ್ರಾರ್ಥನೆಯನ್ನು ಮಾಡುವ ಶ್ಲೋಕಾಭಿಪ್ರಾಯವೇನೆಂದರೆ :—ನನಗೆ ಧನವಿಲ್ಲ. ನನ್ನದಾಗಿರುವ ಮತ್ತಾವ ವಸ್ತುವೂ ಇಲ್ಲ. ಶ್ರಾದ್ಧಕ್ಕೆ ಬೇಕಾದ ಮತ್ತಾವ ವಸ್ತುವೂ ಇಲ್ಲ. ಆದುದರಿಂದ ಭಕ್ತಿಯಿಂದ ಈ ತೋಳುಗಳನ್ನು ಎತ್ತಿ ಗಾಳಿಗೆ ಬಿಟ್ಟು ನಮ್ಮ ಪಿತೃಗಳಿಗೆ ನಮಸ್ಕಾರ ಮಾಡುತ್ತೇನೆ. ಇದರಿಂದಲೇ ಪಿತೃಗಳು ತೃಪ್ತಿಯನ್ನು ಹೊಂದಬೇಕು.

॥ ಔರ್ವಃ ॥

ಇತ್ಯೇತತ್ಪಿತೃಭಿರ್ಗೀತಂ ಭಾವಾಭಾವಪ್ರಯೋಜನಂ ।
ಯಃ ಕರೋತಿ ಕೃತಂ ತೇನ ಶ್ರಾದ್ಧಂ ಭವತಿ ಪಾರ್ಥಿವ ॥ ೩೧ ॥

ಇತಿ ಶ್ರೀ ವಿಷ್ಣುಪುರಾಣೇ ತೃತೀಯಾಂಶೇ ಚತುರ್ದಶೋಽಧ್ಯಾಯಃ

---

೩೧. ಔರ್ವನು ಹೇಳುವನು :— ಈ ಅಧ್ಯಾಯದ ಇಪ್ಪತ್ತೆರಡನೆಯ ಶ್ಲೋಕದಿಂದ ಮೂವತ್ತನೆಯ ಶ್ಲೋಕದವರೆಗೆ ಹೇಳಿರುವುದು, ಪಿತೃಗೀತವು. ಇದರಲ್ಲಿ ಧನವಂತನಿಗೂ, ದರಿದ್ರನಿಗೂ ಪಿತೃಗಳು ತೃಪ್ತಿಯಾಗುವ ಮಾರ್ಗವನ್ನು ಹೇಳಿರುವುದು. ಯಾವನು ಭಕ್ತಿಯಿಂದ ತನ್ನ ಶಕ್ತ್ಯನುಸಾರವಾಗಿ ಶ್ರಾದ್ಧವನ್ನು ಮಾಡುವನೋ ಅವನು ಕೃತಾರ್ಥನಾಗುವನು.

ಎಂಬಲ್ಲಿಗೆ ಶ್ರೀ ವಿಷ್ಣುಪುರಾಣದ ತೃತೀಯಾಂಶದಲ್ಲಿ
ಹದಿನಾಲ್ಕನೆಯ ಅಧ್ಯಾಯವು ಮುಗಿದುದು.

---

ಶ್ರೀಃ

# ಶ್ರೀ ವಿಷ್ಣುಪುರಾಣೇ ತೃತೀಯಾಂಶೇ

## ಪಂಚದಶೋಽಧ್ಯಾಯಃ

---

ಔರ್ವಃ

ಬ್ರಾಹ್ಮಣಾನ್ಭೋಜಯೇ ಚ್ಛ್ರಾದ್ಧೇ ಯದ್ಗುಣಾಂಸ್ತಾನ್ನಿಬೋಧಮೇ ॥ ೧॥

ತ್ರಿಣಾಚಿಕೇತಸ್ತ್ರಿಮಧುಸ್ತ್ರಿಸುಪರ್ಣಃಷ್ಷಡಂಗವಿತ್ ।
ವೇದವಿಚ್ಛ್ರೋತ್ರಿಯೋ ಯೋಗೀ ತಥಾ ನ್ವೈ ಜ್ಯೇಷ್ಠಸಾಮಗಃ ॥ ೨ ॥

---

### ಹದಿನೈದನೆಯ ಅಧ್ಯಾಯವು.

೧-೪. ಔರ್ವನು ಹೇಳುವನು ;—ಸಗರ ರಾಜನೇ ! ಶ್ರಾದ್ಧದಲ್ಲಿ ಎಂತಹ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕೋ ಆ ಬ್ರಾಹ್ಮಣರ ಗುಣಗಳನ್ನು ಹೇಳುವೆನು ಕೇಳು. ಅಯಂವಾವಯಃಪವತ ಇತ್ಯಾದಿಯಾದ ದ್ವಿತೀಯ ಕಾಠಕದಲ್ಲಿರುವ ಮೂರು ಅನುವಾಕಗಳು ತ್ರಿಣಾಚಿಕೇತ ಎಂಬ ಹೆಸರನ್ನು ಪಡೆದಿರುವುದು. ಅದನ್ನು ಅಧ್ಯಯನ ಮಾಡಿ ಅದರ ಅಭಿಪ್ರಾಯವನ್ನು ತಿಳಿದು ಅದರಂತೆ ಆಚರಿಸುತ್ತಿರುವನು. ತ್ರಿಣಾಚಿಕೇತನೆನಿಸುವನು, ಮಧುವಾತಾ ಎಂಬ ಋಗ್ವೇದದ ಮೂರು ಋಕ್ಕುಗಳನ್ನು ಅಧ್ಯಯನಮಾಡಿ ಅದರ ಅರ್ಥಾನುಸಂಧಾನ ಮಾಡಿ ಆ ಮಂತ್ರವನ್ನು ಜಪಮಾಡತಕ್ಕವನು ತ್ರಿಮಧುವೆನಿಸುವನು. ಬ್ರಹ್ಮಮೇತು ಮಾಂ ಇತ್ಯಾದಿಯಾದ ಮೂರು ಅನುವಾಕಗಳನ್ನು ಅಧ್ಯಯನ ಮಾಡಿ ಅದರ ವ್ರತಾಚರಣೆಯನ್ನು ಮಾಡತಕ್ಕವನು ತ್ರಿಸುಪರ್ಣನೆನಿಸುವನು. ವೇದದ ಆರು ಅಂಗಗಳನ್ನು ಅಭ್ಯಾಸ

ಋತ್ವಿಕ್ಸ್ವಸ್ರೀಯದೌಹಿತ್ರ ಜಾಮಾತೃಶ್ವಶುರಾಸ್ತಥಾ ।
ಮಾತುಲೋಽಥ ತಪೋನಿಷ್ಠಃ ಪಂಚಾಗ್ನ್ಯಭಿರತಸ್ತಥಾ ।
ಶಿಷ್ಯಾಸ್ಸಂಬಂಧಿನಶ್ಚೈವ ಮಾತಾಪಿತೃಪರಶ್ಚ ಯಃ ॥ ೩ ॥

ಏತಾನ್ನಿಯೋಜಯೇ ಚ್ಛ್ರಾದ್ಧೇ ಪೂರ್ವೋಕ್ತಾನ್ಪ್ರಥಮೇ ನೃಪ ।
ಬ್ರಾಹ್ಮಣಾನ್ಪಿತೃತುಷ್ಟ್ಯರ್ಥಮನುಕಲ್ಪೇಷ್ವನಂತರಾನ್ ॥ ೪ ॥

ಮಿತ್ರಧ್ರುಕ್ಕುನಖೀ ಕ್ಲೀಬಶ್ಯಾವದಂತಸ್ತಥಾ ದ್ವಿಜಃ ।
ಕನ್ಯಾದೂಷಯಿತಾ ವಹ್ನಿವೇದೋಜ್ಝಸ್ಸೋಮವಿಕ್ರಯೀ ॥ ೫ ॥

---

ಮಾಡಿದವನು ವೇದಾರ್ಥವನ್ನ ತಿಳಿದವನು, ವೇದ ವಿಧಿಯಂತೆ ಅನುಷ್ಠಾನ ಮಾಡುವ ಶ್ರೋತ್ರಿಯನು, ಪರಬ್ರಹ್ಮನನ್ನು ಧ್ಯಾನ ಮಾಡುವ ಯೋಗಿಯು ಮೂರ್ಧಾನಂದಿವ ಎಂಬ ಋಗ್ವೇದ ಮಂತ್ರದ ಗಾನವನ್ನೂ, ಆಜ್ಯದೋಹವೆಂಬ ಸಾಮವನ್ನೂ ಯಥಾವತ್ತಾಗಿ ಗಾನಮಾಡುವ ಜ್ಯೇಷ್ಠಸಾಮಗನೂ ಪ್ರಥಮ ಕಲ್ಪಕ್ಕೆ ಸೇರಿದವರು. ಆಹವನೀಯ ಗಾರ್ಹಪತ್ಯ ದಕ್ಷಿಣಾಗ್ನಿ ಸಭ್ಯ ಆವಸಥ್ಯ ಎಂಬ ಪಂಚಾಗ್ನಿಯನ್ನು ಉಪಾಸನ ಮಾಡತಕ್ಕವನು ಋತ್ವಿಕ್ಕೆನಿಸುವನು, ಅಥವಾ ವೇದಾಂತದಲ್ಲಿ ಹೇಳಿದಂತೆ ದ್ಯು ಪರ್ಜನ್ಯ ಪೃಥಿವೀ ಪುರುಷ ಯೋಷಿದ್ರೂಪವಾದ ಪಂಚಾಗ್ನಿ ವಿದ್ಯೋಪಾಸಕನು ಋತ್ವಿಕ್ಕೆನಿಸುವನು. ಅಕ್ಕ ತಂಗಿಯರ ಮಕ್ಕಳು, ಮಗಳ ಮಕ್ಕಳು, ಅಳಿಯ, ಮಾವ, ಸೋದರಮಾವ ಪಂಚಾಗ್ನಿ ಜಪಾದಿಗಳನ್ನು ಮಾಡುತ್ತ ತಪಸ್ಸು ಮಾಡತಕ್ಕವನು ಶಿಷ್ಯ, ನಂಟರು, ತಾಯಿ, ತಂದೆಗಳಿಗೆ ಬೇಕಾದವರು ಇವರು ಅನುಕಲ್ಪರು. ಪಿತೃಗಳು ತೃಪ್ತರಾಗಬೇಕಾದರೆ ಪ್ರಥಮ ಕಲ್ಪದಲ್ಲಿ ಹೇಳಿದ ಬ್ರಾಹ್ಮಣರನ್ನು ಮೊದಲು ಗ್ರಹಣಮಾಡಬೇಕು. ಅವರು ಸಿಕ್ಕದಿದ್ದರೆ ಎರಡನೆಯ ಕಲ್ಪದಲ್ಲಿ ಹೇಳಿದವರನ್ನು ಗ್ರಹಿಸಬೇಕು.

೫–೮. ನಿಷಿದ್ಧರಲ್ಲದ ಬ್ರಾಹಣರನ್ನು ಗ್ರಹಿಸುವುದಕ್ಕಾಗಿ ನಿಷಿದ್ಧರಾದವರನ್ನು ಹೇಳಿದುವುದು. ಮಿತ್ರದ್ರೋಹಿ, ಕೆಟ್ಟ ಉಗುರುಗಳುಳ್ಳವನು, ನಪುಂಸಕನು, ಕರಿಯ ಹಲ್ಲುಳ್ಳವನು ಕನ್ಯೆಯನ್ನು ದೂಷಣೆಮಾಡಿ ಪತ್ನಿಯನ್ನು ಬಿಟ್ಟವನು, ಔಪಾಸನಾಗ್ನಿ

ಪರಪೂರ್ವಾಪತಿಶ್ಚೈವ ಮಾತಾಪಿತ್ರೋಸ್ತಥೋಜ್ಝಕಃ ।
ವೃಷಲೀ ಸೂತಿಪೋಷ್ಯಾ ಚ ವೃಷಲೀಪತಿರೇವ ಚ ॥ ೭ ॥

ತಥಾ ದೇವಲಕಶ್ಚೈವ ಶ್ರಾದ್ಧೇನಾರ್ಹಂತಿ ಕೇತನಂ । ॥ ೮ ॥

ಪ್ರಥಮೇಹ್ನಿ ಬುಧಶ್ಶಸ್ತಾನ್ ಶ್ರೋತ್ರಿಯಾದೀನ್ನಿಮಂತ್ರಯೇತ್ ।
ಕಥಯೇಚ್ಚ ತಥೈವೇಷಾಂ ನಿಯೋಗಾನ್ಪಿತೃದೈವಿಕಾನ್ ॥ ೯ ॥

ಅಭಿಶಸ್ತಸ್ತಥಾ ಸ್ತೇನಃ ಪಿಶುನೋ ಗ್ರಾಮಯಾಜಕಃ ।
ಭೃತಕಾಧ್ಯಾಪಕಸ್ತದ್ವದ್ಭೃತಕಾಧ್ಯಾಪಿತಶ್ಚ ಯಃ ॥ ೬ ॥

---

ಯನ್ನೂ, ವೇದಾಭ್ಯಾಸವನ್ನೂ ಬಿಟ್ಟವನು. ಸೋಮರಸವನ್ನು ಮಾರುವವನು ಅಥವಾ ಯಜ್ಞವನ್ನು ಮಾಡಿ ಅದರ ಫಲವನ್ನು ಮಾರುವವನು ಮಹಾಪಾತಕಗಳನ್ನು ಮಾಡಿದ ನಿಂದೆಗೆ ಭಾಗಿಯಾದವನು, ಕಳ್ಳನು, ಚಾಡಿಕೋರನು, ಗ್ರಾಮಸಂಪಾದನೆಗಾಗಿ ಯಜ್ಞಮಾಡಿದವನು ಧನವನ್ನು ವೇದವನ್ನು ಗ್ರಹಿಸಿ ಹೇಳಿಕೊಟ್ಟವನು, ಜೀವನಾರ್ಥವಾಗಿ ವೇದಾಧ್ಯಯನವನ್ನು ಮಾಡಿದವನು, ಎರಡನೆಯ ಬಾರಿ ವಿವಾಹ ಮಾಡಿಕೊಂಡವಳ ಗಂಡನು, ತಾಯಿ ತಂದೆಗಳನ್ನು ಉಪೇಕ್ಷೆ ಮಾಡಿದವನು, ಶೂದ್ರ ಸ್ತ್ರೀ ಯಮಕ್ಕಳನ್ನು ಪೋಷಣೆ ಮಾಡುವವನು, ಧನ ಸಂಪಾಧನೆಗಾಗಿ ದೇವತಾರ್ಚನೆಯನ್ನು ಮಾಡತಕ್ಕವನು, ಇಂತಹ ಬ್ರಾಹ್ಮಣರು ಶ್ರಾದ್ಧದಲ್ಲಿ ನಿಮಂತ್ರಣಕ್ಕೆ ಯೋಗ್ಯರಲ್ಲ.

೯-೧೨ ಶ್ರಾದ್ಧಮಾಡತಕ್ಕವನು ಶ್ರಾದ್ಧಕ್ಕೆ ಹಿಂದಿನ ದಿನವೇ ಶ್ರೋತ್ರಿಯರೇ ಮುಂತಾದ ನಿಷಿದ್ಧರಲ್ಲದ ಬ್ರಾಹ್ಮಣರಿಗೆ ಪಿತೃಸ್ಥಾನಕ್ಕೂ, ವಿಶ್ವೇದೇವಸ್ಥಾನಕ್ಕೂ ಬೇರೆ ಬೇರೆಯಾಗಿ ನಿಮಂತ್ರಣಕ್ಕೆ ಹೇಳಬೇಕು. ಆಮೇಲೆ ಯಜಮಾನನೂ ಬ್ರಾಹ್ಮಣರೂ ಕ್ರೋಧ ಸ್ತ್ರೀ ಸಂಗ ಮುಂತಾದ ಆಯಾಸಕರವಾದ ಕಾರ್ಯಗಳನ್ನು ಮಾಡಬಾರದು. ಹಾಗೆ ಮಾಡಿದರೆ ಮಹಾ ದೋಷವುಂಟಾಗುವುದು. ಶ್ರಾದ್ಧದಲ್ಲಿ ನಿಮಂತ್ರಣಕ್ಕೆ ಹೇಳಿದಮೇಲೆ ಭೋಜನಮಾಡಿದರೂ, ನಿಮಂತ್ರಣಕ್ಕೆ ಹೇಳದೆ

ತತಃ ಕ್ರೋಧವ್ಯವಾಯಾದೀನಾಯಾಸಂ ಚ ದ್ವಿಜೈಸ್ಸಹ ।
ಯಜಮಾನೋ ನ ಕುರ್ವೀತ ದೋಷಸ್ತತ್ರ ಮಹಾನಯಂ ॥ ೧೦ ॥

ಶ್ರಾದ್ಧೇ ನಿಯುಕ್ತೋ ಭುಕ್ತ್ವಾ ವಾ ಭೋಜಯಿತ್ವಾ ನಿಯುಜ್ಯ ಚ ।
ವ್ಯವಾಯೀ ರೇತಸೋ ಗರ್ತೇ ಮಜ್ಜಯತ್ಯಾತ್ಮನಃ ಪಿತೄನ್ ॥ ೧೧ ॥

ತಸ್ಮಾತ್ಪ್ರಥಮ ಮತ್ರೋಕ್ತಂ ದ್ವಿಜಾಗ್ರ್ಯಾಣಾಂ ನಿಮಂತ್ರಣಂ ।
ಅನಿಮಂತ್ರ್ಯ ದ್ವಿಜಾನ್ಗೇಹಮಾಗತಾನ್ಭೋಜಯೇದ್ಯತೀನ್ ॥ ೧೨ ॥

ಪಾದಶೌಚಾದಿನಾ ಗೇಹಮಾಗತಾನ್ಭೋಜಯೇದ್ದ್ವಿಜಾನ್ ॥ ೧೩ ॥

ಪವಿತ್ರಪಾಣಿರಾಚಾಂತಾ ನಾಸನೇಷೂಪವೇಶಯೇತ್ ।
ಪಿತೄಣಾಮಯುಜೋ ಯುಗ್ಮಾನ್ ದೇವಾನಾಮಿಚ್ಛಯಾ ದ್ವಿಜಾನ್ ॥೧೪॥

ದೇವಾನಾಮೇಕಮೇಕಂ ವಾ ಪಿತೄಣಾಂ ಚ ನಿಯೋಜಯೇತ್ ।
ತಥಾ ಮಾತಾಮಹಶ್ರಾದ್ಧಂ ವೈಶ್ವದೇವಸಮನ್ವಿತಂ ॥ ೧೫ ॥

---

ಭೋಜನಮಾಡಿಸಿದರೂ ಬ್ರಾಹ್ಮಣರೂ, ಯಜಮಾನನೂ ಸ್ತ್ರೀ ಸಂಗ ಮಾಡಿದರೆ ಅವರು ತಮ್ಮ ಪಿತೃಗಳನ್ನು ರೇತಸ್ಸಿನಿಂದ ತುಂಬಿದ ಹಳ್ಳದಲ್ಲಿ ಮುಳುಗಿಸುವರು ಆದುದರಿಂದ ಮೊದಲು ಬ್ರಾಹ್ಮಣ ಶ್ರೇಷ್ಠರಿಗೆ ನಿಮಂತ್ರಣಕ್ಕೆ ಹೇಳಬೇಕೆಂದು ಇಲ್ಲಿ ಹೇಳಿತು. ನಿಮಂತ್ರಣಕ್ಕೆ ಹೇಳದಿದ್ದರೂ ಶ್ರಾದ್ಧಕಾಲಕ್ಕೆ ಮನೆಗೆ ಬಂದ ಬ್ರಾಹ್ಮಣರಿಗೂ ಯತಿಗಳಿಗೂ ಭೋಜನವನ್ನು ಮಾಡಿಸಬೇಕು.

೧೩-೧೫. ಶ್ರಾದ್ಧಕಾಲಕ್ಕೆ ಸರಿಯಾಗಿ ಮನೆಗೆ ಬಂದ ಬ್ರಾಹ್ಮಣರಿಗೆ ಪಾದಪ್ರಕ್ಷಾಳನೆ ಮುಂತಾದುವನ್ನು ಮಾಡಿ ಭೋಜನವನ್ನು ಮಾಡಿಸಬೇಕು. ಪವಿತ್ರವನ್ನು ಕೈಯಲ್ಲಿ ಧರಿಸಿದ ಯಜಮಾನನು ಆಚಮನ ಮಾಡಿದ ಬ್ರಾಹ್ಮಣರನ್ನು ಪೀಠದಲ್ಲಿ ಕುಳ್ಳಿರಿಸಬೇಕು. ಪಿತೃಸ್ಥಾನದಲ್ಲಿ ವಿಷಮ ಸಂಖ್ಯೆಯ ಬ್ರಾಹ್ಮಣರನ್ನೂ ದೇವತೆಗಳ ಸ್ಥಾನದಲ್ಲಿ ಸಮಸಂಖ್ಯೆಯ ಬ್ರಾಹ್ಮಣರನ್ನೂ ಕೂಡಿಸಬೇಕು. ಅಥವಾ ತನ್ನ ಶಕ್ತ್ಯನುಸಾರವಾಗಿ ಎರಡು ಸ್ಥಾನಕ್ಕೂ ಒಬ್ಬೊಬ್ಬರನ್ನೇ ಕೂಡಿಸಬಹುದು.

ಕುರ್ವೀತ ಭಕ್ತಿಸಂಪನ್ನಸ್ತಂತ್ರಂ ವಾ ವೈಶ್ವದೈವಿಕಂ ॥ ೧೬ ॥

ಪ್ರಾಙ್ಮುಖಾನ್ಭೋಜಯೇದ್ವಿಪ್ರಾನ್ ದೇವಾನಾಮುಭಯಾತ್ಮಕಾನ್ ।
ಪಿತೃಮಾತಾಮಹಾನಾಂ ಚ ಭೋಜಯೇಚ್ಚಾಪ್ಯುದಙ್ಮುಖಾನ್ ॥ ೧೭ ॥

ಪೃಥಕ್ತಯೋಃ ಕೇಚಿದಾಹುಶ್ಶ್ರಾದ್ಧಸ್ಯ ಕರಣಂ ನೃಪ ।
ಏಕತ್ರೈಕೇನ ಪಾಕೇನ ವದಂತ್ಯನ್ಯೇ ಮಹರ್ಷಯಃ ॥ ೧೮ ॥

ವಿಷ್ಟರಾರ್ಥಂ ಕುಶಾನ್ ದತ್ವಾ ಸಂಪೂಜ್ಯಾರ್ಘ್ಯವಿಧಾನತಃ ।
ಕುರ್ಯಾದಾವಾಹನಂ ಪ್ರಾಜ್ಞೋ ದೇವಾನಾಂ ತದನುಜ್ಞಯಾ ॥ ೧೯ ॥

ಯವಾಂಬುನಾ ಚ ದೇವಾನಾಂ ದದ್ಯಾದರ್ಘ್ಯಂ ವಿಧಾನವಿತ್ ।
ಸ್ರಗ್ಗಂಧಧೂಪದೀಪಾಂಶ್ಚ ದತ್ವಾ ತೇಭ್ಯೋ ಯಥಾವಿಧಿ ॥ ೨೦ ॥

---

೧೬-೧೮. ಪಿತೃಶ್ರಾದ್ಧದ ಜತೆಯಲ್ಲಿ ಮಾತಾಮಹ ಶ್ರಾದ್ಧವನ್ನೂ ಭಕ್ತಿಯಿಂದ ಮಾಡಬಹುದು. ಎರಡು ಶ್ರಾದ್ಧಕ್ಕೂ ಒಂದೇ ವೈಶ್ವದೇವವನ್ನು ಮಾಡಬಹುದು. ವಿಶ್ವೇದೇವಸ್ಥಾನದ ಬ್ರಾಹ್ಮಣರನ್ನು ಪೂರ್ವಾಭಿಮುಖವಾಗಿಯೂ, ಪಿತೃಮಾತಾಮಹಸ್ಥಾನದ ಬ್ರಾಹ್ಮಣರನ್ನು ಉತ್ತರಾಭಿಮುಖವಾಗಿಯೂ ಕೂಡಿಸಿ ಭೋಜನವನ್ನು ಮಾಡಿಸಬೇಕು. ಈ ಎರಡು ಶ್ರಾದ್ಧವನ್ನೂ ಬೇರೆ ಬೇರೆಯಾಗಿ ಮಾಡಬೇಕೆಂದು ಕೆಲವರೂ, ಒಂದೇ ಕಡೆಯಲ್ಲಿ ಒಂದೇ ಪಾಕದಿಂದ ಮಾಡಬೇಕೆಂದು ಕೆಲವು ಮಹರ್ಷಿಗಳೂ ಹೇಳುವರು.

೧೯-೨೨. ವಿಶ್ವೇದೇವಸ್ಥಾನದಲ್ಲಿ ನಿಮಂತ್ರಿತನಾದ ಬ್ರಾಹ್ಮಣನಿಗೆ ಆಸನಾರ್ಥವಾಗಿ ದರ್ಭೆಗಳನ್ನು ಕೊಟ್ಟು ವಿಧಿಗನುಸಾರವಾಗಿ ಅರ್ಘ್ಯಪಾತ್ರೆಯಲ್ಲಿ ಅರ್ಘ್ಯೋದಕವನ್ನಿಟ್ಟು ಪೂಜಿಸಿ ವಿಶ್ವೇದೇವತೆಗಳನ್ನು ಬ್ರಾಹ್ಮಣನಲ್ಲಿ ಆವಾಹನೆ ಮಾಡಿ ಅಕ್ಕಿ ಮತ್ತು ನೀರಿನಿಂದ ಕೂಡಿದ ಅರ್ಘ್ಯವನ್ನು ಕೊಟ್ಟು ಹೂ ಗಂಧ ಧೂಪ ದೀಪಾದಿಗಳಿಂದ ಪೂಜಿಸಿ ಬ್ರಾಹ್ಮಣನ ಅನುಜ್ಞೆಯಿಂದ ಪಿತೃಸ್ಥಾನದಲ್ಲಿ ನಿಮಂತ್ರಿತನಾದ

ಪಿತ್ರ್ಯಾಣಾಮುಪಸವ್ಯಂ ಚ ಸರ್ವಮೇವೋಪಕಲ್ಪಯೇತ್ ।
ಅನುಜ್ಞಾಂ ಚ ತತಃ ಪ್ರಾಪ್ಯ ದತ್ವಾ ದರ್ಭಾನ್ ದ್ವಿಧಾಕೃತಾನ್ ॥ ೨೧ ॥

ಮಂತ್ರಪೂರ್ವಂ ಪಿತ್ರ್ಯಾಣಾಂ ತು ಕುರ್ಯಾದಾವಾಹನಂ ಬುಧಃ ।
ತಿಲಾಂಬುನಾ ಚಾಪಸವ್ಯಂ ದದ್ಯಾದರ್ಘ್ಯಾದಿಕಂ ನೃಪ ॥ ೨೨ ॥

ಕಾಲೇ ತತ್ರಾತಿಥಿಂ ಪ್ರಾಪ್ತಮನ್ನಕಾಮಂ ನೃಪಾಧ್ವಗಂ ।
ಬ್ರಾಹ್ಮಣೈರಭ್ಯನುಜ್ಞಾತಃ ಕಾಮಂ ತಮಪಿ ಭೋಜಯೇತ್ ॥ ೨೩ ॥

ಯೋಗಿನೋ ವಿವಿಧೈ ರೂಪೈರ್ನರಾಣಾಮುಪಕಾರಿಣಃ ।
ಭ್ರಮಂತಿ ಪೃಥಿವೀಮೇತಾಮವಿಜ್ಞಾತಸ್ವರೂಪಿಣಃ ॥ ೨೪ ॥

ತಸ್ಮಾದಭ್ಯರ್ಚಯೇತ್ಪ್ರಾಪ್ತಂ ಶ್ರಾದ್ಧಕಾಲೇಽತಿಥಿಂ ಬುಧಃ ।
ಶ್ರಾದ್ಧಕ್ರಿಯಾಫಲಂ ಹಂತಿ ನರೇಂದ್ರಾಪೂಜಿತೋಽತಿಥಿಃ ॥ ೨೫ ॥

---

ಬ್ರಾಹ್ಮಣನಿಗೆ ಆಸನಾರ್ಥವಾಗಿ ದ್ವಿಗುಣವಾಗಿ ದರ್ಭೆಗಳನ್ನು ಕೊಟ್ಟು ಮಂತ್ರಪೂರ್ವಕವಾಗಿ ಆವಾಹನೆಯನ್ನು ಮಾಡಿ ಎಳ್ಳು ನೀರುಗಳಿಂದ ಕೂಡಿದ ಅರ್ಘ್ಯವನ್ನು ಅಪಸವ್ಯವಾಗಿ ಕೊಡಬೇಕು. ಮತ್ತು ಧೂಪ ದೀಪಾದಿಗಳಿಂದ ಪೂಜಿಸಬೇಕು.

೨೩–೨೫. ರಾಜನೇ ! ಆ ಕಾಲಕ್ಕೆ ಸರಿಯಾಗಿ ಅನ್ನಾರ್ಥಿಯಾಗಿ ಅತಿಥಿಯು ಬಂದರೆ ಬ್ರಾಹ್ಮಣರ ಅಪ್ಪಣೆಯನ್ನು ಪಡೆದು ಅವನಿಗೂ ಭೋಜನವನ್ನು ಮಾಡಿಸಬೇಕು. ಯೋಗಿಗಳು ಜನರಿಗೆ ಉಪಕಾರ ಮಾಡುವುದಕ್ಕಾಗಿ ಬಗೆ ಬಗೆಯ ರೂಪಗಳಿಂದ ತಮ್ಮ ಸ್ವರೂಪವನ್ನು ಪ್ರಕಟಪಡಿಸದೆ ಭೂಮಿಯಲ್ಲಿ ಸಂಚರಿಸುತ್ತಿರುವರು. ಆದುದರಿಂದ ಶ್ರಾದ್ಧಕಾಲದಲ್ಲಿ ಬಂದ ಅತಿಥಿಯನ್ನು ಭೋಜನ ಮಾಡುವಂತೆ ಪ್ರಾರ್ಥಿಸಿಕೊಳ್ಳಬೇಕು. ರಾಜನೇ ಶ್ರಾದ್ಧದಲ್ಲಿ ಬಂದ ಅತಿಥಿಯನ್ನು ಪೂಜಿಸದಿದ್ದರೆ ಶ್ರಾದ್ಧ ಕರ್ಮ ಮಾಡಿದ ಫಲವು ನಾಶವಾಗುವುದು.

ಜುಹುಯಾದ್ವ್ಯಂಜನಕ್ಷಾರವರ್ಜಮನ್ನಂ ತತೋಽನಲೇ ।
ಅನುಜ್ಞಾತೋ ದ್ವಿಜೈಸ್ತೈಸ್ತು ತ್ರಿಕೃತ್ವಃ ಪುರುಷರ್ಷಭ ॥ ೨೬ ॥

ಅಗ್ನಯೇ ಕವ್ಯವಾಹನಾಯ ಸ್ವಾಹೇತ್ಯಾದೌ ನೃಪಾಹುತಿಃ ।
ಸೋಮಾಯ ವೈ ಪಿತೃಮತೇ ದಾತವ್ಯಾ ತದನಂತರಂ ॥ ೨೭ ॥

ವೈವಸ್ವತಾಯ ಚೈವಾನ್ಯಾ ತೃತೀಯಾ ದೀಯತೇ ತತಃ ।
ಹುತಾವಶಿಷ್ಟಮಲ್ಪಾನ್ನಂ ವಿಪ್ರಪಾತ್ರೇಷು ನಿರ್ವಪೇತ್ ॥ ೨೮ ॥

ತತೋನ್ನಂ ಮೃಷ್ಟಮತ್ಯರ್ಥಮಭೀಷ್ಟಮತಿಸತ್ಕೃತಂ ।
ದತ್ವಾ ಜುಷಧ್ವಮಿಚ್ಛಾತೋ ವಾಚ್ಯಮೇತದನಿಷ್ಠುರಂ ॥ ೨೯ ॥

ಭೋಕ್ತವ್ಯಂ ತೈಶ್ಚ ತಚ್ಚಿತ್ತೈರ್ಮೌನಿಭಿಸ್ಸುಮುಖೈಸ್ಸುಖಂ ।
ಅಕ್ರುಧ್ಯತಾ ಚಾತ್ವರತಾ ದೇಯಂ ತೇನಾಪಿ ಭಕ್ತಿತಃ ॥ ೩೦ ॥

---

೨೬-೩೦. ಆ ಮೇಲೆ ಬ್ರಾಹ್ಮಣರ ಅನುಜ್ಞೆಯಿಂದ ಕಾಯಿಪಲ್ಯಗಳೂ, ಕ್ಷಾರ ಪದಾರ್ಥಗಳೂ ಸೇರದಿರುವ ಅನ್ನವನ್ನು ಮೂರಾವೃತ್ತಿ ಅಗ್ನಿಯಲ್ಲಿ ಹೋಮ ವನ್ನು ಮಾಡಬೇಕು. ಅಗ್ನಯೇ ಕವ್ಯವಾಹನಾಯ ಸ್ವಾಹಾ ಸೋಮಾಯ ಪಿತೃಮತೇ ಸ್ವಾಹಾ ವೈವಸ್ವತಾಯ ಸ್ವಾಹಾ ಎಂಬಿವೇ ಮೂರು ಆಹುತಿಯ ಮಂತ್ರಗಳು. ಈ ಹೋಮಗಳನ್ನು ಮಾಡಿ ಮಿಕ್ಕ ಅನ್ನವನ್ನು ಬ್ರಾಹ್ಮಣರ ಭೋಜನ ಪಾತ್ರೆಗೆ ಹಾಕಬೇಕು. ಆಮೇಲೆ ಬ್ರಾಹ್ಮಣರಿಗೆ ಅವರಿಗೆ ಇಷ್ಟವಾದಷ್ಟು ಮೃಷ್ಟಾನ್ನವನ್ನು ಬಡಿಸಿ ಇಷ್ಟಾನುಸಾರವಾಗಿ ಭೋಜನ ಮಾಡಿರೆಂದು ಮೃದುವಾದ ಮಾತುಗಳನ್ನು ಹೇಳಬೇಕು. ಬ್ರಾಹ್ಮಣರೂ ಏಕಾಗ್ರಚಿತ್ತದಿಂದ ಮೌನವಾಗಿ ಸುಖ ದಿಂದ ಭೋಜನ ಮಾಡಬೇಕು. ಕೋಪಗೊಳ್ಳದೆ ಆತುರಪಡದೆ ಅವರಿಗೆ ಬೇಕಾದು ದನ್ನು ಯಜಮಾನನು ಭಕ್ತಿಯಿಂದ ಬಡಿಸಬೇಕು.

ರಕ್ಷೋಘ್ನಮಂತ್ರಪಠನಂ ಭೂಮೇರಾಸ್ತರಣಂ ತಿಲೈಃ ।
ಕೃತ್ವಾಧ್ಯೇಯಾಸ್ಸ್ವಪಿತರಸ್ತ ಏವ ದ್ವಿಜಸತ್ತಮಾಃ ॥ ೩೧ ॥

ಪಿತಾ ಪಿತಾಮಹಶ್ಚೈವ ತಥೈವ ಪ್ರಪಿತಾಮಹಃ ।
ಮಮ ತೃಪ್ತಿಂ ಪ್ರಯಾಂತ್ವದ್ಯ ವಿಪ್ರದೇಹೇಷು ಸಂಸ್ಥಿತಾಃ ॥ ೩೨ ।

ಪಿತಾ ಪಿತಾಮಹಶ್ಚೈವ ತಥೈವ ಪ್ರಪಿತಾಮಹಃ ।
ಮಮ ತೃಪ್ತಿಂ ಪ್ರಯಾಂತ್ವದ್ಯ ಹೋಮಾಪ್ಯಾಯಿತಮೂರ್ತಯಃ ॥ ೩೩ ॥

ಪಿತಾ ಪಿತಾಮಹಶ್ಚೈವ ತಥೈವ ಪ್ರಪಿತಾಮಹಃ ।
ತೃಪ್ತಿಂ ಪ್ರಯಾಂತು ಪಿಂಡೇನ ಮಯಾ ದತ್ತೇನ ಭೂತಲೇ ॥ ೩೪ ॥

ಪಿತಾಪಿತಾಮಹಶ್ಚೈವ ತಥೈವ ಪ್ರಪಿತಾಮಹಃ ।
ತೃಪ್ತಿಂ ಪ್ರಯಾಂತು ಮೇ ಭಕ್ತ್ಯಾ ಯನ್ಮಯೈತದುದಾಹೃತಂ ॥ ೩೫ ॥

ಮಾತಾಮಹಸ್ತೃಪ್ತಿಮುಪೈತು ತಸ್ಯ
ತಥಾಪಿ ತಾತಸ್ಯ ಪಿತಾ ತು ಯೋಽನ್ಯಃ ।

---

೩೧-೩೬. ಬ್ರಾಹ್ಮಣರ ಭೋಜನಕಾಲದಲ್ಲಿ ಎಳ್ಳನ್ನು ಶ್ರಾದ್ಧವಮಾಡುವ ಪ್ರದೇಶದಲ್ಲಿ ಚಲ್ಲಿ ರಕ್ಷೋಘ್ನ ಮಂತ್ರವನ್ನು ಹೇಳುತ್ತ ಆ ಬ್ರಾಹ್ಮಣರೇ ತಮ್ಮ ಪಿತೃಗಳೆಂದು ಧ್ಯಾನಮಾಡುತ್ತಿರಬೇಕು. ನನ್ನ ಪಿತೃ ಪಿತಾಮಹ ಪ್ರಪಿತಾಮಹರು ಈ ದಿವಸ ಈ ಬ್ರಾಹ್ಮಣರ ದೇಹದಲ್ಲಿದ್ದು ತೃಪ್ತಿಯನ್ನು ಹೊಂದಲಿ. ನಾನು ಮಾಡಿದ ಹೋಮದಿಂದ ಆನಂದಪಟ್ಟು ತೃಪ್ತಿಯನ್ನು ಹೊಂದಲಿ. ನನ್ನ ಪಿತೃ ಪಿತಾಮಹ ಪ್ರಪಿತಾಮಹರು ನಾನು ಭೂಮಿಯಲ್ಲಿ ಕೊಟ್ಟ ಪಿಂಡದಿಂದ ತೃಪ್ತಿಯನ್ನು ಹೊಂದಲಿ. ನನ್ನ ಪಿತೃಗಳು ಭಕ್ತಿಯಿಂದ ನಾನು ಹೇಳಿದ ಈ ಸ್ತೋತ್ರದಿಂದ ತೃಪ್ತಿಯನ್ನು

ವಿಶ್ವೇ [illegible] ದೇವಾಃ ಪರಮಾಂ ಪ್ರಯಾಂತು
ತೃಪ್ತಿಂ ಪ್ರಣಶ್ಯಂ ತು ಚ ಯಾತುಧಾನಾಃ ॥ ೩೭ ॥

ಯಜ್ಞೇಶ್ವರೋ ಹವ್ಯಸಮಸ್ತಕವ್ಯ
ಭೋಕ್ತಾವ್ಯಯಾತ್ಮಾ ಹರಿರೀಶ್ವರೋತ್ರ
ತತ್ಸಂನಿಧಾನಾದಪಯಾಂತು ಸದ್ಯೋ
ರಕ್ಷಾಂಸ್ಯಶೇಷಾಣ್ಯಸುರಾಶ್ಚ ಸರ್ವೇ ॥ ೩೮ ॥

ತೃಪ್ತೇಷು ತೇಷು ವಿಕಿರೇದನ್ನಂ ವಿಪ್ರೇಷು ಭೂತಲೇ ।
ದದ್ಯಾದಾಚಮನಾರ್ಥಾಯ ತೇಭ್ಯೋ ವಾರಿ ಸಕೃತ್ಸಕೃತ್ ॥ ೩೯ ॥

ಸುತೃಪ್ತೈಸ್ತೈರನುಜ್ಞಾತಸ್ಸರ್ವೇಣಾನ್ನೇನ ಭೂತಲೇ ।
ಸತಿಲೇನ ತತಃ ಪಿಂಡಾನ್ ಸಮ್ಯಗ್ದದ್ಯಾತ್ಸಮಾಹಿತಃ ॥ ೪೦ ॥

---

ಹೊಂದಲಿ. ಮಾತಾಮಹನೂ ಅವನ ತಂದೆಯೂ ವಿಶ್ವೇದೇವತೆಗಳೂ ಸಂಪೂರ್ಣವಾದ ತೃಪ್ತಿಯನ್ನು ಹೊಂದಲಿ. ರಾಕ್ಷಸರೂ ನಾಶವಾಗಲಿ.

೩೮-೪೦ ಸಮಸ್ತ ಹವ್ಯಕವ್ಯಗಳನ್ನುಣ್ಣುವ ಯಜ್ಞೇಶ್ವರನೂ ಈ ಯಜ್ಞೇಶ್ವರನಲ್ಲಿ ನಾಶರಹಿತನಾಗಿ ಸನ್ನಿಹಿತನಾಗಿರುವ ವಿಷ್ಣುವೂ ಇಲ್ಲಿರುವುದರಿಂದ ಅಸುರರೂ ರಾಕ್ಷಸರೂ ಈ ಕ್ಷಣದಲ್ಲಿಯೇ ಇಲ್ಲಿಂದ ಹೊರಟುಹೋಗಲಿ. ಹೀಗೆಂದು ಸ್ತೋತ್ರಮಾಡುತ್ತಿರುವಾಗ ಭೋಜನಮಾಡುತ್ತಿರುವ ಬ್ರಾಹ್ಮಣರು ತೃಪ್ತರಾದ ಮೇಲೆ ಭೂಮಿಯಲ್ಲಿ ಅನ್ನವನ್ನು ಎರಚಬೇಕು. (ವಿಕಿರವನ್ನು ಹಾಕಬೇಕು) ಬ್ರಾಹ್ಮಣರಿಗೆ ಪಾನಮಾಡುವುದಕ್ಕಾಗಿ ಆಗಾಗ್ಗೆ ನೀರನ್ನು ಕೊಡುತ್ತಿರಬೇಕು. ಬ್ರಾಹ್ಮಣರು ಸಂಪೂರ್ಣವಾಗಿ ತೃಪ್ತರಾದ ಮೇಲೆ ಅವರ ಅಪ್ಪಣೆಯಿಂದ ಮಿಕ್ಕ ಅನ್ನವನ್ನೆಲ್ಲಾ ಎಳ್ಳಿನೊಡನೆ ಸೇರಿಸಿ ಪಿಂಡದಾನವನ್ನು ಮಾಡಬೇಕು. ಪಿತೃತೀರ್ಥದಿಂದ ತಿಲೋದಕ

ಪಿತೃತೀರ್ಥೇನ ಸಲಿಲಂ ಸದ್ವೈವ ಸಲಿಲಾಂಜಲಿಂ ।
ಮಾತಾಮಹೇಭ್ಯಸ್ತೇನೈವ ಪಿಂಡಾಂಸ್ತೀರ್ಥೇನ ನಿರ್ವಪೇತ್ ॥ ೪೦ ॥

ದಕ್ಷಿಣಾಗ್ರೇಷು ದರ್ಭೇಷು ಪುಷ್ಪಧೂಪಾದಿಪೂಜಿತಂ ।
ಸ್ವಪಿತ್ರೇ ಪ್ರಥಮಂ ಪಿಂಡಂ ದದ್ಯಾದುಚ್ಛಿಷ್ಟಸನ್ನಿಧೌ ॥ ೪೧ ॥

ಪಿತಾಮಹಾಯ ಚೈವಾನ್ಯಂ ತತ್ಪಿತ್ರೇ ಚ ತಥಾಪರಂ ।
ದರ್ಭಮೂಲೇ ಲೇಪಭಾಜಃಪ್ರೀಣಯೇಲ್ಲೇಪಘರ್ಷಣೈಃ ॥ ೪೨ ॥

ಪಿಂಡೈರ್ಮಾತಾಮಹಾಂಸ್ತದ್ವದ್ಗಂಧಮಾಲ್ಯಾದಿಸಂಯುತೈಃ ।
ಪೂಜಯಿತ್ವಾ ದ್ವಿಜಾಗ್ರ್ಯಾಣಾಂ ದದ್ಯಾದಾಚಮನಂ ತತಃ ॥ ೪೩ ॥

ಪಿತೃಭ್ಯಃ ಪ್ರಥಮಂ ಭಕ್ತ್ಯಾ ತನ್ಮನಸ್ಕೋ ನರೇಶ್ವರ ।
ಸುಸ್ವಧೇತ್ಯಾಶಿಷಾಯುಕ್ತಾಂ ದದ್ಯಾಚ್ಛಕ್ತ್ಯಾ ಚ ದಕ್ಷಿಣಾಂ ॥ ೪೪ ॥

---

ವನ್ನು ಕೊಡಬೇಕು. ಮಾತಾ ಮಹಾದಿಗಳಿಗೂ ಪಿತೃತೀರ್ಥದಿಂದಲೇ ಪಿಂಡವನ್ನು ಹಾಕಬೇಕು.

೪೧-೪೨. ದಕ್ಷಿಣಾಗ್ರವಾದ ದರ್ಭೆಯ ಮೇಲೆ ಪಿತ್ರಾದಿಗಳಿಗೆ ಪಿಂಡವನ್ನು ಹಾಕಿ ಪುಷ್ಪಧೂಪಾದಿಗಳಿಂದ ಪೂಜಿಸಬೇಕು. ಇದಕ್ಕೆ ಮುಂಚಿತವಾಗಿಯೇ ಬ್ರಾಹ್ಮಣರ ಎಂಜಲೆಲೆಯ ಸಮೀಪದಲ್ಲಿ ಪಿತೃವಿಗೆ ಪಿಂಡದಾನವನ್ನು ಮಾಡಬೇಕು. ಪಿತೃ ಪಿತಾಮಹ ಪ್ರಪಿತಾಮಹರಿಗೆ ಪಿಂಡದಾನ ಮಾಡಿದ ಮೇಲೆ ಮಾತಾಮಹಾದಿಗಳಿಗೂ ಪಿಂಡದಾನವನ್ನು ಮಾಡಿದ ಮೇಲೆ ಪಿಂಡಕ್ಕಾಗಿ ಹಾಸಿದ ದರ್ಭೆಯ ಬುಡದಲ್ಲಿ ನಾಲ್ಕನೆಯ ತಲೆಯಿಂದ ಹಿಂದಿನ ಪಿತೃಗಳಿಗೆ (ಲೇಪಭಾಜರು) ತೃಪ್ತಿಯಾಗುವುದಕ್ಕಾಗಿ ಕೈಗೆ ಅಂಟಿಕೊಂಡಿದ್ದ ಪಿಂಡಶೇಷವನ್ನು ದರ್ಭೆಗೆ ಒರಸಬೇಕು.

೪೩-೪೪. ಮಾತಾಮಹಾದಿಗಳಿಗೂ ಪಿಂಡವನ್ನು ಹಾಕಿ ಗಂಧಮಾಲ್ಯಾದಿಗಳಿಂದ ಪೂಜಿಸಿದ ಮೇಲೆ ಬ್ರಾಹ್ಮಣರಿಗೆ ಆಚಮನಕ್ಕಾಗಿ ನೀರನ್ನು ಕೊಟ್ಟು ಅವರು

ದತ್ವಾ ಚ ದಕ್ಷಿಣಾಂ ತೇಭ್ಯೋ ವಾಚಯೇದ್ವೈಶ್ವದೇವಿಕಾನ್ ।
ಪ್ರೀಯಂತಾಮಿತಿ ಯೇ ವಿಶ್ವೇದೇವಾಸ್ತೇನ ಇತೀರಯೇತ್ ॥ ೪೫ ॥

ತಥೇತಿ ಚೋಕ್ತೈಸ್ತೈರ್ವಿಪ್ರೈಃ ಪ್ರಾರ್ಥನೀಯಾಸ್ತದಾಶಿಷಃ ।
ಪಶ್ಚಾದ್ವಿಸರ್ಜಯೇದ್ದೇವಾನ್ ಪೂರ್ವಂ ಪೈತ್ರಾನ್ ಮಹೀಪತೇ ॥ ೪೬ ॥

ಮಾತಾಮಹಾನಾಮಪ್ಯೇವಂ ಸಹ ದೇವೈಃ ಕ್ರಮಸ್ಮೃತಃ ।
ಭೋಜನೇ ಚ ಸ್ವಶಕ್ತ್ಯಾ ಚ ದಾನೇ ತದ್ವದ್ವಿಸರ್ಜನೇ ॥ ೪೭ ॥

ಆಪಾದಶೌಚನಾತ್ಪೂರ್ವಂ ಕುರ್ಯಾದ್ದೇವ ದ್ವಿಜನ್ಮಸು ।
ವಿಸರ್ಜನಂತುಪ್ರಥಮಂ ಪಿತೃಮಾತಾಮಹೇಷು ವೈ ॥ ೪೮ ॥

---

ಶುದ್ಧರಾದಮೇಲೆ ಅವರ ಆಶೀರ್ವಾದವನ್ನು ಪಡೆದು ತನ್ನ ಶಕ್ತ್ಯನುಸಾರವಾಗಿ ದಕ್ಷಿಣೆಯನ್ನು ಕೊಡಬೇಕು. ಮೊದಲು ಪಿತ್ರಾದಿಸ್ಥಾನದಲ್ಲಿದ್ದವರಿಗೂ ಆಮೇಲೆ ಮಾತಾಮಹಾದಿ ಸ್ಥಾನದಲ್ಲಿದ್ದವರಿಗೂ ಬಳಿಕ ವಿಶ್ವೇದೇವಸ್ಥಾನದಲ್ಲಿದ್ದವಂಗೂ ದಕ್ಷಿಣೆಯನ್ನು ಕೊಡಬೇಕು. ಆಮೇಲೆ ಅವರಿಂದ ಪ್ರೀತಿವಚನಗಳನ್ನೂ ಆಶೀರ್ವಾದಗಳನ್ನೂ ಪಡೆದು ಮೊದಲು ಪಿತೃಗಳನ್ನೂ ಆಮೇಲೆ ವಿಶ್ವೇದೇವತೆಗಳನ್ನೂ ವಿಸರ್ಜನೆ ಮಾಡಬೇಕು.

೪೭-೪೮. ಮಾತಾಮಹಾದಿ ಶ್ರಾದ್ಧಗಳಲ್ಲಿಯೂ ಹೀಗೆಯೇ ಭೋಜನ ದಾನ ವಿಸರ್ಜನಾದಿ ಕ್ರಮಗಳನ್ನನುಸರಿಸಿ ಮಾಡಬೇಕು. ಪಾದ ಪ್ರಕ್ಷಾಳನೆ ಮೊದಲಾಗಿ ಸಮಸ್ತ ಕಾರ್ಯಗಳನ್ನೂ ಮೊದಲು ವಿಶ್ವೇದೇವಸ್ಥಾನದ ಬ್ರಾಹ್ಮಣರಿಗೂ ಬಳಿಕ ಪಿತೃವರ್ಗದ ಬ್ರಾಹ್ಮಣರಿಗೂ ಆಮೇಲೆ ಮಾತಾಮಹವರ್ಗದ ಬ್ರಾಹ್ಮಣರಿಗೂ ಮಾಡಬೇಕು. ವಿಸರ್ಜನೆಯನ್ನು ಮಾಡುವಾಗ ಮಾತ್ರ ಮೊದಲು ಪಿತೃವರ್ಗ ಬಳಿಕ ಮಾತಾಮಹವರ್ಗ ಆಮೇಲೆ ದೇವತೆಗಳು ಈ ಕ್ರಮದಲ್ಲಿ ವಿಸರ್ಜನೆಯನ್ನು ಮಾಡಬೇಕು. ವಿಸರ್ಜನೆಯಾದಮೇಲೆ ಬ್ರಾಹ್ಮಣರಿಗೆ ಉಪಚಾರದ ಮಾತುಗಳನ್ನು

ವಿಸರ್ಜಯೇತ್ಪ್ರೀತಿವಚಸ್ಸಂ ಮಾನಾಭ್ಯರ್ಥಿತಾಂ ಸ್ತತಃ ।
ನಿವರ್ತೇತಾಭ್ಯನುಜ್ಞಾತ ಆದ್ವಾರಾತ್ತಾನನುವ್ರಜೇತ್ ॥ ೪೯ ॥

ತತಸ್ತು ವೈಶ್ವ ದೇವಾಖ್ಯಾಂ ಕುರ್ಯಾನ್ನಿತ್ಯಕ್ರಿಯಾಂ ಬುಧಃ ।
ಭುಂಜೀಯಾಚ್ಚ ಸಮಂ ಪೂಜ್ಯಭೃತ್ಯ ಬಂಧುಭಿರಾತ್ಮನಃ ॥ ೫೦ ॥

ಏವಂ ಶ್ರಾದ್ಧಂ ಬುಧಃ ಕುರ್ಯಾತ್ಪೈತ್ರಂ ಮಾತಾಮಹಂ ತಥಾ ।
ಶ್ರಾದ್ಧೈರಾಪ್ಯಾಯಿತಾ ದದ್ಯುಸ್ಸರ್ವಕಾಮಾನ್ ಪಿತಾಮಹಾಃ ॥ ೫೧ ॥

ತ್ರೀಣಿ ಶ್ರಾದ್ಧೇ ಪವಿತ್ರಾಣಿ ದೌಹಿತ್ರಃ ಕುತಪಸ್ತಿಲಃ ।

---

ಹೇಳಿ ಬಾಗಿಲವರೆಗೂ ಅವರನ್ನು ಕಳುಹಿಸಿಕೊಟ್ಟು ಅವರಪ್ಪಣೆಯನ್ನು ಪಡೆದು ಹಿಂದಿರುಗಬೇಕು.

೫೦-೫೧. ಆಮೇಲೆ ನಿತ್ಯಕರ್ಮವಾದ ವೈಶ್ವದೇವವನ್ನು ಮಾಡಿ ಪೂಜ್ಯರು, ಬಂಧುಗಳು, ಭೃತ್ಯರುಗಳೊಡನೆ ತಾನೂ ಭೋಜನವನ್ನು ಮಾಡಬೇಕು. ಹೀಗೆ ವಿದ್ವಾಂಸನಾದವನು ಪಿತೃಶ್ರಾದ್ಧವನ್ನೂ ಮಾತಾಮಹಾದಿಗಳ ಶ್ರಾದ್ಧವನ್ನೂ ಮಾಡಿದರೆ ಆ ಶ್ರಾದ್ಧಗಳಿಂದ ತೃಪ್ತರಾದ ಪಿತೃಗಳು ಸಮಸ್ತ ಇಷ್ಟಾರ್ಥಗಳನ್ನೂ ಕೊಡುವರು.

೫೨. ಶ್ರಾದ್ಧದಲ್ಲಿ ದೌಹಿತ್ರ, ಕುತಪ, ತಿಲ ಈ ಮೂರು ಪವಿತ್ರವಾದುವುಗಳು. ಬೆಳ್ಳಿಯ ದಾನ ದರ್ಶನ ಅದರ ವಿಚಾರವಾದ ಮಾತುಗಳೂ ಪವಿತ್ರವಾದುವು. (ಇಲ್ಲಿ ವಿಶೇಷವೇನೆಂದರೆ–ದೌಹಿತ್ರನೆಂದರೆ, ಮಗಳ ಮಗನಿಗೆ ಶ್ರಾದ್ಧದಲ್ಲಿ ನಿಮಂತ್ರಣಕ್ಕೆ ಹೇಳುವುದು ಶ್ರೇಷ್ಠವು. ಕುತಪವೆಂದರೆ, ಹಗಲಿನ ಎಂಟನೆಯ ಮುಹೂರ್ತವು. ಅಂದರೆ ಹದಿನಾಲ್ಕು ಗಳಿಗೆಯಿಂದ ಹದಿನಾರು ಗಳಿಗೆಯೊಳಗೆ ಕುತಪಕಾಲವು. ಈ ಕಾಲವೇ ಶ್ರಾದ್ಧಕ್ಕೆ ಅತ್ಯಂತ ಶ್ರೇಷ್ಠವಾದ ಕಾಲವು. 'ದೌಹಿತ್ರಂ' ಎಂಬ ಪಾಠಾಂತರದಲ್ಲಿ ಕುಪ್ಪದ ಭೇದವೆಂದು ಅರ್ಥವು. ಅಮಾವಾಸ್ಯೆಯ ತಿಥಿಯಲ್ಲಿ ಚಂದ್ರನಿರುವಾಗ ಯಾವ ಹಸುವು ಹುಲ್ಲನ್ನು ತಿನ್ನುವುದೋ ಆ ಹಸುವಿಗೆ ದುಹಿತಾ

ರಜತಸ್ಯ ಕಥಾದಾನಂ ತಥಾ ಸಂದರ್ಶನಾದಿಕಂ ॥ ೫೨ ॥

ವರ್ಜ್ಯಾನಿ ಕುರ್ವತಾ ಶ್ರಾದ್ಧಂ ಕ್ರೋಧೋಧ್ವಗಮನಂ ತ್ವರಾ ।
ಭೋಕ್ತುರಪ್ಯತ್ರ ರಾಜೇಂದ್ರ ತ್ರಯಮೇತನ್ನ ಶಸ್ಯತೇ ॥ ೫೩ ॥

ವಿಶ್ವೇದೇವಾಸ್ಸಪಿತರಸ್ತಥಾ ಮಾತಾಮಹಾ ನೃಪ ।
ಕುಲಂ ಚಾಪ್ಯಾಯತೇ ಪುಂಸಾ ಸರ್ವಶ್ರಾದ್ಧಂ ಪ್ರಕುರ್ವತಾಂ ॥ ೫೪ ॥

ಸೋಮಾಧಾರಃ ಪಿತೃಗಣೋ ಯೋಗಾಧಾರಶ್ಚ ಚಂದ್ರಮಾಃ ।
ಶ್ರಾದ್ಧೇ ಯೋಗಿನಿಯೋಗಸ್ತು ತಸ್ಮಾದ್ಭೂಪಾಲ ಶಸ್ಯತೇ ॥ ೫೫ ॥

---

ಎಂದು ಹೆಸರು. ಆದರ ಹಾಲಿನಿಂದಾದ ತುಪ್ಪಕ್ಕೆ ದೌಹಿತ್ರವೆಂದು ಹೆಸರು. ಕುತಪವೆಂಬುದಕ್ಕೆ ಕುತ್ಸಿತವಾದ ಪಾಪವನ್ನು ತಪ್ಪಿಸುವ ಪದಾರ್ಥಗಳೆಂದು ಹೇಳುವರು, ಅವು ಎಂಟಿರುವುವು. ಮಧ್ಯಾಹ್ನಕಾಲ, ಖಡ್ಗಪಾತ್ರ, ಕಂಬಳಿಯ ದಾನ, ಬೆಳ್ಳಿ. ದರ್ಭೆ, ಎಳ್ಳು, ಗೋವು, ಮಗಳ ಮಗ (ದೌಹಿತ್ರ) ಈ ಎಂಟೂ ಕುತಪವೆಂದು ಕೆಲವರು ಹೇಳುವರು.)

೫೩. ಶ್ರಾದ್ಧ ಮಾಡುವವನು ಕೋಪವನ್ನೂ, ದಾರಿಯನ್ನು ನಡೆವುದನ್ನೂ, ಆತುರವನ್ನೂ ಬಿಡಬೇಕು. ಶ್ರಾದ್ಧ ಭೋಜನ ಮಾಡುವವರೂ ಇವುಗನ್ನು ಬಿಡಬೇಕು.

೫೪. ವಿಶ್ವೇದೇವತೆಗಳೂ, ಪಿತ್ರಾದಿಗಳೂ, ಮಾತಾಮಹಾದಿಗಳೂ ಶ್ರಾದ್ಧವನ್ನು ಮಾಡುವ ಮನುಷ್ಯನ ಸಮಸ್ತ ಕುಲವನ್ನೂ ಆನಂದಗೊಳಿಸುವರು

೫೫. ಶ್ರಾದ್ಧದಲ್ಲಿ ವಸುರುದ್ರ. ಆದಿತ್ಯ, ರೂಪರಾದ ಪಿತೃಗಣಗಳೇ ದೇವತೆಗಳು, ಇವರು ಚಂದ್ರಕಿರಣದಿಂದ ಜೀವಿಸಿರುವವರಾದುದರಿಂದ ಇವರಿಗೆ ಚಂದ್ರನೇ ಆಶ್ರಯನು. ಯೋಗಿಗಳಿಗೆ ಧ್ಯಾನಕ್ಕೆ ಚಂದ್ರನೇ ಆಶ್ರಯನು. ಯೋಗಾಭ್ಯಾಸ ಮಾಡುವವರು ಬ್ರಹ್ಮರಂಧ್ರದ ಸಹಸ್ರಾರ ಚಕ್ರದಲ್ಲಿರುವ ಚಂದ್ರಮಂಡಲವನ್ನು ಧ್ಯಾನಮಾಡಿ ಆ ಚಂದ್ರನಿಗೆ ಆನಂದವನ್ನುಂಟುಮಾಡುವರು. ಇದರಿಂದ ಪಿತೃಗಳಿಗೂ ಆನಂದವುಂಟಾಗುವುದು. ಆ ಕಾರಣದಿಂದ ಶ್ರಾದ್ಧದಲ್ಲಿ ಯೋಗಿಗಳಿಗೆ ನಿಮಂತ್ರಣಕ್ಕೆ ಹೇಳುವುದು ಪ್ರಶಸ್ತವಾದುದು.

ಸಹಸ್ರಸ್ಯಾಪಿ ವಿಪ್ರಾಣಾಂ ಯೋಗೀ ಚೇತ್ಪುರತಸ್ಥಿತಃ ।
ಸರ್ವಾನ್ ಭೋಕ್ತ್ರ್ವಾನ್ ಸ್ತಾರಯತಿ ಯಜಮಾನಂ ತಥಾ ನೃಪ ॥ ೫೭ ॥

ಇತಿ ಶ್ರೀ ವಿಷ್ಣುಪುರಾಣೇ ತೃತೀಯಾಂಶೇ ಪಂಚದಶೋಽಧ್ಯಾಯಃ

---

೫೭. ಎಲೈ ರಾಜನೇ! ಶ್ರಾದ್ಧ ನಿಮಂತ್ರಣದಲ್ಲಿ ಸಾವಿರ ಬ್ರಾಹ್ಮಣರಿದ್ದರೂ ಒಬ್ಬ ಯೋಗಿಯು ಮುಖ್ಯನಾಗಿದ್ದರೆ ಅವನೊಬ್ಬನೇ ಭೋಜನಮಾಡಿದ ಸಮಸ್ತರನ್ನೂ ಶ್ರಾದ್ಧವನ್ನು ಮಾಡಿದ ಯಜಮಾನನನ್ನೂ ಸಂಸಾರ ದುಃಖದಿಂದ ಬಿಡಿಸುವನು.

ಎಂಬಲ್ಲಿಗೆ ಶ್ರೀ ವಿಷ್ಣುಪುರಾಣದ ತೃತೀಯಾಂಶದಲ್ಲಿ

ಹದಿನೈದನೆಯ ಅಧ್ಯಾಯವು ಮುಗಿದುದು.

---

ಶ್ರೀಃ

# ಶ್ರೀ ವಿಷ್ಣುಪುರಾಣೇ ತೃತೀಯಾಂಶೇ

## ಷೋಡಶೋಽಧ್ಯಾಯಃ

॥ ಔರ್ವಃ ॥

ಹವಿಷ್ಯಮತ್ಸ್ಯಮಾಂಸೈಸ್ತು ಶಶಸ್ಯ ನಕುಲಸ್ಯ ಚ ।
ಸೌಕರಚ್ಛಾಗಲೈಣೇಯರೌರವೈರ್ಗವಯೇನ ಚ ॥ ೧ ॥

ಔರಭ್ರಗವ್ಯೈಶ್ಚ ತಥಾ ಮಾಸವೃದ್ಧ್ಯಾ ಪಿತಾಮಹಾಃ ।
ಪ್ರಯಾಂತಿ ತೃಪ್ತಿಂ ಮಾಂಸೈಸ್ತು ನಿತ್ಯಂ ವಾರ್ಧ್ರಾಣಸಾಮಿಷೈಃ ॥ ೨ ॥

---

### ಹದಿನಾರನೆಯ ಅಧ್ಯಾಯವು

೧-೩. ಔರ್ವನು ಹೇಳುವನು:—ರಾಜನೇ, ಪಿತೃಗಳು ಹವಿಸ್ಸೆಂಬ ಅನ್ನ, ಮೀನು, ಮೊಲ, ಕೀರ, ಹಂದಿ, ಆಡು, ಜಿಂಕೆ, ಕರಿಜಿಂಕೆ, ಗವಯ, ಕುರಿ ಇವುಗಳ ಮಾಂಸ, ಹಸುವಿನ ಹಾಲು ಇವುಗಳಿಂದ ಕ್ರಮವಾಗಿ ಒಂದು ತಿಂಗಳಿನಿಂದ ಹನ್ನೊಂದು ತಿಂಗಳವರೆಗಿನ ತೃಪ್ತಿಯನ್ನು ಪಡೆವರು, "ಸಂವತ್ಸರಂತುಗವ್ಯೇನ ಪಯಸಾ ಪಾಯಸೇನಚ" ಎಂದು ಧರ್ಮಶಾಸ್ತ್ರದಲ್ಲಿ ಹೇಳಿರುವುದು. ಹಸುವಿನ ಹಾಲಿನಿಂದಲೂ, ಪಾಯಸದಿಂದಲೂ ಪಿತೃಗಳಿಗೆ ಒಂದು ವರ್ಷದವರೆಗೆ ತೃಪ್ತಿಯುಂಟಾಗಿರುವುದೆಂದ ಇದರ ಅಭಿಪ್ರಾಯವು. ಗವ್ಯವೆಂದರೆ ಹಸುವಿನ ಮಾಂಸವೆಂದರೆ ಕೆಲವರು ಹೇಳುವರು. ವಾರ್ಧ್ರಾಣಸ ಮಾಂಸದಿಂದ ಪಿತೃಗಳು ಯಾವಾಗಲೂ ತೃಪ್ತರಾಗಿರುವರೆಂದು ಹೇಳುವರು. ವಾರ್ಧ್ರಾಣಸವೆಂದರೆ ಇಂದ್ರಿಯ ಬಲವಿಲ್ಲದ ಮುದಿಯಾದ ಬಿಳಿಯ ಆಡೆಂದು ಯಾಜ್ಞಿಕರು ಹೇಳುವರು. ತಲೆ ಕೆಂಪಗೂ, ಕತ್ತು

ಖಡ್ಗಮಾಂಸಮತೀವಾತ್ರ ಕಾಲಶಾಕಂ ತಥಾ ಮಧು ।
ಶಸ್ತಾನಿ ಕರ್ಮಣ್ಯತ್ಯಂತ ತೃಪ್ತಿದಾನಿ ನರೇಶ್ವರ ॥ ೩ ॥

ಗಯಾಮುಪೇತ್ಯ ಯಶ್ಶ್ರಾದ್ಧಂ ಕರೋತಿ ಪೃಥಿವೀಪತೇ ।
ಸಫಲಂ ತಸ್ಯ ತಜ್ಜನ್ಮ ಜಾಯತೇ ಪಿತೃತೃಪ್ತಿದಂ ॥ ೪ ॥

ಪ್ರಶಾಂತಿಕಾಸ್ಸನೀವಾರಾಶ್ಶ್ಯಾಮಾಕಾ ದ್ವಿವಿಧಾಸ್ತಥಾ ।
ವನ್ಯೌಷಧಿಪ್ರಧಾನಾಸ್ತು ಶ್ರಾದ್ಧಾರ್ಹಾಃ ಪುರುಷರ್ಷಭ ॥ ೫ ॥

ಯವಾಃ ಪ್ರಿಯಂಗವೋ ಮುದ್ಗಾ ಗೋಧೂಮಾ ವ್ರೀಹಯಸ್ತಿಲಾಃ ।
ನಿಷ್ಪಾವಾಃ ಕೋವಿದಾರಾಶ್ಚ ಸರ್ಷಪಾಶ್ಚಾತ್ರ ಶೋಭನಾಃ ॥ ೬ ॥

ಅಕೃತಾ ಗ್ರಯಣಂ ಯಚ್ಚ ಧಾನ್ಯಜಾತಂ ನರೇಶ್ವರ ।
ರಾಜಮಾಷಾನಣೂಂಶ್ಚೈವ ಮಸೂರಾಂಶ್ಚ ವಿವರ್ಜಯೇತ್ ॥ ೭ ॥

---

ಕಪ್ಪಾಗಿಯೂ ಮೈಯೆಲ್ಲ ಬಿಳಿದಾಗಿ (ಬಿಳಿಯ ರೆಕ್ಕೆಗಳುಳ್ಳ) ರುವ ಹಕ್ಕಿಯು ವಾರ್ಧ್ರಾಣಸವೆಂದು ವೇದ ವಚನವಿರುವುದು. ಖಡ್ಗಮೃಗದ ಮಾಂಸವೂ, ಆಯಾ ಋತುವಿನ ಕಾಯಿ ಸೊಪ್ಪುಗಳೂ ಜೇನುತುಪ್ಪವೂ ಪಿತೃಗಳಿಗೆ ಅತ್ಯಂತ ತೃಪ್ತಿಯನ್ನುಂಟುಮಾಡತಕ್ಕವುಗಳೆಂದೂ ಶ್ರಾದ್ಧಕರ್ಮದಲ್ಲಿ ಅವುಗಳನ್ನು ಉಪಯೋಗಿಸಬೇಕೆಂದೂ ವಿಧಿಯಿರುವುದು.

೪-೬. ಗಯಾಕ್ಷೇತ್ರಕ್ಕೆ ಹೋಗಿ ಯಾವನು ಪಿತೃಗಳಿಗೆ ಶ್ರಾದ್ಧವನ್ನು ಮಾಡುತ್ತಾನೆಯೋ ಅವನ ಜನ್ಮವು ಸಾರ್ಥಕವಾದುದಾಗಿರುವುದು. ಆ ಶ್ರಾದ್ಧವು ಪಿತೃಗಳಿಗೆ ತೃಪ್ತಿಯನ್ನುಂಟು ಮಾಡುವುದು. ಕಾಡಿನಲ್ಲಿ ಬೆಳೆದ ಬತ್ತ, ಎರಡು ಬಗೆಯ ಸಾವೆ, ಕಾಡಿನ ಸೊಪ್ಪುಗಳು ಇವು ಶ್ರಾದ್ಧಕ್ಕೆ ಯೋಗ್ಯವಾದ ವಸ್ತುಗಳು. ಗೋಧಿ, ನವಣೆ, ಅವರೆ, ಹೆಸರು, ಬತ್ತ, ಎಳ್ಳು, ಸಾಸವೆ, ಇವುಗಳೂ ಶ್ರೇಷ್ಠವಾದುವುಗಳು.

೭-೯. ರಾಜನೇ ! ಅಗ್ರಯಣವೆಂಬ ಕರ್ಮವನ್ನು ಮಾಡಿ ಸಂಸ್ಕಾರ ಹೊಂದಿದ ಧಾನ್ಯಗಳೂ, ತಡುಗಣೆ, ಸಣ್ಣಬತ್ತ, ಕಾಡುಕಡಲೆ, ಸೋರೆಕಾಯಿ,

ಅಲಾಬುಂ ಗೃಂಜನಂ ಚೈವ ಪಲಾಂಡುಂ ಪಿಂಡಮೂಲಕಂ ।
ಗಾಂಧಾರಕಕರಂಭಾಣಿ ಲವಣಾನ್ಯೌಷರಾಣಿ ಚ ॥ ೮ ॥

ಆರಕ್ತಾಶ್ಚೈವ ನಿರ್ಯಾಸಾಃ ಪ್ರತ್ಯಕ್ಷಲವಣಾನಿ [illegible] ।
ವರ್ಜ್ಯಾನ್ಯೇತಾನಿ ವೈ ಶ್ರಾದ್ಧೇ ಯಚ್ಚ ವಾಚಾ ನ ಶಸ್ಯತೇ ॥ ೯ ॥

ನಕ್ತಾಹೃತಮನುಚ್ಛಿಷ್ಟಂ ತೃಪ್ಯತೇ ನ ಚ ಯತ್ರ ಗೌಃ ।
ದುರ್ಗಂಧಿ ಫೇನಿಲಂ ಚಾಂಬು ಶ್ರಾದ್ಧಯೋಗ್ಯಂ [illegible] ಪಾರ್ಥಿವ ॥ ೧೦ ॥

ಕ್ಷೀರಮೇಕಶಫಾನಾಂ ಯದೌಷ್ಟ್ರಮಾವಿಕಮೇವ ಚ ।
ಮಾರ್ಗಂ ಚ ಮಾಹಿಷಂ ಚೈವ ವರ್ಜಯೇಚ್ಛ್ರಾದ್ಧಕರ್ಮಣಿ ॥ ೧೧ ॥

ಷಂಡಾಪವಿದ್ಧಚಂಡಾಲ ಪಾಪಿಪಾಷಂಡರೋಗಿಭಿಃ ।
ಕೃಕವಾಕುಶ್ವಾನನಗ್ನವಾನರಗ್ರಾಮಸೂಕರೈಃ ॥ ೧೨ ॥

---

ಮೂಲಂಗಿ, ಈರುಳ್ಳಿ, ಗುಂಡಾದಗೆಡ್ಡೆಗಳು, ಜೋಳ, ಹೊಟ್ಟಿಲ್ಲದ ಹುರಿದ ಧಾನ್ಯದ ಹಿಟ್ಟು, ಊಷರ ಭೂಮಿಯ ಉಪ್ಪು, ಕೆಂಪಾದ ರಸಗಳು, ಪ್ರತ್ಯಕ್ಷ ಲವಣ ಇವುಗಳನ್ನೂ ರೂಢಿಯಲ್ಲಿ ಯೋಗ್ಯವಲ್ಲವೆಂದು ಹೇಳುವ ವಸ್ತುಗಳನ್ನೂ ಶ್ರಾದ್ಧದಲ್ಲಿ ಉಪಯೋಗಿಸಬಾರದು.

೧೦–೧೧. ರಾಜನೇ! ರಾತ್ರಿ ತಂದುದೂ, ಯಾರೂ ಉಪಯೋಗಿಸದ ಜಲಾಶಯದಲ್ಲಿದ್ದುದೂ, ಗೋವು ಕುಡಿದು ತೃಪ್ತಿಪಡದ ಅಲ್ಪ ಜಲಾಶಯದಲ್ಲಿರುವುದೂ, ಕೆಟ್ಟ ವಾಸನೆಯುಳ್ಳುದೂ, ನೊರೆಯಿಂದ ಕೂಡಿದುದೂ ಇಂತಹ ನೀರು ಶ್ರಾದ್ಧಯೋಗ್ಯವಾದುದಲ್ಲ. ಒಂದೇ ಗೊರಸುಳ್ಳ ಕುದುರೆ ಮುಂತಾದ ಪ್ರಾಣಿಗಳ ಒಂಟೆ, ಕುರಿ, ಜಿಂಕೆ, ಎಮ್ಮೆ ಇವುಗಳ ಹಾಲನ್ನು ಶ್ರಾದ್ಧದಲ್ಲಿ ಉಪಯೋಗಿಸಬಾರದು.

೧೨–೧೪. ನಪುಂಸಕರು, ಮಹಾಜನರಿಂದ ಬಹಿಷ್ಕಾರವನ್ನು ಹೊಂದಿದವರು, ಚಂಡಾಲರು, ಪಾಪಿಗಳು, ಪಾಷಂಡರು, ರೋಗಿಗಳು, ಕೋಳಿಯ ಹುಂಜ, ನಾಯಿ, ನಗ್ನರು, ಕಪಿ, ಹಂದಿ, ಹೊರಗಾದವಳು, ಹೆತ್ತವಳು, ಅಶೌಚದಲ್ಲಿರುವವರು

ಉದಕ್ಯಾ ಸೂತಿಕಾಶೌಚ ಮೃತಹಾರೈಶ್ಚ ವೀಕ್ಷಿತೇ ।
ಶ್ರಾದ್ಧೇ ಸುರಾ ನ ಪಿತರೋ ಭುಂಜತೇ ಪುರುಷರ್ಷಭ ॥ ೧೩ ॥

ತಸ್ಮಾತ್ಪರಿಶ್ರಿತೇ ಕುರ್ಯಾಚ್ಛ್ರಾದ್ಧಂ ಶ್ರದ್ಧಾಸಮನ್ವಿತಃ ।
ಉರ್ವ್ಯಾಂ ಚ ತಿಲವಿಕ್ಷೇಪಾದ್ಯಾತುಧಾನಾನ್ನಿವಾರಯೇತ್ ॥ ೧೪ ॥

ನಖಾದಿನಾ ಚೋಪಪನ್ನಂ ಕೇಶಕೀಟಾಭಿರ್ನೃಪ ।
ನ ಚೈವಾಭಿಷವೈರ್ಮಿಶ್ರಮನ್ನಂ ಪರ್ಯುಷಿತಂ ತಥಾ ॥ ೧೫ ॥

ಶ್ರದ್ಧಾಸಮನ್ವಿತೈರ್ದತ್ತಂ ಪಿತೃಭ್ಯೋ ನಾಮ ಗೋತ್ರತಃ ।
ಯದಾಹಾರಾಸ್ತು ತೇ ಜಾತಾಸ್ತದಾಹಾರತ್ವಮೇತಿ ತತ್ ॥ ೧೬ ॥

---

ಹೆಣವನ್ನು ಹೊರುವುದೇ ಕೆಲಸವಾಗಿರುವವರು ಇವರು ನೋಡದಿರುವ ಪ್ರದೇಶದಲ್ಲಿ ದೇವ ಪಿತೃಸ್ಥಾನದಲ್ಲಿ ಕುಳಿತ ಬ್ರಾಹ್ಮಣರ ಭೋಜನವನ್ನು ಮಾಡಿಸಬೇಕು. ಇವರು ನೋಡುತ್ತಿರುವ ಸ್ಥಳದಲ್ಲಿ ದೇವತೆಗಳೂ, ಪಿತೃಗಳೂ ಭೋಜನ ಮಾಡುವುದಿಲ್ಲ. ಆದುದರಿಂದ ಸುತ್ತಲೂ ಆವರಣವಿರುವ ಪ್ರದೇಶದಲ್ಲಿ ಭಕ್ತಿಯಿಂದ ಶ್ರಾದ್ಧವನ್ನು ಮಾಡಬೇಕು. ಭೂಮಿಯಲ್ಲಿ ಎಳ್ಳನ್ನು ಹಾಕುವುದರಿಂದ ರಾಕ್ಷಸರನ್ನು ನಿವಾರಿಸಬೇಕು.

೧೫–೧೬. ಕೂದಲು, ಉಗುರು, ಹುಳುಗಳು ಇವುಗಳಿಂದ ದೂಷಿತವಾಗದೆ ರಸಹೀನವಾಗದೆ ಇತರರಿಗೆ ಬಡಿಸಿ ಮಿಗದ ಪರಿಶುದ್ಧವಾದ ಅನ್ನವನ್ನು ಪಿತೃಗಳಿಗೆ ನಾಮ ಗೋತ್ರಗಳನ್ನುಚ್ಚರಿಸಿ ದಾನಮಾಡಿದರೆ ಆ ಅನ್ನವು ಅವನ ಪಿತೃಗಳು ಜನ್ಮಾಂತರದಲ್ಲಿ ಯಾವ ಆಹಾರವನ್ನುಪಯೋಗಿಸುವ ಜನ್ಮವನ್ನು ಪಡೆದಿರುವರೋ ಅವರಿಗಾಗಿ ಕೊಟ್ಟ ಅನ್ನವು ಅದೇ ಆಹಾರವಾಗಿ ಪರಿಣಮಿಸುವುದು. ಅಂದರೆ ದೇವ ಜನ್ಮವನ್ನು ಪಡೆದಿದ್ದರೆ ಅಮೃತವಾಗಿಯೂ, ಮನುಷ್ಯಜನ್ಮವನ್ನು ಪಡೆದಿದ್ದರೆ ಅನ್ನವಾಗಿಯೂ, ಪಶುಜನ್ಮವನ್ನು ಪಡೆದಿದ್ದರೆ ಹುಲ್ಲಿನ ರೂಪವಾಗಿಯೂ, ಆಗಿ ಅವರನ್ನು ತೃಪ್ತಿಪಡಿಸುವುದು.

ಶ್ರೂಯತೇ ಚಾಪಿ ಪಿತೃಭಿರ್ಗೀತಾ ಗಾಥಾ ಮಹೀಪತೇ ।
ಇಕ್ಷ್ವಾಕೋರ್ಮನುಪುತ್ರಸ್ಯ ಕಲಾಪೋಪವನೇ ತಥಾ ॥ ೧೭ ॥

ಅಪಿ ನಸ್ತೇ ಭವಿಷ್ಯಂತಿ ಕುಲೇ ಸನ್ಮಾರ್ಗಶೀಲಿನಃ ।
ಗಯಾಮುಪೇತ್ಯ ಯೇ ಪಿಂಡಾನ್ ದಾಸ್ಯಂತ್ಯಸ್ಮಾಕಮಾದರಾತ್ ॥ ೧೮ ॥

ಅಪಿ ನಸ್ಸ ಕುಲೇ ಜಾತೋ ಯೋ ನೋ ದದ್ಯಾತ್ತ್ರಯೋದಶೀಂ ।
ಪಾಯಸಂ ಮಧುಸರ್ಪಿರ್ಭ್ಯಾಂ ವರ್ಷಾಸು ಚ ಮಘಾಸು ಚ ॥ ೧೯ ॥

---

೧೭. ಈ ವಿಚಾರದಲ್ಲಿ ಹಿಮವತ್ಪರ್ವತದ ಸಮೀಪದಲ್ಲಿರುವ ಕಲಾಪವೆಂಬ ಗ್ರಾಮದ ಉಪವನದಲ್ಲಿ ಮನು ಪುತ್ರನಾದ ಇಕ್ಷ್ವಾಕು ರಾಜನಿಗೆ ಪಿತೃಗಳು ಹೇಳಿದ ಗಾಥಾರೂಪವಾದ ಶ್ಲೋಕವಿರುವುದು ಅದನ್ನು ನೀನು ಕೇಳಬೇಕು.

೧೮–೨೦. ನಮ್ಮ ವಂಶದಲ್ಲಿ ಒಳ್ಳೆಯ ನಡತೆಯುಳ್ಳವರು ಹುಟ್ಟುವರೇ? ಅವರು ಗಯಾ ಕ್ಷೇತ್ರಕ್ಕೆ ಹೋಗಿ ನಮ್ಮಲ್ಲಿ ಭಕ್ತಿಯಿಂದ ಪಿಂಡವನ್ನು ಹಾಕುವರೇ? ನಮ್ಮ ವಂಶದಲ್ಲಿ ಹುಟ್ಟಿದವನು ಭಾದ್ರಪದ ಬಹುಳ ತ್ರಯೋದಶಿಯು ಮಘಾ ನಕ್ಷತ್ರದ ಶ್ರಾದ್ಧವನ್ನು ಮಾಡಿ ತುಪ್ಪ ಮತ್ತು ಜೇನುತುಪ್ಪಗಳಿಂದ ಕೂಡಿದಪಾಯಸ ದಿಂದ ಬ್ರಾಹ್ಮಣ ಭೋಜನವನ್ನು ಮಾಡಿಸುವನೇ? ಗೌರೀ ಎಂಬ ಹತ್ತು ವರ್ಷದ ವಯಸ್ಸಿನ ಕನ್ಯಾದಾನವನ್ನು ಮಾಡುವನೇ ಅಥವಾ ಮೈಯೆಲ್ಲಾ ಕೆಂಪಾಗಿಯೂ, ಮುಖ, ಮತ್ತು ಬಾಲಗಳು ಪಾಂಡರ ವರ್ಣವಾಗಿಯೂ, ಗೊರಸು. ಕೊಂಬುಗಳು ಬಿಳಿಯ ಬಣ್ಣವಾಗಿಯೂ ಇರುವ ನೀಲವೆಂಬ ವೃಷಭವನ್ನು ವೃಷೋತ್ಸರ್ಗವೆಂಬ ವಿಧಿಯಿಂದ ಬಿಡುವನೇ ಅಥವಾ ವಿಧಿಯನ್ನನುಸರಿಸಿ ದಕ್ಷಿಣೆಯಿಂದ ಕೂಡಿದ

ಗೌರೀಂ ವಾಪ್ಯುದ್ವಹೇತ್ಕನ್ಯಾಂ ನೀಲಂ ವಾ ವೃಷಮುತ್ಸೃಜೇತ್ ।
ಯಜೇತ ವಾಶ್ವಮೇಧೇನ ವಿಧಿವದ್ದಕ್ಷಿಣಾವತಾ ॥ ೨೦ ॥

ಇತಿ ಶ್ರೀ ವಿಷ್ಣುಪುರಾಣೇ ತೃತೀಯಾಂಶೇ ಷೋಡಶೋಽಧ್ಯಾಯಃ

---

ಅಶ್ವಮೇಧಯಾಗವನ್ನು ಮಾಡುವನೇ? ಎಂಬುದೇ ಪಿತೃಗಳು ಮನುಪುತ್ರನಾದ ಇಕ್ಷ್ವಾಕುರಾಜನಿಗೆ ಹೇಳಿದ ಗಾಥಾ ಶ್ಲೋಕಾಭಿಪ್ರಾಯವು.

ಎಂಬಲ್ಲಿಗೆ ಶ್ರೀ ವಿಷ್ಣುಪುರಾಣದ ತೃತೀಯಾಂಶದಲ್ಲಿ
ಹದಿನಾರನೆಯ ಅಧ್ಯಾಯವು ಮುಗಿದುದು

---

ಶ್ರೀಃ

# ಶ್ರೀ ವಿಷ್ಣುಪುರಾಣೇ ತೃತೀಯಾಂಶೇ

## ಸಪ್ತದಶೋಽಧ್ಯಾಯಃ

॥ ಶ್ರೀ ಪರಾಶರಃ ॥

ಇತ್ಯಾಹಭ ಭಗವಾನೌರ್ವಸ್ಸಗರಾಯ ಮಹಾತ್ಮನೇ ।
ಸದಾಚಾರಂ ಪುರಾ ಸಮ್ಯಕ್ ಮೈತ್ರೇಯ ಪರಿಪೃಚ್ಛತೇ ॥ ೧ ॥

ಮಯಾಪ್ಯೇದಶೇಷೇಣ ಕಥಿತಂ ಭವತೋ ದ್ವಿಜ ।
ಸಮುಲ್ಲಂಘ್ಯ ಸದಾಚಾರಂ ಕಶ್ಚಿನ್ನಾಪ್ನೋತಿ ಶೋಭನಂ ॥ ೨ ॥

॥ ಮೈತ್ರೇಯಃ ॥

ಷಂಡಾಪವಿದ್ಧ ಪ್ರಮುಖಾಃ ಕಥಿತಾ ಭಗವಂಸ್ತ್ವಯಾ ।
ಉದಕ್ಯಾದ್ಯಾಶ್ಚ ಮೇ ಸರ್ವೇ ನಗ್ನಮಿಚ್ಛಾಮಿ ವೇದಿತುಂ ॥ ೩ ॥

---

### ಹದಿನೇಳನೆಯ ಅಧ್ಯಾಯವು.

೧-೨. ಪರಾಶರರು ಮೈತ್ರೇಯನೇ ! ಔರ್ವಮುನಿಯು ಸದಾಚಾರ ವಿಚಾರವನ್ನು ಹೇಳಬೇಕೆಂದು ಪ್ರಶ್ನೆ ಮಾಡಿದ ಸಗರರಾಜನಿಗೆ ವಿಸ್ತಾರವಾಗಿ ಹೇಳಿದುದನ್ನೇ ನಾನು ನಿನಗೆ ಹೇಳಿರುವೆನು. ಸದಾಚಾರವನ್ನು ಮೀರಿ ನಡೆದ ಯಾವ ಮನುಷ್ಯನೂ ಶುಭವನ್ನು ಪಡೆಯುವುದಿಲ್ಲ ಎಂದು ಹೇಳಿದರು.

೩-೪. ಮೈತ್ರೇಯನು, ಮಹಾಮಹಿಮರಾದ ಗುರುಗಳೇ ! ಷಂಡ, ಅಪವಿದ್ಧ, ಉದಕಿ ಮುಂತಾದ ಹೆಸರುಗಳನ್ನು ವಿವರಿಸದಿರಿ, ನಗ್ನನೆಂಬವನ ವಿಷಯವನ್ನು

ಕೋ ನಗ್ನಃ ಕಿಂ ಸಮಾಚಾರೋ ನಗ್ನಸಂಜ್ಞಾಂ ನರೋ ಲಭೇತ್ ।
ನಗ್ನಸ್ವರೂಪಮಿಚ್ಛಾಮಿ ಯಥಾವತ್ಕಥಿತಂ ತ್ವಯಾ ।
ಶ್ರೋತುಂ ಧರ್ಮಭೃತಾಂ ಶ್ರೇಷ್ಠ ನಹ್ಯಸ್ತ್ಯವಿದಿತಂ ತವ ॥ ४ ॥

॥ ಶ್ರೀ ಪರಾಶರಃ ॥

ಋಗ್ಯಜುಸ್ಸಾಮಸಂಜ್ಞೇಯಂ ತ್ರಯೀವರ್ಣಾವೃತಿರ್ದ್ವಿಜ ।
ಏತಾಮುಜ್ಝತಿ ಯೋ ಮೋಹಾತ್ಸ ನಗ್ನಃ ಪಾತಕೀ ಸ್ಮೃತಃ ॥ ೫ ॥

ತ್ರಯೀ ಸಮಸ್ತವರ್ಣಾನಾಂ ದ್ವಿಜ ಸಂವರಣಂ ಯತಃ ।
ನಗ್ನೋ ಭವತ್ಯುಜ್ಝಿತಾಯಾಮತಸ್ತಸ್ಯಾಂ ನ ಸಂಶಯಃ ॥ ೬ ॥

ಇದಂ ಚ ಶ್ರೂಯತಾಮನ್ಯದ್ಯದ್ಭೀಷ್ಮಾಯ ಮಹಾತ್ಮನೇ ।
ಕಥಯಾಮಾಸ ಧರ್ಮಜ್ಞೋ ವಸಿಷ್ಠೋ ಮತ್ಪಿತಾಮಹಃ ॥ ೭ ॥

---

ಹೇಳಲಿಲ್ಲ. ನಗ್ನನೆಂಬವನಾರು ? ಯಾವ ನಡತೆಯಿಂದಿದ್ದವನನ್ನು ನಗ್ನನೆಂದು ಹೇಳುವರು ? ನಿಮಗೆ ತಿಳಿಯದುದಾವುದೂ ಇರುವುದಿಲ್ಲ. ಧರ್ಮಾಚರಣೆಯಲ್ಲಿ ಶ್ರೇಷ್ಠರಾದ ನೀವು ನಗ್ನನ ಸ್ವರೂಪವನ್ನು ವಿಸ್ತಾರವಾಗಿ ಹೇಳಬೇಕು. ಎಂದು ಪ್ರಶ್ನೆಮಾಡಿದನು.

೫-೬. ಪರಾಶರರು ಹೇಳುವರು :— ಮೈತ್ರೇಯನೇ ! ಋಗ್ಯಜುಸ್ಸಾಮ ಗಳೆಂಬ ಮೂರು ವೇದಗಳಲ್ಲಿರುವ ವರ್ಣಗಳೇ ಉಡುವ ವಸ್ತ್ರವಾಗಿರುವುವು. ಅಜ್ಞಾನ ದಿಂದ ಈ ವರ್ಣಗಳನ್ನು ಯಾವನು ತ್ಯಾಗಮಾಡುವನೋ ಅವನು ನಗ್ನನೆನಿಸುವನು. ಅವನು ಮಹಾ ಪಾಪಿಯಾಗುವನು. ಸಮಸ್ತ ವರ್ಣಗಳಿಗೂ ವೇದಗಳೇ ಹೊದಿಕೆ ಯಾಗಿರುವುವು. ಆದುದರಿಂದ ವಸ್ತ್ರಗಳನ್ನು ಬಿಟ್ಟವನು ನಗ್ನನಾಗುವುದರಲ್ಲಿ ಸಂದೇಹವಿಲ್ಲ.

೭-೮. ನಮ್ಮ ಪಿತಾಮಹನಾದ ವಸಿಷ್ಠನು ಮಹಾಮಹಿಮನಾದ ಭೀಷ್ಮ ನಿಗೆ ನಗ್ನನ ವಿಚಾರವಾಗಿ ಹೇಳುತ್ತಿದ್ದುದನ್ನು ನಾನು ಕೇಳಿರುವೆನು. ಹಿಂದೆ

ಮಯಾ ಪಿತಸ್ಯ ಗದತಶ್ಶ್ರುತಮೇತನ್ಮಹಾತ್ಮನಃ ।
ನಗ್ನಸಂಬಂಧಿ ಮೈತ್ರೇಯ ಯತ್ಪೃಷ್ಟೋಽಹಮಿಹ ತ್ವಯಾ ॥ ೮ ॥

ದೇವಾಸುರಮಭೂದ್ಯುದ್ಧಂ ದಿವ್ಯಮಬ್ದಶತಂ ಪುರಾ ।
ತಸ್ಮಿನ್ ಪರಾಜಿತಾ ದೇವಾ ದೈತ್ಯೈರ್ಹ್ರಾದಪುರೋಗಮೈಃ ॥ ೯ ॥

ಕ್ಷೀರೋದಸ್ಯೋತ್ತರಂ ಕೂಲಂ ಗತ್ವಾ ತಪ್ಯಂತ ವೈ ತಪಃ ।
ವಿಷ್ಣೋರಾರಾಧನಾರ್ಥಾಯ ಜಗುಶ್ಚೇಮಂ ಸ್ತವಂ ತಥಾ ॥ ೧೦ ॥

॥ ದೇವಾಃ ॥

ಆರಾಧನಾಯ ಲೋಕಾನಾಂ ವಿಷ್ಣೋರೀಶಸ್ಯ ಯಾಂಗಿರಂ ।
ವಕ್ಷ್ಯಾಮೋ ಭಗವಾನದ್ಯ ತಯಾ ವಿಷ್ಣುಃ ಪ್ರಸೀದತು ॥ ೧೧ ॥

ಯತೋ ಭೂತಾನ್ಯಶೇಷಾಣಿ ಪ್ರಸೂತಾನಿ ಮಹಾತ್ಮನಃ ।
ಯಸ್ಮಿಂಶ್ಚ ಲಯಮೇಷ್ಯಂತಿ ಕಸ್ತಂ ಸಂಸ್ತೋತುಮೀಶ್ವರಃ ॥ ೧೨ ॥

---

ದೇವತೆಗಳಿಗೂ, ರಾಕ್ಷಸರಿಗೂ ದೇವಮಾನದ ಒಂದು ನೂರು ವರ್ಷಗಳವರೆಗೆ ಯುದ್ಧವಾಯಿತು. ಆ ಯುದ್ಧದಲ್ಲಿ ಹ್ರಾದ ಮುಂತಾದ ರಾಕ್ಷಸರು ದೇವತೆಗಳನ್ನು ಸೋಲಿಸಿದರು. ಆ ಮೇಲೆ ದೇವತೆಗಳು ಕ್ಷೀರಸಮುದ್ರದ ಉತ್ತರ ದಿಕ್ಕಿನ ದಡವನ್ನು ಸೇರಿ ತಪಸ್ಸನ್ನು ಮಾಡುತ್ತ ವಿಷ್ಣುವನ್ನು ಪೂಜಿಸಿ ಸಂತೋಷಪಡಿಸುವುದಕ್ಕಾಗಿ ಈ ಸ್ತೋತ್ರವನ್ನು ಗಾನಮಾಡಿದರು.

೧೧-೧೨. ಸರ್ವವ್ಯಾಪಿಯೂ, ಲೋಕೇಶ್ವರನೂ ಆದ ವಿಷ್ಣುವಿನ ಪೂಜೆಗೋಸ್ಕರವಾಗಿ ಈ ದಿವಸ ನಾವು ಯಾವ ಮಾತುಗಳನ್ನು ಹೇಳುವೆವೋ ಆ ಮಾತುಗಳಿಂದ ವಿಷ್ಣುವು ನಮಗೆ ಪ್ರಸನ್ನನಾಗಲಿ. ಮಹಾತ್ಮನಾದ ವಿಷ್ಣುವಿನ ದೆಸೆಯಿಂದಲೇ ಸಮಸ್ತ ಭೂತಗಳೂ ಹುಟ್ಟಿದುವು, ಅವನಲ್ಲಿಯೇ ಅವು ಲೀನವಾಗಿರುವುವು ಹೀಗಿರುವಲ್ಲಿ ಅವನನ್ನು ಸ್ತೋತ್ರಮಾಡುವ ಶಕ್ತಿಯು ಯಾರಿಗಿರುವುದು ? ಹಾಗಾದರೂ ಶತ್ರು

ತಥಾಪ್ಯರಾತಿವಿಧ್ವಂಸ ಧ್ವಂಸ್ತವೀರ್ಯಾಭಯಾರ್ಥಿನಃ ।
ತ್ವಾಂ ಸ್ತೋಷ್ಯಾಮಸ್ತವೋಕ್ತೀನಾಂ ಯಾಥಾರ್ಥ್ಯಂ ನೇಶ ಗೋಚರೇ

ತ್ವಮುರ್ವೀ ಸಲಿಲಂ ವಹ್ನಿರ್ವಾಯುರಾಕಾಶಮೇವ ಚ ।
ಸಮಸ್ತಮಂತಃಕರಣಂ ಪ್ರಧಾನಂ ತತ್ಪರಃ ಪುಮಾನ್ ॥ ೧೪ ।

ಏಕಂ ತವೈತದ್ಭೂತಾತ್ಮನ್ ಮೂರ್ತಾಮೂರ್ತಮಯಂ ವಪುಃ ।
ಆಬ್ರಹ್ಮಸ್ತಂಭಪರ್ಯಂತಂ ಸ್ಥಾನಕಾಲವಿಭೇದವತ್ ॥ ೧೫ ॥

ತತ್ರ್ಯೈಶಂ ತವ ಯತ್ಪೂರ್ವಂ ತನ್ನಾಭಿಕಮಲೋದ್ಭವಂ ।
ರೂಪಂ ಸರ್ಗೋಪಕಾರಾಯ ತಸ್ಮೈ ಬ್ರಹ್ಮಾತ್ಮನೇ ನಮಃ ॥ ೧೬ ॥

---

ಗಳಾದ ರಾಕ್ಷಸರಿಗೆ ಸೋತು ಪರಾಕ್ರಮಗಳನ್ನು ಕಳೆದುಕೊಂಡ ನಾವು ನಿನ್ನನ್ನು ಅಭಯಪ್ರಾಪ್ತಿಗಾಗಿ ಸ್ತೋತ್ರಮಾಡುತ್ತೇವೆ. ನಿನ್ನ ತತ್ವವು ಮಾತುಗಳಿಗೆ ಗೋಚರವಾದುದಲ್ಲ.

೧೪–೧೬. ನೀನು ಭೂಮಿ, ನೀರು, ಅಗ್ನಿ, ವಾಯು, ಆಕಾಶ, ಅಂತಃಕರಣ, ಪ್ರಕೃತಿ, ಪುರುಷಸ್ವರೂಪನು, ಸ್ಥಾನ, ಕಾಲ, ಭೇದಗಳಿಂದ ಬೇರೆಬೇರೆಯಾಗಿ ಕಾಣುತ್ತಿರುವ ಬ್ರಹ್ಮನು ಮೊದಲಾಗಿ ಸ್ತಂಬವೆಂಬ ಸಣ್ಣ ಪ್ರಾಣಿಯವರೆಗಿರುವ ಸಮಸ್ತ ಸಾಕಾರ ನಿರಾಕಾರವಾದ ಪ್ರಾಣಿಗಳೆಲ್ಲವೂ ನಿನ್ನ ಸ್ವರೂಪಕ್ಕಿಂತ ಬೇರೆಯಾದವುಗಳಲ್ಲ. ಪ್ರಥಮ ಸೃಷ್ಟಿಯಲ್ಲಿ ಸೃಷ್ಟಿಕಾರ್ಯಕ್ಕೆ ಉಪಯೋಗವಾಗುವಂತೆ ನಿನ್ನ ನಾಭೀಕಮಲದಲ್ಲಿ ಹುಟ್ಟಿದ ಬ್ರಹ್ಮನ ಸ್ವರೂಪವೂ ನಿನ್ನ ರೂಪವೇ ಆಗಿರುವುದು. ಆದುದರಿಂದ ಬ್ರಹ್ಮ ಸ್ವರೂಪನಾದ ನಿನಗೆ ನಮಸ್ಕಾರ ಮಾಡುವೆವು.

ಶಕ್ರಾರ್ಕರುದ್ರವಸ್ವಶ್ವಿಮರುತ್ಸೋಮಾದಿಭೇದವತ್ ।
ವಯಮೇಕಂ ಸ್ವರೂಪಂ ತೇ ತಸ್ಮೈ ದೇವಾತ್ಮನೇ ನಮಃ ॥ ೧೭ ॥

ದಂಭಪ್ರಾಯಮಸಂಬೋಧಿ ತಿತಿಕ್ಷಾದಮವರ್ಜಿತಂ ।
ಯದ್ರೂಪಂ ತವ ಗೋವಿಂದ ತಸ್ಮೈ ದೈತ್ಯಾತ್ಮನೇ ನಮಃ ॥ ೧೮ ॥

ನಾತಿಜ್ಞಾನವಹಾ ಯಸ್ಮಿನ್ ನಾಡ್ಯಸ್ತಿಮಿತತೇಜಸಿ ।
ಶಬ್ದಾದಿಲೋಭಿ ಯತ್ತಸ್ಮೈ ತುಭ್ಯಂ ಯಕ್ಷಾತ್ಮನೇ ನಮಃ ॥ ೧೯ ॥

ಕ್ರೌರ್ಯಂ ಮಾಯಾಮಯಂ ಘೋರಂ ಯಚ್ಚ ರೂಪಂ ತವಾಸಿತಂ ।
ನಿಶಾಚರಾತ್ಮನೇ ತಸ್ಮೈ ನಮಸ್ತೇ ಪುರುಷೋತ್ತಮ ॥ ೨೦ ॥

ಸ್ವರ್ಗಸ್ಥಧರ್ಮಿಸದ್ಧರ್ಮ ಫಲೋಪಕರಣಂ ತವ ।
ಧರ್ಮಾಖ್ಯಂ ಚ ತಥಾ ರೂಪಂ ನಮಸ್ತಸ್ಮೈ ಜನಾರ್ದನ ॥ ೨೧ ॥

---

೧೭–೨೦. ದೇವೇಂದ್ರ, ಸೂರ್ಯ, ರುದ್ರ, ವಸುಗಳೂ, ಅಶ್ವಿನೀ ದೇವತೆಗಳೂ, ವಾಯು, ಚಂದ್ರ ಮುಂತಾದ ದೇವತಾ ಸ್ವರೂಪರಾದ ನಾವೆಲ್ಲರೂ ಒಂದೇ ಆದ ನಿನ್ನ ಸ್ವರೂಪರಾಗಿರುವೆವು, ಆದುದರಿಂದ ದೇವಾತ್ಮನಾದ ನಿನಗೆ ನಮಸ್ಕಾರವು. ದಂಭವೂ, ವಿವೇಕಶೂನ್ಯವೂ, ಸಹನೆಯಿಲ್ಲದುದೂ, ಇಂದ್ರಿಯ ನಿಗ್ರಹವಿಲ್ಲದುದೂ ಆದ ನಿನ್ನ ಯಾವ ರೂಪವುಂಟೋ ಆ ದೈತ್ಯಾತ್ಮರೂಪನಾದ ನಿನಗೆ ನಮಸ್ಕಾರವು. ಸತ್ವಗುಣರೂಪವಾದ ತೇಜಸ್ಸು ಕಡಮೆಯಾದುದರಿಂದ ಹೃದಯದ ನಾಡಿಗಳು ಶ್ರೇಷ್ಠವಾದ ಜ್ಞಾನವಾಹಿಗಳಾಗದಿರುವ ಇಂದ್ರಿಯಾರ್ಥಗಳಲ್ಲಾಸಕ್ತವಾದ ಯಕ್ಷಸ್ವರೂಪನಾದ ನಿನಗೆ ನಮಸ್ಕಾರವು. ಕ್ರೂರವೂ, ಮಾಯಾರೂಪವೂ, ಭಯಂಕರವೂ, ಕತ್ತಲೆಯ ಸ್ವರೂಪವೂ ಆದ ನಿಶಾಚರ ಸ್ವರೂಪನಾದ ನಿನಗೆ ನಮಸ್ಕಾರವು.

೨೧–೨೨. ಸ್ವರ್ಗದಲ್ಲಿರುವ ಜೀವರಿಗೆ ಅವರು ಮಾಡಿದ ಯಾಗಾದಿ ಫಲಗಳಿಂದುಂಟಾಗುವ ಸುಖಕ್ಕೆ ಕಾರಣವಾದ ಧರ್ಮವೆಂಬ ಅಪೂರ್ವರೂಪವಾದ

ಹರ್ಷಪ್ರಾಯಮಸಂಸರ್ಗಿ ಗತಿಮದ್ಗಮನಾದಿಷು ।
ಸಿದ್ಧಾರ್ಥಂ ತವ ಯದ್ರೂಪಂ ತಸ್ಮೈ ಸಿದ್ಧಾತ್ಮನೇ ನಮಃ ॥ ೨೨ ॥

ಅತಿತೀಕ್ಷ್ಣಾಯನಂ ಕ್ರೂರಮುಪಭೋಗಸಹಂ ಹರೇ ।
ದ್ವಿಜಿಹ್ವಂ ತವ ಯದ್ರೂಪಂ ತಸ್ಮೈ ನಾಗಾತ್ಮನೇ ನಮಃ ॥ ೨೩ ॥

ಅವಬೋಧಿ ಚ ಯಚ್ಛಾಂತಮದೋಷಮಪಕಲ್ಮಷಂ ।
ಋಷಿರೂಪಾತ್ಮನೇ ತಸ್ಮೈ ವಿಷ್ಣುರೂಪಾತ್ಮನೇ ನಮಃ ॥ ೨೪ ॥

ಭಕ್ಷಯತ್ಯಥ ಕಲ್ಪಾಂತೇ ಭೂತಾನಿ ಯದವಾರಿತಂ ।
ತ್ವದ್ರೂಪಂ ಪುಂಡರೀಕಾಕ್ಷ ತಸ್ಮೈ ಕಾಲಾತ್ಮನೇ ನಮಃ ॥ ೨೫ ॥

ಸಂಭಕ್ಷ್ಯ ಸರ್ವಭೂತಾನಿ ದೇವಾದೀನ್ಯವಿಶೇಷತಃ ।
ನೃತ್ಯತ್ಯಂತೇ ಚ ಯದ್ರೂಪಂ ತಸ್ಮೈ ರುದ್ರಾತ್ಮನೇ ನಮಃ ॥ ೨೬ ॥

---

ನಿನಗೆ ನಮಸ್ಕಾರವು. ನೀರು ಬೆಂಕಿ ಮುಂತಾದುವುಗಳಲ್ಲಿದ್ದರೂ ಅವುಗಳ ಸಂಬಂಧವಿಲ್ಲದ ಸಂತೋಷವೇ ಮುಖ್ಯವಾಗಿರುವ ಗಮನಾದಿ ವ್ಯಾಪಾರಗಳುಳ್ಳ ಸಮಸ್ತ ಪ್ರಯೋಜನವನ್ನೂ ಪಡೆಯುವ ಸಿದ್ಧಸ್ವರೂಪನಾದ ನಿನಗೆ ನಮಸ್ಕಾರವು ಅಸಹನೆಗೆ ಸ್ಥಾನವೂ, ಕ್ರೂರವೂ, ಹೆಡೆಯಿಂದಲೂ, ಎರಡು ನಾಲಗೆಯಿಂದ ಕೂಡಿದೂ ಆದ ನಾಗಸ್ವರೂಪನಾದ ನಿನಗೆ ನಮಸ್ಕಾರವು. ಜ್ಞಾನವೂ, ಶಾಂತವೂ, ರಾಗಾದಿ ದೋಷಗಳಿಲ್ಲದುದೂ, ಪಾಪವಿಲ್ಲದುದೂ ಆದ ಋಷಿ ರೂಪನೂ ಸರ್ವವ್ಯಾಪಿಯೂ ಆದ ನಿನಗೆ ನಮಸ್ಕಾರವು. ಕಲ್ಪ (ಪ್ರಳಯ) ದ ಕೊನೆಯಲ್ಲಿ ಪ್ರಾಣಿಗಳನ್ನು ತಡೆಯಿಲ್ಲದೆ ನುಂಗುವ ಕಾಲಾತ್ಮನಾದ ನಿನಗೆ ನಮಸ್ಕಾರವು.

೨೬–೩೦. ಪ್ರಳಯದಲ್ಲಿ ದೇವಾದಿ ಸಮಸ್ತ ಪ್ರಾಣಿಗಳನ್ನೂ ನುಂಗಿ ನರ್ತನ ಮಾಡುವ ರುದ್ರಾತ್ಮನಾದ ನಿನಗೆ ನಮಸ್ಕಾರವು, ರಜೋಗುಣಾಧಿಕ್ಯದಿಂದ ಕಾರ್ಯಗಳನ್ನು ಮಾಡುತ್ತಿರುವ ಮನುಷ್ಯರೂಪನಾದ ನಿನಗೆ ನಮಸ್ಕಾರವು. ಏಕಾದಶೇಂದ್ರಿ

ಪ್ರವೃತ್ಯಾ ರಜಸೋ ಯಚ್ಚ ಕರ್ಮಣಾಂ ಕರಣಾತ್ಮಕಂ ।
ಜನಾರ್ದನ ನಮಸ್ತಸ್ಮೈ ತ್ವದ್ರೂಪಾಯ ನರಾತ್ಮನೇ ॥ ೨೭ ॥

ಅಷ್ಟಾವಿಂಶದ್ವಧೋಪೇತಂ ಯದ್ರೂಪಂ ತಾಮಸಂ ತವ ।
ಉನ್ಮಾರ್ಗಗಾಮಿಸರ್ವಾತ್ಮನ್ ತಸ್ಮೈ ಪಶ್ವಾತ್ಮನೇ ನಮಃ ॥ ೨೮ ॥

ಯಜ್ಞಾಂಗಭೂತಂ ಯದ್ರೂಪಂ ಜಗತಸ್ಸಿದ್ಧಿಸಾಧನಂ ।
ವೃಕ್ಷಾದಿಭೇದೈಷ್ಷಡ್ಭೇದಿ ತಸ್ಮೈ ಮುಖ್ಯಾತ್ಮನೇ ನಮಃ ॥ ೨೯ ॥

ತಿರ್ಯ್ಯಙ್ಮನುಷ್ಯದೇವಾದಿ ವ್ಯೋಮಶಬ್ದಾದಿಕಂ ಚ ಯತ್ ।
ರೂಪಂ ತವಾದೇಸ್ಸರ್ವಸ್ಯ ತಸ್ಮೈ ಸರ್ವಾತನೇ ನಮಃ ॥ ೩೦ ॥

ಪ್ರಧಾನ ಬುಧ್ಯಾದಿಮಯಾದಶೇಷಾ
ದ್ಯದನ್ಯದಸ್ಮಾತ್ಪರಮಂ ಪರಾತ್ಮನ್ ।

---

ಯಗಳು ನವತುಷ್ಟಿಗಳು, ಅಷ್ಟಸಿದ್ದಿಗಳು ಸೇರಿ ಇಪ್ಪತ್ತೆಂಟು ಬಗೆಯ ಪ್ರಯೋಜನ ಗಳನ್ನು ಪಡೆಯದ ತಾಮಸಗುಣ ಪ್ರಧಾನವಾದ ಮನಬಂದಂತೆ ನಡೆಯುವ ಸರ್ವಾತ್ಮನಾದುದರಿಂದ ಪಶುರೂಪನೂ ಆಗಿರುವ ನಿನಗೆ ನಮಸ್ಕಾರವು. ಯಜ್ಞಾಂಗ ವಾಗಿ ಜಗತ್ತಿಗೆ ಸಿದ್ಧಿಯನ್ನುಂಟುಮಾಡುವ ವೃಕ್ಷ, ಗುಲ್ಮ, ಲತೆ, ಬಳ್ಳಿ, ಹುಲ್ಲು, ಬೆಟ್ಟ ಎಂಬ ಆರು ಭೇಧಗಳುಳ್ಳ ಮುಖ್ಯ ವಸ್ತುರೂಪನಾದ ನಿನಗೆ ನಮಸ್ಕಾರವು. ಪ್ರಾಣಿಗಳು, ಮನುಷ್ಯ, ದೇವತೆಗಳು, ಆಕಾಶಾದಿ ಪಂಚಭೂತಗಳು, ಶಬ್ದಾದಿ ಪಂಚ ತನ್ಮಾತ್ರಗಳು ಇವುಗಳೆಲ್ಲ ನಿನ್ನ ಮೂಲರೂಪವೇ ಕಾರಣವಾದುದರಿಂದ ಸರ್ವಾತ್ಮ ನಾದ ನಿನಗೆ ನಮಸ್ಕಾರ ಮಾಡುವೆವು. ಹೀಗೆಂದು ದೇವತೆಗಳು ವಿಶ್ವರೂಪದಿಂದ ವಿಷ್ಣುವನ್ನು ಸ್ತೋತ್ರಮಾಡಿ ನಮಸ್ಕರಿಸಿ ಮುಂದೆ ಶುದ್ಧರೂಪದಿಂದ ಸ್ತೋತ್ರಮಾಡಿ ನಮಸ್ಕರಿಸುವರು.

೩೧. ಪ್ರಕೃತಿ ಮಹತ್ತತ್ವ ಬುದ್ಧಿ ಅಹಂಕಾರ ಚಿತ್ತ ಮುಂತಾದುವುಗಳಿಂದ ಬೇರೆಯಾದ ಅತ್ಯಂತ ಶ್ರೇಷ್ಠವಾದುದರಿಂದ ಅಸಮಾನವಾದ ಸಮಸ್ತ ಕಾರಣವಸ್ತು

ರೂಪಂ ತವಾದ್ಯಂ ನ ಯದನ್ಯತುಲ್ಯಂ
ತಸ್ಮೈ ನಮಃ ಕಾರಣಕಾರಣಾಯ ॥ ೩೧ ॥

ಶುಕ್ಲಾದಿದೀರ್ಘಾದಿಘನಾದಿಹೀನ
ಮಗೋಚರಂ ಯಚ್ಚ ವಿಶೇಷಣಾನಾಂ ।
ಶುದ್ಧಾತಿ ಶುದ್ಧಂ ಪರಮರ್ಷಿ ದೃಶ್ಯಂ
ರೂಪಾಯ ತಸ್ಮೈ ಭಗವನ್ನತಾಸ್ಮ ॥ ೩೨ ॥

ಯನ್ನಶ್ಶರೀರೇಷು ಯದನ್ಯದೇಹೇ
ಷ್ವಶೇಷವಸ್ತುಷ್ವಜಮವ್ಯಯಂ ಯತ್ ।
ಯಸ್ಮಾಚ್ಚ ನಾನ್ಯದ್ವ್ಯತಿರಿಕ್ತಮಸ್ತಿ
ಬ್ರಹ್ಮಸ್ವರೂಪಾಯ ನತಾಸ್ಮ ತಸ್ಮೈ ॥ ೩೩ ॥

---

ಗಳಿಗೂ ಆಶ್ರಯವಾದ ಪ್ರಕೃತಿಗೆ ಕಾರಣನಾಗಿ ಪುರುಷರೂಪನಾಗಿರುವ ಪರಮಾತ್ಮನೇ ನಿನಗೆ ನಮಸ್ಕಾರವು.

೩೨. ಬಿಳಿದು ಮುಂತಾದ ವರ್ಣಭೇದವೂ ಉದ್ದ ಗಾತ್ರ ಮುಂತಾದ ರೂಪ ಭೇದವೂ ಇಲ್ಲದ ವಿಶೇಷಣಗಳಿಗೆ ಗೋಚರವಾಗದ ಅತ್ಯಂತ ಪರಿಶುದ್ಧವಾದ ಮಹರ್ಷಿಗಳಿಗೆ ಗೋಚರವಾದ ಮಹಾಮಹಿಮ ರೂಪನಾದ ನಿನಗೆ ನಮಸ್ಕಾರ ಮಾಡುವೆವು.

೩೩. ನಮ್ಮ ಶರೀರಗಳಲ್ಲಿಯೂ, ಇತರ ಶರೀರಗಳಲ್ಲಿಯೂ, ಸಮಸ್ತ ವಸ್ತುಗಳಲ್ಲಿಯೂ ವ್ಯಾಪಿಸಿ ಹುಟ್ಟು ಸಾವುಗಳಿಲ್ಲದ ತನಗಿಂತ ಬೇರೆಯಾದ ಸತ್ಯ ವಸ್ತುವಿಲ್ಲದ ಪರಬ್ರಹ್ಮಸ್ವರೂಪನಾದ ನಿನಗೆ ನಮಸ್ಕಾರ ಮಾಡುವೆವು.

ಸಕಲಮಿದಮಜಸ್ಯ ಯಸ್ಯ ರೂಪಂ
ಪರಮಪದಾತ್ಮವತಸ್ಸನಾತನಸ್ಯ ।
ತಮನಿಧನಮಶೇಷ ಬೀಜಭೂತಂ
ಪ್ರಭುಮಮಲಂ ಪ್ರಣತಾಸ್ಮ ವಾಸುದೇವಂ ॥ ೩೪ ॥

॥ ಶ್ರೀ ಪರಾಶರಃ ॥

ಸ್ತೋತ್ರಸ್ಯಾಸ್ಯಾವಸಾನೇ ತೇ ದದೃಶುಃ ಪರಮೇಶ್ವರಂ ।
ಶಂಖಚಕ್ರಗದಾಪಾಣಿಂ ಗರುಡಸ್ಥಂ ಸುರಾ ಹರಿಂ ॥ ೩೫ ॥

ತಮೂಚುಸ್ಸಕಲಾ ದೇವಾಃ ಪ್ರಣಿಪಾತಪುರಸ್ಸರಂ ।
ಪ್ರಸೀದ ನಾಥ ದೈತ್ಯೇಭ್ಯಸ್ತ್ರಾಹಿ ನಶ್ಶರಣಾರ್ಥಿನಃ ॥ ೩೬ ॥

ತ್ರೈಲೋಕ್ಯಯಜ್ಞಭಾಗಾಶ್ಚ ದೈತ್ಯೈರ್ಹ್ರಾದಪುರೋಗಮೈಃ ।
ಹೃತಾ ನೋ ಬ್ರಹ್ಮಣೋಽಪ್ಯಾಜ್ಞಾಮುಲ್ಲಂಘ್ಯ ಪರಮೇಶ್ವರ ॥ ೩೭ ॥

---

೩೪. ಅನಾದಿಯೂ, ಉತ್ಪತ್ತಿ ರಹಿತನೂ ಆದ ಪರಮಾತ್ಮನಿಂದ ಈ ಸಮಸ್ತ ಪ್ರಪಂಚವೂ ಮೂರ್ತಿಮತ್ತಾಗಿರುವುದು. ನಾಶರಹಿತನೂ, ಸಮಸ್ತಕ್ಕೂ ಕಾರಣನೂ ಸರ್ವೇಶ್ವರನೂ ಪರಿಶುದ್ಧನೂ ಆದ ವಾಸುದೇವನಿಗೆ ನಮಸ್ಕಾರ ಮಾಡುವೆವು.

೩೫. ಹೀಗೆಂದು ದೇವತೆಗಳು ಸ್ತೋತ್ರಮಾಡಿದ ಮೇಲೆ ಶಂಖ ಚಕ್ರ ಗದಾ ಧರನೂ, ಗರುಡಾರೂಢನೂ, ಪರಮೇಶ್ವರನೂ ಆದ ಹರಿಯನ್ನು ದರ್ಶನ ಮಾಡಿದರು.

೩೬-೪೦. ಸಮಸ್ತ ದೇವತೆಗಳೂ ನಮಸ್ಕಾರ ಮಾಡಿ ಆ ದೇವನನ್ನು ಕುರಿತು, " ಓ ಸ್ವಾಮಿಯೇ ! ನಿನ್ನನ್ನು ಶರಣುಹೊಂದಿದ ನಮಗೆ ಪ್ರಸನ್ನನಾಗಿ ರಾಕ್ಷಸರ ಬಾಧೆಯಿಂದ ನಮ್ಮನ್ನು ರಕ್ಷಿಸು. ಹ್ರಾದನೇ ಮುಂತಾದ ದೈತ್ಯರು

ಯದ್ಯಪ್ಯಶೇಷಭೂತಸ್ಯ ವಯಂ ತೇ ಚ ತವಾಂಶಕಾಃ ।
ತಥಾಪ್ಯವಿದ್ಯಾಭೇದೇನ ಭಿನ್ನಂ ಪಶ್ಯಾಮಹೇ ಜಗತ್ ॥ ೩೮ ॥

ಸ್ವವರ್ಣಧರ್ಮಾಭಿರತಾ ವೇದಮಾರ್ಗಾನುಸಾರಿಣಃ ।
ನ ಶಕ್ಯಾಸ್ತೇಽರಯೋ ಹಂತುಮಸ್ಮಾಭಿಸ್ತಪಸಾನ್ವಿತಾಃ ॥ ೩೯ ॥

ತಮುಪಾಯಮಶೇಷಾತ್ಮನ್ನಸ್ಮಾಕಂ ದಾತುಮರ್ಹಸಿ ।
ಯೇನ ತಾನಸುರಾನ್ ಹಂತುಂ ಭವೇಮ ಭಗವನ್ ಕ್ಷಮಾಃ ॥ ೪೦ ॥

॥ ಶ್ರೀ ಪರಾಶರಃ ॥

ಇತ್ಯುಕ್ತೋ ಭಗವಾಂಸ್ತೇಭ್ಯೋ ಮಾಯಾಮೋಹಂ ಶರೀರತಃ ।
ಸಮುತ್ಪಾದ್ಯ ದದೌ ವಿಷ್ಣುಃ ಪ್ರಾಹ ಚೇದಂ ಸುರೋತ್ತಮಾನ್ ॥ ೪೧ ॥

॥ ಶ್ರೀ ಭಗವಾನುವಾಚ ॥

ಮಾಯಾಮೋಹೋಽಯಮಖಿಲಾನ್ ದೈತ್ಯಾಂಸ್ತಾನ್ಮೋಹಯಿಷ್ಯತಿ ।
ತತೋ ವಧ್ಯಾ ಭವಿಷ್ಯಂತಿ ವೇದಮಾರ್ಗಬಹಿಷ್ಕೃತಾಃ ॥ ೪೨ ॥

---

ಮೂರು ಲೋಕಗಳನ್ನೂ ನಮ್ಮ ಯಜ್ಞ ಭಾಗಗಳನ್ನೂ ಬ್ರಹ್ಮನ ಆಜ್ಞೆಯನ್ನು ಮೀರಿ ಅಪಹರಿಸಿರುವರು. ನಾವು ಸಮಸ್ತ ಭೂತಸ್ವರೂಪನಾದ ನಿನ್ನ ಅಂಶದವ ರಾದರೂ ಅವಿದ್ಯಾದೋಷದಿಂದ ಈ ಜಗತ್ತನ್ನು ನಿನಗಿಂತ ಬೇರೆಯಾದುದೆಂದು ತಿಳಿ ಯುತ್ತಿರುವೆವು. ವರ್ಣಧರ್ಮಾಭಿಮಾನಿಗಳೂ, ವೇದ ಮಾರ್ಗವನ್ನನುಸರಿಸಿ ನಡೆವರೂ, ತಪಸ್ಸನ್ನು ಮಾಡತಕ್ಕವರೂ ಆದ ಆ ಶತ್ರುಗಳನ್ನು ನಾವು ಕೊಲ್ಲ ಲಾರೆವು. ಸರ್ವಾತ್ಮ ಸ್ವರೂಪನಾದ ನೀನು ಯಾವ ಉಪಾಯದಿಂದ ನಾವು ಆ ರಾಕ್ಷಸರನ್ನು ಕೊಲ್ಲುವುದಕ್ಕೆ ಶಕ್ತರಾಗುವೆವೋ ಆ ಉಪಾಯವನ್ನು ನೀನೇ ಹೇಳಿ ಕೊಡಬೇಕು " ಎಂದರು.

೪೧-೪೪. ಹೀಗೆಂದು ದೇವತೆಗಳು ಹೇಳಿದಮೇಲೆ ಭಗವಂತನು ತನ್ನ ಶರೀರದಿಂದ ಮಾಯಾಮೋಹನೆಂಬುವನನ್ನು ಸೃಷ್ಟಿಸಿ ಅವನನ್ನು ಅವರಿಗೆ ಕೊಟ್ಟು

ಸ್ಥಿತೌ ಸ್ಥಿತಸ್ಯ ಮೇ ವಧ್ಯಾ ಯಾವಂತಃ ಪರಿಪಂಥಿನಃ ।
ಬ್ರಹ್ಮಣೋ ಯೇಧಿಕಾರಸ್ಯ ದೇವದೈತ್ಯಾದಿಕಾಸ್ಸುರಾಃ ॥ ೪೩ ॥

ತದ್ಗಚ್ಛತ ನಭೀಃ ಕಾರ್ಯಾ ಮಾಯಾಮೋಹೋಯಮಗ್ರತಃ ।
ಗಚ್ಛನ್ನದ್ಯೋಪಕಾರಾಯ ಭವತಾಂ ಭವಿತಾ ಸುರಾಃ ॥ ೪೪ ॥

॥ ಶ್ರೀ ಪರಾಶರಃ ॥

ಇತ್ಯುಕ್ತಾಃ ಪ್ರಣಿಪತ್ಯೈನಂ ಯಯುರ್ದೇವಾ ಯಥಾಗತಂ ।
ಮಾಯಾಮೋಹೋಪಿ ತೈಸ್ಸಾರ್ಧಂ ಯಯೌ ಯತ್ರ ಮಹಾಸುರಾಃ ॥೪೫॥

ಇತಿ ಶ್ರೀ ವಿಷ್ಣುಪುರಾಣೇ ತೃತೀಯಾಂಶೇ ಸಪ್ತದಶೋಽಧ್ಯಾಯಃ

---

ಆ ದೇವತೆಗಳನ್ನು ಕುರಿತು " ದೇವತೆಗಳೇ ಈ ಮಾಯಾಮೋಹನು ಆ ದೈತ್ಯರನ್ನೆಲ್ಲ ಮೋಹಗೊಳಿಸುವನು. ಆಮೇಲೆ ವೇದಮಾರ್ಗವನ್ನು ಬಿಟ್ಟ ಅವರನ್ನು ನೀವು ಸುಲಭವಾಗಿ ಕೊಲ್ಲಬಹುದು. ಸ್ಥಿತಿ ಕಾರ್ಯವನ್ನು ಮಾಡುವ ನನಗೆ ಬ್ರಹ್ಮನ ಅಧಿಕಾರಕ್ಕೆ ಕಡೆಮಾಡುವ ದೇತೆಗಳೂ, ದೈತ್ಯರೂ ಶತ್ರುಗಳಾಗುವರು. ಅವರನ್ನು ನಾನು ಕೊಲ್ಲುವೆನು. ಆದುದರಿಂದ ನೀವು ಭಯಪಡಬೇಡಿರಿ, ಹೋಗಿರಿ. ಈ ಮಾಯಾಮೋಹನು ನಿಮ್ಮ ಮುಂದೆ ಹೋಗುತ್ತಾ ಈ ದಿನವೇ ನಿಮಗೆ ಉಪಕಾರವನ್ನು ಮಾಡುವನು.

೪೫. ಹೀಗೆಂದು ಹೇಳಿದ ವಿಷ್ಣುವಿನ ಮಾತನ್ನು ಕೇಳಿ ದೇವತೆಗಳು ಆ ದೇವನಿಗೆ ನಮಸ್ಕರಿಸಿ ಹೊರಟರು. ಮಾಯಾಮೋಹನೂ ಅವರೊಡನೆ ಅಸುರರಿದ್ದ ಕಡೆಗೆ ಪ್ರಯಾಣ ಮಾಡಿದನು.

ಎಂಬಲ್ಲಿಗೆ ಶ್ರೀ ವಿಷ್ಣು ಪುರಾಣದ ತೃತೀಯಾಂಶದಲ್ಲಿ
ಹದಿನೇಳನೆಯ ಅಧ್ಯಾಯವು ಮುಗಿದುದು.

---

ಶ್ರೀಃ

# ಶ್ರೀ ವಿಷ್ಣುಪುರಾಣೇ ತೃತೀಯಾಂಶೇ

## ಅಷ್ಟಾದಶೋಽಧ್ಯಾಯಃ

॥ ಶ್ರೀ ಪರಾಶರಃ ॥

ತಪಸ್ಯಭಿರತಾನ್ಸೋಽಥ ಮಾಯಾಮೋಹೋ ಮಹಾಸುರಾನ್ ।
ಮೈತ್ರೇಯ ಗತ್ವಾ ದದೃಶೇ ನರ್ಮದಾತೀರಸಂಶ್ರಯಾನ್ ॥ ೧ ॥

ತತೋ ದಿಗಂಬರೋ ಮುಂಡೋ ಬರ್ಹಿಪಿಂಛಧರೋ ದ್ವಿಜ ।
ಮಾಯಾಮೋಹೋಽಸುರಾನ್ ಶ್ಲಕ್ಷ್ಣಮಿದಂ ವಚನಮಬ್ರವೀತ್ ॥ ೨ ॥

॥ ಮಾಯಾಮೋಹಃ ॥

ಭೋ ದೈತ್ಯಪತಯೋ ಬ್ರೂತ ಯದರ್ಥಂ ತಪ್ಯತೇ ತಪಃ ।
ಐಹಿಕಾರ್ಥಂ ನು ಪಾರತ್ರ್ಯಂ ತಪಸಃ ಫಲಮಿಚ್ಛಥ ॥ ೩ ॥

---

### ಹದಿನೆಂಟನೆಯ ಅಧ್ಯಾಯವು.

೧–೨. ಮೈತ್ರೇಯನೇ! ಮಾಯಾಮೋಹನು ಹೊರಟು ನರ್ಮದಾ ನದಿಯ ತೀರದಲ್ಲಿ ತಪಸ್ಸು ಮಾಡುತ್ತಿದ್ದ ಅಸುರರ ಸಮೀಪಕ್ಕೆ ಹೋಗಿ ಬೋಳುತಲೆಯುಳ್ಳವನೂ, ದಿಗಂಬರನೂ, ನವಿಲುಗರಿಯ ಕಂತೆಯನ್ನು ಹಿಡಿದುಕೊಂಡಿರುವವನೂ ಆಗಿ ಜೈಜೈನ ಸನ್ಯಾಸಿಯ ವೇಷದಿಂದ ಆ ರಾಕ್ಷಸರನ್ನು ಕುರಿತು ಮೃದುವಾಗಿ ಮಾತನಾಡಿದನು.

೩. ಅವನು ಎಲೈ ರಾಕ್ಷಸಾಧಿಪತಿಗಳೇ! ನಿಮ್ಮ ತಪಸ್ಸಿಗೆ ಪ್ರಯೋಜನವೇನು? ಇಹಲೋಕದ ಫಲವನ್ನಪೇಕ್ಷಿಸುವಿರೋ? ಪರಲೋಕದ ಫಲವನ್ನಪೇಕ್ಷಿಸುವಿರೋ? ಎಂದು ಪ್ರಶ್ನೆಮಾಡಿದನು.

॥ ಅಸುರಾಃ ॥

ಪಾರತ್ರ್ಯಂ ಫಲಲಾಭಾಯ ತಪಶ್ಚರ್ಯಾ ಮಹಾಮತೇ ।
ಅಸ್ಮಾಭಿರಿಯಮಾರಬ್ಧಾ ಕಿಂ ವಾ ತೇತ್ರ ವಿವಕ್ಷಿತಂ ॥ ೪ ॥

॥ ಮಾಯಾಮೋಹಃ ॥

ಕುರುಧ್ವಂ ಮಮ ವಾಕ್ಯಾನಿ ಯದಿ ಮುಕ್ತಿಮಭೀಪ್ಸಥ ।
ಅರ್ಹಧ್ವಮೇತಂ ಧರ್ಮಂ ಚ ಮುಕ್ತಿದ್ವಾರಮಸಂಯುತಂ ॥ ೫ ॥

ಧರ್ಮೋ ವಿಮುಕ್ತೇರರ್ಹೋಯಂ ನೈತಸ್ಮಾದಪರೋ ಪರಃ ।
ಅತ್ರೈವಾವಸ್ಥಿತಾಸ್ಸ್ವರ್ಗಂ ವಿಮುಕ್ತಿಂ ವಾ ಗಮಿಷ್ಯಥ ॥ ೬ ॥

ಅರ್ಹಧ್ವಂ ಧರ್ಮಮೇತಂ ಚ ಸರ್ವೇ ಯೂಯಂ ಮಹಾಬಲಾಃ । ॥ ೭ ॥

---

೪. ರಾಕ್ಷಸರು "ಎಲೈ ಬುದ್ಧಿಶಾಲಿಯೆ! ನಾವು ಪರಲೋಕದ ಸುಖವನ್ನ ಪೇಕ್ಷಿಸಿ ಈ ತಪಸ್ಸನ್ನು ಮಾಡುತ್ತಿರುವೆವು. ಈ ವಿಷಯದಲ್ಲಿ ನಿನ್ನ ಅಭಿಪ್ರಾಯ ವನ್ನು ಹೇಳು" ಎಂದರು.

೫-೭. ಮಾಯಾಮೋಹನು ಹೇಳುವನು:—ರಾಕ್ಷಸಾಧಿಪತಿಗಳೇ, ನೀವು ಮುಕ್ತಿಯನ್ನಪೇಕ್ಷಿಸಿದರೆ ನಾನು ಹೇಳುವ ಮಾತಿನಂತೆ ನಡೆಯಿರಿ. ನಾನು ಹೇಳುವ ಧರ್ಮವು ಮುಕ್ತಿಗೆ ಮಾರ್ಗವಾದುದು. ಇದಕ್ಕಿಂತ ಶ್ರೇಷ್ಠವಾದ ಮತ್ತೊಂದು ಧರ್ಮವಿಲ್ಲ. ಈಧರ್ಮವನ್ನಾಶ್ರಯಿಸಿದರೆ ನೀವು ಇಲ್ಲಿಯೇ ಇದ್ದು ಸ್ವರ್ಗಸುಖವನ್ನೊ ಮುಕ್ತಿಯನ್ನೊ ಪಡೆಯುವಿರಿ, ಮಹಾಬಲಶಾಲಿಗಳಾದ ನೀವೆಲ್ಲರೂ ಈ ಧರ್ಮ ವನ್ನಾಚರಿಸಲು ಯೋಗ್ಯರಾಗಿರುವಿರಿ. ಎಂಬಿವೇ ಮೊದಲಾದ ಅನೇಕ ಯುಕ್ತಿಯಿಂದ

॥ ಶ್ರೀ ಪರಾಶರಃ ॥

ಏವಂ ಪ್ರಕಾರೈರ್ಬಹುಭಿರ್ಯುಕ್ತಿದರ್ಶನ ಚರ್ಚಿತೈಃ ।
ಮಾಯಾಮೋಹೇನ ತೇ ದೈತ್ಯಾ ವೇದಮಾರ್ಗಾದಪಾಕೃತಾಃ ॥ ೭ ॥

ಧರ್ಮಾಯೈತದಧರ್ಮಾಯ ಸದೇತನ್ನಸದಿತ್ಯಪಿ ।
ವಿಮುಕ್ತಯೇ ತ್ವಿದಂ ನೈತದ್ವಿಮುಕ್ತಿಂ ಸಂಪ್ರಯಚ್ಛತಿ ॥ ೮ ॥

ಪರಮಾರ್ಥೋಽಯಮತ್ಯರ್ಥಂ ಪರಮಾರ್ಥೋ ನ ಚಾಪ್ಯಯಂ ।
ಕಾರ್ಯಮೇತದಕಾರ್ಯಂ ಚ ನೈತದೇವಂ ಸ್ಫುಟಂ ತ್ವಿದಂ ॥ ೧೦ ॥

ದಿಗ್ವಾಸಸಾಮಯಂ ಧರ್ಮೋ ಧರ್ಮೋಽಯಂ ಬಹುವಾಸಸಾಂ । ॥ ೧೧ ॥

ಇತ್ಯನೇಕಾಂತವಾದಂ ಚ ಮಾಯಾಮೋಹೇನ ನೈಕಧಾ ।
ತೇನ ದರ್ಶಯತಾ ದೈತ್ಯಾಸ್ತೇ ಧರ್ಮಾಂಸ್ತ್ಯಾಜಿತಾ ದ್ವಿಜ । ॥ ೧೨ ॥

---

ಕೂಡಿದ ಚಮತ್ಕಾರವಾದ ಮಾತುಗಳಿಂದ ಮಾಯಾಮೋಹನು ಆ ದೈತ್ಯರನ್ನು ವೇದಮಾರ್ಗದಿಂದ ತಪ್ಪಿಸಿದನು.

೯–೧೨. ಇದು ಧರ್ಮ, ಇದು ಅಧರ್ಮ, ಇದು ಸತ್ತು, ಇದು ಅಸತ್ತು, ಇದು ಮೋಕ್ಷಕ್ಕೆ ಸಾಧಕವಾದುದು, ಇದು ಮೋಕ್ಷ ಸಾಧಕವಲ್ಲ, ಇದು ಪರಮಾರ್ಥ ವಸ್ತು, ಇದು ಪರಮಾರ್ಥವಲ್ಲ, ಇದು ಕಾರ್ಯ, ಇದು ಅಕಾರ್ಯ. ಇದು ಸ್ಪಷ್ಟ ವಾದುದು, ಇದು ಅಸ್ಪಷ್ಟವಾದುದು. ಇದು ದಿಗಂಬರಧರ್ಮ. ಇದು ಅನೇಕ ವಸ್ತ್ರಧಾರಿ ಗಳ ಧರ್ಮ, ಎಂದು ಮಾಯಾಮೋಹನು ಅನೇಕಾಂತವಾದವನ್ನು ಅನೇಕ ಬಗೆ ಯಲ್ಲಿ ಹೇಳಿ ಆ ದೈತ್ಯರು ವೇದಧರ್ಮವನ್ನು ಬಿಟ್ಟುಬಿಡುವಂತೆ ಮಾಡಿದನು.

ಅರ್ಹತೈತಮುಥೋ ಧರ್ಮಂ ಮಾಯಾಮೋಹೇನ ತೇಯತಃ ।
ಪ್ರೋಕ್ತಾಸ್ತನಾಶ್ರಿತಾ ಧರ್ಮಮರ್ಹಂತಸ್ತೇನ ತೇ ಭವನ್ ॥ ೧೩ ॥

ತ್ರಯೀಧರ್ಮಸಮುತ್ಸರ್ಗಂ ಮಾಯಾಮೋಹೇನ ತೇಽಸುರಾಃ ।
ಕಾರಿತಾಸ್ತನ್ಮಯಾ ಹ್ಯಾಸಂಸ್ತಥಾನ್ಯೇತತ್ಪ್ರಬೋಧಿತಾಃ ॥ ೧೪ ॥

ತೈರಪ್ಯನ್ಯೇ ಪರೇ ತೈಶ್ಚ ತೈರಪ್ಯನ್ಯೇ ಪರೇ ಚ ತೈಃ ।
ಅಲ್ಪೈರಹೋಭಿಸ್ಸಂತ್ಯಕ್ತಾಃ ತೈರ್ದೈತ್ಯೈಃ ಪ್ರಾಯಶಸ್ತ್ರಯೀ ॥ ೧೫ ॥

ಪುನಶ್ಚ ರಕ್ತಾಂಬರಧೃತ್ ಮಾಯಾಮೋಹೋ ಜಿತೇಂದ್ರಿಯಃ
ಅನ್ಯಾನಾಹಾಸುರಾನ್ಗತ್ವಾ ಮೃದ್ವಲ್ಪಂ ಮಧುರಾಕ್ಷರಂ ॥ ೧೬ ॥

ಸ್ವರ್ಗಾರ್ಥಂ ಯದಿ ವೋ ವಾಂಛಾ ನಿರ್ವಾಣಾರ್ಥಮಥೋಽಸುರಾಃ ।
ತದಲಂ ಪಶುಘಾತಾದಿ ದುಷ್ಟಧರ್ಮೈರ್ನಿಬೋಧತ ॥ ೧೭ ॥

ವಿಜ್ಞಾನಮಯಮೇವೈತದಶೇಷಮವಗಚ್ಛತ ।
ಬುಧ್ಯಧ್ವಂ ಮೇ ವಚಸ್ಸಮ್ಯಗ್ಬುಧೈರೇವ ಮುದೀರಿತಂ ॥ ೧೮ ॥

---

೧೩-೧೫. ನೀವು ಈ ಧರ್ಮವನ್ನಾಚರಿಸಲು ಅರ್ಹರೆಂದು ಮಾಯಾಮೋಹನು ಹೇಳಿದುದರಿಂದ ಆ ಧರ್ಮವನ್ನಾಶ್ರಯಿಸಿದವರಿಗೆ ಅರ್ಹಂತರೆಂದು ಹೆಸರಾಯಿತು.-ವೇದಧರ್ಮವನ್ನು ಬಿಟ್ಟ ರಾಕ್ಷಸರು ಅರ್ಹಂತರ ಧರ್ಮವನ್ನಾಶ್ರಯಿಸಿ ಒಬ್ಬರಿಂದೊಬ್ಬರಿಗೆ ಈ ಧರ್ಮವನ್ನು ಹರಡುತ್ತ ಸ್ವಲ್ಪ ದಿವಸದಲ್ಲಿಯೇ ರಾಕ್ಷಸರೆಲ್ಲರೂ ವೇದಧರ್ಮವನ್ನು ಸಂಪೂರ್ಣವಾಗಿ ಬಿಟ್ಟುಬಿಟ್ಟರು.

೧೬-೨೦. ಪುನಃ ಮಾಯಾಮೋಹನು ಕೆಂಪು ವಸ್ತ್ರವನ್ನು ಧರಿಸಿ ಸನ್ಯಾಸಿಯ ವೇಷದಿಂದ ಮತ್ತೆ ಕೆಲವು ರಾಕ್ಷಸರ ಸಮೀಪಕ್ಕೆ ಹೋಗಿ ಮೃದುವಾದ ಮಾತುಗಳಿಂದ

ಜಗದೇತದನಾಧಾರಂ ಭ್ರಾಂತಿಜ್ಞಾನಾರ್ಥತತ್ಪರಂ ।
ಅನಾದಿದುಷ್ಟಮತ್ಯರ್ಥಂ ಭ್ರಾಮ್ಯತೇ ಭವಸಂಕಟೇ ॥ ೧೯ ॥

ಏವಂ ಬುಧ್ಯತ ಬುಧ್ಯಧ್ವಂ ಬುಧ್ಯತೈವಮಿತೀರಯನ್ ।
ಮಾಯಾಮೋಹಸ್ಸ ದೈತೇಯಾನ್ ಧರ್ಮಮತ್ಯಾಜಯದ್ದ್ವಿಜ ॥ ೨೦ ॥

ನಾನಾಪ್ರಕಾರವಚನಂ ಸ ತೇಷಾಂ ಯುಕ್ತಿಯೋಜಿತಂ ।
ತಥಾ ತಥಾವದದ್ಧರ್ಮಂ ತತ್ಯಜುಸ್ತೇ ಯಥಾ ಯಥಾ ॥ ೨೧ ॥

ತೇಽಪ್ಯನ್ಯೇಷಾಂ ತಥೈವೋಚುರನ್ಯೈರನ್ಯೇ ತಥೋದಿತಾಃ ।
ಮೈತ್ರೇಯ ತತ್ಯಜುರ್ಧರ್ಮಂ ವೇದಸ್ಮೃತ್ಯುದಿತಂ ಪರಂ ॥ ೨೨ ॥

---

ಅವರನ್ನು ಕುರಿತು "ಅಸುರರೇ ನಿಮಗೆ ಸ್ವರ್ಗಸುಖದಲ್ಲಿಯಾಗಲಿ, ಮೋಕ್ಷದಲ್ಲಿಯಾಗಲಿ ಅಪೇಕ್ಷೆಯಿದ್ದರೆ ಯಜ್ಞದಲ್ಲಿ ಪಶು ಸಂಹಾರವೇ ಮೊದಲಾದ ದುಷ್ಟ ಧರ್ಮಗಳನ್ನು ಬಿಟ್ಟುಬಿಡಿ. ಸಮಸ್ತವೂ ವಿಜ್ಞಾನ ಸ್ವರೂಪವೆಂದು ತಿಳಿಯಿರಿ. ವಿದ್ವಾಂಸರ ಅಭಿಪ್ರಾಯದಂತೆ ನಾನು ಹೇಳುವ ಮಾತನ್ನು ನೀವು ನಿಮ್ಮ ಬುದ್ಧಿಯಲ್ಲಿ ನಿಶ್ಚಯಿಸಿರಿ. ಈ ಪ್ರಪಂಚವು ಯಾವ ಆಶ್ರಯವೂ ಇಲ್ಲದುದು, ಭ್ರಾಂತಿ ಜ್ಞಾನದಿಂದ ತೋರುತ್ತಿರುವುದು ಅನಾದಿಯಾದುದು. ಅತ್ಯಂತ ದುಷ್ಟವಾದುದು, ಜನನ ಮರಣ ರೂಪ ದುಃಖದಲ್ಲಿ ಸುತ್ತುತ್ತಿರುವುದು ಎಂದು ತಿಳಿಯಿರಿ. ಹೀಗೆಂದು ಹೇಳಿ ಬೌದ್ಧಮತ ತತ್ವಗಳಿಂದ ಆ ರಾಕ್ಷಸರು ವೇದಧರ್ಮವನ್ನು ಬಿಡುವಂತೆ ಮಾಡಿದನು.

೨೧–೨೨. ಮೈತ್ರೇಯನೇ! ಮಾಯಾಮೋಹನು ವೇದಶಾಸ್ತ್ರೋಕ್ತವಾದ ಧರ್ಮಗಳನ್ನು ರಾಕ್ಷಸರು ಹೇಗೆ ಬಿಡಬೇಕೋ ಹಾಗೆ ಯುಕ್ತಿ ಯುಕ್ತವಾದ ಮಾತುಗಳಿಂದ ಧರ್ಮಬೋಧೆಯನ್ನು ಮಾಡಿದನು. ರಾಕ್ಷಸರೂ ಒಬ್ಬರಿಂದೊಬ್ಬರಿಗೆ ಅವನು ಹೇಳಿದ ಧರ್ಮಬೋಧೆಗಳನ್ನು ಮಾಡುತ್ತ ವೇದಶಾಸ್ತ್ರೋಕ್ತವಾದ ಶ್ರೇಷ್ಠ ಧರ್ಮ

ಅನ್ಯಾನಪ್ಯನ್ಯಪಾಷಂಡಪ್ರಕಾರೈರ್ಬಹುಭಿರ್ದ್ವಿಜ ।
ದೈತೇಯಾನ್ಮೋಹಯಾಮಾಸ ಮಾಯಾಮೋಹೋತಿಮೋಹಕೃತ್ ॥ ೨೩ ॥

ಅಲ್ಪೇನೈವ ಹಿ ಕಾಲೇನ ಮಾಯಾಮೋಹೇನ ತೇಽಸುರಾಃ ।
ಮೋಹಿತಾಸ್ತತ್ಯಜುಸ್ಸರ್ವಾಂಸ್ತ್ರಯೀ ಮಾರ್ಗಾಶ್ರಿತಾಂ ಕಥಾಂ ॥ ೨೪ ॥

ಕೇಚಿದ್ವಿನಿಂದಾಂ ವೇದಾನಾಂ ದೇವಾನಾಮಪರೇ ದ್ವಿಜ ।
ಯಜ್ಞಕರ್ಮಕಲಾಪಸ್ಯ ತಥಾನ್ಯೇ ಚ ದ್ವಿಜನ್ಮನಾಂ ॥ ೨೫ ॥

ನೈತದ್ಯುಕ್ತಿಸಹಂ ವಾಕ್ಯಂ ಹಿಂಸಾಧರ್ಮಾಯ ಚೇಷ್ಯತೇ ।
ಹವೀಂಷ್ಯನಲದಗ್ಧಾನಿ ಫಲಾಯೇತ್ಯರ್ಭಕೋದಿತಂ ॥ ೨೬ ॥

---

ಗಳನ್ನು ಬಿಟ್ಟುಬಿಟ್ಟರು. ಮಾಯಾಮೋಹನು ಮಿಕ್ಕ ರಾಕ್ಷಸರಿಗೂ ಪಾಷಂಡ ಧರ್ಮಗಳನ್ನು ಅನೇಕ ಬಗೆಯಲ್ಲಿ ಬೋಧಿಸಿ ರಾಕ್ಷಸರನ್ನು ಮೋಹಗೊಳಿಸಿದನು.

೨೪–೨೫. ಸ್ವಲ್ಪ ಕಾಲದಲ್ಲಿಯೇ ರಾಕ್ಷಸರು ಮಾಯಾಮೋಹನಿಂದ ಮೋಹಿತರಾಗಿ ವೇದಮಾರ್ಗವನ್ನಾಶ್ರಯಿಸಿದ ಮಾತನ್ನೇ ಬಿಟ್ಟುಬಿಟ್ಟರು. ಕೆಲವರು ವೇದವನ್ನು ನಿಂದಿಸಿದರು. ಮತ್ತೆ ಕೆಲವರು ದೇವತೆಗಳನ್ನು ನಿಂದಿಸಿದರು ಇನ್ನೂ ಕೆಲವರು ಬ್ರಾಹ್ಮಣರು ಆಚರಿಸುವ ಯಜ್ಞಕರ್ಮಕಲಾಪಗಳನ್ನು ನಿಂದಿಸಿದರು. ಹೇಗೆಂದರೆ :—

೨೬–೨೮. ಯಜ್ಞದಲ್ಲಿ ಮಾಡುವ ಪ್ರಾಣಿಹಿಂಸೆಯು ಧರ್ಮವೆಂದು ಹೇಳುವರು. ಮತ್ತು ಅಗ್ನಿಯಲ್ಲಿ ಸುಟ್ಟುಹೋದ ಹವಿಸ್ಸುಗಳು ಸ್ವರ್ಗಫಲಗಳನ್ನು ಕೊಡುವುದೆಂದು ಹೇಳುವರು. ಇವೆರಡೂ ಯುಕ್ತಿ ಯುಕ್ತವಾದುವುಗಳಲ್ಲ. ಅನೇಕ ಯಜ್ಞಗಳನ್ನು ಮಾಡಿ ದೇವತ್ವವನ್ನು ಪಡೆದ ದೇವೇಂದ್ರನು ಅಗ್ನಿಯಲ್ಲಿ ಹಾಕಿದ ಬನ್ನಿ ಮೊದಲಾದ ಸಮಿತ್ತುಗಳನ್ನು ತಿನ್ನುವನಾದರೆ ಅವನಿಗಿಂತಲೂ ಬನ್ನಿಯೇ ಮೊದಲಾದ ಗಿಡಗಳಲ್ಲಿರುವ ಮುಳ್ಳುಗಳನ್ನು ಬಿಟ್ಟು ಕೋಮಲವಾದ ಎಲೆ

ಯಜ್ಞೈರನೇಕೈರ್ದೇವತ್ವಮವಾಪ್ಯೇಂದ್ರೇಣ ಭುಜ್ಯತೇ ।
ಶಮ್ಯಾದಿ ಯದಿ ಚೇತ್ಕಾಷ್ಠಂ ತದ್ವರಂ ಪತ್ರಭುಕ್ಪಶುಃ ॥ ೨೭ ॥

ನಿಹತಸ್ಯ ಪಶೋರ್ಯಜ್ಞೇ ಸ್ವರ್ಗಪ್ರಾಪ್ತಿರ್ಯದೀಷ್ಯತೇ ।
ಸ್ವಪಿತಾ ಯಜಮಾನೇನ ಕಿನ್ನು ತಸ್ಮಾನ್ನ ಹನ್ಯತೇ ॥ ೨೮ ॥

ತೃಪ್ತಯೇ ಜಾಯತೇ ಪುಂಸೋ ಭುಕ್ತಮನ್ಯೇನ ಚೇತ್ತತಃ ।
ದದ್ಯಾಚ್ಛ್ರಾದ್ಧಂ ಶ್ರಮಾಯಾನ್ನಂ ನ ವಹೇಯುಃ ಪ್ರವಾಸಿನಃ ॥ ೨೯ ॥

ಜನಶ್ರದ್ಧೇಯಮಿತ್ಯೇತದವಗಮ್ಯ ತತೋತ್ರ ವಃ ।
ಉಪೇಕ್ಷಾ ಶ್ರೇಯಸೇ ವಾಕ್ಯಂ ರೋಚತಾಂ ಯನ್ಮಯೇರಿತಂ ॥ ೩೦ ॥

---

ಗಳನ್ನೇ ತಿನ್ನುವ ಆಡು ಮುಂತಾದ ಪಶುಗಳು ಶ್ರೇಷ್ಠವಾದುವುಗಳಾಗುವುವು. ಯಜ್ಞದಲ್ಲಿ ಕೊಂದ ಪಶುವಿಗೆ ಸ್ವರ್ಗಪ್ರಾಪ್ತಿಯಾಗುವುದೆಂದು ಹೇಳಿದರೆ ಯಜಮಾನನು ತನ್ನ ತಂದೆಯನ್ನೇ ಕೊಂದು ಯಜ್ಞಮಾಡಲಿ, ಅವನಿಗೂ ಸ್ವರ್ಗಪ್ರಾಪ್ತಿಯಾಗುವುದು. ಇದನ್ನೇಕೆ ಮಾಡುವುದಿಲ್ಲ?

೨೯–೩೦. ಒಬ್ಬನು ಮಾಡಿದ ಊಟವು ಮತ್ತೊಬ್ಬನಿಗೆ ತೃಪ್ತಿಯನ್ನುಂಟು ಮಾಡುವುದೆಂದು ಶ್ರಾದ್ಧವನ್ನು ಮಾಡುವರು. ಇದು ನಿಜವಾದರೆ ಮನೆಯಿಂದ ಮತ್ತೊಂದು ಊರಿಗೆ ಪ್ರಯಾಣ ಮಾಡುವವನು ದಾರಿಯಲ್ಲಿ ಆಹಾರಕ್ಕೆಂದು ಅನ್ನದ ಬುತ್ತಿಯನ್ನು ಕಷ್ಟಪಡುತ್ತ ಏಕೆ ತೆಗೆದುಕೊಂಡು ಹೋಗಬೇಕು? ಅವನ ತೃಪ್ತಿಗೋಸ್ಕರವಾಗಿ ಮನೆಯಲ್ಲಿದ್ದ ಮಕ್ಕಳು ಮುಂತಾದವರು ಶ್ರಾದ್ಧವನ್ನು ಮಾಡಲಿ. ಆದುದರಿಂದ ಈ ಯಜ್ಞಾದಿಗಳು ತಿಳಿಯದ ಜನರ ಮೂಢ ನಂಬಿಕೆಯಾಗಿರುವುದು. ನಾನು ಹೇಳುವ ಮಾತನ್ನು ಕೇಳಿ ಈ ಯಜ್ಞಾದಿಗಳನ್ನು ಉಪೇಕ್ಷೆಮಾಡಿ ಬಿಟ್ಟುಬಿಡಿ ಇದರಿಂದ ನಿಮಗೆ ಶ್ರೇಯಸ್ಸುಂಟಾಗುವುದು.

ನ ಹ್ಯಾಪ್ತವಾದಾ ನಭಸೋ ನಿಪತಂತಿ ಮಹಾಸುರಾಃ ।
ಯುಕ್ತಿಮದ್ವಚನಂ ಗ್ರಾಹ್ಯಂ ಮಯಾನ್ಯೈಶ್ಚ ಭವದ್ವಿಧೈಃ ॥ ೩೧ ॥

ಮಾಯಾಮೋಹೇನ ತೇ ದೈತ್ಯಾಃ ಪ್ರಕಾರೈಃ ಬಹುಭಿಸ್ತಥಾ ।
ವ್ಯುತ್ಥಾಪಿತಾ ಯಥಾ ನೈಷಾಂ ತ್ರಯೀಂ ಕಶ್ಚಿದರೋಚಯತ್ ॥ ೩೨ ॥

ಇತ್ಥಮುನ್ಮಾರ್ಗಯಾತೇಷು ತೇಷು ದೈತ್ಯೇಷು ತೇಽಸುರಾಃ ।
ಉದ್ಯೋಗಂ ಪರಮಂ ಕೃತ್ವಾ ಯುದ್ಧಾಯ ಸಮುಪಸ್ಥಿತಾಃ ॥ ೩೩ ॥

ತತೋ ದೇವಾಸುರಂ ಯುದ್ಧಂ ಪುನರೇವಾಭವದ್ದ್ವಿಜ ।
ಹತಾಶ್ಚ ತೇಽಸುರಾ ದೇವೈಸ್ಸನ್ಮಾರ್ಗಪರಿಪಂಥಿನಃ ॥ ೩೪ ॥

---

೩೧–೩೨. ವೇದವು ಅಕ್ಷರಗಳಿಂದ ಕೂಡಿ ವಾಕ್ಯರೂಪವಾದುದು. ಕ್ರಮವಾಗಿ ವರ್ಣಗಳನ್ನುಚ್ಚರಿಸುವುದರಿಂದ ವಾಕ್ಯವಾಗುವುದು, ವರ್ಣಗಳಿಗೆ ಕ್ರಮವು ಸ್ವತಂತ್ರವಾದುದಲ್ಲ. ಉಚ್ಚರಿಸುವ ಪುರುಷಾಧೀನವು, ಆದುದರಿಂದ ವೇದವನ್ನು ಆಪ್ತವಾಕ್ಯಗಳೆಂದು ಒಪ್ಪಿಕೊಳ್ಳಬೇಕು. ಆಪ್ತವಾಕ್ಯಗಳು ಅಕಸ್ಮಾತ್ತಾಗಿ ಆಕಾಶದಿಂದ ಬೀಳುವುದಿಲ್ಲ. ಆಪ್ತರು ಹೇಳಿದ ಮಾತುಗಳಾಗಿರುವುವು. ಇದರಿಂದ ವೇದಗಳು ಅಪೌರುಷೇಯಗಳಲ್ಲವಾಯಿತು. ಈಗ ನಮ್ಮ ಆಗಮಗಳಿಗೂ ವೇದಗಳಿಗೂ ಸಮಾನತ್ವವುಂಟಾಯಿತು. ಹೀಗಾದ* ಮೇಲೆ ನಾನಾಗಲಿ, ನೀವಾಗಲಿ, ಮತ್ತಾರಾಗಲಿ ಯುಕ್ತಿಯಿಂದ ಕೂಡಿದ ವಚನವು ಯಾವುದೋ ಅದನ್ನು ಪ್ರಮಾಣವೆಂದು ಗ್ರಹಿಸಬೇಕು. ಹೀಗೆಂದು ಹೇಳಿ ಮಾಯಾಮೋಹನು ಅನೇಕ ಬಗೆಯ ಮಾತುಗಳಿಂದ ರಾಕ್ಷಸರಲ್ಲಿ ಒಬ್ಬನಾದರೂ ವೇದವಾಕ್ಯಗಳನ್ನು ಒಪ್ಪದಂತೆ ಮಾಡಿದನು.

೩೩–೩೪. ಈ ರೀತಿಯಲ್ಲಿ ದೈತ್ಯರು ವೇದಮಾರ್ಗವನ್ನು ಬಿಟ್ಟು ಮನಬಂದಂತೆ ನಡೆಯುತ್ತಿರಲು ದೇವತೆಗಳು ಪ್ರಯತ್ನಪೂರ್ವಕವಾಗಿ ಅವರ ಮೇಲೆ ಯುದ್ಧಕ್ಕೆ ಹೊರಟರು. ಪುನಃ ದೇವಾಸುರರಿಗೆ ಯುದ್ಧವಾಯಿತು. ಹಿಂದೆ ಅವರಿಗೆ

ಸದ್ಧರ್ಮಕವಚಸ್ತೇಷಾಮಭೂದ್ಯಃ ಪ್ರಥಮಂ ದ್ವಿಜ ।
ತೇನ ರಕ್ಷಾಽಭವತ್ಪೂರ್ವಂ ನೇಶುರ್ನಷ್ಟೇ ಚ ತತ್ರ ತೇ ॥ ೩೫ ॥

ತತೋ ಮೈತ್ರೇಯ ತನ್ಮಾರ್ಗವರ್ತಿನೋ ಯೇಽಭವನ್ ಜನಾಃ ।
ನಗ್ನಾಸ್ತೇ ತೈರ್ಯತಸ್ತ್ಯಕ್ತಂ ತ್ರಯೀಸಂವರಣಂ ಯಥಾ ।
ಕೃತಾಶ್ಚ ತೇಽಸುರಾ ದೇವೈರ್ನಾನಾವೇದವಿನಿಂದಕಾಃ ॥ ೩೬ ॥

ಬ್ರಹ್ಮಚಾರೀ ಗೃಹಸ್ಥಶ್ಚ ವಾನಪ್ರಸ್ಥಸ್ತಥಾಶ್ರಮೀ ।
ಪರಿವ್ರಾಡ್ವಾ ಚತುರ್ಥೋಽತ್ರ ಪಂಚಮೋ ನೋಪಪದ್ಯತೇ ॥ ೩೭ ॥

ಯಸ್ತು ಸಂತ್ಯಜ್ಯ ಗಾರ್ಹಸ್ಥ್ಯಂ ವಾನಪ್ರಸ್ಥೋ ನ ಜಾಯತೇ ।
ಪರಿವ್ರಾಡ್ವಾಪಿ ಮೈತ್ರೇಯ ಸ ನಗ್ನಃ ಪಾಪಕೃನ್ನರಃ ॥ ೩೮ ॥

---

ಧರ್ಮಾಚರಣೆಯೆಂಬ ಕವಚವಿದ್ದುದರಿಂದ ಜಯವುಂಟಾಗಿದ್ದಿತು. ಈಗ ಅದು ನಷ್ಟವಾದುದರಿಂದ ಸನ್ಮಾರ್ಗ ದ್ವೇಷಿಗಳಾದ ಅವರು ದೇವತೆಗಳಿಂದ ನಾಶರಾದರು.

೩೬–೩೮. ಮೈತ್ರೇಯನೇ! ರಾಕ್ಷಸರು ಅನುಸರಿಸಿದ ಮಾರ್ಗದಲ್ಲಿ ಯಾವ ಮನುಜರು ನಡೆಯುವರೋ ಅವರೇ ನಗ್ನರೆನಿಸುವರು. ವೇದಮಾರ್ಗವನ್ನು ಬಿಟ್ಟು ದರಿಂದ ಅವರಿಗೆ ವೇದವೆಂಬ ಆವರಣವು ಇರುವುದಿಲ್ಲ. ವೇದವನ್ನು ನಿಂದಿಸಿದುದ ರಿಂದ ಅವರನ್ನು ದೇವತೆಗಳು ಸಂಹರಿಸಿದರು. ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸ ಎಂಬಿವೇ ನಾಲ್ಕು ಆಶ್ರಮಗಳು. ಐದನೆಯ ಆಶ್ರಮವಿಲ್ಲ. ಯಾವನಾದರೂ ಗೃಹಸ್ಥ ಧರ್ಮವನ್ನು ಬಿಟ್ಟು ವಾನಪ್ರಸ್ಥನಾಗಿಯಾದರೂ, ಸನ್ಯಾಸಿಯಾಗಿಯಾದರೂ ಆಗುವುದಿಲ್ಲವೋ ಅವನನ್ನೇ ನಗ್ನ (ದಿಗಂಬರ) ನೆಂದು ಹೇಳುವರು, ಧರ್ಮತ್ಯಾಗ ದಿಂದ ಅವನು ಮಹಾಪಾಪಿಯೆನಿಸುವನು.

ನಿತ್ಯಾನಾಂ ಕರ್ಮಣಾಂ ವಿಪ್ರ ಯಸ್ಯ ಹಾನಿರಹರ್ನಿಶಂ ।
ಅಕುರ್ವನ್ವಿಹಿತಂ ಕರ್ಮ ಶಕ್ತಃ ಪತತಿ ತದ್ದಿನೇ ॥ ೩೯ ॥

ಪ್ರಾಯಶ್ಚಿತ್ತೇನ ಮಹತಾ ಶುದ್ಧಿಮಾಪ್ನೋತ್ಯನಾಪದಿ ।
ಪಕ್ಷಂ ನಿತ್ಯಕ್ರಿಯಾಹಾನೇಃ ಕರ್ತಾ ಮೈತ್ರೇಯ ಮಾನವಃ ॥ ೪೦ ॥

ಸಂವತ್ಸರಂ ಕ್ರಿಯಾಹಾನಿರ್ಯಸ್ಯ ಪುಂಸೋಭಿಜಾಯತೇ ।
ತಸ್ಯಾವಲೋಕನಾತ್ಸೂರ್ಯೋ ನಿರೀಕ್ಷ್ಯಸ್ಸಾಧುಭಿಸ್ಸದಾ ॥ ೪೧ ॥

ಸ್ಪೃಷ್ಟೇ ಸ್ನಾನಂ ಸಚೇಲಂ ಸ್ಯಾಚ್ಛುದ್ಧೇರ್ಹೇತುರ್ಮಹಾಮತೇ ।
ಪುಂಸೋ ಭವತಿ ತಸ್ಯೋಕ್ತಾ ನ ಶುದ್ಧಿಃ ಪಾಪಕರ್ಮಣಃ ॥ ೪೨ ॥

ದೇವರ್ಷಿ ಪಿತೃಭೂತಾನಿ ಯಸ್ಯ ವಿಶ್ವಸ್ಯ ವೇಶ್ಮನಿ ।
ಪ್ರಯಾಂತ್ಯನರ್ಚಿತಾನ್ಯತ್ರ ಲೋಕೇ ತಸ್ಮಾನ್ನ ಪಾಪಕೃತ್ ॥ ೪೩ ॥

---

೩೯-೪೦. ಮೈತ್ರೇಯನೇ! ಶರೀರದಲ್ಲಿ ಯಾವ ಬಾಧೆಯೂ ಇಲ್ಲದೆ ಶಕ್ತನಾಗಿದ್ದವನು ವೇದವಿಹಿತವಾದ ನಿತ್ಯಕರ್ಮಗಳನ್ನು ಮಾಡದಿದ್ದರೆ ಪತಿತನಾಗುವನು. ಆಪತ್ಕಾಲವಲ್ಲದಿರುವಾಗ ಹದಿನೈದು ದಿನ ನಿತ್ಯಕರ್ಮವನ್ನು ಮಾಡದ ಮನುಷ್ಯನು ದೊಡ್ಡ ಪ್ರಾಯಶ್ಚಿತ್ತವನ್ನು ಮಾಡಿಕೊಂಡರೆ ಶುದ್ಧನಾಗುವನು.

೪೧-೪೩ ಯಾವ ಮನುಜನು ಒಂದು ವರ್ಷದವರೆಗೆ ನಿತ್ಯಕರ್ಮಗಳನ್ನು ಬಿಡುವನೋ ಅಂಥವನನ್ನು ಸಜ್ಜನರು ನೋಡಿದರೆ ಸೂರ್ಯದರ್ಶನವನ್ನು ಮಾಡಿ ಆ ಪಾಪವನ್ನು ಕಳೆದುಕೊಳ್ಳಬೇಕು. ಅವನ ಸ್ಪರ್ಶ ಮಾಡಿದರೆ ಸಚೇಲ ಸ್ನಾನವನ್ನು ಮಾಡಿ ಶುದ್ಧರಾಗಬೇಕು. ಆ ಪಾಪಿಯು ಮಾಡಿದ ಪಾಪಕರ್ಮಕ್ಕೆ ಶುದ್ಧಿಯನ್ನು ಹೇಳಿಲ್ಲ. ದೇವತೆಗಳೂ, ಋಷಿಗಳೂ, ಪಿತೃಗಳೂ ಭೂತಗಳೂ ಯಾವ ಬ್ರಾಹ್ಮಣನ ಮನೆಯಲ್ಲಿ ಪೂಜೆಯನ್ನು ಪಡೆಯದೆ ಬೇರೆ ಕಡೆಗೆ ಹೋಗುವರೋ ಅವನಿಗಿಂತ ಪಾಪಿಷ್ಠರು ಲೋಕದಲ್ಲಿ ಮತ್ತಾರೂ ಇರುವುದಿಲ್ಲ.

ದೇವಾದಿನಿಶ್ವಾಸಹತಂ ಶರೀರಂಯಸ್ಯ ವೇಶ್ಮ ಚ ।
ನ ತೇನ ಸಂಗಮಂ ಕುರ್ಯಾದ್ಗೃಹಾಸನಪರಿಚ್ಛದೈಃ ॥ ೪೪ ॥

ಸಂಭಾಷಣಾನುಪ್ರಶ್ನಾದಿ ಸಹಾಸ್ಯಾಂ ಚೈವ ಕುರ್ವತಃ ।
ಜಾಯತೇ ತುಲ್ಯತಾ ಪುಂಸಸ್ತೇನೈವ ದ್ವಿಜ ವತ್ಸರಂ ॥ ೪೫ ॥

ಅಥ ಭುಂಕ್ತೇ ಗೃಹೇ ತಸ್ಯ ಕರೋತ್ಯಾಸ್ಯಾಂ ತಥಾಸನೇ ।
ಶೇತೇ ವಾಪ್ಯೇಕಶಯನೇ ಸ ಸದ್ಯಸ್ತತ್ಸಮೋ ಭವೇತ್ ॥ ೪೬ ॥

ದೇವತಾಪಿತೃಭೂತಾನಿ ತಥಾನಭ್ಯರ್ಚ್ಯ ಯೋಽತಿಥೀನ್ ।
ಭುಂಕ್ತೇ ಸ ಪಾತಕಂ ಭುಂಕ್ತೇ ನಿಷ್ಕೃತಿಸ್ತಸ್ಯ ಕೀದೃಶೀ ॥ ೪೭ ॥

ಬ್ರಾಹ್ಮಣಾದ್ಯಾಸ್ತು ಯೇ ವರ್ಣಾಃ ಸ್ವಧರ್ಮಾದನ್ಯತೋ ಮುಖಂ ।
ಯಾಂತಿ ತೇ ನಗ್ನಸಂಜ್ಞಾಂ ತು ಹೀನಕರ್ಮಸ್ವವಸ್ಥಿತಾಃ ॥ ೪೮ ॥

---

೪೪–೪೬. ದೇವತೆಗಳೇ ಮುಂತಾದವರ ನಿಶ್ವಾಸದ ಗಾಳಿಯಿಂದ ಯಾವನ ಶರೀರವೂ. ಮನೆಯೂ ದುಷ್ಟವಾಗಿರುವುದೋ ಅವನೊಡನೆ ಯಾರೂ ಸೇರಬಾರದು. ಅವನ ಮನೆಯಲ್ಲಿ ಯಾರೂ ಇರಬಾರದು. ಅವನೊಡನೆ ಒಂದು ವರ್ಷದವರೆಗೆ ಮಾತನಾಡುತ್ತ ವಾಸಮಾಡುವವನೂ ಅವನ ಸಮಾನನಾಗುವನು ಅವನ ಮನೆಯಲ್ಲಿ ಭೋಜನವನ್ನು ಮಾಡಿ ಒಂದೇ ಆಸನದಲ್ಲಿ ಅವನೊಡನೆ ಕುಳಿತ., ಒಂದೇ ಹಾಸಿಗೆಯಲ್ಲಿ ಅವನೊಡನೆ ಮಲಗಿದರೆ ಆ ಮನುಜನು ಆ ಕ್ಷಣವೇ ಅವನ ಸಮಾನನಾದ ಪಾಪಿಯಾಗುವನು.

೪೭–೪೮. ದೇವತೆಗಳನ್ನೂ, ಪಿತೃಗಳನ್ನೂ, ಭೂತಗಳನ್ನೂ, ಅತಿಥಿಗಳನ್ನೂ ಪೂಜಿಸದೆ ಊಟಮಾಡುವವನು ತನ್ನ ಪಾಪ ಫಲವನ್ನೇ ಊಟಮಾಡುವನೆಂದು ತಿಳಿಯಬೇಕು. ಅದಕ್ಕೆ ಪ್ರಾಯಶ್ಚಿತ್ತವೇ ಇಲ್ಲ. ಬ್ರಾಹ್ಮಣಾದಿ ನಾಲ್ಕು ವರ್ಣದವರು ತಮ್ಮ ವರ್ಣಧರ್ಮವನ್ನು ಬಿಟ್ಟು ಮತ್ತೊಂದು ವರ್ಣಧರ್ಮವನ್ನಾಚರಿಸಿದರೆ ಹೀನ

ಚತುರ್ಣಾಂ ಯತ್ರ ವರ್ಣಾನಾಂ ಮೈತ್ರೇಯಾತ್ಯಂತಸಂಕರಃ ।
ತತ್ರಾಸ್ಯಾ ಸಾಧುವೃತ್ತೀನಾಮುಪಘಾತಾಯ ಜಾಯತೇ ॥ ೪೯ ॥

ಅನಭ್ಯರ್ಚ್ಯ ಋಷೀನ್ ದೇವಾನ್ ಪಿತೃಭೂತಾತಿಥೀಂಸ್ತಥಾ ।
ಯೋ ಭುಂಕ್ತೇ ತಸ್ಯ ಸಲ್ಲಾಪಾತ್ ಪತಂತಿ ನರಕೇ ನರಾಃ ॥ ೫೦ ॥

ತಸ್ಮಾದೇತಾನ್ನರೋ ನಗ್ನಾಂಸ್ತ್ರಯೀ ಸಂತ್ಯಾಗದೂಷಿತಾನ್ ।
ಸರ್ವದಾ ವರ್ಜಯೇತ್ಪ್ರಾಜ್ಞ ಆಲಾಪಸ್ಪರ್ಶನಾದಿಷು ॥ ೫೧ ॥

ಶ್ರದ್ಧಾವದ್ಭಿಃ ಕೃತಂ ಯತ್ನಾದ್ದೇವಾನ್ ಪಿತೃಪಿತಾಮಹಾನ್ ।
ನ ಪ್ರೀಣಯತಿ ತಚ್ಛ್ರಾದ್ಧಂ ಯದೇಭಿರವಲೋಕಿತಂ ॥ ೫೨ ॥

ಶ್ರೂಯತೇ ಚ ಪುರಾರಾಜಾ ಖ್ಯಾತಃ ಶತಧನುರ್ಭುವಿ ।
ಪತ್ನೀ [illegible] ತಸ್ಯ ಶೈಬ್ಯಾಽಭೂತ್ಪತಿಧರ್ಮಪರಾಯಣಾ ॥ ೫೩ ॥

---

ಕರ್ಮವುಳ್ಳವರಾಗಿ ನಗ್ನರೆಂಬ ಹೆಸರನ್ನು ಪಡೆವರು. ಮೈತ್ರೇಯನೇ! ನಾಲ್ಕು ವರ್ಣಗಳೂ ಎಲ್ಲಿ ವಿಶೇಷ ಸಾಂಕರ್ಯವನ್ನು ಹೊಂದಿರುವುವೋ ಅಲ್ಲಿ ವಾಸವಾಗಿರುವುದು ಸಜ್ಜನರಿಗೆ ಹಾನಿಕರವಾಗಿರುವುದು.

೫೦–೫೨. ಋಷಿಗಳು, ದೇವತೆಗಳು, ಪಿತೃಗಳು, ಭೂತಗಳು, ಅತಿಥಿಗಳು ಇವರನ್ನು ಪೂಜಿಸದೆ ಯಾವನು ಊಟಮಾಡುವನೋ ಅವನೊಡನೆ ಮಾತನಾಡುವ ಮನುಷ್ಯನು ನರಕಕ್ಕೆ ಹೋಗುವನು. ಆದುದರಿಂದ ಪ್ರಾಜ್ಞರು ವೇದಧರ್ಮವನ್ನು ಬಿಟ್ಟಿದರಿಂದ ದುಷ್ಟರಾದ ನಗ್ನರೆಂಬ ಇಂತಹ ಮನುಷ್ಯರನ್ನು ಯಾವಾಗಲೂ ಮುಟ್ಟದೆ ಅವರೊಡನೆ ಮಾತನಾಡದೆ ಇರಬೇಕು. ಇಂಥವರು ನೋಡಿದ, ಭಕ್ತಿಯುಳ್ಳವರು ಪ್ರಯತ್ನಪಟ್ಟು ಮಾಡಿದ ಶ್ರಾದ್ಧವು ಅವರ ಪಿತೃಪಿತಾಮಹಾದಿಗಳನ್ನು ತೃಪ್ತಿಪಡಿಸುವುದಿಲ್ಲ.

೫೩-೫೭. ಹಿಂದಿನ ಕಾಲದಲ್ಲಿ ಶತಧನುವೆಂಬ ರಾಜನಿದ್ದನು. ಅವನಿಗೆ ಶೈಬ್ಯೆಯೆಂಬ ಪತಿವ್ರತೆಯಾದ ಪತ್ನಿಯಿದ್ದಳು. ಅವಳು ಸತ್ಯ, ಶುಚಿತ್ವ, ದಯಾ

ಪತಿವ್ರತಾ ಮಹಾಭಾಗಾ ಸತ್ಯಶೌಚದಯಾನ್ವಿತಾ ।
ಸರ್ವಲಕ್ಷಣಸಂಪನ್ನಾ ಸಂಪನ್ನಾ ವಿನಯೇನ ಚ ॥ ೫೪ ॥

ಸ ತು ರಾಜಾ ತಯಾ ಸಾರ್ಧಂ ದೇವದೇವಂ ಜನಾರ್ದನಂ ।
ಆರಾಧಯಾಮಾಸ ವಿಭುಂ ಪರಮೇಣ ಸಮಾಧಿನಾ ॥ ೫೫ ॥

ಹೋಮೈರ್ಜಪೈಸ್ತಥಾ ದಾನೈರುಪವಾಸೈಶ್ಚ ಭಕ್ತಿತಃ ।
ಪೂಜಾಭಿಶ್ಚಾನುದಿವಸಂ ತನ್ಮನಾ ನಾನ್ಯಮಾನಸಃ ॥ ೫೬ ॥

ಏಕದಾ ತು ಸಮಂ ಸ್ನಾತೌ ತೌ ತು ಭಾರ್ಯಾಪತೀ ಜಲೇ ।
ಭಾಗೀರಥ್ಯಾಸ್ಸಮುತ್ತೀರ್ಣೌ ಕಾರ್ತಿಕ್ಯಾಂ ಸಮುಪೋಷಿತೌ ।
ಪಾಷಂಡಿನಮಥಾಯಾಂತಂ ಸಂಮುಖಂ ತಾವಪಶ್ಯತಾಂ ॥ ೫೭ ॥

ಚಾಪಾಚಾರ್ಯಸ್ಯ ತಸ್ಯಾಸೌ ಸಖಾ ರಾಜ್ಞೋಮಹಾತ್ಮನಃ ।
ಅತಸ್ತದ್ಗೌರವಾತ್ತೇನ ಸಹಾಲಾಪಮಥಾಕರೋತ್ ॥ ೫೮ ॥

---

ಮುಂತಾದ ಸುಗುಣಗಳಿಂದ ಕೂಡಿ ಸುಂದರಿಯಾಗಿಯೂ, ವಿನಯವಂತಳಾಗಿಯೂ ಪತಿಯೊಡನೆ ಧರ್ಮವನ್ನಾಚರಿಸುತ್ತಿದ್ದಳು. ಆ ರಾಜನು ಅವಳೊಡನೆ ಸರ್ವ ವ್ಯಾಪಿಯೂ ದೇವದೇವನೂ ಆದ ವಿಷ್ಣುವನ್ನು ಶ್ರೇಷ್ಠವಾದ ಸಮಾಧಿಯಿಂದ ಪೂಜಿ ಸುತ್ತಿದ್ದನು. ಪ್ರತಿದಿನವೂ ಹೋಮ, ಜಪ, ದಾನ, ಉಪವಾಸ ಇವುಗಳನ್ನು ಭಕ್ತಿ ಯಿಂದ ಮಾಡುತ್ತ ಪೂಜಾದಿಗಳಿಂದ ಮನಸ್ಸನ್ನು ವಿಷ್ಣುವಿನಲ್ಲಿಯೇ ಇಟ್ಟು ಮತ್ತೊಂದು ಕಡೆಗೆ ಚಲಿಸುತ್ತಿರಲಿಲ್ಲ.

೫೭-೬೦. ಒಂದಾನೊಂದು ದಿನ ಆ ರಾಜದಂಪತಿಗಳು ಕಾರ್ತೀಕ ಮಾಸದಲ್ಲಿ ಭಾಗೀರಥಿಯ ನದಿಯಲ್ಲಿ ಸ್ನಾನವನ್ನು ಮಾಡಿ ಉಪವಾಸ ವ್ರತವನ್ನು ಕೈಗೊಂಡು ದಾರಿಯಲ್ಲಿ ಬರುತ್ತಿರುವಾಗ ತಮ್ಮ ಎದುರಿಗೆ ಬರುತ್ತಿರುವ ಪಾಷಂಡಿಯನ್ನು ನೋಡಿ ದರು. (ಸ್ವಧರ್ಮವನ್ನು ಬಿಟ್ಟು ನಿಷಿದ್ಧಕರ್ಮವನ್ನು ಮಾಡುವವನು ಪಾಷಂಡಿ ಯೆನಿಸುವನು.) ಅವನು ರಾಜನಿಗೆ ಧನುರ್ವಿದ್ಯೆಯನ್ನು ಹೇಳಿಕೊಟ್ಟ ಗುರುವಿನ

ನ ತು ಸಾ ವಾಗ್ಯತಾ ದೇವೀ ತಸ್ಯ ಪತ್ನೀ ಪತಿವ್ರತಾ ।
ಉಪೋಷಿತಾಸ್ಮೀತಿ ರವಿಂ ತಸ್ಮಿನ್ ದೃಷ್ಟೇ ದದರ್ಶ ಹ ॥ ೫೯ ॥

ಸಮಾಗಮ್ಯ ಯಥಾನ್ಯಾಯ್ಯಂ ದಂಪತೀ ತೌ ಯಥಾವಿಧಿ ।
ವಿಷ್ಣೋಃ ಪೂಜಾದಿಕಂ ಸರ್ವಂ ಕೃತವಂತೌ ದ್ವಿಜೋತ್ತಮ ॥ ೬೦ ॥

ಕಾಲೇನ ಗಚ್ಛತಾ ರಾಜಾ ಮಮಾರಾಸೌ ಸಪತ್ನಜಿತ್ ।
ಅನ್ವಾರುರೋಹ ಸಾ ದೇವೀ ಚಿತಾಸ್ಥಂ ಭೂಪತಿಂ ಪತಿಂ ॥ ೬೧ ॥

ಸ ತು ತೇನಾಪಚಾರೇಣ ಶ್ವಾ ಜಜ್ಞೇ ವಸುಧಾಪತಿಃ ।
ಉಪೋಷಿತೇನ ಪಾಷಂಡಸಲ್ಲಾಪೋ ಯತ್ಕೃತೋ ಭವೇತ್ ॥ ೬೨ ॥

ಸಾಪಿ ಜಾತಿಸ್ಮರಾ ಜಜ್ಞೇ ಕಾಶೀರಾಜಸುತಾ ಶುಭಾ ।
ಸರ್ವವಿಜ್ಞಾನಸಂಪೂರ್ಣಾ ಸರ್ವಲಕ್ಷಣಪೂಜಿತಾ ॥ ೬೩ ॥

---

ಸ್ನೇಹಿತನು. ಆದುದರಿಂದ ರಾಜನು ತನ್ನ ಗುರುವಿನಲ್ಲಿರುವ ಗೌರವದಿಂದ ಅವನೊಡನೆ ಮಾತನಾಡಿದನು. ಮೌನವ್ರತವನ್ನು ಹಿಡಿದ ರಾಜನ ಪತ್ನಿಯು ಅವನೊಡನೆ ಮಾತ ನಾಡಲಿಲ್ಲ ಉಪವಾಸವ್ರತವನ್ನು ಆಚರಿಸುತ್ತಿದ್ದ ಅವಳು ಅವನನ್ನು ನೋಡಿದುದ ರಿಂದುಂಟಾದ ದೋಷವನ್ನು ಸೂರ್ಯನ ದರ್ಶನವನ್ನು ಮಾಡಿ ನಿವಾರಿಸಿಕೊಂಡಳು. ಆಮೇಲೆ ಆ ದಂಪತಿಗಳು ಮನೆಗೆ ಬಂದು ವಿಧಿಗನುಸಾರವಾಗಿ ವಿಷ್ಣುವಿನ ಪೂಜೆಯೇ ಮೊದಲಾದ ಸಮಸ್ತ ಕರ್ಮಗಳನ್ನೂ ಮಾಡಿದರು.

೬೧–೬೩. ಕೆಲವು ಕಾಲದ ಮೇಲೆ ಶತ್ರುಸಂಹಾರಕನಾದ ಆ ರಾಜನು ಮರಣಹೊಂದಿದನು. ಅವನ ಪತ್ನಿಯು ಪತಿವ್ರತೆಯಾದುದರಿಂದ ಅವನೊಡನೆ ಸಹಗಮನವನ್ನು ಮಾಡಿದಳು. ಆ ರಾಜನು ಉಪವಾಸ ವ್ರತವನ್ನು ಮಾಡುತ್ತ ಪಾಷಂಡಿಯೊಡನೆ ಮಾತನಾಡಿದ ದೋಷದಿಂದ ಮುಂದಿನ ಜನ್ಮದಲ್ಲಿ ನಾಯಿಯಾಗಿ ಹುಟ್ಟಿದನು. ಅವನ ಪತ್ನಿಯು ಸಮಸ್ತ ಶುಭಲಕ್ಷಣಗಳಿಂದಲೂ ವಿಜ್ಞಾನದಿಂದಲೂ ಕೂಡಿ ಪೂರ್ವಜನ್ಮದ ಸ್ಮರಣೆಯುಳ್ಳವಳಾಗಿ ಕಾಶೀರಾಜನ ಮಗಳಾಗಿ ಹುಟ್ಟಿದಳು.

ತಾಂ ಪಿತಾ ದಾತುಕಾಮೋಽಭೂದ್ವರಾಯ ವಿನಿವಾರಿತಃ ।
ತಯೈವ ತನ್ವ್ಯಾ ವಿರತೋ ವಿವಾಹಾರಂಭತೋ ನೃಪಃ ॥ ೬೪ ॥

ತತಸ್ಸಾ ದಿವ್ಯಯಾ ದೃಷ್ಟ್ಯಾ ದೃಷ್ಟ್ವಾ ಶ್ವಾನಂ ನಿಜಂ ಪತಿಂ ।
ವಿದಿಶಾಖ್ಯಂ ಪುರಂ ಗತ್ವಾ ತದವಸ್ಥಂ ದದರ್ಶ ತಂ ॥ ೬೫ ॥

ತಂ ದೃಷ್ಟ್ವೈವ ಮಹಾಭಾಗಂ ಶ್ವಾನಭೂತಂ ಪತಿಂ ತದಾ ।
ದದೌ ತಸ್ಮೈ ಸದಾಹಾರಂ ಸತ್ಕಾರಪ್ರವಣಂ ಶುಭಾ ॥ ೬೬ ॥

ಭುಂಜನ್ ದತ್ತಂ ತಯಾ ಸೋಽನ್ನಮತಿಮೃಷ್ಟಮಭೀಪ್ಸಿತಂ ।
ಸ್ವಜಾತಿಲಲಿತಂ ಕುರ್ವನ್ ಬಹುಚಾಟು ಚಕಾರವೈ ॥ ೬೭ ॥

ಅತೀವ ವ್ರೀಡಿತಾ ಬಾಲಾ ಕುರ್ವತಾ ಚಾಟು ತೇನ ಸಾ ।
ಪ್ರಣಾಮಪೂರ್ವಮಾಹೇದಂ ದಯಿತಂ ತಂ ಕುಯೋನಿಜಂ ॥ ೬೮ ॥

---

೬೪-೬೭. ವಿವಾಹಕ್ಕೆ ತಕ್ಕ ವಯಸ್ಸು ಬಂದಾಗ ಅವಳಿಗೆ ತಂದೆಯು ವಿವಾಹ ಮಾಡಬೇಕೆಂದು ಪ್ರಯತ್ನಪಟ್ಟನು. ಅವಳು ವಿವಾಹ ಮಾಡಿಕೊಳ್ಳಲು ಇಷ್ಟಪಡದೆ ಇದ್ದುದರಿಂದ ಆ ಪ್ರಯತ್ನವನ್ನು ಬಿಟ್ಟುಬಿಟ್ಟನು. ಬಳಿಕ ಅವಳು ದಿವ್ಯದೃಷ್ಟಿಯಿಂದ ತನ್ನ ಪತಿಯು ವಿದಿಶಾ ಎಂಬ ಪಟ್ಟಣದಲ್ಲಿ ನಾಯಿಯಾಗಿರುವನೆಂದು ತಿಳಿದು ಅಲ್ಲಿಗೆ ಹೋಗಿ ಅವನ ಅವಸ್ಥೆಯನ್ನು ಕಂಡಳು. ಮಂಗಳಸ್ವರೂಪಳಾದ ಅವಳು ನಾಯಿಯ ಜನ್ಮವನ್ನು ಹೊಂದಿದ ಮಹಾಮಹಿಮನಾದ ತನ್ನ ಪತಿಗೆ ಅತಿಥಿ ಸತ್ಕಾರದಿಂದ ಶುದ್ಧವಾದ ಒಳ್ಳೆಯ ಆಹಾರವನ್ನು ಕೊಟ್ಟಳು. ಆ ಮೃಷ್ಟಾನ್ನವನ್ನುಂಡು ನಾಯಿಯು ತನ್ನ ಜಾತಿಗೆ ಸ್ವಾಭಾವಿಕವಾದ ಪ್ರೀತಿಯನ್ನು ತೋರಿಸುವ ಚೇಷ್ಟೆಯನ್ನು ಮಾಡಿತು.

೬೮-೭೦. ಬಾಲಿಕೆಯಾದ ಅವಳು ವಿಶೇಷವಾದ ನಾಚಿಕೆಯಿಂದ ಕೂಡಿ ಆ ನಾಯಿಗೆ ಪ್ರೀತಿಯನ್ನು ತೋರಿಸುತ್ತ ನೀಚಯೋನಿಯಲ್ಲಿ ಹುಟ್ಟಿದತನ್ನ ಪ್ರಿಯ

ಸ್ಮರ್ಯತಾಂ ತನ್ಮಹಾರಾಜ ದಾಕ್ಷಿಣ್ಯಾಲ್ಲಪಿತಂ ತ್ವಯಾ ।
ಯೇನ ಶ್ವಯೋನಿಮಾಪನ್ನೋ ಮಮ ಚಾಟುಕರೋ ಭವಾನ್ ॥ ೬೯ ॥

ಪಾಷಂಡಿನಂ ಸಮಾಭಾಷ್ಯ ತೀರ್ಥಸ್ನಾನಾದನಂತರಂ ।
ಪ್ರಾಪ್ತೋಽಸಿ ಕುತ್ಸಿತಾಂ ಯೋನಿಂ ಕಿಂ ನ ಸ್ಮರಸಿ ತದ್ವಿಭೋ ॥ ೭೦ ॥

॥ ಶ್ರೀ ಪರಾಶರಃ ॥

ತಯೈವಂ ಸ್ಮಾರಿತೇ ತಸ್ಮಿನ್ ಪೂರ್ವಜಾತಿಕೃತೇ ತದಾ ।
ದಧ್ಯೌ ಚಿರಮಥಾವಾಪ ನಿರ್ವೇದಮತಿದುರ್ಲಭಂ ॥ ೭೧ ॥

ನಿರ್ವಿಣ್ಣಚಿತ್ತಸ್ಸತತೋ ನಿರ್ಗತ್ಯ ನಗರಾದ್ಬಹಿಃ ।
ಮರುಪ್ರಪತನಂ ಕೃತ್ವಾ ಸಾರ್ಗಾಲೀಂ ಯೋನಿಮಾಗತಃ ॥ ೭೨ ॥

ಸಾಪಿ ದ್ವಿತೀಯೇ ಸಂಪ್ರಾಪ್ತೇ ವೀಕ್ಷ್ಯ ದಿವ್ಯೇನ ಚಕ್ಷುಷಾ ।
ಜ್ಞಾತ್ವಾ ಸೃಗಾಲಂ ತಂ ದ್ರಷ್ಟುಂ ಯಯೌ ಕೋಲಾಹಲಂ ಗಿರಿಂ ॥ ೭೩ ॥

---

ನಿಗೆ ನಮಸ್ಕಾರಮಾಡಿ 'ಎಲೈ ಮಹಾರಾಜನೇ ! ಹಿಂದಿನ ಜನ್ಮದಲ್ಲಿ ಮಾಡಿದುದನ್ನು ಜ್ಞಾಪಿಸಿಕೋ ತೀರ್ಥಸ್ನಾನ ಮಾಡಿದಮೇಲೆ ದಾಕ್ಷಿಣ್ಯದಿಂದ ಕೂಡಿ ಪಾಷಂಡಿಯೊಡನೆ ಮಾತನಾಡಿದುದರಿಂದ ಈ ನಾಯಿ ಜನ್ಮವನ್ನು ಪಡೆದಿರುವೆ. ಅದನ್ನು ಜ್ಞಾಪಿಸಿಕೊಂಡೆಯಾ' ಎಂದಳು.

೭೧-೭೫. ಹಿಂದಿನ ಜನ್ಮದ ಪಾಪಕಾರ್ಯವನ್ನು ಜ್ಞಾಪಕಕ್ಕೆ ತರುತ್ತಲು ಆ ನಾಯಿಯು ಧ್ಯಾನಾಸಕ್ತವಾಗಿ ಜನ್ಮಾಂತರ ಕರ್ಮವನ್ನು ತಿಳಿದು ವೈರಾಗ್ಯವನ್ನು ಹೊಂದಿ ಆ ನಗರದಿಂದ ಹೊರಟು ಬೆಟ್ಟದ ಮೇಲಕ್ಕೆ ಹತ್ತಿ ಅಲ್ಲಿಂದ ಕೆಳಕ್ಕೆ ಬಿದ್ದು ಆ ಶರೀರವನ್ನು ಬಿಟ್ಟು ನರಿಯ ಜನ್ಮವನ್ನು ಪಡೆಯಿತು. ಅವಳು ದಿವ್ಯದೃಷ್ಟಿಯಿಂದ ರಾಜನಿಗೆ ಎರಡನೆಯ ಜನ್ಮವು ಬಂದುದನ್ನು ಕಂಡು ಆ ನರಿಯನ್ನು ನೋಡುವುದಕ್ಕಾಗಿ ಕೋಲಾಹಲಗಿರಿಗೆ ಹೋದಳು. ಅಲ್ಲಿಯೂ ನರಿಯ ಜನ್ಮವನ್ನು

ತತ್ರಾಪಿ ದೃಷ್ಟ್ವಾ ತಂ ಪ್ರಾಹ ಶಾರ್ಗಾಲೀಂ ಯೋನಿಮಾಗತಂ ।
ಭರ್ತಾರಮತಿಚಾರ್ವಂಗೀ ತನಯಾ ಪೃಥಿವೀಪತೇಃ ॥ ೭೪ ॥

॥ ಪತ್ನ್ಯುವಾಚ ॥

ಅಪಿ ಸ್ಮರಸಿ ರಾಜೇಂದ್ರ ಶ್ವಯೋನಿಸ್ಥಸ್ಯ ಯನ್ಮಯಾ ।
ಪ್ರೋಕ್ತಂ ತೇ ಪೂರ್ವಚರಿತಂ ಪಾಷಂಡಾಲಾಪಸಂಶ್ರಯಂ ॥ ೭೫ ॥

ಪುನಸ್ತಯೋಕ್ತಸ್ಸ ಜ್ಞಾತ್ವಾ ಸತ್ಯಂ ಸತ್ಯವತಾಂ ವರಃ ।
ಕಾನನೇ ಸ ನಿರಾಹಾರಃ ತತ್ಯಾಜ ಸ್ವಕಳೇಬರಂ ॥ ೭೬ ॥

ಭೂಯಸ್ತತೋ ವೃಕೋ ಜಜ್ಞೇ ಗತ್ವಾ ತಂ ನಿರ್ಜನೇ ವನೇ ।
ಸ್ಮಾರಯಾಮಾಸ ಭರ್ತಾರಂ ಪೂರ್ವವೃತ್ತಮನಿಂದಿತಾ ॥ ೭೭ ॥

ನ ತ್ವಂ ವೃಕೋ ಮಹಾಭಾಗ ರಾಜಾ ಶತಧನುರ್ಭವಾನ್ ।
ಶ್ವಾ ಭೂತ್ವಾ ತ್ವಂ ಸೃಗಾಲೋಽಭೂರ್ವೃಕತ್ವಂ ಸಾಂಪ್ರತಂ ಗತಃ ॥ ೭೮ ॥

---

ಹೊಂದಿದ ತನ್ನ ಗಂಡನನ್ನು ನೋಡಿ "ಎಲೈ ರಾಜಶ್ರೇಷ್ಠನೇ! ನಾಯಿಯ ಜನ್ಮವನ್ನು ಪಡೆದಿದ್ದ ನಿನಗೆ ನಾವು ಹೇಳಿದುದನ್ನು ಜ್ಞಾಪಿಸಿಕೊಳ್ಳುವೆಯಾ? ಪೂರ್ವ ಜನ್ಮದಲ್ಲಿ ಪಾಷಂಡನೊಡನೆ ಮಾತನಾಡಿದುದರ ಫಲವೇ ಇದು. ಎಂದು ಹೇಳಿದಳು.

೭೬–೮೦. ಆ ರಾಜನು ಅವಳು ಹೇಳಿದಹಾಗೆ ಅದನ್ನು ನಿಜವೆಂದು ತಿಳಿದು ಆಹಾರವನ್ನು ಬಿಟ್ಟು ಆ ಕಾಡಿನಲ್ಲಿಯೇ ತನಗೆ ಬಂದಿದ್ದ ನರಿಯ ಶರೀರವನ್ನು ಬಿಟ್ಟುಬಿಟ್ಟನು. ಪುನಃ ಅವನು ನಿರ್ಜನವಾದ ಕಾಡಿನಲ್ಲಿ ತೋಳನಾಗಿ ಹುಟ್ಟಿದನು. ಆಗ ಅವಳು ಆ ಕಾಡಿಗೆ ಹೋಗಿ ಹಿಂದಿನ ಜನ್ಮಗಳ ವೃತ್ತಾಂತವನ್ನು ಅವನಿಗೆ ಜ್ಞಾಪಕಕ್ಕೆ ತರುತ್ತ ಮಹಾಮಹಿಮನಾದ ರಾಜನೇ! ನೀನು ತೋಳನಲ್ಲ, ಶತಧನುವೆಂಬ

ಸ್ಮಾರಿತೇನ ಯದಾತ್ಮಜ್ಞಸ್ತೇನಾತ್ಮಾ ಗೃಧ್ರತಾಂ ಗತಃ ।
ಅವಾಪ ಸಾ ಪುನಶ್ಚೈನಂ ಬೋಧಯಾಮಾಸ ಮಾನಿನೀ ॥ ೭೯ ॥

ನರೇಂದ್ರ ಸ್ಮರ್ಯತಾಮಾತ್ಮಾ ಹ್ಯಲಂ ತೇ ಗೃಧ್ರ ಚೇಷ್ಟಯಾ ।
ಪಾಷಂಡಾಲಾಪಜಾತೋಽಯಂ ದೋಷೋ ಯದ್ಗೃಧ್ರತಾಂ ಗತಃ ॥ ೮೦ ॥

ತತಃ ಕಾಕತ್ವಮಾಪನ್ನಂ ಸಮನಂತರಜನ್ಮನಿ ।
ಉವಾಚ ತನ್ವೀ ಭರ್ತಾರಂ ಉಪಲಭ್ಯಾತ್ಮಯೋಗತಃ ॥ ೮೧ ॥

ಅಶೇಷಭೂಭೃತಃ ಪೂರ್ವಂ ವಶ್ಯಾ ಯಸ್ಮೈ ಬಲಿಂ ದದುಃ ।
ಸ ತ್ವಂ ಕಾಕತ್ವಮಾಪನ್ನೋ ಜಾತೋಽದ್ಯ ಬಲಿಭುಕ್ಪ್ರಭೋ ॥ ೮೨ ॥

ಏವಮೇವ ಬಕತ್ವೇಽಪಿ ಸ್ಮಾರಿತಸ್ಸ ಪುರಾತನಂ ।
ತತ್ಯಾಜ ಭೂಪತಿಃ ಪ್ರಾಣಾನ್ ಮಯೂರತ್ವಮವಾಪ ಚ ॥ ೮೩ ॥

---

ರಾಜನು. ನಾಯಿಯಾಗಿ ನರಿಯಾಗಿ ಈಗ ತೋಳವಾಗಿರುವೆ. ಎಂದು ಹೇಳಿದಮೇಲೆ ಅವನು ಆ ಶರೀರವನ್ನು ಬಿಟ್ಟು ಹದ್ದಾಗಿ ಹುಟ್ಟಿದನು. ಪುನಃ ಅವಳು ಆ ಹದ್ದಿನ ಸಮೀಪಕ್ಕೆ ಹೋಗಿ ಎಲೈ ರಾಜನೇ ! ನೀನು ಹದ್ದಲ್ಲ. ಪಾಷಂಡನೊಡನೆ ಮಾತನಾಡಿದುದರಿಂದ ಈ ಜನ್ಮವು ನಿನಗೆ ಬಂದಿರುವುದು. ಎಂದು ಜ್ಞಾಪಿಸಿದಳು.

೮೧-೮೪. ಆಮೇಲೆ ಕಾಗೆಯ ಜನ್ಮವನ್ನು ಪಡೆದ ರಾಜನನ್ನು ಕುರಿತು ಎಲೈ ರಾಜನೇ ! ಹಿಂದೆ ನೀನು ರಾಜನಾಗಿದ್ದಾಗ ಸಮಸ್ತ ರಾಜರೂ ನಿನಗೆ ಕಾಣಿಕೆಯನ್ನು ಸಲ್ಲಿಸುತ್ತಿದ್ದರು. ಈಗ ನೀನು ಪಿಂಡವನ್ನು ತಿನ್ನುವ ಕಾಗೆಯಾಗಿ ಹುಟ್ಟಿರುವೆ ಎಂದು ಹೇಳಿ ಪುನಃ ಬಕ ಜನ್ಮವನ್ನು ಪಡೆದವನಿಗೂ ಹಿಂದಿನ ಜನ್ಮಗಳನ್ನು ಜ್ಞಾಪಿಸಿದಳು. ರಾಜನು ಆ ಶರೀರಗಳನ್ನು ಬಿಟ್ಟು ನವಿಲಾಗಿ ಹುಟ್ಟಿದನು. ರಾಜಪುತ್ರಿಯು

ಮಯೂರಶ್ಚೇ ತತಸ್ಸಾ ವೈ ಚಕಾರಾನುಗತಿಂ ಶುಭಾ ।
ದತ್ತೈಃ ಪ್ರತಿಕ್ಷಣಂ ಭೋಜ್ಯೈಃ ಬಾಲಾ ತಜ್ಜಾತಿಭೋಜನೈಃ ॥ ೮೪ ॥

ತತಸ್ತು ಜನಕೋ ರಾಜಾ ವಾಜಿಮೇಧಂ ಮಹಾಕ್ರತುಂ ।
ಚಕಾರ ತಸ್ಯಾವಭೃಥೇ ಸ್ನಾಪಯಾಮಾಸ ತಂ ತದಾ ॥ ೮೫ ॥

ಸ್ನಾತ್ವಾ ಸ್ವಯಂ ಚ ತನ್ವಂಗೀ ಸ್ಮಾರಯಾಮಾಸ ತಂ ಪತಿಂ ।
ಯಥಾಸೌ ಶ್ವಸೃಗಾಲಾದ್ಯಾ ಯೋನೀರ್ಜಗ್ರಾಹ ಪಾರ್ಥಿವಃ ॥ ೮೬ ॥

ಸ್ಮೃತಜನ್ಮಕ್ರಮಸ್ಸೋಽಥ ತತ್ಯಾಜ ಸ್ವಕಳೇಬರಂ ।
ಜಜ್ಞೇ ಸ ಜನಕಸ್ಯೈವ ಪುತ್ರೋಽಸೌ ಸುಮಹಾತ್ಮನಃ ॥ ೮೭ ॥

ತತಸ್ಸಾ ಪಿತರಂ ತನ್ವೀ ವಿವಾಹಾರ್ಥಮಚೋದಯತ್ ।
ಸ ಚಾಪಿ ಕಾರಯಾಮಾಸ ತಸ್ಯಾ ರಾಜಾ ಸ್ವಯಂವರಂ ॥ ೮೮ ॥

---

ನವಿಲನ್ನು ತಾನೇ ಸಾಕುತ್ತಾ ಅದಕ್ಕೆ ಬೇಕಾದ ಆಹಾರಗಳನ್ನು ತಾನೇ ಕೊಡುತ್ತಿದ್ದಳು.

೮೫-೮೭. ಆಗ ಜನಕರಾಜನು ಅಶ್ವಮೇಧವೆಂಬ ಮಹಾಯಜ್ಞವನ್ನು ಮಾಡಿದನು. ಆ ಯಜ್ಞದ ಅವಭೃತ ಸ್ನಾನದಲ್ಲಿ ನವಿಲಿಗೆ ಸ್ನಾನವನ್ನು ಮಾಡಿಸಿ, ತಾನೂ ಸ್ನಾನವನ್ನು ಮಾಡಿ ಆ ರಾಜನಿಗೆ ನಾಯಿ ನರಿ ಮುಂತಾದ ಜನ್ಮಗಳು ಬಂದುದನ್ನು ಜ್ಞಾಪಿಸಿದಳು. ತನ್ನ ಜನ್ಮಾಂತರಗಳನ್ನು ತಿಳಿದ ರಾಜನು ತನ್ನ ನವಿಲಿನ ಶರೀರವನ್ನು ಬಿಟ್ಟು ಆ ಮಹಾತ್ಮನಾದ ಜನಕರಾಜನ ಮಗನಾಗಿ ಹುಟ್ಟಿದನು.

೮೮-೯೦. ಬಳಿಕ ಆ ಸ್ತ್ರೀಯು ತನ್ನ ತಂದೆಯನ್ನು ಕುರಿತು ತನಗೆ ವಿವಾಹವನ್ನು ಮಾಡಬೇಕೆಂದು ಹೇಳಿದಳು. ರಾಜನು ಅವಳಿಗೆ ಸ್ವಯಂವರವನ್ನು ಏರ್ಪಡಿ

ಸ್ವಯಂವರೇ ಕೃತೇ ಸಾ ತಂ ಸಂಪ್ರಾಪ್ತಂ ಪತಿಮಾತ್ಮನಃ ।
ವರಯಾಮಾಸ ಭೂಯೋಽಪಿ ಭರ್ತೃಭಾವೇನ ಭಾಮಿನೀ ॥ ೮೯ ॥

ಬುಭುಜೇ ಸ ತಯಾ ಸಾರ್ಧಂ ಸ ಭೋಗಾನ್ನೃಪನಂದನಃ ।
ಪಿತುರ್ಯ್ಯುಪರತೇ ರಾಜ್ಯಂ ವಿದೇಹೇಷು ಚಕಾರ ಸಃ ॥ ೯೦ ॥

ಇಯಾಜ ಯಜ್ಞಾನ್ ಸುಬಹೂನ್ ದದೌ ದಾನಾನಿ ಚಾರ್ಥಿನಾಂ ।
ಪುತ್ರಾನುತ್ಪಾದಯಾಮಾಸ ಯುಯುಧೇ ಚ ಸಹಾರಿಭಿಃ ॥ ೯೧ ॥

ರಾಜ್ಯಂ ಭುಕ್ತ್ವಾ ಯಥಾನ್ಯಾಯ್ಯಂ ಪಾಲಯಿತ್ವಾ ವಸುಂಧರಾಂ ।
ತತ್ಯಾಜ ಸಃ ಪ್ರಿಯಾನ್ಪ್ರಾಣಾನ್ ಸಂಗ್ರಾಮೇ ಧರ್ಮತೋ ನೃಪಃ ॥ ೯೨ ॥

ತತಶ್ಚಿತಾಸ್ಥಂ ತಂ ಭೂಯೋ ಭರ್ತಾರಂ ಸಾ ಶುಭೇಕ್ಷಣಾ ।
ಅನ್ವಾರುರೋಹ ವಿಧಿವದ್ ಯಥಾಪೂರ್ವಂ ಮುದಾನ್ವಿತಾ ॥ ೯೩ ॥

---

ಸಿದನು. ಸ್ವಯಂವರದಲ್ಲಿ ಅವಳು ಜನಕರಾಜ ಪುತ್ರನಾಗಿ ಬಂದ ಹಿಂದಿನ ಜನ್ಮದ ತನ್ನ ಪತಿಯನ್ನೇ ಪುನಃ ವರನನ್ನಾಗಿ ಪರಿಗ್ರಹಿಸಿದಳು. ರಾಜಪುತ್ರನು ಅವಳೊಡನೆ ಅನೇಕ ಸುಖಗಳನ್ನನುಭವಿಸಿ ತಂದೆಯಾದ ಜನಕನು ಮರಣಹೊಂದಿದಮೇಲೆ ವಿದೇಹ ರಾಜ ವನ್ನು ಕಾಪಾಡುತ್ತಿದ್ದನು.

೯೧-೯೩. ವಿದೇಹರಾಜನು ಅನೇಕ ಯಜ್ಞಗಳನ್ನು ಮಾಡಿ ಯಾಚಕರಿಗೆ ಬೇಕಾದ ದಾನಗಳನ್ನು ಕೊಟ್ಟು ಪುತ್ರರನ್ನು ಪಡೆದು ಶತ್ರುಗಳೊಡನೆ ಯುದ್ಧ ಮಾಡಿ ರಾಜ್ಯವನ್ನು ಧರ್ಮದಿಂದ ಪಾಲಿಸುತ್ತ ಅನೇಕ ಸುಖಗಳನ್ನನುಭವಿಸಿ ಕೊನೆಗೆ ಪ್ರಾಪ್ತವಾದ ಒಂದು ಯುದ್ಧದಲ್ಲಿ ಧರ್ಮದಿಂದ ಯುದ್ಧ ಮಾಡುತ್ತ ಶರೀರ ತ್ಯಾಗವನ್ನು ಮಾಡಿದನು. ಬಳಿಕ ಅವನ ಪತ್ನಿಯೂ ಅವನೊಡನೆ ಹಿಂದಿನಂತೆ ಸಂತೋಷದಿಂದ ವಿಧಿಗನುಸಾರವಾಗಿ ಸಹಗಮನವನ್ನು ಮಾಡಿದಳು. ಇದರಿಂದ ಆ ರಾಜನು ಪತ್ನಿಯೊಡನೆ ಇಂದ್ರಲೋಕವನ್ನು ಮೀರಿದ ಕಾಮಧೇನು ಲೋಕವೆಂಬ ನಾಶರಹಿತವಾದ ಸ್ಥಾನವನ್ನು ಪಡೆದನು. ಆ ಶತಧನು ರಾಜನು ಪಾಷಂಡನೊಡನೆ ಮಾತನಾಡಿದ

ತತೋಽವಾಪ ತಯಾ ಸಾರ್ಧಂ ರಾಜಪುತ್ರ್ಯಾ ಸ ಪಾರ್ಥಿವಃ ।
ಐಂದ್ರಾನತೀತ್ಯ ವೈ ಲೋಕಾನ್ ಲೋಕಾನ್ಕಾಮದುಹೋಽಕ್ಷಯಾನ್ ॥

ಸ್ವರ್ಗಾಕ್ಷಯತ್ವಮತುಲಂ ದಾಂಪತ್ಯಮತಿದುರ್ಲಭಂ ।
ಪ್ರಾಪ್ತಂ ಪುಣ್ಯಫಲಂ ಪ್ರಾಪ್ಯ ಸಂಶುದ್ಧಿಂ ತಾಂ ದ್ವಿಜೋತ್ತಮ ॥ ೯೫ ॥

ಏಷ ಪಾಷಂಡಸಂಭಾಷದೋಷಃ ಪ್ರೋಕ್ತೋ ಮಯಾ ದ್ವಿಜ ।
ತಥಾಶ್ವಮೇಧಾವಭೃಥಸ್ನಾನಮಾಹಾತ್ಮ್ಯಮೇವ [illegible] ॥ ೯೬ ॥

ತಸ್ಮಾತ್ಪಾಷಂಡಿಭಿಃ ಪಾಪೈರಾಲಾಪಸ್ಪರ್ಶನಂ ತ್ಯಜೇತ್ ।
ವಿಶೇಷತಃ ಕ್ರಿಯಾಕಾಲೇ ಯಜ್ಞಾದೌ ಚಾಪಿ ದೀಕ್ಷಿತಃ ॥ ೯೭ ॥

ಕ್ರಿಯಾಹಾನಿರ್ಗೃಹೇ ಯಸ್ಯ ಮಾಸಮೇಕಂ ಪ್ರಜಾಯತೇ ।
ತಸ್ಯಾವಲೋಕನಾತ್ಸೂರ್ಯಂ ಪ್ರಪಶ್ಯೇನ್ಮತಿಮಾನ್ನರಃ ॥ ೯೮ ॥

---

ದೋಷಕ್ಕೆ ಅನೇಕ ಜನ್ಮಗಳನ್ನು ಪಡೆದು ಕೊನೆಗೆ ಪುಣ್ಯಫಲದಿಂದ ಶುದ್ಧನಾಗಿ ದುರ್ಲಭವಾದ ದಾಂಪತ್ಯವನ್ನೂ, ನಾಶರಹಿತವಾದ ಸ್ವರ್ಗಸುಖವನ್ನೂ ಪಡೆದನು.

೯೬-೯೮. ಮೈತ್ರೇಯನೇ! ಪಾಷಂಡನೊಡನೆ ಮಾತನಾಡಿದ ದೋಷವನ್ನೂ ಅಶ್ವಮೇಧಯಜ್ಞದ ಅವಭೃಥಸ್ನಾನದ ಮಹಿಮೆಯನ್ನೂ ಹೇಳಿದೆನು. ಆದ್ದರಿಂದ ಪಾಷಂಡಿಗಳೊಡನೆ ಮಾತನಾಡುವುದನ್ನೂ ಅವರ ಸ್ಪರ್ಶವನ್ನೂ ಕರ್ಮಗಳನ್ನು ಮಾಡುವಾಗಲೂ ಯಜ್ಞದೀಕ್ಷೆಯಲ್ಲಿಯೂ ತ್ಯಾಗಮಾಡಬೇಕು. ಯಾವನ ಮನೆಯಲ್ಲಿ ಒಂದು ತಿಂಗಳವರೆಗೆ ನಿತ್ಯಕರ್ಮಗಳು ನಡೆವುದಿಲ್ಲವೋ ಅಂಥವನನ್ನು ನೋಡಿದ ದೋಷವನ್ನು ಸೂರ್ಯನ ದರ್ಶನವನ್ನು ಮಾಡಿ ಕಳೆದುಕೊಳ್ಳಬೇಕು. ಎಂದ ಮೇಲೆ ಸಂಪೂರ್ಣವಾಗಿ ವೇದತ್ಯಾಗವನ್ನು ಮಾಡಿದವರ ವಿಷಯವನ್ನು ಹೇಳಬೇಕಾದುದೇನಿರುವುದು ?

ಕಿಂ ಪುನರ್ಯೈಸ್ತು ಸಂತ್ಯಕ್ತಾ ತ್ರಯೀ ಸರ್ವಾತ್ಮನಾದ್ವಿಜ ।
ಪಾಷಂಡಭೋಜಿಭಿಃ ಪಾಪೈರ್ವೇದವಾದವಿರೋಧಿಭಿಃ ॥ ೯೯ ॥

ಸಹಾಲಾಪಸ್ತು ಸಂಸರ್ಗಸ್ಸಹಾಸ್ಯಾ ಚಾತಿಪಾಪಿನೀ ।
ಪಾಷಂಡಿಭಿರ್ದುರಾಚಾರೈಸ್ತಸ್ಮಾತ್ತಾನ್ಪರಿವರ್ಜಯೇತ್ ॥ ೧೦೦ ॥

ಪಾಷಂಡಿನೋ ವಿಕರ್ಮಸ್ಥಾನ್ ಬೈಡಾಲವ್ರತಿಕಾನ್ ಶಠಾನ್ ।
ಹೈತುಕಾನ್ ಬಕವೃತ್ತೀಂಶ್ಚ ವಾಙ್ಮಾತ್ರೇಣಾಪಿ ನಾರ್ಚಯೇತ್ ॥ ೧೦೧ ॥

---

೯೯-೧೦೦ ವೇದಧರ್ಮವನ್ನು ದ್ವೇಷಿಸುವ ಪಾಷಂಡಿಗಳೊಡನೆ ಭೋಜನ ಮಾಡುವವರು, ಮಾತನಾಡುವವರು ಅವರ ಸಂಬಂಧ ಮುಂತಾದುವನ್ನು ಮಾಡಿದವರು ಇವರೆಲ್ಲರೂ ಪಾಪಿಗಳಾಗುವರು. ಆದುದರಿಂದ ದುರಾಚಾರವುಳ್ಳ ಪಾಷಂಡಿಗಳೊಡನೆ ಈ ಸಂಬಂಧವನ್ನು ಬಿಡಬೇಕು.

೧೦೧. ಪಾಷಂಡಿಗಳು ವಿಕರ್ಮಿಗಳು, ಬಿಡಾಲವ್ರತದವರು, ಶಠರು, ಹೈತುಕರು, ಬಕವೃತ್ತಿಗಳು ಇವರನ್ನು ಮಾತುಗಳಿಂದಲಾದರೂ ಪೂಜಿಸಬಾರದು. ಸ್ವಧರ್ಮವನ್ನು ಬಿಟ್ಟವನು ಪಾಷಂಡಿ ನಿಷಿದ್ಧ ಕರ್ಮಗಳನ್ನು ಮಾಡುವನು, ವಿಕರ್ಮಿ, ದಂಡಕಮಂಡಲಾದಿ ಹೊರಗಿನ ಧರ್ಮವೇಷಗಳಿದ್ದು ಗುಟ್ಟಾಗಿ ಪಾಪಗಳನ್ನು ಮಾಡುವವನು ಬಿಡಾಲವ್ರತದವನು. (ಬೆಕ್ಕು ಸನ್ಯಾಸ ತೆಗೆದುಕೊಂಡಂತೆ) ಎದುರಿಗೆ ಒಳ್ಳೆಯ ಮಾತನ್ನೇ ಆಡುತ್ತ, ಒಳಗೇ ಕೆಡಕನ್ನು ಯೋಚಿಸುತ್ತ ತನ್ನ ತಪ್ಪನ್ನು ಪ್ರಕಾಶಪಡಿಸಿದವನು ಶಠನು. ಸತ್ಕರ್ಮಗಳನ್ನು ಮಾಡುತ್ತಿರುವವರಿಗೆ ಕೆಲವು ಕಾರಣಗಳನ್ನು ಹೇಳಿ ಸಂದೇಹವನ್ನು ಹುಟ್ಟಿಸುವವರು ಹೈತುಕರು. ಸಮಯವನ್ನು ಕಾದುಕೊಂಡಿದ್ದು ಪ್ರತೀಕಾರವನ್ನು ಮಾಡುವ ಸ್ವಪ್ರಯೋಜನದಲ್ಲಿ ಆಸಕ್ತನಾದ ಸುಳ್ಳಾದ ನಮ್ರತೆಯನ್ನು ತೋರಿಸುತ್ತಿರುವವನು ಬಕವೃತ್ತಿಯೆನಿಸುವನು.

ದೂರತಸ್ತೈಸ್ತು ಸಂಪರ್ಕಸ್ತ್ಯಾಜ್ಯಾಶ್ಚಾಪ್ಯತಿಪಾಪಿಭಿಃ ।
ಪಾಷಂಡಿಭಿರ್ದುರಾಚಾರೈಸ್ತಸ್ಮಾತ್ತಾನ್ಪರಿವರ್ಜಯೇತ್ ॥ ೧೦೨ ॥

ಏತೇ ನಗ್ನಾಸ್ತವಾಖ್ಯಾತಾ ದೃಷ್ಟಾಃ ಶ್ರಾದ್ಧೋಪಘಾತಕಾಃ ।
ಏಷಾಂ ಸಂಭಾಷಣಾತ್ಪುಂಸಾಂ ದಿನಪುಣ್ಯಂ ಪ್ರಣಶ್ಯತಿ ॥ ೧೦೩ ॥

ಏತೇ ಪಾಷಂಡಿನಃ ಪಾಪಾನಹ್ಯೇತಾನಾಲಪೇದ್ಬುಧಃ ।
ಪುಣ್ಯಂ ನಶ್ಯತಿ ಸಂಭಾಷಾದೇತೇಷಾಂ ತದ್ದಿನೋದ್ಭವಂ ॥ ೧೦೪ ॥

ಪುಂಸಾಂ ಜಟಾಧರಣ ಮೌಂಡ್ಯವತಾಂ ವೃಥೈವ
ಮೋಘಾಶಿನಾಮಖಿಲಶೌಚನಿರಾಕೃತಾನಾಂ ।

---

೧೦೨-೧೦೪. ಇವರ ಸಹವಾಸವನ್ನು ದೂರದಲ್ಲಿಯೇ ಬಿಡಬೇಕು. ದುರಾಚಾರಿಗಳಾದ ಮಹಾಪಾಪಿಗಳಾದ ಪಾಷಂಡಿಗಳನ್ನು ಸಂಪೂರ್ಣವಾಗಿ ತ್ಯಾಗಮಾಡಬೇಕು. ಮೈತ್ರೇಯನೇ! ಇವರೆಲ್ಲರೂ ನಗ್ನರೆನಿಸುವರು. ಶ್ರಾದ್ಧಕರ್ಮಗಳಲ್ಲಿ ಇವರನ್ನು ನೋಡಿದರೆ ಕರ್ಮನಾಶವಾಗುವುದು. ಇವರೊಡನೆ ಸಂಭಾಷಣೆ ಮಾಡಿದರೆ ಆ ದಿನದಲ್ಲಿ ಸಂಪಾದಿಸಿದ ಪುಣ್ಯವು ನಾಶವಾಗುವುದು. ಆದುದರಿಂದ ಬುದ್ಧಿವಂತರಾದವರು ಪಾಷಂಡಿಗಳೊಡನೆ ಮಾತನಾಡಬಾರದು.

೧೦೫. ಅಥರ್ವಶಿರೋಪನಿಷತ್ತಿನಲ್ಲಿ ಹೇಳುವಂತೆ ಪಾಶುಪತ ವ್ರತಾಂಗವಾಗಿ ಜಟಾಧಾರಣೆಯನ್ನು ಬಿಟ್ಟು ವ್ಯರ್ಥವಾಗಿ ಜಟೆಯನ್ನು ಧರಿಸುವುದು ಅಥವಾ ತಲೆಯನ್ನು ಬೋಳಿಸಿಕೊಂಡು ಸನ್ಯಾಸಿಯಾಗುವುದು ಶುಚಿತ್ವವಿಲ್ಲದೆ ದೇವತಾಪೂಜೆಯೂ

ತೋಯಪ್ರದಾನಪಿತೃಪಿಂಡಬಹಿಷ್ಕೃತಾನಾಂ
ಸಂಭಾಷಣಾದಪಿ ನರಾ ನರಕಂ ಪ್ರಯಾಂತಿ ॥ ೧೦೫ ॥

ಇತಿ ಶ್ರೀ ವಿಷ್ಣುಪುರಾಣೇ ತೃತೀಯಾಂಶೇ ಅಷ್ಟಾದಶೋಽಧ್ಯಾಯಃ

ತೃತೀಯಾಂಶಸ್ಸಮಾಪ್ತಃ

---

ಪಿತೃಗಳಿಗೆ ಪಿಂಡದಾನಾದಿಗಳೂ ಇಲ್ಲದೆ ಊಟಮಾಡುವುದು ಮುಂತಾದ ದುರಾಚಾರಗಳುಳ್ಳವರೊಡನೆ ಮಾತನಾಡುವುದರಿಂದ ಮನುಜರು ನರಕಕ್ಕೆ ಹೋಗುವರು.

ಎಂಬಲ್ಲಿಗೆ ಶ್ರೀ ವಿಷ್ಣುಪುರಾಣದ ತೃತೀಯಾಂಶದಲ್ಲಿ
ಹದಿನೆಂಟನೆಯ ಅಧ್ಯಾಯವು ಮುಗಿದುದು.

ತೃತೀಯಾಂಶವು ಮುಗಿದುದು.

---

ಶ್ರೀಃ

# ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ

## ಪ್ರಥಮೋಽಧ್ಯಾಯಃ

---

॥ ಮೈತ್ರೇಯಃ ॥

ಭಗವನ್ ಯನ್ನರೈಃ ಕಾರ್ಯಂ ಸಾಧು-ಕರ್ಮಣ್ಯವಸ್ಥಿತೈಃ ।
ತನ್ಮಹ್ಯಂ ಗುರುಣಾಖ್ಯಾತಂ ನಿತ್ಯನೈಮಿತ್ತಿಕಾತ್ಮಕಂ ॥ ೧ ॥

ವರ್ಣಧರ್ಮಾಸ್ತಥಾಖ್ಯಾತಾಃ ಧರ್ಮಾ ಯೇ ಚಾಶ್ರಮೇಷು ವೈ ।
ಶ್ರೋತುಮಿಚ್ಛಾಮ್ಯಹಂ ವಂಶಾನ್ ರಾಜ್ಞಾಂ ತ್ವಂ ಬ್ರೂಹಿ ಮೇ ಗುರೋ

॥ ಶ್ರೀ ಪರಾಶರಃ ॥

ಗದ್ಯಂ ॥ ಮೈತ್ರೇಯ ಶ್ರೂಯತಾಮಯಮನೇಕಯಜ್ವವೀರಧೀರಶೂರ
ಭೂಪಾಲಾಲಂಕೃತೋ ಬ್ರಹ್ಮಾದಿರ್ಮಾನವೋ ವಂಶಃ । ॥ ೨ ॥

---

### ಒಂದನೆಯ ಅಧ್ಯಾಯವು.

೧–೨. ಮೈತ್ರೇಯನು "ಗುರುಗಳೇ! ಸನ್ಮಾರ್ಗದಲ್ಲಿರುವ ಮನುಜರು ಮಾಡಬೇಕಾದ ನಿತ್ಯನೈಮಿತ್ತಿಕ ಕರ್ಮಗಳನ್ನು ಹೇಳಿದಿರಿ. ವರ್ಣಾಶ್ರಮ ಧರ್ಮಗಳನ್ನೂ ವಿವರಿಸಿದಿರಿ. ಜಗತ್ತಿನ ಸ್ಥಿತಿಗೆ ಕಾರಣವಾದ ಈ ಧರ್ಮಗಳನ್ನು ನಡೆಸುವ ರಾಜರ ವಂಶ ವಿಸ್ತಾರವನ್ನು ನನಗೆ ಹೇಳಬೇಕು" ಎಂದು ಪ್ರಶ್ನೆ ಮಾಡಿದನು.

೩–೫. ಪರಾಶರರು ಹೇಳುವರು:— ಮೈತ್ರೇಯನೇ ಕೇಳು. ಬ್ರಹ್ಮನೇ ಮೊದಲಾದ ಈ ಮನುವಂಶವು ಅನೇಕ ಯಾಗ ಮಾಡಿದವರೂ ಪರಾಕ್ರಮಿಗಳೂ,

ತಸ್ಯ ವಂಶಸ್ಯಾನುಪೂರ್ವೀಮಶೇಷಪಾಪಪ್ರಕ್ಷಾಳನಾಯ
ಮೈತ್ರೇಯ ತಾಂ ಶೃಣು ॥ ೪ ॥

ಸಕಲಜಗತಾಮಾದಿರನಾದಿಭೂತಸ್ಸ ಋಗ್ಯಜುಸ್ಸಾಮಾದಿಮಯೋ
ಭಗವಾನ್ ವಿಷ್ಣುಃ । ತಸ್ಯ ಬ್ರಹ್ಮಣೋ ಮೂರ್ತಂ ಸ್ವರೂಪಂ
ಹಿರಣ್ಯಗರ್ಭಾಖ್ಯೋ ಬ್ರಹ್ಮಾಂಡಭೂತೋ ಭಗವಾನ್ ಬ್ರಹ್ಮಾಪ್ಯ
ಪ್ರಾಗ್ಬಭೂವ ॥ ೫ ॥

ಬ್ರಹ್ಮಣಶ್ಚ ದಕ್ಷಿಣಾಂಗುಷ್ಠಜನ್ಮಾ ದಕ್ಷಃ ಪ್ರಜಾಪತಿಃ । ದಕ್ಷಸ್ಯಾ
ಪ್ಯದಿತಿಃ– ಅದಿತೇರ್ವಿವಸ್ವಾನ್ ವಿವಸ್ವತೋ ಮನುಃ ॥ ೬ ॥

ಮನೋರಿಕ್ಷ್ವಾಕುನೃಗಧೃಷ್ಟಶರ್ಯಾತಿನರಿಷ್ಯಂತ ನಾಭಾಗ ದಿಷ್ಟಕರೂಶ
ಪೃಷಧ್ರಾಖ್ಯಾ ನವ ಪುತ್ರಾ ಬಭೂವುಃ ॥ ೭ ॥

---

ಧೈರ್ಯಶಾಲಿಗಳೂ, ಉತ್ಸಾಹವಂತರೂ ಆದ ರಾಜರುಗಳಿಂದ ಅಲಂಕೃತವಾದುದು. ಆ ವಂಶಕ್ರಮವನ್ನು ಕೇಳಿದರೆ ಸಮಸ್ತಪಾಪಗಳೂ ಪರಿಹಾರವಾಗುವುವು. ಋಗ್ಯಜುಸ್ಸಾಮವೇದಸ್ವರೂಪನಾದ ಮಹಾಮಹಿಮನಾದ, ಅನಾದಿಯಾದ ವಿಷ್ಣುವು ಸಮಸ್ತ ಜಗತ್ತಿಗೂ ಮೂಲ ಕಾರಣನು. ಅವನ ವ್ಯಕ್ತರೂಪವೇ ಬ್ರಹ್ಮಾಂಡ ಸ್ವರೂಪನೂ, ಹಿರಣ್ಯಗರ್ಭನೆಂಬ ಹೆಸರುಳ್ಳವನೂ, ಮಹಾಮಹಿಮನೂ ಆದ ಬಹ್ಮನು "ಹಿರಣ್ಯಗರ್ಭಸ್ಸಮವರ್ತತಾಗ್ರೇ" ಎಂಬ ಶ್ರುತಿಯಲ್ಲಿ ಹೇಳುವಂತೆ ಅವನೇ ಸೃಷ್ಟಿಯ ಆದಿಯಲ್ಲಿ ಹುಟ್ಟಿದವನು.

೬–೮. ಬ್ರಹ್ಮನ ಬಲದ ಕಾಲಿನ ಹೆಬ್ಬೆರಳಿನಲ್ಲಿ ದಕ್ಷಪ್ರಜಾಪತಿಯು ಹುಟ್ಟಿದನು. ದಕ್ಷನಿಗೆ ಅದಿತಿಯು ಮಗಳಾದಳು. ಅದಿತಿಯು ಕಶ್ಯಪನ ಪತ್ನಿಯಾಗಿ ವಿವಸ್ವಂತನೆಂಬ ಸೂರ್ಯನನ್ನು ಮಗನನ್ನಾಗಿ ಪಡೆದಳು. ಆ ವಿವಸ್ವಂತನ ಮಗನೇ

ಇಷ್ಟಿಂ ಚ ಮಿತ್ರಾವರುಣಯೋರ್ಮನುಃ ಪುತ್ರಕಾಮಶ್ಚಕಾರ ॥ ೮ ॥

ತತ್ರಾಪಹ್ನುತೇ ಹೋತುರಪಚಾರಾದಿಳಾನಾಮಕನ್ಯಾ ಬಭೂವ ॥ ೯ ॥

ಸೈವ ಚ ಮಿತ್ರಾವರುಣಯೋಃ ಪ್ರಸಾದಾತ್ಸುದ್ಯುಮ್ನೋ ನಾಮ
ಮನೋಃ ಪುತ್ರೋ ಮೈತ್ರೇಯಾಸೀತ್ ॥ ೧೦ ॥

ಪುನಶ್ಚೇಶ್ವರಕೋಪಾತ್ ಸ್ತ್ರೀಸತೀ ಸೋಮಸೂನೋರ್ಬುಧಸ್ಯಾಶ್ರಮ
ಸಮೀಪೇ ಬಭ್ರಾಮ ॥ ೧೧ ॥

---

ಮನುವು. ವೈವಸ್ವತ ಮನುವೆಂದು ಇವನ ಹೆಸರು. ಇವನು ಪುತ್ರಾರ್ಥಿಯಾಗಿ ಮಿತ್ರಾವರುಣರೆಂಬ ದೇವತೆಗಳನ್ನುದ್ದೇಶಿಸಿ ಯಜ್ಞವನ್ನು ಮಾಡಿ ಇಕ್ಷ್ವಾಕು, ನೃಗ, ಧೃಷ್ಟ, ಶರ್ಯಾತಿ, ನರಿಷ್ಯಂತ, ನಾಭಾಗ, ದಿಷ್ಟ, ಕರೂಶ, ಪೃಷಧ್ರ ಎಂಬ ಒಂಭತ್ತು ಜನ ಮಕ್ಕಳನ್ನು ಪಡೆದನು.

೯–೧೦. ರಾಜನಾದ ಮನುವು ಇಕ್ಷ್ವಾಕು ಮುಂತಾದ ಪುತ್ರರನ್ನು ಪಡೆವುದಕ್ಕಿಂತ ಮುಂಚಿತವಾಗಿ ಯಜ್ಞಮಾಡುತ್ತಿದ್ದಾಗ ಮನುಪತ್ನಿಯಾದ ಶ್ರದ್ಧೆಯು ಹೋತೃವೆಂಬ ಋತ್ವಿಕ್ಕಿಗೆ ನಮಸ್ಕಾರವನ್ನು ಮಾಡಿ ತನಗೆ ಒಬ್ಬ ಮಗಳಾಗುವಂತೆ ಮಂತ್ರೋಚ್ಚಾರಣೆಯನ್ನು ಮಾಡಿ ಹೋಮಮಾಡಬೇಕೆಂದು ಕೇಳಿಕೊಂಡಳು. ಹೋತೃವು ಇವಳ ಇಷ್ಟಾನುಸಾರವಾಗಿ ಹೋಮವನ್ನು ಮಾಡಿದ ತಪ್ಪಿತದಿಂದ ಮನುವಿಗೆ ಮೊದಲು ಇಳಾ ಎಂಬ ಕನ್ಯೆಯು ಹುಟ್ಟಿದಳು. ಪುತ್ರಾರ್ಥಿಯಾಗಿ ಮಾಡಿದ ಯಜ್ಞದಲ್ಲಿ ಕನ್ಯಾಜನನಕ್ಕೆ ಕಾರಣವಿಲ್ಲವೆಂದು ಮನುವು ಮಿತ್ರಾವರುಣರನ್ನು ಪ್ರಾರ್ಥಿಸಿದ ಮೇಲೆ ಅವರ ಅನುಗ್ರಹದಿಂದ ಆ ಕನ್ಯೆಯೇ ಸುದ್ಯುಮ್ನನೆಂಬ ಮನುಪುತ್ರನಾದನು.

೧೧–೧೨. ಒಂದಾನೊಂದು ದಿನ ಇಳಾವೃತವೆಂಬ ಮನೋಹರವಾದ ವನದಲ್ಲಿ ಗೋಪ್ಯವಾಗಿ ಶಿವನೊಡನೆ ಕ್ರೀಡಿಸುತ್ತಿದ್ದ ಭವಾನಿಯು ಶಿವನನ್ನು ನೋಡುವುದಕ್ಕಾಗಿ ಬಂದ ಋಷಿಗಳನ್ನು ನೋಡಿ ಕೋಪದಿಂದ ಕೂಡಿ ನಾಚಿಕೆಯಿಂದ ಒಂದು

ಸಾನುರಾಗಶ್ಚ ತಸ್ಯಾಂ ಬುಧಃ ಪುರೂರವಸಮಾತ್ಮಜಮುತ್ಪಾದಯಾಮಾಸ

ಜಾತೇ ಚ ತಸ್ಮಿನ್ನಮಿತತೇಜೋಭಿಃ ಪರಮಋಷಿಭಿಃ ಇಷ್ಟಿಮಯಃ
ಋಙ್ಮಯೋ ಯಜುರ್ಮಯಸ್ಸಾಮಮಯೋಽಥರ್ವಣಮಯಃ
ಸರ್ವಮಯೋ ಮನೋಮಯೋ ಜ್ಞಾನಮಯೋ ವಿಜ್ಞಾನಮಯೋ
ನ್ನಮಯೋಽಮೃತಮಯೋ ಭಗವಾನ್ ಯಜ್ಞಪುರುಷಸ್ವರೂಪೀ
ಸುದ್ಯುಮ್ನಸ್ಯ ಪುಂಸ್ತ್ವಮಭಿಲಷದ್ಭಿಃ ಯಥಾವದಿಷ್ಟಸ್ತತ್ಪ್ರಸಾದಾದಿಳಾ
ಪುನರಪಿ ಸುದ್ಯುಮ್ನೋಽಭವತ್ ॥ ೧೩ ॥

ತಸ್ಯಾಪ್ಯುತ್ಕಲಗಯವಿತಾನಸ್ತ್ರಯಃ ಪುತ್ರಾ ಬಭೂವುಃ ॥ ೧೪ ॥

---

ಲತಾ ಗೃಹದಲ್ಲಿ ಮರೆಯಾದಳು. ಅವರ ರತಿಕೇಳಿಯನ್ನು ಕಂಡ ಋಷಿಗಳು ಆ ಕ್ಷಣವೇ ಹೊರಟುಹೋದರು. ಶಿವನು ಭವಾನಿಯನ್ನು ಸಮಾಧಾನಪಡಿಸಿ ಕೋಪದಿಂದ ಇಲ್ಲಿಂದ ಮುಂದೆ ಇಲ್ಲಿಗೆ ಯಾವ ಪುರುಷನು ಪ್ರವೇಶಿಸಿದರೂ ಅವನು ಸ್ತ್ರೀಯಾಗುವನು, ಎಂದು ಆ ವನಕ್ಕೆ ಶಾಪವನ್ನು ಕೊಟ್ಟನು. ಹೀಗಿರಲು ಸುದ್ಯುಮ್ನನು ಒಂದಾನೊಂದು ದಿನ ಬೇಟೆಗಾಗಿ ಕಾಡಿಗೆ ಬಂದು ಈ ವನಕ್ಕೆ ಶಾಪವು ಬಂದಿರುವುದನ್ನು ತಿಳಿಯದೆ ಅಲ್ಲಿಗೆ ಪ್ರವೇಶಿಸಿ ಸ್ತ್ರೀಯಾದನು. ಪುನಃ ಇಳಾ ಎಂಬ ಹೆಸರಿನಿಂದ ಸ್ತ್ರೀಯಾಗಿ ಬುಧನ ಆಶ್ರಮದ ಸಮೀಪದಲ್ಲಿ ತಿರುಗುತ್ತಿರಲು ಚಂದ್ರ ಪುತ್ರನಾದ ಬುಧನು ಅವಳಲ್ಲನುರಕ್ತನಾಗಿ ಪುರೂರವನೆಂಬ ಮಗನನ್ನು ಹುಟ್ಟಿಸಿದನು. ಹೀಗೆ ಸೂರ್ಯವಂಶದಲ್ಲಿ ಚಂದ್ರವಂಶವೂ ಪ್ರವೇಶಿಸಿತು.

೧೩-೧೬. ಪುರೂರವನು ಹುಟ್ಟಿದ ಮೇಲೆ ಮಹಾತೇಜಸ್ವಿಗಳಾದ ಮಹರ್ಷಿಗಳು ಸುದ್ಯುಮ್ನನಿಗೆ ಪುರುಷರೂಪವನ್ನುಂಟುಮಾಡಬೇಕೆಂದು ಅಪೇಕ್ಷಿಸಿ ಯಜ್ಞ ಸ್ವರೂಪನೂ, ವೇದಸ್ವರೂಪನೂ, ಮನೋರೂಪನೂ, ಜ್ಞಾನವಿಜ್ಞಾನ ಸ್ವರೂಪನೂ, ಅನ್ನರೂಪನೂ, ಅಮೃತಸ್ವರೂಪನೂ, ಯಜ್ಞಪುರುಷನೂ ಆದ ವಿಷ್ಣುವನ್ನುದ್ದೇಶಿಸಿ

ಸುದ್ಯುಮ್ನಸ್ತು ಸ್ತ್ರೀಪೂರ್ವತ್ವಾತ್ ರಾಜ್ಯಭಾಗಂ ನ ಲೇಭೇ ॥ ೧೫ ॥

ತತ್ಪಿತ್ರಾ ತು ವಸಿಷ್ಠವಚನಾತ್ ಪ್ರತಿಷ್ಠಾನಂ ನಾಮ ನಗರಂ
ಸುದ್ಯುಮ್ನಾಯ ದತ್ತಂ ತಚ್ಚಾಸೌ ಪುರೂರವಸೇ ಪ್ರಾದಾತ್ ॥ ೧೬ ॥

ಪೃಷಧ್ರಸ್ತು ಮನುಪುತ್ರೋ ಗುರುಗೋವಧಾತ್ ಶೂದ್ರತ್ವಮು ಗಮತ್ ॥

ಕರೂಶಾತ್ಕಾರೂಶಾಃ ಕ್ಷತ್ರಿಯಾ ಮಹಾಬಲಪರಾಕ್ರಮಾ ಬಭೂವುಃ ॥೧೮॥

ನೇದಿಷ್ಟಪುತ್ರಸ್ತು ನಾಭಾಗೋ ವೈಶ್ಯತಾಮುಗಮತ್ ।
ತಸ್ಮಾದ್ಬಲಂಧನಃ ಪುತ್ರೋಽಭೂತ್ ॥ ೧೯ ॥

ಬಲಂಧನಾದ್ವತ್ಸಪ್ರೀತಿರುದಾರಕೀರ್ತಿಃ ॥ ೨೦ ॥

ವತ್ಸಪ್ರೀತೇಃ ಪ್ರಾಂಶುರಭವತ್ ॥ ೨೧ ॥

ಪ್ರಜಾಪತಿಶ್ಚ ಪ್ರಾಂಶೋರೇಕೋಽಭವತ್ ॥ ೨೨ ॥

---

ಪುರೂರವನಿಂದ ವಿಧಿಗನುಸಾರವಾಗಿ ಯಜ್ಞವನ್ನು ಮಾಡಿಸುತ್ತಲು ಆ ದೇವನ ಅನುಗ್ರಹದಿಂದ ಇಳೆಯು ಪುನಃಸುದ್ಯುಮ್ನನಾದನು. ಆ ಸುದ್ಯುಮ್ನನಿಗೆ ಉತ್ಕಲ, ಗಯ, ವಿತಾನರೆಂಬ ಮೂವರು ಮಕ್ಕಳಾದರು. ಸುದ್ಯುಮ್ನನು ಮೊದಲು ಸ್ತ್ರೀಯಾಗಿ ಹುಟ್ಟಿದುದರಿಂದ ಅವನಿಗೆ ರಾಜ್ಯವು ಬರಲಿಲ್ಲ. ಅವನ ತಂದೆಯು ವಸಿಷ್ಠರ ಮಾತಿನಿಂದ ಪ್ರತಿಷ್ಠಾನವೆಂಬ ಪಟ್ಟಣವನ್ನು ಸುದ್ಯುಮ್ನನಿಗೆ ಕೊಟ್ಟನು. ಅವನದನ್ನು ಪುರೂರವನಿಗೆ ಕೊಟ್ಟುಬಿಟ್ಟನು.

೧೭–೩೧. ಮನುಪುತ್ರನಾದ ಪೃಷಧ್ರನನ್ನು ಗುರುವಾದ ವಸಿಷ್ಠನು ಗೋರಕ್ಷಣೆಗಾಗಿ ಗೊತ್ತುಮಾಡಿದ್ದನು. ಒಂದು ದಿನ ರಾತ್ರಿಯಲ್ಲಿ ಗೋವುಗಳನ್ನು ಕೂಡಿದ್ದ ಕೊಟ್ಟಿಗೆಯಲ್ಲಿ, ಹುಲಿಯು ಬಂದು ಸೇರಿಕೊಂಡಿತು. ಪೃಷಧ್ರನು ಅದನ್ನು ಕೊಲ್ಲಬೇಕೆಂದು ಆಯುಧವನ್ನುಪಯೋಗಿಸಿದಾಗ ಅದು ಪ್ರಮಾದದಿಂದ

ತತಶ್ಚ ಖನಿಮಿತ್ರಃ ॥ ೨೩ ॥

ತಸ್ಮಾಚ್ಚಕ್ಷುಷಃ ॥ ೨೪ ॥

ಚಕ್ಷುಷಾಚ್ಚಾತಿಬಲಪರಾಕ್ರಮೋ ವಿಂಶೋಽಭವತ್ ॥ ೨೫ ॥

ತತೋ ವಿವಿಂಶಕಃ ॥ ೨೬ ॥

ತಸ್ಮಾಚ್ಚ ಖನಿನೇತ್ರಃ ॥ ೨೭ ॥

ತತಶ್ಚಾತಿವಿಭೂತಿಃ ॥ ೨೮ ॥

ಅತಿವಿಭೂತೇರತಿಬಲಪರಾಕ್ರಮಃ ಕರಂದಮಃ ಪುತ್ರೋಽಭವತ್ ॥ ೨೯ ॥

ತಸ್ಮಾದಪ್ಯವಿಕ್ಷಿತ್ ॥ ೩೦ ॥

ಅವಿಕ್ಷಿತೋಽಪ್ಯತಿಬಲಪರಾಕ್ರಮಃ ಪುತ್ರೋ ಮರುತ್ತೋ ನಾಮಾಭವತ್ ।
ಯಸ್ಯೇಮಾವದ್ಯಾಪಿ ಶ್ಲೋಕಾಗೀಯೇತೇ ॥ ೩೧ ॥

---

ಒಂದು ಹಸುವಿಗೆ ತಗುಲಿ ಹಸುವು ಸತ್ತುಹೋಯಿತು. ಇದರಿಂದ ಗುರುವು ಕೋಪಗೊಂಡು ಶೂದ್ರನಾಗೆಂದು ಅವನಿಗೆ ಶಾಪವನ್ನು ಕೊಟ್ಟನು. ಆದರಿಂದ ಅವನು ಶೂದ್ರನಾದನು. ಕರೂಶನ ವಂಶದಲ್ಲಿ ಕಾರೂಶರೆಂಬ ಕ್ಷತ್ರಿಯರು ಹುಟ್ಟಿ ಮಹಾಬಲ ಪರಾಕ್ರಮವುಳ್ಳವರಾದರು. ನಾಭಾಗನೆಂಬುವನಿಗೆ ಬಲಂಧನನೆಂಬ ಮಗನು ಹುಟ್ಟಿದನು. ಆ ಮೇಲೆ ನಾಭಾಗನು ಕರ್ಮದಿಂದ ವೈಶ್ಯನಾದನು. ಇದರಿಂದ ಬಲಂಧನನಿಗೆ ಕ್ಷತ್ರಿಯತ್ವವು ಹೋಗಲಿಲ್ಲ. ಬಲಂಧನನಿಗೆ ಕೀರ್ತಿವಂತನಾದ ವತ್ಸಪ್ರೀತಿಯು ಮಗನು. ವತ್ಸಪ್ರೀತಿಗೆ ಪ್ರಾಂಶುವು ಮಗನು, ಪ್ರಾಂಶುವಿಗೆ ಪ್ರಜಾಪತಿಯು, ಇವನಿಂದ ಕ್ರಮವಾಗಿ ಖನಿಮಿತ್ರ, ಚಕ್ಷುಷ, ವಿಂಶ, ವಿವಿಂಶ, ಖನಿನೇತ್ರ, ಅತಿ ವಿಭೂತಿ, ಕರಂದಮ, ಅವಿಕ್ಷಿತ, ಮರುತ್ತ ಈ ಕ್ರಮದಲ್ಲಿ ವಂಶವು ಬೆಳೆಯುತ್ತ ಬಂತು, ಮರುತ್ತನು ಮಹಾಬಲ ಪರಾಕ್ರಮಗಳುಳ್ಳವನೆಂಬುದಕ್ಕೆ ಈಗಲೂ ಪ್ರಸಿದ್ಧಿಯಲ್ಲಿರುವ ಶ್ಲೋಕಾರ್ಥವೇ ಪ್ರಮಾಣವು.

ಮರುತ್ತಸ್ಯ ಯಥಾ ಯಜ್ಞಃ ತಥಾ ಕಸ್ಯಾಭವದ್ಭುವಿ ।
ಸರ್ವಂ ಹಿರಣ್ಮಯಂ ಯಸ್ಯ ಯಜ್ಞವಸ್ತ್ವತಿಶೋಭನಂ ॥ ೩೨ ॥

ಅಮಾದ್ಯದಿಂದ್ರಸ್ಸೋಮೇನ ದಕ್ಷಿಣಾಭಿರ್ದ್ವಿಜಾತಯಃ ।
ಮರುತಃ ಪರಿವೇಷ್ಟಾರಃ ಸದಸ್ಯಾಶ್ಚ ದಿವೌಕಸಃ ॥ ೩೩ ॥

ಸಮರುತ್ತಶ್ಚಕ್ರವರ್ತೀ ನರಿಷ್ಯಂತ ನಾಮಾನಂ ಪುತ್ರಮವಾಪ ॥ ೩೪ ॥

ತಸ್ಮಾಚ್ಚ ದಮಃ ॥ ೩೫ ॥

ದಮಸ್ಯ ಪುತ್ರೋ ರಾಜವರ್ಧನೋ ಜಜ್ಞೇ ॥ ೩೬ ॥

ರಾಜವರ್ಧನಾತ್ಸುವೃದ್ಧಿಃ ॥ ೩೭ ॥

ಸುವೃದ್ಧೇಃ ಕೇವಲಃ । ॥ ೩೮ ॥

ಕೇವಲಾತ್ಸುಧೃತಿರಭೂತ್ ॥ ೩೯ ॥

ತತಶ್ಚ ನರಃ ॥ ೪೦ ॥

ತಸ್ಮಾಚ್ಚಂದ್ರಃ ॥ ೪೧ ॥

---

೩೨–೩೩, ಆ ಶ್ಲೋಕಾಭಿಪ್ರಾಯವೇನೆಂದರೆ:—ಮರುತ್ತನು ಯಜ್ಞಮಾಡಿದಂತೆ ಭೂಮಿಯಲ್ಲಿ ಯಾರೂ ಯಜ್ಞಮಾಡಲಿಲ್ಲ. ಆ ಯಜ್ಞದಲ್ಲಿ ಸಕಲ ವಸ್ತುಗಳೂ ಸುವರ್ಣ ವಿಕಾರದಿಂದ ಕೂಡಿ ಮಂಗಳಕರವಾಗಿದ್ದಿತು. ಸೋಮಪಾನದಿಂದ ದೇವೇಂದ್ರನು, ಮದಿಸಿದನು ಬ್ರಾಹ್ಮಣರು ದಕ್ಷಿಣೆಯಿಂದ ಮದಿಸಿದರು, ಅವನ ಯಜ್ಞದಲ್ಲಿ ದೇವತೆಗಳೇ ಸದಸ್ಯರಾಗಿಯೂ, ಬಡಿಸತಕ್ಕವರಾಗಿಯೂ ಇದ್ದರು.

೩೪–೪೭. ಆ ಮರುತ್ತ ಚಕ್ರವರ್ತಿಗೆ ನರಿಷ್ಯಂತನೆಂಬ ಮಗನು ಹುಟ್ಟಿದನು. ಆ ಮೇಲೆ ಕ್ರಮವಾಗಿ ದಮ, ರಾಜವರ್ಧನ, ಸುವೃದ್ಧಿ, ಕೇವಲ, ಸುಧೃತಿ, ನರ,

ತತಃ ಕೇವಲೋಽಭೂತ್ ॥ ೪೨ ॥

ಕೇವಲಾದ್ಬಂಧುಮಾನ್ ॥ ೪೩ ॥

ಬಂಧುಮತೋ ವೇಗವಾನ್ ॥ ೪೪ ॥

ವೇಗವತೋ ಬುಧಃ ॥ ೪೫ ॥

ತತಶ್ಚ ತೃಣಬಿಂದುಃ ॥ ೪೬ ॥

ತಸ್ಯಾಪ್ಯೇಕಾ ಕನ್ಯಾ ಇಲಬಿಲಾನಾಮ ॥ ೪೭ ॥

ತಂ ಚಾಲಂಬುಸಾ ನಾಮ ವರಾಪ್ಸರಾಸ್ತೃಣಬಿದುಂ ಲೇಭೇ ॥ ೪೮ ॥

ತಸ್ಯಾಮಪ್ಯಸ್ಯ ವಿಶಾಲೋ ಜಜ್ಞೇ ಯಃ ಪುರೀಂ ವೈಶಾಲೀಂ

ನಾಮ ನಿರ್ಮಮೇ ॥ ೪೯ ॥

ಹೇಮಚಂದ್ರಶ್ಚ ವಿಶಾಲಸ್ಯ ಪುತ್ರೋಽಭವತ್ ॥ ೫೦ ॥

ತಸ್ಮಾಚ್ಚಂದ್ರಃ ॥ ೫೧ ॥

ತತ್ತನಯೋ ಧೂಮ್ರಾಕ್ಷಃ ॥ ೫೨ ॥

ತಸ್ಯಾಪಿ ಸೃಂಜಯೋಽಭೂತ್ ॥ ೫೩ ॥

---

ಚಂದ್ರ, ಕೇವಲ, ಬಂಧುಮಂತ, ವೇಗವಂತ, ಬುಧ, ತೃಣಬಿಂದು ಈ ಕ್ರಮದಲ್ಲಿ ವಂಶವು ಬೆಳೆಯಿತು. ತೃಣಬಿಂದುವಿಗೆ ಇಲಬಿಲಾ ಎಂಬ ಒಬ್ಬಳೇ ಮಗಳಿದ್ದಳು.

೪೮–೬೧. ಅಲಂಬುಸಾ ಎಂಬ ಶ್ರೇಷ್ಠಳಾದ ಅಪ್ಸರಸ್ತ್ರೀಯು ತೃಣಬಿಂದುವನ್ನು ಸೇರಿದ ಮೇಲೆ ಅವಳಲ್ಲಿ ತೃಣಬಿಂದುವಿಗೆ ವಿಶಾಲನೆಂಬ ಮಗನು ಹುಟ್ಟಿದನು, ಅವನು ತನ್ನ ಹೆಸರಿನಿಂದಲೇ ವೈಶಾಲೀ ಎಂಬ ಪಟ್ಟಣವನ್ನು ನಿರ್ಮಿಸಿದನು. ಹೇಮ ಚಂದ್ರನು ವಿಶಾಲನ ಮಗನು. ಬಳಿಕ ಕ್ರಮವಾಗಿ ಚಂದ್ರ ಧೂಮ್ರಾಕ್ಷ, ಸೃಂಜಯ

ಸೃಂಜಯಾತ್ಸಹದೇವಃ ॥ ೫೪ ॥

ತತಶ್ಚ ಕೃಶಾಶ್ವೋನಾಮ ಪುತ್ರೋಽಭೂತ್ ॥ ೫೫ ॥

ಸೋಮದತ್ತಃ ಕೃಶಾಶ್ವಾಜ್ಜಜ್ಞೇ ಯೋ ದಶಾಶ್ವಮೇಧಾನಾ
ಜಹಾರ ॥ ೫೬ ॥

ತತ್ಪುತ್ರೋ ಜನಮೇಜಯಃ ॥ ೫೭ ॥

ಜನಮೇಜಯಾತ್ಸುಮತಿಃ ॥ ೫೮ ॥

ಏತೇ ವೈಶಾಲಿಕಾ ಭೂಭೃತಃ ॥ ೫೯ ॥

ಶ್ಲೋಕೋಪ್ಯತ್ರ ಗೀಯತೇ ॥ ೬೦ ॥

ತೃಣಬಿಂದೋಃ ಪ್ರಸಾದೇನ ಸರ್ವೇ ವೈಶಾಲಿಕಾ ನೃಪಾಃ ।
ದೀರ್ಘಾಯುಷೋ ಮಹಾತ್ಮಾನೋ ವೀರ್ಯವಂತೋಽತಿಧಾರ್ಮಿಕಾಃ

ಶರ್ಯಾತೇಃ ಕನ್ಯಾ ಸುಕನ್ಯಾ ನಾಮಾಭವತ್ ।
ಯಾಮುಪಯೇಮೇ ಚ್ಯವನಃ ॥ ೬೧ ॥

---

ಸಹದೇವ, ಕೃಶಾಶ್ವ, ಸೋಮದತ್ತ ಪರ್ಯಂತವಾಗಿ ವಂಶವು ಬೆಳೆಯಿತು. ಸೋಮದತ್ತನು ಹತ್ತು ಅಶ್ವಮೇಧ ಯಾಗಗಳನ್ನು ಮಾಡಿದನು. ಇವನಿಗೆ ಜನಮೇಜಯನು ಮಗನಾದನು. ಜನಮೇಜಯನಿಗೆ ಸುಮತಿಯು ಮಗನು ಇವರೆಲ್ಲ ವೈಶಾಲಿಕ ವಂಶದ ರಾಜರು, ಇವರ ವಿಷಯದಲ್ಲಿ ಜನರು ಪ್ರಸಿದ್ಧವಾದ ಶ್ಲೋಕವನ್ನು ಗಾನಮಾಡುತ್ತಿರುವರು. ಆ ಶ್ಲೋಕಾಭಿಪ್ರಾಯವೇನೆಂದರೆ: —ತೃಣ ಬಿಂದುವಿನ ಅನುಗ್ರಹದಿಂದ ವೈಶಾಲಿಕ ಜನರೆಲ್ಲರೂ ದೀರ್ಘಾಯುಸ್ಸುಳ್ಳವರಾಗಿಯೂ ಧಾರ್ಮಿಕರಾಗಿಯೂ, ಪರಾಕ್ರಮಿಗಳಾಗಿಯೂ, ಮಹಾಮಹಿಮೆಯುಳ್ಳವರಾಗಿದ್ದರು. ಎಂಬುದೇ ಶ್ಲೋಕಾಭಿಪ್ರಾಯವು.

೬೧–೬೫. ಶರ್ಯಾತಿರಾಜನಿಗೆ ಸುಕನ್ಯೆಯೆಂಬ ಮಗಳಿದ್ದಳು. ಅವಳನ್ನು ಚ್ಯವನನು ಮದುವೆಯಾದನು. ಆ ನರ್ತನೆಂಬ ಮಹಾಧರ್ಮಿಷ್ಠನು ಶರ್ಯಾತಿಯು

ಆನರ್ತನಾಮಾ ಪರಮ ಧಾರ್ಮಿಕಶ್ಶರ್ಯಾತಿಪುತ್ರೋऽಭವತ್ ॥ ೬೩ ॥

ಆನರ್ತಸ್ಯಾಪಿ ರೇವತ ನಾಮಾ ಪುತ್ರೋ ಜಜ್ಞೇ। ಯೋऽಸಾವಾನರ್ತ
ವಿಷಯಂ ಬುಭುಜೇ ಪುರೀಂ ಚ ಕುಶಸ್ಥಲೀಮಧ್ಯುವಾಸ ॥ ೬೪ ॥

ರೇವತಸ್ಯಾಪಿ ರೈವತಃ ಪುತ್ರಃ। ಕಕುದ್ಮೀ ನಾಮ ಧರ್ಮಾತ್ಮಾ ಭ್ರಾತೃ
ಶತಸ್ಯ ಜ್ಯೇಷ್ಠೋऽಭವತ್ ॥ ೬೫ ॥

ತಸ್ಯ ಚ ರೇವತೀ ನಾಮ ಕನ್ಯಾಭವತ್ ॥ ೬೬ ॥

ಸ ತಾಮಾದಾಯ ಕಸ್ಯೇಯಮರ್ಹತೀತಿ ಭಗವಂತಮಬ್ಜಯೋನಿಂ
ಪ್ರಷ್ಟುಂ ಬ್ರಹ್ಮಲೋಕಂ ಜಗಾಮ ॥ ೬೭ ॥

ತಾವಚ್ಚ ಬ್ರಹ್ಮಣೋಂತರೇ ಹಾಹಾ ಹೂಹೂ ಸಂಜ್ಞಾಭ್ಯಾಂ ಗಂಧರ್ವಾ
ಭ್ಯಾಮತಿ ತಾನಂ ನಾಮ ದಿವ್ಯಂ ಗಾಂಧರ್ವಮಗೀಯತ ॥ ೬೮ ॥

---

ಮಗನಾಗಿದ್ದನು. ಆ ನರ್ತನಿಗೆ ರೇವತನೆಂಬ ಮಗನು ಹುಟ್ಟಿದನು. ಅವನು ಆ ನರ್ತದೇಶದ ರಾಜನಾಗಿ ಕುಶಸ್ಥಲಿಯೆಂಬ ಪಟ್ಟಣದಲ್ಲಿ ವಾಸವಾಗಿದ್ದನು. ರೇವತನಿಗೆ ರೈವತನೆಂಬ ಮಗನು ಹುಟ್ಟಿದನು. ಇವನು ಧರ್ಮಾತ್ಮನಾಗಿ ಕಕುದ್ಮಿ ಎಂಬ ಹೆಸರನ್ನು ಪಡೆದಿದ್ದನು. ಇವನಿಗೆ ನೂರು ಜನ ತಮ್ಮಂದಿರು. ಇವನೇ ಹಿರಿಯನು.

೬೬–೬೯. ರೈವತನಿಗೆ ರೇವತಿಯೆಂಬ ಮಗಳಿದ್ದಳು. ಅವನು ಅವಳನ್ನು ಕರೆದುಕೊಂಡು ಯಾವ ವರನಿಗೆ ಇವಳನ್ನು ಕೊಡಬೇಕೆಂದು ಬ್ರಹ್ಮನನ್ನು ಕೇಳುವುದಕ್ಕಾಗಿ ಬ್ರಹ್ಮಲೋಕಕ್ಕೆ ಹೋದನು. ಆ ಸಮಯದಲ್ಲಿ ಹಾಹಾ ಹೂಹೂ ಎಂಬ ಗಂಧರ್ವರು ಬ್ರಹ್ಮನ ಸಭೆಯಲ್ಲಿ ಅತಿತಾನವೆಂಬ ದಿವ್ಯ ಗಾನವನ್ನು ಮಾಡುತ್ತಿದ್ದರು. ಚಿತ್ರಾ, ದಕ್ಷಿಣಾ, ಧಾತ್ರಿ ಎಂಬ ಮೂರು ಮಾರ್ಗಗಳಲ್ಲಿ ಪುನಃ ಪುನಃ

ತಚ್ಚ ತ್ರಿಮಾರ್ಗಪರಿವೃತ್ತೈರನೇಕಯುಗ ಪರಿವೃತ್ತಿತಿಷ್ಠನ್ನಪಿ ರೈವತಃ
ಶೃಣ್ವನ್ ಮುಹೂರ್ತಮಿವ ಮೇನೆ ॥ ೧೯ ॥

ಗೀತಾವಸಾನೇ ಭಗವಂತಮಬ್ಜಯೋನಿಂ ಪ್ರಣಮ್ಯ ರೈವತಃ
ಕನ್ಯಾಯೋಗ್ಯಂ ವರಮಪೃಚ್ಛತ್ ॥ ೨೦ ॥

ತಂ ಚಾಹ ಭಗವಾನ್ ಕಥಯ ಯೋಽಭಿಮತಸ್ತೇ ವರ ಇತಿ ॥ ೨೧ ॥

ಪುನಶ್ಚ ಪ್ರಣಮ್ಯ ಭಗವತೇ ತಸ್ಮೈ ಯಥಾಭಿಮತಾನಾತ್ಮನಸ್ಸ ವರಾನ್
ಕಥಯಾಮಾಸ ಕ ಏಷಾ ಭಗವತೋಽಭಿಮತ ಇತಿ ಯಸ್ಮೈ ಕನ್ಯಾಂ
ಪ್ರಯಚ್ಛಾಮೀತಿ ॥ ೨೨ ॥

ತತಃ ಕಿಂಚಿದವನತಶಿರಾಸ್ಸಸ್ಮಿತಂ ಭಗವಾನಬ್ಜಯೋನಿಃ ಸ್ಪ್ರಾಹ ॥ ೨೩ ॥

---

ಗಾನಮಾಡುತ್ತಿರಲು ಗಾನವು ಮುಗಿಯುವ ಹೊತ್ತಿಗೆ ಭೂಲೋಕದಲ್ಲಿ ಅನೇಕ ಯುಗಗಳು ಕಳೆದುಹೋದುವು. ಗಾನವನ್ನು ಕೇಳುತ್ತ ಅಲ್ಲಿಯೇ ನಿಂತಿದ್ದ ರೈವತನಿಗೆ ಒಂದು ಮುಹೂರ್ತದಂತೆ ಕಾಲವು ಕಳೆದುಹೋಯಿತು.

೨೦-೨೩. ಗಾನವು ಮುಗಿದ ಮೇಲೆ ರೈವತನು ಮಹಾಮಹಿಮನಾದ ಬ್ರಹ್ಮನಿಗೆ ನಮಸ್ಕಾರ ಮಾಡಿ ತನ್ನ ಕನ್ಯೆಗೆ ಯೋಗ್ಯನಾದ ವರನಾರೆಂದು ಪ್ರಶ್ನೆ ಮಾಡಿದನು. ಆಗ ಬ್ರಹ್ಮನು ನಿನಗಿಷ್ಟನಾದ ವರನಾರೆಂಬುದನ್ನು ಹೇಳು ಎಂದನು. [illegible] ಮಾತನ್ನು ಕೇಳಿ ರೈವತನು ಪುನಃ ಬ್ರಹ್ಮನಿಗೆ ನಮಸ್ಕರಿಸಿ ತನಗೆ ತಿಳಿದದ್ದ ಯೋಗ್ಯರಾದ ಕೆಲವರನ್ನು ಹೇಳಿ ಇವರಲ್ಲಿ ಸ್ವಾಮಿಗೆ ಇಷ್ಟನಾದ ವರನಾವನು ? ಯಾವನಿಗೆ ನಾನು ಕನ್ಯಾದಾನವನ್ನು ಮಾಡಲಿ? ಎಂದು ಪ್ರಶ್ನೆಮಾಡಿದನು. ಈ ಮಾತನ್ನು ಕೇಳಿ ಬ್ರಹ್ಮನು ತಲೆಯನ್ನು ಸ್ವಲ್ಪ ತಗ್ಗಿಸಿ ನಗುತ್ತ ಹೇಳಿದನು:—

ಯ ಏತೇ ಭಗವತೋಽಭಿಮತಾನ್ಯೇತೇಷಾಂ ಸಾಂಪ್ರತಮಪತ್ಯಾಪತ್ಯ
ಸಂತತಿರಪ್ಯವನಿತಲೇಽಸ್ತಿ ॥ ೭೪ ॥

ಬಹೂನಿ ತವಾತ್ರೈವ ತದ್ಗಾಂಧರ್ವಂ ಶೃಣ್ವತಶ್ಚತುರ್ಯುಗಾಣ್ಯತೀತಾನಿ ॥ ೭೫ ॥

ಸಾಂಪ್ರತಂ ಮಹೀತಲೇಽಷ್ಟಾವಿಂಶತಿತಮಸ್ಯ ಮನೋಶ್ಚತುರ್ಯುಗಮ
ತೀತಪ್ರಾಯಂ ವರ್ತತೇ ॥ ೭೬॥

ಆಸನ್ನೋ ಹಿ ಕಲಿಃ ॥ ೭೭॥

ಅನ್ಯಸ್ಮೈ ಕನ್ಯಾರತ್ನಮಿದಂ ಭವತೈ ಕಾಕಿನಾ ದೇಯಂ ॥ ೭೮ ॥

ಭವತೋಽಪಿ ಪುತ್ರಮಂತ್ರಿ ಭೃತ್ಯ ಕಳತ್ರ ಬಂಧು ಬಲ
ಕೋಶಾದಯಃ ಸಮಸ್ತಾಃ ಕಾಲೇ ನೈತೇ ನಾತ್ಯಂತಮತೀತಾಃ ॥ ೭೯ ॥

---

೭೪–೭೯. "ಎಲೈ ರೈವತನೇ ನೀನು ಹೇಳಿದ ರಾಜರ ಪುತ್ರಪೌತ್ರರ ಸಂತತಿಯೂ ಈಗ ಭೂಮಿಯಲ್ಲಿಲ್ಲ. ನೀನು ಇಲ್ಲಿಯೇ ಗಂಧರ್ವರ ಗಾನವನ್ನು ಕೇಳುತ್ತ ಅನೇಕ ಚತುರ್ಯುಗಗಳನ್ನು ಕಳೆದೆ. ಈಗ ಭೂಮಿಯಲ್ಲಿ ವೈವಸ್ವತ ಮನುವಿನ ಮನ್ವಂತರದಲ್ಲಿ ಇಪ್ಪತ್ತೆಂಟನೆಯ ಚತುರ್ಯುಗವು ಕಳೆಯುತ್ತ ಬಂದಿದೆ. ಕಲಿಯುಗವು ಸಮೀಪವಾಯಿತು. ನೀನೊಬ್ಬನೇ ಈ ಕನ್ಯಾರತ್ನವನ್ನು ಮತ್ತೊಬ್ಬ ವರನಿಗೆ ಕೊಡಬೇಕಾಗಿರುತ್ತದೆ. ನಿನ್ನ ಪುತ್ರ, ಮಿತ್ರ, ಕಳತ್ರ, ಮಂತ್ರಿ, ಭೃತ್ಯ, ಬಂಧುಗಳಾರೂ ಇಲ್ಲ. ಸೇನೆ, ಬೊಕ್ಕಸ, ಮುಂತಾದುವುಗಳೆಲ್ಲ ಕಾಲಾಧೀನವಾಗಿ ಕಳೆದುಹೋದುವು" ಎಂದು ಹೇಳಿದನು.

ತತಃ ಪುನರಪ್ಯುತ್ಪನ್ನಸಾಧ್ವಸಃ ಸ ರಾಜಾ ಭಗವಂತಂ ಪ್ರಣಮ್ಯ ಪಪ್ರಚ್ಛ ।
ಭಗವನ್ನೇವಮವಸ್ಥಿತೇ ಮಯೇಯಂ ಕಸ್ಮೈ ದೇಯೇತಿ ॥ ೮೧ ॥

ತತಸ್ಸ ಭಗವಾನ್ ಕಿಂಚಿದವನಮ್ರಕಂಧರಃ ಕೃತಾಂಜಲಿರ್ಭೂ
ತ್ವಾ ಸರ್ವಲೋಕಗುರುರಂಭೋಜಯೋನಿರಾಹ ॥ ೮೨ ॥

॥ ಬ್ರಹ್ಮೋವಾಚ ॥

ನ ಹ್ಯಾದಿಮಧ್ಯಾಂತಮಜಸ್ಯ ಯಸ್ಯ
ವಿದ್ಮೋ ವಯಂ ಸರ್ವಮಯಸ್ಯ ಧಾತುಃ
ನ [illegible] ಸ್ವರೂಪಂ ನ ಪರಂ ಪ್ರಭಾವಂ
ನ ಚೈವ ಸಾರಂ ಪರಮೇಶ್ವರಸ್ಯ ॥ ೮೩ ॥

ಕಲಾಮುಹೂರ್ತಾದಿಮಯಶ್ಚ ಕಾಲೋ
ನ ಯದ್ವಿಭೂತೇಃ ಪರಿಣಾಮಹೇತುಃ ।

---

೮೦–೮೨ ಆಮೇಲೆ ಆ ರಾಜನು ಭಯದಿಂದ ಮಹಾಮಹಿಮನಾದ ಬ್ರಹ್ಮನಿಗೆ ನಮಸ್ಕರಿಸಿ "ಮಹಾಮಹಿಮನೇ ಹೀಗಾದ ಮೇಲೆ ಈ ಕನ್ಯೆಯನ್ನು ನಾನು ಯಾರಿಗೆ ಕೊಡಬೇಕು." ಎಂದು ಪ್ರಶ್ನೆ ಮಾಡಿದನು. ಬಳಿಕ ಸಮಸ್ತ ಲೋಕಕ್ಕೂ ಸ್ವಾಮಿಯಾದ ಕಮಲದಲ್ಲಿ ಹುಟ್ಟಿದ ಬ್ರಹ್ಮನು ತಲೆಯನ್ನು ತಗ್ಗಿಸಿಕೊಂಡು ಕೈ ಜೋಡಿಸಿಕೊಂಡು ಹೇಳಲು ಪ್ರಾರಂಭಿಸಿದನು.

೮೩. ಸರ್ವಸ್ವರೂಪನೂ, ಸಮಸ್ತವನ್ನೂ ಸೃಷ್ಟಿಸಿದವನೂ ಉತ್ಪತ್ತಿ ರಹಿತನೂ ಆದ ಪರಮೇಶ್ವರನ ಆದಿ ಮಧ್ಯಾಂತಗಳನ್ನೂ, ಅವನ ಸ್ವರೂಪವನ್ನೂ ಅವನ ಮಹಾ ಮಹಿಮೆಯನ್ನೂ ಬಲವನ್ನೂ ನಾವು ತಿಳಿಯೆವು.

೮೪. ಅನಾದಿಯಾದವನೂ, ಹುಟ್ಟು ಸಾವುಗಳಿಲ್ಲದವನೂ, ನಾಮರೂಪಗಳಿಲ್ಲದವನೂ, ಪರಿಣಾಮ ಕಾರಣವಾದ ವಿಭೂತಿಗಳುಳ್ಳವನೂ ಕಲಾ ಮುಹೂರ್ತ

ಅಜನ್ಮನಾಶಸ್ಯ ಸಮಸ್ತಮೂರ್ತೇಃ
ಅನಾಮರೂಪಸ್ಯ ಸನಾತನಸ್ಯ ॥ ೮೪ ॥

ಯಸ್ಯ ಪ್ರಸಾದಾದಹಮಚ್ಯುತಸ್ಯ
ಭೂತಃ ಪ್ರಜಾಸೃಷ್ಟಿಕರೋಽಂತಕಾರೀ ।
ಕ್ರೋಧಾಚ್ಚ ರುದ್ರಃ ಸ್ಥಿತಿಹೇತುಭೂತೋ
ಯಸ್ಮಾಚ್ಚ ಮಧ್ಯೇ ಪುರುಷಃ ಪರಸ್ಮಾತ್ ॥ ೮೫ ॥

ಮದ್ರೂಪಮಾಸ್ಥಾಯ ಸೃಜತ್ಯಜೋ ಯಃ
ಸ್ಥಿತೌ ಚ ಯೋಽಸೌ ಪುರುಷಸ್ವರೂಪೀ
ರುದ್ರಸ್ವರೂಪೇಣ ಚ ಯೋಽತ್ತಿ ವಿಶ್ವಂ
ಧತ್ತೇ ತಥಾನಂತವಪುಸ್ಸಮಸ್ತಂ ॥ ೮೬ ॥

---

ಮುಂತಾದ ಕಾಲಸ್ವರೂಪಕ್ಕೆ ಅಧೀನನಲ್ಲದವನೂ, ಆದ ವಿಷ್ಣುವಿನ ಮಹಿಮೆಯನ್ನು ನಾವರಿಯೆವು.

೮೫. ನಾಶರಹಿತನಾದ ವಿಷ್ಣುವಿನ ಅನುಗ್ರಹದಿಂದ ನಾನು ಪ್ರಜೆಗಳನ್ನು ಸೃಷ್ಟಿಮಾಡುವ ಬ್ರಹ್ಮನಾಗಿ ಹುಟ್ಟಿದೆನು. ಆ ದೇವನ ತಮೋದೃಷ್ಟಿ ರೂಪವಾದ ಕ್ರೋಧದಿಂದ ರುದ್ರನು ನಾಶಕಾರ್ಯವನ್ನು ಮಾಡುವವನಾದನು. ಲೋಕ ರಕ್ಷಣ ರೂಪವಾದ ಸ್ಥಿತಿಕಾರ್ಯವನ್ನು ಮಾಡುವ ಪುರುಷನು ವಿಷ್ಣುವಾದನು.

೮೬. ಅನಂತನೆಂಬ ಆದಿಶೇಷ ಸ್ವರೂಪನಾದ ಆ ದೇವನೇ ನನ್ನ ರೂಪದಿಂದ ಸೃಷ್ಟಿಕಾರ್ಯವನ್ನು ಮಾಡಿ ಬ್ರಹ್ಮನಾಗಿಯೂ, ಸ್ಥಿತಿಕಾರ್ಯವನ್ನು ಮಾಡಿ ವಿಷ್ಣುವಾಗಿಯೂ, ನಾಶಕಾರ್ಯವನ್ನು ಮಾಡಿ ರುದ್ರನಾಗಿಯೂ ಆಗಿರುವನು.

ಶಕ್ರಾದಿರೂಪೀ ಪರಿಪಾತಿ ವಿಶ್ವಂ
ಅರ್ಕೇಂದುರೂಪಶ್ಚ ತಮೋ ಹಿನಸ್ತಿ ।
ಪಾಕಾಯ ಯೋಗ್ನಿತ್ವಮುಪೈತಿ ಲೋಕಾನ್
ಬಿಭರ್ತಿ ಪೃಥ್ವೀ ವಪುರವ್ಯಯಾತ್ಮಾ ॥ ೮೭ ॥

ಚೇಷ್ಟಾಂ ಕರೋತಿ ಶ್ವಸನಸ್ವರೂಪೀ
ಲೋಕಸ್ಯ ತೃಪ್ತಿಂ ಚ ಜಲಾನ್ನರೂಪೀ ।
ದದಾತಿ ವಿಶ್ವಸ್ಥಿತಿಸಂಸ್ಥಿತಸ್ತು
ಸರ್ವಾವಕಾಶಂ ಚ ನಭಸ್ವರೂಪೀ ॥ ೮೮ ॥

ಯಸ್ಸೃಜ್ಯತೇ ಸರ್ಗಕೃದಾತ್ಮನೈವ
ಯಃ ಪಾಲ್ಯತೇ ಪಾಲಯಿತಾ ಚ ದೇವಃ ।
ವಿಶ್ವಾತ್ಮನಾ ಸಂಹ್ರಿಯತೇಂತಕಾರೀ
ಪೃಥಕ್ತ್ರಯಸ್ಯಾಸ್ಯ ಚ ಯೋವ್ಯಯಾತ್ಮಾ ॥ ೮೯ ॥

---

೮೭-೮೮. ನಾಶರಹಿತನಾದ ಪರಮಾತ್ಮನು ದೇವೇಂದ್ರನೇ ಮೊದಲಾದ ದೇವತೆಗಳ ರೂಪದಿಂದ ಪ್ರಪಂಚವನ್ನು ಕಾಪಾಡುವನು. ಸೂರ್ಯ ಚಂದ್ರರೂಪದಿಂದ ಕತ್ತಲೆಯನ್ನು ನಾಶಮಾಡುವನು. ಅಡಿಗೆ ಮಾಡುವುದಕ್ಕಾಗಿ ಅಗ್ನಿರೂಪವಾಗಿರುವನು. ಭೂಮಿಯ ರೂಪದಿಂದ ಪ್ರಾಣಿಗಳನ್ನು ಧರಿಸಿರುವನು. ಗಾಳಿಯ ರೂಪದಿಂದ ಸಂಚರಿಸುತ್ತಿರುವನು. ಅನ್ನ ನೀರಿನ ರೂಪದಿಂದ ಜೀವರುಗಳಿಗೆ ತೃಪ್ತಿಯನ್ನುಂಟುಮಾಡುವನು. ಆಕಾಶ ರೂಪನಾಗಿ ಪ್ರಪಂಚಕ್ಕೆ ಅವಕಾಶವನ್ನು ಕಲ್ಪಿಸಿರುವನು.

೮೯-೯೦. ಪರಮಾತ್ಮನು ತಾನೇ ಪ್ರಪಂಚ ಸ್ವರೂಪನಾಗಿ ಸೃಷ್ಟಿಕಾರ್ಯವನ್ನು ಮಾಡುವನು. ತಾನೇ ರಕ್ಷಣಾ ವಿಷಯರಾದ ಜೀವರ ಸ್ವರೂಪನಾಗಿ ರಕ್ಷಣೆಯನ್ನು ಮಾಡುವನು. ತಾನೇ ನಾಶವಾಗತಕ್ಕ ಪ್ರಪಂಚ ರೂಪದಿಂದ ಸಂಹಾರ

ಯಸ್ಮಿನ್ ಜಗದ್ಯೋ ಜಗದೇತದಾದ್ಯೋ
ಯಶ್ಚಾಶ್ರಿತೋಽಸ್ಮಿನ್ ಜಗತಿ ಸ್ವಯಂ ಭೋಃ ।
ಸ ಸರ್ವಭೂತಪ್ರಭವೋ ಧರಿತ್ರ್ಯಾಂ
ಸ್ವಾಂಶೇನ ವಿಷ್ಣುರ್ನೃಪತೇಽವತೀರ್ಣಃ ॥ ೯೦ ॥

ಕುಶಸ್ಥಲೀ ಯಾದವಭೂಪರಮ್ಯಾ
ಪುರೀ ಪುರಾಭೂದಮರಾವತೀವ
ಸಾ ದ್ವಾರಕಾ ಸಂಪ್ರತಿ ತತ್ರ ಚಾಸ್ತೇ
ಸ ಕೇಶವಾಂಶೋ ಬಲದೇವ ನಾಮಾ ॥ ೯೧ ॥

ತಸ್ಮೈ ಕ್ವ್ಯಮೇನಾಂ ತನಯಾಂ ನರೇಂದ್ರ
ಪ್ರಯಚ್ಛ ಮಾಯಾಮನುಜಾಯ ಜಾಯಾಂ ।

---

ಕಾರ್ಯವನ್ನು ಮಾಡುವನು. ಜ್ಞಾನ ಸ್ವರೂಪನಾದ ಆತ್ಮನು ಈ ಮೂರು ಕಾರ್ಯಗಳನ್ನೂ ಮಾಡುವವನಿಗಿಂತ ಬೇರೆಯಾದವನು. ಎಲೈ ರಾಜನೇ! ಯಾವನು ಈ ಜಗತ್ತಿನ ಸ್ವರೂಪನಾಗಿರುವನೋ, ಯಾವನಲ್ಲಿ ಈ ಜಗತ್ತಿರುವುದೋ, ಯಾವನು ಈ ಜಗತ್ತಿಗೆ ಆಶ್ರಯನಾಗಿ ಸ್ವಯಂ ವ್ಯಕ್ತನಾಗಿ ಜಗತ್ತನ್ನೇ ಆಶ್ರಯಿಸಿರುವನೋ, ಸಮಸ್ತ ಭೂತಗಳಿಗೂ ಉತ್ಪತ್ತಿಸ್ಥಾನನಾದ ಆ ವಿಷ್ಣುವು ತನ್ನಂಶದಿಂದ ಭೂಮಿಯಲ್ಲಿ ಅವತಾರ ಮಾಡಿರುವನು.

೯೧-೯೨. ಎಲೈ ರಾಜನೇ! ಹಿಂದೆ ಯದುರಾಜನ ರಾಜಧಾನಿಯಾಗಿದ್ದ ಕುಶಸ್ಥಲೀ ಎಂಬ ಸುಂದರವಾದ ಪಟ್ಟಣವು ಇಂದ್ರನ ಅಮರಾವತಿಯು ಪಟ್ಟಣದಂತೆ ಮನೋಹರವಾಗಿದ್ದಿತು. ಅದು ಈಗ ದ್ವಾರಕಾ ಪಟ್ಟಣವಾಗಿರುವುದು. ಅಲ್ಲಿ ವಿಷ್ಣುವಿನ ಅಂಶವಾದ ಬಲದೇವನೆಂಬುವನಿರುವನು. ಮಾಯೆಯಿಂದ ಮನುಷ್ಯರೂಪ

ಶ್ಲಾಘ್ಯೋ ವರೋಽಸೌ ತನಯಾ ತವೇಯಂ
ಸ್ತ್ರೀರತ್ನಭೂತಾ ಸದೃಶೋಹಿ ಯೋಗಃ ॥ ೯೨ ॥

॥ ಶ್ರೀ ಪರಾಶರಃ ॥

ಇತೀರಿತೋಽಸೌ ಕಮಲೋದ್ಭವೇನ
ಭುವಂ ಸಮಾಸಾದ್ಯ ಪತಿಃ ಪ್ರಜಾನಾಂ ।
ದದರ್ಶ ಹ್ರಸ್ವಾನ್ಪುರುಷಾನಶೇಷಾ
ನಲ್ಪೌಜಸಃ ಸ್ವಲ್ಪವಿವೇಕವೀರ್ಯಾನ್ ॥ ೯೩ ॥

ಕುಶಸ್ಥಲೀಂ ತಾಂ ಚ ಪುರೀಮುಪೇತ್ಯ
ದೃಷ್ಟ್ವಾನ್ಯರೂಪಾಂ ಪ್ರದದೌ ಸ ಕನ್ಯಾಂ

---

ದಲ್ಲಿರುವ ಅವನಿಗೆ ನಿನ್ನ ಈ ಮಗಳನ್ನು ವಿವಾಹ ಮಾಡಿಕೊಡು. ಸ್ತ್ರೀಯರಲ್ಲಿ ರತ್ನ ಸ್ವರೂಪಳಾದ ನಿನ್ನ ಮಗಳಿಗೆ ಅವನೇ ತಕ್ಕ ವರನು. ಈ ಸಂಬಂಧವು ಸಮಾನವಾದುದಾಗಿರುವುದು ಎಂದನು.

೯೩-೯೪. ಬ್ರಹ್ಮನು ಹೇಳಿದ ಮಾತನ್ನು ಕೇಳಿ ರೈವತ ರಾಜನು ಭೂಲೋಕಕ್ಕೆ ಬಂದು ಕುಳ್ಳರೂ, ಸ್ವಲ್ಪ ಪರಾಕ್ರಮವುಳ್ಳವರೂ, ಅಲ್ಪ ತೇಜಸ್ಸಿನವರೂ, ಅಲ್ಪವಾದ ವಿವೇಕವುಳ್ಳವರೂ ಆದ ಮನುಷ್ಯರನ್ನು ನೋಡಿದನು. ಬಳಿಕ ಕುಶಸ್ಥಲಿ ಯೆಂಬ ಪಟ್ಟಣಕ್ಕೆ ಬಂದು ಕೃಷ್ಣನು ಸಮುದ್ರದಿಂದ ಪಡೆದ ಹನ್ನೆರಡು ಯೋಜನ ವಿಸ್ತಾರವಾದ ಭೂಮಿಯಿಂದ ಕೂಡಿ, ಅನೇಕ ಉಪ್ಪರಿಗೆಗಳಿಂದ ಕೂಡಿದ ಒಂಭತ್ತು ಲಕ್ಷ ಮನೆಗಳೂ, ಚಿನ್ನ, ಸ್ಫಟಿಕ ಮುಂತಾದ ಪ್ರಾಕಾರಗಳೂ ಉಳ್ಳ ವಿಶ್ವಕರ್ಮ ನಿರ್ಮಿತವಾಗಿ ಬೇರೆ ರೂಪದಿಂದ ಶೋಭಿಸುತ್ತಿದ್ದ ದ್ವಾರಕಾ ಪಟ್ಟಣವನ್ನು ಸೇರಿ ಅಸಮಾನವಾದ ಬುದ್ಧಿಯುಳ್ಳ ರಾಜನು ತನ್ನ ಮಗಳನ್ನು ಸ್ಫಟಿಕ ಪರ್ವತದಂತೆ

ಸೀರಾಯುಧಾಯ ಸ್ಫಟಿಕಾಚಲಾಭ
ವಕ್ಷಸ್ಥಲಾಯಾತುಲಧೀರ್ನರೇಂದ್ರಃ ॥ ೯೪ ॥

ಉಚ್ಚೈಃ ಪ್ರಮಾಣಾಮಿತಿ ತಾಮವೇಕ್ಷ್ಯ
ಸ್ವಲಾಂಗಲಾಗ್ರೇಣ ಸ ತಾಲಕೇತುಃ ।
ವಿನಾಮಯಾಮಾಸ ತತಶ್ಚ ಸಾಪಿ
ಬಭೂವ ಸದ್ಯೋ ವನಿತಾಯಥಾನ್ಯಾ ॥ ೯೫ ॥

ತಾಂ ರೇವತೀಂ ರೈವತಭೂಪಕನ್ಯಾಂ
ಸೀರಾಯುಧೋऽಸೌ ವಿಧಿನೋಪಯೇಮೇ ।
ದತ್ವಾ ಚ ಕನ್ಯಾಂ ಸನೃಪೋ ಜಗಾಮ
ಹಿಮಾಚಲಂ ವೈ ತಪಸೇ ಧೃತಾತ್ಮಾ ॥ ೯೬ ॥

ಇತಿ ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ ಪ್ರಥಮೋಽಧ್ಯಾಯಃ

---

ವಿಶಾಲವಾದ ಎದೆಯುಳ್ಳ ನೇಗಿಲನ್ನೇ ಆಯುಧವಾಗಿ ಧರಿಸಿರುವ ಬಲರಾಮನಿಗೆ ಕೊಟ್ಟು ವಿವಾಹಮಾಡಿದನು.

೯೫. ತಾಲಧ್ವಜನಾದ ಬಲರಾಮನು ತನ್ನ ಪತ್ನಿಯು ಅತ್ಯಂತ ಎತ್ತರವಾಗಿರುವುದನ್ನು ನೋಡಿ ನೇಗಿಲಿನ ತುದಿಯಿಂದ ಅವಳನ್ನು ಬಗ್ಗಿಸಿದನು. ತರುವಾಯ ಅವಳು ಆಕ್ಷಣದಲ್ಲಿಯೇ ಅವನಿಗೆ ತಕ್ಕ ಪ್ರಮಾಣದ ಬೇರೆ ಸ್ತ್ರೀಯಂತೆ ಆದಳು.

೯೬. ರೈವತರಾಜನು ತನ್ನ ಮಗಳಾದ ರೇವತಿಯನ್ನು ಬಲರಾಮನಿಗೆ ವಿಧಿಗನುಸಾರವಾಗಿ ವಿವಾಹ ಮಾಡಿಕೊಟ್ಟು ತಪಸ್ಸು ಮಾಡುವುದಕ್ಕಾಗಿ ಹಿಮವತ್ಪರ್ವತಕ್ಕೆ ಹೋದನು.

ಎಂಬಲ್ಲಿಗೆ ಶ್ರೀ ವಿಷ್ಣು ಪುರಾಣದ ಚತುರ್ಥಾಂಶದಲ್ಲಿ
ಮೊದಲನೆಯ ಅಧ್ಯಾಯವು ಮುಗಿದುದು.

ಶ್ರೀಃ

# ಶ್ರೀ ವಿಷ್ಣು ಪುರಾಣೇ ಚತುರ್ಥಾಂಶೇ

## ದ್ವಿತೀಯೋಽಧ್ಯಾಯಃ

---

॥ ಶ್ರೀ ಪರಾಶರಃ ॥

ಯಾವಚ್ಚ ಬ್ರಹ್ಮಲೋಕಾತ್ತು ಕಕುದ್ಮೀ ರೈವತೋ ನಾಭ್ಯೇತಿ
ತಾವತ್ಪುಣ್ಯಜನಸಂಜ್ಞಾ ರಾಕ್ಷಸಾಸ್ತಾಮಸ್ಯ ಪುರೀಂ ಕುಶಸ್ಥಲೀಂನಿಜಘ್ನುಃ

ತಚ್ಚಾಸ್ಯ ಭ್ರಾತೃಶತಂ ಪುಣ್ಯಜನತ್ರಾಸಾದ್ದಿಶೋ ಭೇಜೇ । ॥ ೨ ॥

ತದನ್ವಯಾಶ್ಚ ಕ್ಷತ್ರಿಯಾಃ ಸರ್ವದಿಕ್ಷ್ವಭವನ್ ॥ ೩ ॥

(ಧೃ) ವೃಷ್ಟಸ್ಯಾಪಿ (ಧಾ) ವಾರ್ಷ್ಟಕಂ ಕ್ಷತ್ರಮಭವತ್ ॥ ೪ ॥

---

### ಎರಡನೆಯ ಅಧ್ಯಾಯವು.

೧–೩. ಕಕುದ್ಮಿಯೆಂಬ ಹೆಸರುಳ್ಳ ರೈವತನು ಬ್ರಹ್ಮಲೋಕಕ್ಕೆ ಹೋಗಿ ಬರುವುದಕ್ಕೆ ಮುಂಚಿತವಾಗಿಯೇ ಪುಣ್ಯಜನರೆಂಬ ಹೆಸರಿನ ರಾಕ್ಷಸರು ಅವನ ರಾಜಧಾನಿಯಾದ ಕುಶಸ್ಥಲಿಯನ್ನು ನಾಶಮಾಡಿದರು. ರೈವತನ ನೂರು ಜನ ತಮ್ಮಂದಿರು ರಾಕ್ಷಸರ ಭಯದಿಂದ ದಿಕ್ಕುದಿಕ್ಕಿಗೆ ಓಡಿಹೋದರು.

೪–೯. ಧೃಷ್ಟನೆಂಬ ಮನುಪುತ್ರನಿಂದ ದಾರ್ಷ್ಟಕರೆಂಬ ಕ್ಷತ್ರಿಯರಾದರು. ನಾಭಾಗನೆಂಬ ಮನುಪುತ್ರನಿಗೆ ನಾಭಾಗನೆಂಬ ಮಗನು ಹುಟ್ಟಿದನು. ನಾಭಾಗನಿಗೆ

ನಾಭಾಗಸ್ಯಾತ್ಮಜೋ ನಾಭಾಗಸಂಜ್ಞೋಽಭವತ್ ॥ ೫ ॥

ತಸ್ಯಾಪ್ಯಂಬರೀಷಃ ॥ ೬ ॥

ಅಂಬರೀಷಸ್ಯಾಪಿ ವಿರೂಪೋಽಭವತ್ ॥ ೭ ॥

ವಿರೂಪಾತ್ಪೃಷದಶ್ವೋ ಜಜ್ಞೇ ॥ ೮ ॥

ತತಶ್ಚ ರಥೀತರಃ ॥ ೯ ॥

ಅತ್ರಾಯಂ ಶ್ಲೋಕಃ ।
ಏತೇ ಕ್ಷತ್ರಪ್ರಸೂತಾ ವೈ ಪುನಶ್ಚಾಂಗಿರಸಾ ಸ್ಮೃತಾಃ
ರಥೀತರಾಣಾಂ ಪ್ರವರಾಃ ಕ್ಷತ್ರೋಪೇತಾ ದ್ವಿಜಾತಯಃ ಇತಿ ॥ ೧೦ ॥

ಕ್ಷುತವತಶ್ಚ ಮನೋರಿಕ್ಷ್ವಾಕುರ್ಘ್ರಾಣತಃ ಪುತ್ರೋ ಜಜ್ಞೇ ॥ ೧೧ ॥

---

ಅಂಬರೀಷನೂ, ಅಂಬರೀಷನಿಗೆ ವಿರೂಪನೂ, ವಿರೂಪನಿಗೆ ಪೃಷದಶ್ವನೂ, ಪೃಷದಶ್ವನಿಗೆ ರಥೀತರನೂ ಮಕ್ಕಳಾದರು.

೧೦. ರಥೀತರನೇ ಮೊದಲಾದ ಕ್ಷತ್ರಿಯ ವಂಶದವರು ಅಂಗಿರಸಗಣಗಳಲ್ಲಿ ಸೇರಿ ಕ್ಷತ್ರಿಯರ ಗುಣಗಳಿಂದ ಕೂಡಿದ ಬ್ರಾಹ್ಮಣರಾದರು. ಅಂದರೆ ಇವರಿಗೆ ತಪಸ್ಸಿನಿಂದ ಬ್ರಾಹ್ಮಣತ್ವವು ಬಂದಿತು. (ರಥೀತರನ ಪತ್ನಿಯಲ್ಲಿ ಅಂಗಿರನೆಂಬ ಋಷಿಯು ಬ್ರಹ್ಮವರ್ಚಸ್ಸಿನಿಂದ ಕೂಡಿದ ಮಕ್ಕಳನ್ನು ಹುಟ್ಟಿಸಿದನು. ಆದುದರಿಂದ ಅವರು ರಥೀತರ ಗೋತ್ರದಲ್ಲಿ ಹುಟ್ಟಿ ಅಂಗಿರಸ್ಸುಗಳೆಂದು ಹೆಸರನ್ನು ಪಡೆದಿರುವರು)

೧೧–೧೪. ಮನುವಿಗೆ ಸೀನು ಬಂದಾಗ ಅವನ ಮೂಗಿನಿಂದ ಇಕ್ಷ್ವಾಕುವು ಹುಟ್ಟಿದನು. ಇಕ್ಷ್ವಾಕುವಿನ ನೂರು ಜನ ಮಕ್ಕಳಲ್ಲಿ ವಿಕುಕ್ಷಿ, ನಿಮಿ, ದಂಡ ಎಂಬ

ತಸ್ಯ ಪುತ್ರಶತಪ್ರಧಾನಾಃ ವಿಕುಕ್ಷಿನಿಮಿದಂಡಾಖ್ಯಾಸ್ತ್ರಯಃ ಪುತ್ರಾಃ ॥೧೩॥
ಶಕುನಿಪ್ರಮುಖಾಃ ಪಂಚಾಶತ್ಪುತ್ರಾ ಉತ್ತರಾಪಥರಕ್ಷಿತಾರೋ ಬಭೂವುಃ
ಚತ್ವಾರಿಂಶದಷ್ಟೌ [redacted] ದಕ್ಷಿಣಾಪಥಭೂಪಾಲಾಃ ॥ ೧೪ ॥

ಸ ಚೇಕ್ಷ್ವಾಕುರಷ್ಟಕಾಯಾಮುತ್ಪಾದ್ಯ ಶ್ರಾದ್ಧಾರ್ಹಂ ಮಾಂಸಮಾನ
ಯೇತಿ ವಿಕುಕ್ಷಿಮಾಜ್ಞಾಪಯಾಮಾಸ ॥ ೧೫ ॥

ತಥೇತಿ ಗೃಹೀತಾಜ್ಞೋ ವನಮಭ್ಯೇತ್ಯಾನೇಕಾನ್ ಮೃಗಾನ್ ಹತ್ವಾತಿ
ಶ್ರಾಂತೋಽತಿಕ್ಷುತ್ಪರೀತೋ ವಿಕುಕ್ಷಿರೇಕಂ ಶಶಮಭಕ್ಷಯತ್ ।
ಶೇಷಂ ಚ ಮಾಂಸಮಾನೀಯ ಪಿತ್ರೇ ನಿವೇದಯಾಮಾಸ ॥ ೧೬ ॥

ಇಕ್ಷ್ವಾಕುಣಾಽಽಇಕ್ಷ್ವಾಕುಕುಲಾಚಾರ್ಯಸ್ತತ್ಪ್ರೋಕ್ಷಣಾಯ
ವಸಿಷ್ಠಶ್ಚೋದಿತಃ ಪ್ರಾಹ ತದಲ ಮನೇನಾಮೇಧ್ಯೇನಾಮಿಷೇಣ

---

ಮೂವರು ಮಕ್ಕಳು ಮುಖ್ಯರಾದವರು. ಶಕುನಿಯೇ ಮುಂತಾದ ಐವತ್ತು ಜನ ಮಕ್ಕಳು ಉತ್ತರ ದೇಶದಲ್ಲಿ ರಾಜರಾಗಿದ್ದರು. ನಲವತ್ತೆಂಟು ಜನರು ದಕ್ಷಿಣದೇಶದಲ್ಲಿ ರಾಜರಾಗಿದ್ದರು.

೧೫-೧೬. ಆ ಇಕ್ಷ್ವಾಕುರಾಜನು ಅಷ್ಟಕಾಶ್ರಾದ್ಧದಲ್ಲಿ ಶ್ರಾದ್ಧಕ್ಕೆ ಯೋಗ್ಯವಾದ ಮಾಂಸವನ್ನು ನೀನೇ ಮೃಗವನ್ನು ಕೊಂದು ತರಬೇಕೆಂದು ಮಗನಾದ ವಿಕುಕ್ಷಿಗೆ ಆಜ್ಞೆಮಾಡಿದನು. ಅವನು ಹಾಗೆಯೇ ಆಗಲೆಂದು ತಂದೆಯ ಅಪ್ಪಣೆಯನ್ನು ಪಡೆದು ಕಾಡಿಗೆ ಹೋಗಿ ಅನೇಕ ಮೃಗಗಳನ್ನು ಕೊಂದು ವಿಶೇಷವಾಗಿ ಬಳಲಿ ಹಸಿವಿನಿಂದ ಕೂಡಿ ಒಂದು ಮೊಲವನ್ನು ತಿಂದನು, ಮಿಕ್ಕ ಮಾಂಸವನ್ನು ತಂದು ತಂದೆಗೆ ಒಪ್ಪಿಸಿದನು.

೧೭-೨೦. ಇಕ್ಷ್ವಾಕುರಾಜನು ತನ್ನ ಕುಲ ಪುರೋಹಿತನಾದ ವಸಿಷ್ಠನನ್ನು ಶ್ರಾದ್ಧ ಭೋಜನಕ್ಕೆ ಕರೆದನು. ಆಗ ವಸಿಷ್ಠನು ನೀನು ಶ್ರಾದ್ಧ ಭೋಜನಕ್ಕೆ ಸಿದ್ಧಮಾಡಿದ ಮಾಂಸವು ಅಶುದ್ಧವಾದುದು. ದುರಾತ್ಮನಾದ

ದುರಾತ್ಮನಾನೇನ ತ್ವತ್ಪುತ್ರೇಣೈತನ್ಮಾಂಸಮುಪಹತಂ ಯತೋಽನೇನ ಶಶೋ ಭಕ್ಷಿತಃ ॥ ೧೭ ॥

ತತಶ್ಚಾಸೌ ವಿಕುಕ್ಷಿಃ ಗುರುಣೈವಮುಕ್ತಃ ಶಶಾದಸಂಜ್ಞಾಮವಾಪ ಪಿತ್ರಾಚ ಪರಿತ್ಯಕ್ತಃ ॥ ೧೮ ॥

ಪಿತರ್ಯುಪರತೇ ಚಾಸೌ ಅಖಿಲಾಮೇತಾಂ ಪೃಥಿವೀಂ ಧರ್ಮತಶ್ಶಶಾಸ ॥೧೯॥

ಶಶಾದಸ್ಯ ಪುರಂಜಯೋನಾಮ ಪುತ್ರೋಽಭವತ್ ॥ ೨೦ ॥

ತಸ್ಯೇದಂ ಚಾನ್ಯತ್ ॥ ೨೧ ॥

ಪುರಾ ಹಿ ತ್ರೇತಾಯಾಂ ದೇವಾಸುರಮತಿಭೀಷಣಂ ಯುದ್ಧಮಾಸೀತ್ ॥ ತತ್ರಚಾತಿಬಲಿಭಿರಸುರೈರಮರಾಃ ಪರಾಜಿತಾಃ ತೇ ಭಗವಂತಂ ವಿಷ್ಣುಮಾರಾಧಯಾಂ ಚಕ್ರುಃ ॥ ೨೨ ॥

---

ನಿನ್ನ ಮಗನು ಮೊಲವನ್ನು ತಿಂದು ಮಿಕ್ಕ ಮಾಂಸವನ್ನು ತಂದಿರುವನು. ಆದುದರಿಂದ ಇದು ಅಶುದ್ಧವಾಯಿತು. ಎಂದು ಹೇಳಿ ಗುರುವು ವಿಕುಕ್ಷಿಗೆ ಶಶಾದನೆಂದು ಹೆಸರಿಟ್ಟನು. ತಂದೆಯು ಅವನನ್ನು ತ್ಯಾಗಮಾಡಿದನು. ತಂದೆಯು ಸತ್ತಮೇಲೆ ವಿಕುಕ್ಷಿಯು ಸಮಸ್ತ ಭೂಮಂಡಲವನ್ನೂ ಧರ್ಮದಿಂದ ಆಳುತ್ತಿದ್ದನು. ಆ ಶಶಾದನಿಗೆ ಪುರಂಜಯನೆಂಬ ಮಗನು ಹುಟ್ಟಿದನು.

೨೧–೨೯. ಪುರಂಜಯನಿಗೆ ಕಕುತ್ಸ್ಥನೆಂಬ ಮತ್ತೊಂದು ಹೆಸರು ಬಂದಿತು. ಕಾರಣವೇನೆಂದರೆ:–ಹಿಂದೆ ತ್ರೇತಾಯುಗದಲ್ಲಿ ದೇವತೆಗಳಿಗೂ ಅಸುರರಿಗೂ ಭಯಂಕರವಾದ ಯುದ್ಧವಾಯಿತು. ಯುದ್ಧದಲ್ಲಿ ಬಲಿಷ್ಠರಾದ ರಾಕ್ಷಸರು ದೇವತೆಗಳನ್ನು ಸೋಲಿಸಿದರು. ಸೋತ ದೇವತೆಗಳು ಮಹಾ ಮಹಿಮನಾದ ವಿಷ್ಣುವನ್ನು

ಪ್ರಸನ್ನಶ್ಚ ದೇವಾನಾಮನಾದಿನಿಧನಃ ಸಕಲಜಗತ್ಪರಾಯಣೋ
ನಾರಾಯಣಃ ಪ್ರಾಹ। ॥ ೨೪ ॥

ಜ್ಞಾತಮೇತನ್ಮಯಾ ಯುಷ್ಮಾಭಿರ್ಯದಭಿಲಷಿತಂ ತದರ್ಥಮಿದಂ
ಶ್ರೂಯತಾಂ ॥ ೨೫ ॥

ಪುರಂಜಯೋ ನಾಮ ಶಶಾದಸ್ಯ ರಾಜರ್ಷೇಸ್ತನಯಃ ಕ್ಷತ್ರಿಯಪ್ರವರಃ
ತಚ್ಛರೀರೇ ಹಮಂಶೇನ ಸ್ವಯಮೇವಾವತೀರ್ಯ ತಾನಶೇಷಾನಸುರಾನ್ನಿಹ
ನಿಷ್ಯಾಮಿ-ತದ್ಭವದ್ಭಿಃ ಪುಂಜಯೋಽಸುರವಧಾರ್ಥಮುದ್ಯೋಜ್ಯಃ
ಕಾರ್ಯತಾಮಿತಿ ॥ ೨೬ ॥

ಏತಚ್ಛ್ರುತ್ವಾ ಪ್ರಣಮ್ಯ ಭಗವಂತಂ ವಿಷ್ಣುಮಮರಾಃ ಪುರಂಜ
ಯಸಕಾಶಮಾಜಗ್ಮುಃ ಊಚುಶ್ಚೈನಂ ॥ ೨೭ ॥

---

ಪೂಜಿಸಿದರು. ಸಕಲ ಜಗತ್ತನ್ನೂ ಕಾಪಾಡುವುದರಲ್ಲಿ ಆಸಕ್ತನಾದ, ಹುಟ್ಟು ಸಾವುಗಳಿಲ್ಲದ ನಾರಾಯಣನು ದೇವತೆಗಳಿಗೆ ಪ್ರತ್ಯಕ್ಷನಾಗಿ ಅವರನ್ನು ಕುರಿತು "ನಿಮ್ಮ ಇಷ್ಟಾರ್ಥವೇನೆಂದು ನಾನು ತಿಳಿದಿರುವೆನು. ಅದಕ್ಕಾಗಿ ಹೇಳುವುದನ್ನು ಕೇಳಿರಿ. ಶಶಾದನೆಂಬ ರಾಜರ್ಷಿಯ ಪುತ್ರನಾದ ಪುರಂಜಯನೆಂಬ ಕ್ಷತ್ರಿಯ ಶ್ರೇಷ್ಠನಿರುವನು. ಅವನ ಶರೀರದಲ್ಲಿ ನಾನೇ ನನ್ನ ಅಂಶದಿಂದಅವತಾರ ಮಾಡಿ ರಾಕ್ಷಸರನ್ನೆಲ್ಲ ಕೊಲ್ಲುವೆನು. ಆದುದರಿಂದ ನೀವು ಪುರಂಜಯನು ಅಸುರರನ್ನು ನಾಶಮಾಡುವ ಯುದ್ಧಕ್ಕೆ ಉದ್ಯೋಗವನ್ನು ಮಾಡುವಂತೆ ಪ್ರೇರಿಸಬೇಕು" ಎಂದು ಹೇಳಿದನು. ಈ ಮಾತನ್ನು ಕೇಳಿ ದೇವತೆಗಳು ವಿಷ್ಣುವಿಗೆ ನಮಸ್ಕಾರವನ್ನು ಮಾಡಿ ಪುರಂಜಯನ ಸಮೀಪಕ್ಕೆ ಬಂದರು.

ಭೋ ಭೋ ಕ್ಷತ್ರಿಯವರ್ಯಾಸ್ಮಾಭಿರಭ್ಯರ್ಥಿತೇನ ಭವತಾಸ್ಮಾ
ಕಮರಾತಿವಧೋದ್ಯತಾನಾಂ ಕರ್ತವ್ಯಂ ಸಾಹಾಯ್ಯಮಿಚ್ಛಾಮಃ ।
ತದ್ಭವತಾಸ್ಮಾಕಮಭ್ಯಾಗತಾನಾಂ ಪ್ರಣಯಭಂಗೋ ನ ಕಾರ್ಯಃ
ಇತ್ಯುಕ್ತಃ ಪುರಂಜಯಃ ಪ್ರಾಹ ॥ ೨೮ ॥

ತ್ರೈಲೋಕ್ಯನಾಥೋ ಯೋಽಯಂ ರಾಜಾ ಯುಷ್ಮಾಕಮಿಂದ್ರಃ
ಶತಕ್ರತುಃ ಅಸ್ಯ ಯದ್ಯಹಂ ಸ್ಕಂಧಾಧಿರೂಢೋ ಯುಷ್ಮದರಾತಿಭಿಸ್ಸಹ
ಯೋತ್ಸ್ಯೇ ತದಹಂ ಭವತಾಂ ಸಹಾಯಸ್ಸ್ಯಾಂ ॥ ೨೯ ॥

ಇತ್ಯಾಕರ್ಣ್ಯ ಸಮಸ್ತದೇವೈರಿಂದ್ರೇಣ ಚ ಬಾಢಮಿತ್ಯೇವ ಸಮ
ನ್ವಿಚ್ಛಿತಂ ॥ ೩೦ ॥

---

ದೇವತೆಗಳು ಪುರಂಜಯನನ್ನು ಕುರಿತು "ಎಲೈ ಕ್ಷತ್ರಿಯ ಶ್ರೇಷ್ಠನೇ! ಶತ್ರುಗಳನ್ನು ನಾಶಮಾಡುವ ಕೆಲಸದಲ್ಲಿ ಆಸಕ್ತರಾದ ನಮಗೆ ನೀನು ಸಾಹಾಯವನ್ನು ಮಾಡಬೇಕು. ಅತಿಥಿಗಳಾಗಿ ಬಂದ ನಮ್ಮ ಇಷ್ಟಾರ್ಥವನ್ನು ನೀನು ಭಂಗಮಾಡಬಾರದು" ಎಂದರು.

೨೯–೩೧. ಈ ಮಾತನ್ನು ಕೇಳಿ ಪುರಂಜಯನು ಉತ್ತರವನ್ನು ಹೇಳುವನು:—ಎಲೈ ದೇವತೆಗಳೇ! ನೂರು ಯಜ್ಞಗಳನ್ನು ಮಾಡಿ ಮೂರು ಲೋಕಕ್ಕೂ ರಾಜನಾದ ದೇವೇಂದ್ರನು ನಿಮ್ಮ ರಾಜನಾಗಿರುವನು. ನಾನು ಅವನ ಹೆಗಲ ಮೇಲೆ ಕುಳಿತು ನಿಮ್ಮ ಶತ್ರುಗಳೊಡನೆ ಯುದ್ಧ ಮಾಡುವುದಾದರೆ ನಿಮಗೆ ನಾನು ಸಹಾಯಕನಾಗುವೆನು" ಎಂದ ಮಾತನ್ನು ಕೇಳಿ ದೇವತೆಗಳೂ, ದೇವೇಂದ್ರನೂ ಹಾಗೆಯೇ ಆಗಲೆಂದು ಒಪ್ಪಿಕೊಂಡರು. ಪುರಂಜಯನು ಎತ್ತಿನ ರೂಪವನ್ನು ಧರಿಸಿದ

ತತಶ್ಚ ಶತಕ್ರತೋರ್ವೃಷಭರೂಪಧಾರಿಣಃ ಕಕುತ್ಸ್ಥೋಽತಿತೋಷ ಸಮನ್ವಿತೋ ಭಗವತಶ್ಚರಾಚರಗುರೋರಚ್ಯುತಸ್ಯ ತೇಜಸಾಪ್ಯಾಯಿತೋ ದೇವಾಸುರಸಂಗ್ರಾಮೇ ಸಮಸ್ತಾನೇವಾಸುರಾನ್ನಿಜಘಾನ ॥ ೩೧ ॥

ಯತಶ್ಚವೃಷಭಕಕುತ್ಸ್ಥೇನ ತೇನ ರಾಜ್ಞಾ ದೈತೇಯಬಲಂ ನಿಷೂದಿತಂ ತತಶ್ಚಾಸೌ ಕಕುತ್ಸ್ಥಸಂಜ್ಞಾಮವಾಪ ॥ ೩೨ ॥

ಕಕುತ್ಸ್ಥಸ್ಯಾಪ್ಯನೇನಾಃ ಪುತ್ರೋಽಭವತ್ ॥ ೩೩ ॥

ಪೃಥುರನೇನಸಃ ॥ ೩೪ ॥

ಪೃಥೋರ್ವಿಷ್ಟರಾಶ್ವಃ ॥ ೩೫ ॥

ತಸ್ಯಾಪಿ ಚಾಂದ್ರೋ ಯುವನಾಶ್ವಃ ॥ ೩೬ ॥

ಚಾಂದ್ರಸ್ಯ ತಸ್ಯ ಯುವನಾಶ್ವಸ್ಯ ಚ ಶಾಬಸ್ತಃ ಯಃ ಪುರೀಂ ಶಾಬಸ್ತೀಂ

---

ದೇವೇಂದ್ರನ ಹೆಗಲ ಮೇಲೆ ಕುಳಿತು ಅತ್ಯಂತ ಸಂತೋಷದಿಂದ ಚರಾಚರ ಪ್ರಪಂಚಕ್ಕೆ ಸ್ವಾಮಿಯಾದ ಅಚ್ಯುತನ ತೇಜಸ್ಸಿನಿಂದ ಕೂಡಿದವನಾಗಿ ದೇವಾಸುರ ಯುದ್ಧದಲ್ಲಿ ಸಮಸ್ತ ರಾಕ್ಷಸರನ್ನೂ ನಾಶಮಾಡಿದನು. ಎತ್ತಿನ ಹೆಗಲ ಮೇಲೆ ಕುಳಿತಿದ್ದುದರಿಂದ ಆ ರಾಜನಿಗೆ ಕಕುತ್ಸ್ಥನೆಂಬ ಹೆಸರಾಯಿತು.

೩೩–೪೦. ಕಕುತ್ಸ್ಥನಿಗೆ ಅನೇನಸ್ಸೆಂಬುವನು ಮಗನಾದನು. ಅವನಿಗೆ ಪೃಥುವೂ, ಪೃಥುವಿಗೆ ವಿಷ್ಟರಾಶ್ವನೂ, ವಿಷ್ಟರಾಶ್ವನಿಗೆ ಚಾಂದ್ರನೆಂಬ ಯುವನಾಶ್ವನೂ, ಯುವನಾಶ್ವನಿಗೆ ಶಾಬಸ್ತಿಯೆಂಬ ಪಟ್ಟಣವನ್ನು ಕಟ್ಟಿಸಿದ ಶಾಭಸ್ತನೂ, ಶಾಬಸ್ತನಿಗೆ ಬೃಹದಶ್ವನೂ, ಬೃಹದಶ್ವನಿಗೆ ಕುವಲಯಾಶ್ವನೂ ಮಕ್ಕಳಾದರು

ನಿವೇಶಯಾಮಾಸ ॥ ೩೭ ॥

ಶ್ರಾವಸ್ತಸ್ಯ ಬೃಹದಶ್ವಃ ॥ ೩೮ ॥

ತಸ್ಯಾಪಿ ಕುವಲಯಾಶ್ವಃ ॥ ೩೯ ॥

ಯೋಽಸಾವುದಂಕಸ್ಯ ಮಹರ್ಷೇರಪಕಾರಿಣಂ ದುಂದುನಾಮಾನ
ಮಸುರಂ ವೈಷ್ಣವೇನ ತೇಜಸಾಪ್ಯಾಯಿತಃ ಪುತ್ರಸಹಸ್ರೈರೇಕವಿಂಶತಿಭಿಃ
ಪರಿವೃತೋ ಜಘಾನ । ದುಂದುಮಾರ ಸಂಜ್ಞಾಂ ಚಾವಾಪ ॥ ೪೦ ॥

ತಸ್ಯ ಚ ಸಮಸ್ತಾ ಏವ ಪುತ್ರಾಃ ದುಂದುಮುಖನಿಶ್ವಾಸಾಗ್ನಿನಾ
ವಿಪ್ಲುಷ್ಟಾ ವಿನೇಶುಃ ॥ ೪೧ ॥

ದೃಢಾಶ್ವಚಂದ್ರಾಶ್ವಕಪಿಲಾಶ್ವಾಸ್ತ್ರಯಃ ಕೇವಲಮವಶೇಷಿತಾಃ ॥ ೪೨ ॥

ದೃಢಾಶ್ವಾದ್ಧರ್ಯಶ್ವಃ ॥ ೪೩ ॥

ತಸ್ಮಾಚ್ಚ ನಿಕುಂಭಃ ॥ ೪೪ ॥

ನಿಕುಂಭಸ್ಯಾಮಿತಾಶ್ವಃ ॥ ೪೫ ॥

ತತಶ್ಚ ಕೃಶಾಶ್ವಃ ॥ ೪೬ ॥

---

ಕುವಲಯಾಶ್ವನು ಉದಂಕನೆಂಬ ಮಹರ್ಷಿಗೆ ಅಪಕಾರವನ್ನು ಮಾಡಿದ ದುಂದುವೆಂಬ ಹೆಸರಿನ ಅಸುರನನ್ನು ವಿಷ್ಣುವಿನ ತೇಜಸ್ಸಿನಿಂದ ಕೂಡಿ ತನ್ನ ಇಪ್ಪತ್ತೊಂದು ಸಾವಿರ ಮಕ್ಕಳ ಸಹಾಯದಿಂದ ಕೊಂದುಹಾಕಿದನು. ಆದುದರಿಂದ ದುಂದುಮಾರನೆಂಬ ಹೆಸರನ್ನು ಪಡೆದನು.

೪೧–೪೬. ಅವನ ಎಲ್ಲ ಮಕ್ಕಳೂ ದುಂದುವಿನ ನಿಶ್ವಾಸಾಗ್ನಿಯಿಂದ ಸುಟ್ಟು ನಾಶವಾದರು. ದೃಢಾಶ್ವ, ಚಂದ್ರಾಶ್ವ, ಕಪಿಲಾಶ್ವ ಎಂಬ ಮೂವರು ಮಾತ್ರ ಉಳಿದರು. ದೃಢಾಶ್ವನಿಗೆ ಹರ್ಯಶ್ವನೂ, ಅವನಿಗೆ ನಿಕುಂಭನೂ, ನಿಕುಂಭನಿಗೆ

ತಸ್ಮಾಚ್ಚ ಪ್ರಸೇನಜಿತ್ || ೪೭ ||

ಪ್ರಸೇತಜಿತೋ ಯುವನಾಶ್ವೋಽಭವತ್ । || ೪೮ ||

ತಸ್ಯ ಚಾಪುತ್ರಸ್ಯಾತಿನಿರ್ವೇದಾತ್ ಮುನೀನಾಮಾಶ್ರಮಮಂಡಲೇ
ನಿವಸತಃ ಕೃಪಾಳುಭಿಸ್ತೈರ್ಮುನಿಭಿರಪತ್ಯೋತ್ಪಾದನಾಯೇಷ್ಟಿಃ ಕೃತಾ ||

ತಸ್ಯಾಂ ಚ ಮಧ್ಯರಾತ್ರಿನಿವೃತ್ತಾಯಾಂ ಮಂತ್ರಪೂತಜಲಪೂರ್ಣಂ ಕಲಶಂ
ವೇದಿಮಧ್ಯೇ ನಿವೇಶ್ಯ ತೇ ಮುನಯಃ ಸುಷುಪುಃ || ೫೦ ||

ಸುಪ್ತೇಷು ಚ ತೇಷ್ವತೀವತೃಟ್ಪರೀತಸ್ಸ ಭೂಪಾಲಸ್ತಮಾಶ್ರಮಂ ವಿವೇಶ ||

ಸುಪ್ತಾಂಶ್ಚ ತಾನೃಷೀನ್ನೈವೋತ್ಥಾಪಯಾಮಾಸ || ೫೨ ||

ತತಸ್ಸ ಕಲಶಜಲಮಪರಿಮೇಯಮಾಹಾತ್ಮ್ಯಮಂತ್ರಪೂತಂ ಪಪೌ || ೫೩ ||

---

ಅಮಿತಾಶ್ವನೂ, ಅಮಿತಾಶ್ವನಿಗೆ ಕೃಶಾಶ್ವನೂ, ಕೃಶಾಶ್ವನಿಗೆ ಪ್ರಸೇನಜಿತು, ಪ್ರಸೇನಜಿತ್ತಿಗೆ ಯುವನಾಶ್ವನೂ ಮಕ್ಕಳಾದರು.

೪೯-೫೩. ಯುವನಾಶ್ವನು ಮಕ್ಕಳಿಲ್ಲದುದರಿಂದ ವೈರಾಗ್ಯವನ್ನು ಪಡೆದು ಋಷಿಗಳ ಆಶ್ರಮದಲ್ಲಿ ವಾಸವಾಗಿದ್ದನು. ದಯಾವಂತರಾದ ಮುನಿಗಳು ಅವನಿಗೆ ಮಕ್ಕಳಾಗಬೇಕೆಂದು ಯಜ್ಞವನ್ನು ಮಾಡಿದರು. ಆ ಯಜ್ಞದಲ್ಲಿ ಅರ್ಧರಾತ್ರಿಯು ಕಳೆದ ಮೇಲೆ ಮಂತ್ರದಿಂದ ಪರಿಶುದ್ಧವಾದ ನೀರಿನಿಂದ ತುಂಬಿದ ಕಲಶವನ್ನು ಯಜ್ಞವೇದಿಕೆಯ ಮಧ್ಯದಲ್ಲಿಟ್ಟು ಆ ಮುನಿಗಳು ನಿದ್ರೆಮಾಡಿದರು. ಅವರು ಮಲಗಿದ್ದಾಗ ಆ ರಾಜನು ವಿಶೇಷ ಬಾಯಾರಿಕೆಯಿಂದ ಆಶ್ರಮಕ್ಕೆ ಪ್ರವೇಶಮಾಡಿದನು. ನಿದ್ರೆ ಮಾಡುತ್ತಿದ್ದ ಋಷಿಗಳನ್ನು ಎಚ್ಚರಗೊಳಿಸಲಿಲ್ಲ. ಮಹಾಮಹಿಮೆಯುಳ್ಳ ಮಂತ್ರದಿಂದ ಶುದ್ಧವಾದ ಕಲಶದ ನೀರನ್ನು ಕುಡಿದನು

ಪ್ರಬುದ್ಧಾಶ್ಚ ಋಷಯಃ ಪಪ್ರಚ್ಛುಃ ಕೇನೈತನ್ಮಂತ್ರಪೂತಂ ವಾರಿಪೀತಂ ॥

ಅತ್ರ ಹಿ ಪೀತೇ ರಾಜ್ಞೋಽಸ್ಯ ಯುವನಾಶ್ವಸ್ಯ ಪತ್ನೀ ಮಹಾಬಲಂ
ಪರಾಕ್ರಮಸಂಪನ್ನಂ ಪುತ್ರಂ ಜನಯಿಷ್ಯತೀತಿ ತದ್ವಚನಮಾಕರ್ಣ್ಯ
ಸ ರಾಜಾ ಅಜಾನತಾ ಮಯಾ ಪೀತಮಿತ್ಯಾಹ ॥ ೫೫ ॥

ಗರ್ಭಃ ಯುವನಾಶ್ವಸ್ಯೋದರೇಽಭವತ್ । ಕ್ರಮೇಣ ಚ ವವೃಧೇ ॥ ೫೬ ॥

ಪ್ರಾಪ್ತಸಮಯಶ್ಚ ದಕ್ಷಿಣಾಂಗುಷ್ಠೇನ ಕುಕ್ಷಿಮವನೀಪತೇರ್ನಿರ್ಭಿದ್ಯ
ಸ ನಿಶ್ಚಕ್ರಾಮ ॥ ೫೭ ॥

ಸ ಚ ರಾಜಾ ಮಮಾರ ॥ ೫೮ ॥

ಜಾತೋ ನಾಮ್ಯೈಷಕಂ ಧಾಸ್ಯತೀತಿತೇಮುನಯಃ ಪ್ರೋಚುಃ

ಅಥಾಗಮ್ಯ ದೇವರಾಜೋಽಬ್ರವೀತ್ ಮಾಮಯಂ ಧಾಸ್ಯತೀತಿ ॥ ೬೦ ॥

---

೫೪-೫೫. ಋಷಿಗಳು ನಿದ್ರೆಯಿಂದ ಎದ್ದು ಮಂತ್ರದಿಂದ ಪರಿಶುದ್ಧವಾದ ಈ ಕಲಶದ ನೀರನ್ನು ಯಾರು ಕುಡಿದರೆಂದು ಕೇಳಿದರು. ಇದನ್ನು ಕುಡಿದರೆ ರಾಜನಾದ ಯುವನಾಶ್ವನ ಪತ್ನಿಯು ಮಹಾಬಲ ಪರಾ ಕ್ರಮದಿಂದ ಕೂಡಿದ ಪುತ್ರನನ್ನು ಪ್ರಸುವಿಸುವಳು" ಎಂದ ಋಷಿಗಳ ಮಾತನ್ನು ಕೇಳಿ, ರಾಜನು ತಿಳಿಯದೆ ನಾನು ಅದನ್ನು ಕುಡಿದೆನು ಎಂದು ಹೇಳಿದನು.

೫೬-೬೦. ಯುವನಾಶ್ವನ ಹೊಟ್ಟೆಯಲ್ಲಿ ಗರ್ಭವು ಕ್ರಮವಾಗಿ ಬೆಳೆಯಿತು. ಅದು ಪೂರ್ಣವಾಗಿ ಬೆಳೆದ ಮೇಲೆ ಬಲದ ಹೆಬ್ಬೆರಳಿನಿಂದ ರಾಜನ ಹೊಟ್ಟೆಯನ್ನು ಸೀಳಿ ಹೊರಕ್ಕೆ ಬಂದಿತು. ಇದರಿಂದ ರಾಜನು ಮರಣ ಹೊಂದಿದನು. ಹುಟ್ಟಿದ ಈ ಮಗುವು ಏನನ್ನು ಕುಡಿವುದೆಂದು ಮುನಿಗಳು ಹೇಳಿದರು. ಆ ಸಮಯಕ್ಕೆ ಸರಿಯಾಗಿ ದೇವೇಂದ್ರನು ಬಂದು "ಮಾಂಧಾಸ್ಯತಿ" ಎಂದರೆ ನನ್ನನ್ನೇ ಕುಡಿವನು ಎಂದು ಹೇಳಿ ತರ್ಜನಿಯ ಬೆರಳನ್ನು ಮಗುವಿನ ಬಾಯಲ್ಲಿಟ್ಟನು. ಇದರಿಂದ

ದೇವೇಂದ್ರೇಣ ನ್ಯಸ್ತಾ ತಾಂ ಪಪೌ ॥ ೬೧ ॥

ತಾಂ ಚಾಮೃತಸ್ರಾವಿಣೀಮಾಸ್ವಾದ್ಯಾಹ್ನೈವ ಸ ವ್ಯವರ್ಧತ ॥ ೬೨ ॥

ಸ ತು ಮಾಂಧಾತಾ ಚಕ್ರವರ್ತೀ ಸಪ್ತದ್ವೀಪಾಂ ಮಹೀಂ ಬುಭುಜೇ ॥ ೬೩ ॥

ಭವತಿ ಚಾತ್ರ ಶ್ಲೋಕಃ ॥ ೬೪ ॥

ಯಾವತ್ಸೂರ್ಯ ಉದೇತಿಸ್ಮ ಯಾವಚ್ಚ ಪ್ರತಿತಿಷ್ಠತಿ ।

ಸರ್ವಂ ತದ್ಯೌವನಾಶ್ವಸ್ಯ ಮಾಂಧಾತುಃ ಕ್ಷೇತ್ರಮುಚ್ಯತೇ ॥ ೬೫ ॥

ಮಾಂಧಾತಾ ಶಶಿಬಿಂದೋರ್ದುಹಿತರಮಿಂದುಮತೀಮುಪಯೇಮೇ ॥ ೬೬ ॥

ಪುರು ಕುತ್ಸಮಂಬರೀಷಂ ಮುಚುಕುಂದಂ ಚ ತಸ್ಯಾಂ ಪುತ್ರತ್ರಯ
ಮುತ್ಪಾದಯಾಮಾಸ ॥ ೬೭ ॥

ಪಂಚಾಶದ್ದುಹಿತರಸ್ತಸ್ಯಾಮೇವ ತಸ್ಯ ನೃಪತೇರ್ಬಭೂವುಃ ॥ ೬೮ ॥

---

ಅವನಿಗೆ ಮಾಂಧಾತೃವೆಂದು ಹೆಸರಾಯಿತು ಅಮೃತವನ್ನು ಸುರಿಸುತ್ತಿರುವ ದೇವೇಂದ್ರನ ಬೆರಳ ರುಚಿಯನ್ನು ನೋಡಿ ಆ ಹಗಲಿನಲ್ಲಿಯೇ ಅವನು ಬೆಳೆದನು. ಆ ಮಾಂಧಾತೃಚಕ್ರವರ್ತಿಯು ಸಪ್ತದ್ವೀಪಗಳಿಂದ ಕೂಡಿದ ಭೂಮಿಯನ್ನು ಆಳುತ್ತಿದ್ದನು. ಸೂರ್ಯನ ಉದಯಾಸ್ತ ಪ್ರದೇಶಗಳು ಎಲ್ಲೆಲ್ಲಿವೆಯೋ ಅವೆಲ್ಲವೂ ಯುವನಾಶ್ವನ ಮಗನಾದ ಮಾಂಧಾತನ ಭೂಮಿಯಾಗಿರುವುವೆಂದು ಪ್ರಸಿದ್ಧಿಯಿರುವುದು.

೬೬–೬೮. ಮಾಂಧಾತನು ಶಶಿಬಿಂಧುವಿನ ಮಗಳಾದ ಇಂದುಮತಿಯನ್ನು ಮದುವೆಯಾದನು. ಅವಳಲ್ಲಿ ಪುರುಕುತ್ಸ, ಅಂಬರೀಷ, ಮುಚುಕುಂದ ಎಂಬ ಮೂವರು ಮಕ್ಕಳನ್ನು ಹುಟ್ಟಿಸಿದನು. ಅವಳಲ್ಲಿಯೇ ಆ ರಾಜನಿಗೆ ಐವತ್ತು ಹೆಣ್ಣುಮಕ್ಕಳು ಜನಿಸಿದರು. (ಈ ಕನ್ಯೆಯರಿಂದುಂಟಾದ ಆಶ್ಚರ್ಯಕರವಾದ ವಂಶವನ್ನು ಹೇಳುವುದಕ್ಕಾಗಿ ಸೌಭರಿ ಚರಿತ್ರೆಯನ್ನು ಹೇಳಲು ಪ್ರಾರಂಭಿಸಿದನು.)

ಏತಸ್ಮಿನ್ನಂತರೇ ಬಹ್ವೃಚಸ್ಸೌಭರಿರ್ನಾಮ ಋಷಿರಂತರ್ಜಲೇ ದ್ವಾದ
ಶಾಬ್ದಂ ಕಾಲಮುವಾಸ ॥ ೧೯ ॥

ತತ್ರ ಚಾಂತರ್ಜಲೇ ಸಂಮದೋ ನಾಮಾತಿ ಬಹುಪ್ರಜೋಽತಿಪ್ರಮಾಣೋ
ಮೀನಾಧಿಪತಿರಾಸೀತ್ ॥ ೨೦ ॥

ತಸ್ಯ ಪುತ್ರಪೌತ್ರದೌಹಿತ್ರಾಃ ಪೃಷ್ಠತೋಽಗ್ರತಃ ಪಾರ್ಶ್ವತಃ ಪಕ್ಷಪುಚ್ಛ
ಶಿರಸಾಂ ಚೋಪರಿಭ್ರಮಂತಸ್ತೇನೈವ ಸಹಾಹರ್ನಿಶಂ ಅತಿನಿರ್ವೃತಾ
ರೇಮಿರೇ ॥ ೨೧ ॥

ಸ ಚಾಪತ್ಯಸ್ಪರ್ಶೋಪಚೀಯಮಾನಹರ್ಷಪ್ರಕರ್ಷೋ ಬಹುಪ್ರಕಾರಂ
ತಸ್ಯರ್ಷೇಃ ಪಶ್ಯತಃ ಸ್ವೈಃ ಪುತ್ರಪೌತ್ರದೌಹಿತ್ರಾದಿಭಿಸ್ಸಹಾನು
ದಿನಂ ಸುತರಾಂ ರೇಮೇ ॥ ೨೨ ॥

ಅಥಾಂತರ್ಜಲಾವಸ್ಥಿತಸ್ಸ ಸೌಭರಿರೇಕಾಗ್ರತಾ ಸಮಾಧಾನಮಪ
ಹಾಯಾನುದಿನಂ ತಸ್ಯ ಮತ್ಸ್ಯಸ್ಯಾತ್ಮಜ ಪೌತ್ರ ದೌಹಿತ್ರಾದಿಭಿ
ಸ್ಸಹಾತಿರಮಣೀಯಂ ಲಾಲಿತಮವೇಕ್ಷ್ಯಾಚಿಂತಯತ್ ॥ ೨೩ ॥

---

೧೯-೨೩. ಋಗ್ವೇದಾಧ್ಯಯನವನ್ನು ಮಾಡಿದ ಸೌಭರಿಯೆಂಬ ಋಷಿಯು ನೀರಿನೊಳಗೆ ಹನ್ನೆರಡು ವರ್ಷಕಾಲ ತಪಸ್ಸಿಗೆ ಕುಳಿತಿದ್ದನು. ಅದೇ ನೀರಿನೊಳಗೆ ಸಂಮದನೆಂಬ ಹೆಸರಿನ ಅನೇಕ ಮರಿಗಳೊಡನೆ ಕೂಡಿದ ದೊಡ್ಡದಾದ ಮೀನೊಂದು ಇದ್ದಿತು. ಅದರ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳುಗಳೆಲ್ಲಾ ಹಿಂದೆಯೂ, ಪಕ್ಕಗಳಲ್ಲಿಯೂ, ರೆಕ್ಕೆ, ಬಾಲ, ತಲೆ ಇವುಗಳ ಮೇಲೆಯೂ ತಿರುಗುತ್ತ ಅದರೊಡನೆ ಹಗಲೂ ರಾತ್ರಿಯೂ ಅತ್ಯಂತ ಸಂತೋಷದಿಂದ ಕ್ರೀಡಿಸುತ್ತಿದ್ದುವು. ಆ ದೊಡ್ಡ ಮೀನು ಮಕ್ಕಳು ಮರಿಗಳ ಸ್ಪರ್ಶದಿಂದ ಸಂತೋಷವು ಹೆಚ್ಚುತ್ತಿರಲು ಆ ಋಷಿಯ ಇದುರಿಗೆ ತನ್ನ ಪುತ್ರ ಪೌತ್ರ ದೌಹಿತ್ರಾದಿಗಳೊಡನೆ ಪ್ರತಿದಿನವೂ ಅತ್ಯಂತ ಸಂತೋಷವನ್ನು ಅನುಭವಿಸುತ್ತಿದ್ದಿತು. ಇದನ್ನು ನೋಡಿ ನೀರಿನೊಳಗೆ

ಅಹೋ ಧನ್ಯೋಽಯಮೀದೃಶಮಪ್ಯನಭಿಮತಂ ಯೋನ್ಯಂ ತರಮ
ವಾಪ್ಯೈಭಿರಾತ್ಮಜ ಪೌತ್ರ ದೌಹಿತ್ರಾದಿಭಿಸ್ಸಹ ರಮಮಾಣೋಽತೀವಾ
ಸ್ಮಾಕಂ ಸ್ಪೃಹಾಮುತ್ಪಾದಯತಿ ॥ ೭೮ ॥

ವಯಮಪ್ಯೇವಂ ಪುತ್ರಾದಿಭಿಸ್ಸಹರಮ್ಯಾಮ ಇತ್ಯೇವಮಭಿಸಮೀಕ್ಷ್ಯ
ಸ ತಸ್ಮಾದಂತರ್ಜಲಾನ್ನಿಷ್ಕ್ರಮ್ಯ ಸಂತಾನಾಯ ನಿವೇಷ್ಟುಕಾಮಃ
ಕನ್ಯಾರ್ಥಂ ಮಾಂಧಾತಾರಂ ರಾಜಾನಮಗಚ್ಛತ್ ॥ ೭೫ ॥

ಆಗಮನಶ್ರವಣಸಮನಂತರಂ ಚೋತ್ಥಾಯ ತೇನ ರಾಜ್ಞಾ
ಸಮ್ಯಗರ್ಘ್ಯಾದಿನಾ ಪೂಜಿತಃ ಕೃತಾಸನಪರಿಗ್ರಹಃ ಸೌಭರಿರು
ವಾಚ ರಾಜಾನಂ ॥ ೭೬ ॥

---

ಕುಳಿತಿದ್ದ ಸೌಭರಿ ಮುನಿಯು ಏಕಾಗ್ರತೆಯ ಸಮಾಧಿಯನ್ನು ಬಿಟ್ಟು ಯಾವಾಗಲೂ ಆ ಮೀನಿನ ಕ್ರೀಡೆಯನ್ನು ನೋಡುತ್ತಾ ತನ್ನ ಮನಸ್ಸಿನಲ್ಲಿ ಯೋಚಿಸಿದನು. ಎಂತೆಂದರೆ:— ಈ ಮೀನಿನ ರೂಪದಲ್ಲಿರುವ ಜೀವನು ಮಹಾಪುಣ್ಯವಂತನು. ತಿರ್ಯಗ್ಯೋನಿ ಜನ್ಮವನ್ನು ಪಡೆದಿದ್ದರೂ ತನ್ನ ಪುತ್ರ ಪೌತ್ರ ದೌಹಿತ್ರರೊಡನೆ ಕ್ರೀಡಿಸುತ್ತ ನಮಗೂ ಅತ್ಯಂತ ಇಚ್ಛೆಯನ್ನುಂಟುಮಾಡುತ್ತಿರುವನು. ನಾನೂ ಹೀಗೆಯೇ ಪುತ್ರ ಪೌತ್ರಾದಿಗಳೊಡನೆ ವಿಹರಿಸಬೇಕು ಎಂದು ಯೋಚಿಸಿ ಆ ಮುನಿಯು ಆ ನೀರಿನಿಂದ ಹೊರಹೊರಟು ಪುತ್ರರನ್ನು ಪಡೆಯುವುದಕ್ಕಾಗಿ ವಿವಾಹಮಾಡಿಕೊಳ್ಳಬೇಕೆಂದು ಕನ್ಯಾರ್ಥಿಯಾಗಿ ಮಾಂಧಾತರಾಜನ ಸಮೀಪಕ್ಕೆ ಹೋದನು. ಋಷಿಯು ಬಂದುದನ್ನು ಕಂಡು ರಾಜನು ಎದ್ದು ಅರ್ಘ್ಯಾದಿಗಳಿಂದ ಪೂಜಿಸಿದನು. ಸೌಭರಿಯು ಪೀಠದಲ್ಲಿ ಕುಳಿತು ರಾಜನನ್ನು ಕುರಿತು ಹೇಳಲು ಪ್ರಾರಂಭಿಸಿದನು.

॥ ಸೌಭರಿಃ ॥

ನಿವೇಷ್ಟುಕಾಮೋಽಸ್ಮಿ ನರೇಂದ್ರ ಕನ್ಯಾಂ
ಪ್ರಯಚ್ಛ ಮೇ ಮಾ ಪ್ರಣಯಂ ವಿಭಾಂಕ್ಷೀಃ ।
ನ ಹ್ಯರ್ಥಿನಃ ಕಾರ್ಯವಶಾದುಪೇತಾಃ
ಕಕುತ್ಸ್ಥವಂಶೇ ವಿಮುಖಾಃ ಪ್ರಯಾಂತಿ ॥ ೭೭ ॥

ಅನ್ಯೇಽಪಿ ಸಂತ್ಯೇವ ನೃಪಾಃ ಪೃಥಿವ್ಯಾಂ
ಮಾಂಧಾತರೇಷಾಂ ತನಯಾಃ ಪ್ರಸೂತಾಃ ।
ಕಿಂ ತ್ವರ್ಥಿನಾಮರ್ಥಿತದಾನದೀಕ್ಷಾ
ಕೃತವ್ರತಂ ಶ್ಲಾಘ್ಯಮಿದಂ ಕುಲಂ ತೇ ॥ ೭೮ ॥

ಶತಾರ್ಧಸಂಖ್ಯಾಸ್ತವ ಸಂತಿ ಕನ್ಯಾ
ಸ್ತಾಸಾಂ ಮಮೈಕಾಂ ನೃಪತೇ ಪ್ರಯಚ್ಛ ।

---

೭೭-೭೯. ಎಲೈ ರಾಜನೇ ! ನಾನು ವಿವಾಹವನ್ನು ಮಾಡಿಕೊಳ್ಳಬೇಕೆಂದಿರುವೆನು. ನನ್ನ ಪ್ರೀತಿಯನ್ನು ನಾಶಮಾಡಬೇಡ. ನನಗೊಬ್ಬಳು ಕನ್ಯೆಯನ್ನು ಕೊಡು. ಕಕುತ್ಸ್ಥವಂಶದ ರಾಜರ ಬಳಿಗೆ ಕಾರ್ಯಾರ್ಥಿಗಳಾಗಿ ಬಂದ ಯಾಚಕರು ಫಲವಿಲ್ಲದೆ ಹೋಗುವುದಿಲ್ಲ. ಮಾಂಧಾತರಾಜನೇ ಭೂಮಿಯಲ್ಲಿ ಹೆಣ್ಣುಮಕ್ಕಳನ್ನು ಪಡೆದ ಬೇರೆ ರಾಜರೂ ಇರುವರು. ಆದರೆ ಯಾಚಕರಿಗೆ ಬೇಡಿದುದನ್ನು ಕೊಡುವ ವ್ರತದೀಕ್ಷೆಯನ್ನು ನಿಮ್ಮ ವಂಶದವರು ಪಡೆದಿರುವುದರಿಂದ ನಿಮ್ಮ ವಂಶವೇ ಶ್ಲಾಘ್ಯವಾದುದು. ರಾಜನೇ ! ನಿನಗೆ ಐವತ್ತು ಜನ ಕನ್ಯೆಯರಿರುವರು. ಅವರಲ್ಲಿ ಒಬ್ಬಳನ್ನು ನನಗೆ ಕೊಡು. ನನ್ನ ಪ್ರಾರ್ಥನೆಯು ಭಂಗವಾದೀತೆಂಬ ದುಃಖವು

ಯತ್ಪ್ರಾರ್ಥನಾಭಂಗಭಯಾದ್ಬಿಭೇಮಿ
ತಸ್ಮಾದಹಂ ರಾಜವರಾತಿದುಃಖಾತ್ ॥ ೭೯ ॥

॥ ಶ್ರೀ ಪರಾಶರಃ ॥

ಇತಿ ಋಷಿವಚನ ಮಾಕರ್ಣ್ಯ ಸರಾಜಾಜರಾಜರ್ಝರಿತದೇಹಂ
ತಂ ಋಷಿಮವಲೋಕ್ಯ ಪ್ರತ್ಯಾಖ್ಯಾನಕಾತರಸ್ತಸ್ಮಾಚ್ಚ ಶಾಪ
ತೋಽಬಿಭ್ಯತ್ ಕಿಂಚಿದಧೋಮುಖಶ್ಚಿರಂ ದಧ್ಯೌ ॥ ೮೦ ॥

॥ ಸೌಭರಿರುವಾಚ ॥

ನರೇಂದ್ರ ಕಸ್ಮಾತ್ಸಮುಪೈಷಿ ಚಿಂತಾಂ
ಅಸಹ್ಯಮುಕ್ತಂ ನ ಮಯಾತ್ರ ಕಿಂಚಿತ್ ।
ಯಾವಶ್ಯದೇಯಾ ತನಯಾ ತಯೈವ
ಕೃತಾರ್ಥತಾ ನೋ ಯದಿ ಕಿಂ ನ ಲಬ್ಧಂ ॥ ೮೧ ॥

---

ನನಗೆ ಭಯವನುಂಟುಮಾಡುತ್ತಿರುವುದು. (ಅದುದರಿಂದ ಯಾವ ವಿಚಾರವನ್ನೂ ಮಾಡದೆ ನನಗೆ ಒಬ್ಬ ಕನ್ಯೆಯನ್ನು ಕೊಡು ಎಂದು ಮುಖ್ಯಾಭಿಪ್ರಾಯವು) ಎಂದನು.

೮೦-೮೧. ಹೀಗೆಂದ ಋಷಿಯ ಮಾತನ್ನು ಕೇಳಿ ಆ ರಾಜನು ಮುಪ್ಪಿನಿಂದ ಶಿಥಿಲವಾದ ಶರೀರವುಳ್ಳ ಆ ಮುನಿಯನ್ನು ನೋಡಿ ಶಾಪಕೊಟ್ಟಾನೆಂದು ಭಯಪಟ್ಟು ಅವನನ್ನು ತಿರಸ್ಕರಿಸಲಾರದೆ ಮುಖವನ್ನು ತಗ್ಗಿಸಿಕೊಂಡು ಬಹಳಕಾಲ ಆಲೋಚಿಸುತ್ತಿದ್ದನು. ಇದನ್ನು ಕಂಡು ಸೌಭರಿಯು ರಾಜನೇ ! ಏಕೆ ಚಿಂತಿಸುವೆ ? ನಾನು ಈ ಸಂದರ್ಭದಲ್ಲಿ ಅಯುಕ್ತವಾದ ಮಾತನ್ನು ಹೇಳಲಿಲ್ಲ. ಕನ್ಯೆಯನ್ನು ಯಾರಿಗಾದರೂ ಅವಶ್ಯಕವಾಗಿ ದಾನಮಾಡಬೇಕಾಗಿರುವುದು. ಆ ದಾನದಿಂದಲೇ ನಮ್ಮ ಇಷ್ಟಸಿದ್ಧಿಯಾಗುತ್ತಿರಲು ನಿನಗೆ ನಷ್ಟವೇನಾಗುವುದು ? (ನಿನ್ನ ಸಮಸ್ತ ಇಷ್ಟಾರ್ಥಗಳೂ ಪೂರ್ಣವಾಗುವುದೆಂದು ಅಭಿಪ್ರಾಯವು) ಎಂದ ಮಾತನ್ನು ಕೇಳಿದ

ಅಥ ತಸ್ಯ ಭಗವತಃ ಶಾಪಭೀತಃ ಸಪ್ರಶ್ರಯಸ್ತಮುವಾಚ
ಅಸೌ ರಾಜಾ ॥ ೮೨ ॥

॥ ರಾಜಾ ॥

ಭಗವನ್ನಸ್ಮತ್ಕುಲಸ್ಥಿತಿರಿಯಂ ಯ ಏವ ಕನ್ಯಾಭಿರುಚಿತೋಽಭಿಜನವಾ
ನ್ವರಸ್ತಸ್ಮೈ ಕನ್ಯಾ ಪ್ರದೀಯತೇ । ಭವದ್ಯಾಚ್ಞಾ ಚಾಸ್ಮನ್ಮನೋರಥಾ
ನಾಮಪ್ಯಗೋಚರವರ್ತಿನೀ ಕಥಮಪ್ಯೇಷಾ ಸಂಜಾತಾ ತದೇವಮುಪಸ್ಥಿತೇ
ನ ವಿದ್ಮಃ ಕಿಂ ಕುರ್ಮ ಇತ್ಯೇತನ್ಮಯಾ ಚಿಂತ್ಯತ ಇತ್ಯಭಿಹಿತೇ ಚ
ತೇನ ಭೂಭುಜಾ ಮುನಿರಚಿಂತಯತ್ ॥ ೮೩ ॥

ಅಯಮನ್ಯೋಽಸ್ಮತ್ಪ್ರತ್ಯಾಖ್ಯಾನೋಪಾಯಃ ವೃದ್ಧೋಽಯಮನಭಿ
ಮತಃ ಸ್ತ್ರೀಣಾಂ ಕಿಮುತ ಕನ್ಯಾನಾಮಿತ್ಯಮುನಾ ಸಂಚಿಂತ್ಯೈತದ

---

ಮೇಲೆ ರಾಜನು ಆ ಮಹಾಮಹಿಮನ ಶಾಪಕ್ಕೆ ಭಯಪಟ್ಟು ವಿನಯದಿಂದ ಆ ಮುನಿಯನ್ನು ಕುರಿತು ಹೇಳಿದನು.

೮೩-೮೪. "ಮಹಾಮಹಿಮನೇ! ನಮ್ಮ ಕುಲಧರ್ಮವು ಹೀಗಿರುವುದು. ಏನೆಂದರೆ:— ಕನ್ಯೆಗೆ ಇಷ್ಟನಾದ ಯಾವ ಸತ್ಕುಲ ಪ್ರಸೂತನಾದ ವರನಿರುವನೋ ಅವನಿಗೆ ಕನ್ಯೆಯನ್ನು ಕೊಡುವೆವು. ತಮ್ಮ ಈ ಯಾಚನೆಯು ನಮ್ಮ ಮನಸ್ಸಿಗೆ ಗೋಚರವಾಗದೆ ಹೇಗೆ ಉಂಟಾಗಿರುವುದು ? ಹೀಗಿರುವಲ್ಲಿ ಏನುಮಾಡಬೇಕೆಂಬುದನ್ನು ತಿಳಿಯದೆ ನಾನು ಯೋಚಿಸುತ್ತಿರುವೆನು! ಎಂದು ಹೇಳುತ್ತಲು ಆ ಮುನಿಯು ಮನಸ್ಸಿನಲ್ಲಿ "ಇದು ನಮ್ಮನ್ನು ತಿರಸ್ಕರಿಸುವ ಒಂದು ಉಪಾಯವು" ಇವನು ಮುದುಕನು. ವಯಸ್ಸಾದ ಸ್ತ್ರೀಯರೇ ಇವನನ್ನಪೇಕ್ಷಿಸುವುದಿಲ್ಲವೆಂದಮೇಲೆ ಕನ್ನೆಯರ ವಿಷಯವನ್ನು ಹೇಳಬೇಕಾದುದೇನು! ಎಂದು ಇವನು ಯೋಚಿಸಿ

ಭಿಹಿತಂ । ಏವಮಸ್ತು ತಥಾ ಕರಿಷ್ಯಾಮೀತಿ ಸಂಚಿಂತ್ಯ ಮಾಂಧಾತಾ
ರಮುವಾಚ ॥ ೭೪ ॥

ಯದ್ಯೇವಂ ತದಾದಿಶ್ಯತಾಮಸ್ಮಾಕಂ ಪ್ರವೇಶಾಯ ಕನ್ಯಾಂತಃ
ಪುರವರ್ಷವರಃ ಯದಿ ಕನ್ಯೈವ ಕಾಚಿನ್ಮಾಮಭಿಲಷತಿ
ತದಾಹಂ ದಾರಸಂಗ್ರಹಂ ಕರಿಷ್ಯಾಮಿ । ಅನ್ಯಥಾ ಚೇತ್ತದ
ಲಮಸ್ಮಾಕಮೇತೇನಾತೀತ ಕಾಲಾರಂಭೇಣೇತ್ಯುಕ್ತ್ವಾ ವಿರರಾಮ ।೭೫ ॥
ತತಶ್ಚ ಮಾಂಧಾತ್ರಾ ಮುನಿಶಾಪಶಂಕಿತೇನ ಕನ್ಯಾಂತಃಪುರ
ವರ್ಷವರಃ ಸಮಾಜ್ಞಪ್ತಃ ॥ ೭೬ ॥

ತೇನ ಸಹ ಕನ್ಯಾಂತಃ ಪುರಂ ಪ್ರವಿಶನ್ನೇವ ಭಗವಾನಖಿಲಸಿದ್ಧ
ಗಂಧರ್ವಮನುಷ್ಯೇಭ್ಯೋತಿಶಯೇನ ಕಮನೀಯಂ ರೂಪ
ಮಕರೋತ್ ॥ ೭೭ ॥

---

ಹೀಗೆ ಹೇಳುವನು. ಆಗಲಿ, ನಾನು ಹೀಗೆ ಮಾಡುವೆನು ಎಂದು ಯೋಚಿಸಿ ಮಾಂಧಾತನನ್ನು ಕುರಿತು ಹೇಳಿದನು.

೭೫-೭೭. ಸೌಭರಿಯು ರಾಜನೇ ! ಹಾಗಾದರೆ ನಾವು ಕನ್ಯಾಂತಃಪುರಕ್ಕೆ ಪ್ರವೇಶ ಮಾಡಬಹುದೆಂದು ಅಂತಃಪುರದ ರಕ್ಷಕನಾದ ಷಂಡನಿಗೆ ಅಪ್ಪಣೆಮಾಡು. ಯಾವ ಕನ್ಯೆಯು ತಾನಾಗಿ ನನ್ನನ್ನಪೇಕ್ಷಿಸುವಳೋ ಆಗ ನಾನು ವಿವಾಹ ಮಾಡಿ ಕೊಳ್ಳುವೆನು. ಇಲ್ಲದಿದ್ದರೆ ಇಷ್ಟು ವಯಸ್ಸು ಕಳೆದಮೇಲೆ ವಿವಾಹವೇ ಬೇಡ. ಎಂದು ಹೇಳಿ ಸುಮ್ಮನಾದನು. ಬಳಿಕ ಮಾಂಧಾತನು ಮುನಿಯ ಶಾಪಕ್ಕೆ ಭಯ ಪಟ್ಟು ಕನ್ಯಾಂತಃಪುರ ರಕ್ಷಕನಾದ ಷಂಡನಿಗೆ ಅಪ್ಪಣೆಯನ್ನು ಮಾಡಿದನು. ಆ ಮಹಾ ಮಹಿಮನು ಅವನೊಡನೆ ಕನ್ಯಾಂತಃಪುರಕ್ಕೆ ಪ್ರವೇಶಿಸುತ್ತ ಸಮಸ್ತ ಸಿದ್ಧರು, ಗಂಧರ್ವರು, ಮನುಷ್ಯರು ಇವರಿಗಿಂತ ಅತಿಶಯವಾದ ಮನೋಹರವಾದ ರೂಪ ವನ್ನು ಹೊಂದಿದನು.

ಪ್ರವೇಶ್ಯ ಚ ತಮೃಷಿಮಂತಃಪುರವರ್ಷವರಸ್ತಾಃ ಕನ್ಯಾಃ ಪ್ರಾಹ ॥ ೮೮ ॥

ಭವತೀನಾಂ ಜನಯಿತಾ ಮಹಾರಾಜಸ್ಸಮಾಜ್ಞಾಪಯತಿ ॥ ೮೯ ॥

ಅಯಮಸ್ಮಾನ್ ಬ್ರಹ್ಮರ್ಷಿಃ ಕನ್ಯಾರ್ಥೀ ಸಮಭ್ಯಾಗತಃ ॥ ೯೦ ॥

ಮಯಾ ಚಾಸ್ಯ ಪ್ರತಿಜ್ಞಾತಂ ಯದ್ಯಸ್ಮತ್ಕನ್ಯಾ ಯಾ ಕಾಚಿ
ದ್ಭಗವಂತಂ ವರಯತಿ ತತ್ಕನ್ಯಾಚ್ಛಂದೇನಾಹಂ ಪರಿಪಂಥಾ
ನಂ ಕರಿಷ್ಯಾಮೀತ್ಯಾಕರ್ಣ್ಯ ಸರ್ವಾ ಅಪಿ ತಾಃ ಕನ್ಯಾಃ ಸಾ
ನುರಾಗಾಃ ಸಮನ್ಮಥಾಃ ಕರೇಣವ ಇವೇಭಯೂಥಪತಿಂ
ತಮೃಷಿಮಹಮಹಮಿಕಯಾ ವರಯಾಂಬಭೂವುರೂಚುಶ್ಚ ॥ ೯೧ ॥

ಅಲಂಭಗಿನ್ಯೋಽಹಮಿಮಂ ವೃಣೋಮಿ
ವೃಣೋಮ್ಯಹಂ ನೈಷ ತವಾನುರೂಪಃ ।

---

೮೮–೯೧. ಕನ್ಯಾಂತಃಪುರಕ್ಕೆ ರಕ್ಷಕನಾದ ಷಂಡನು ಆ ಋಷಿಯನ್ನು ಕರೆದು ಕೊಂಡು ಹೋಗಿ ಆ ಕನ್ಯೆಯರನ್ನು ಕುರಿತು "ಓ ಕನ್ಯೆಯರೇ ! ನಿಮ್ಮ ತಂದೆಯಾದ ಮಹಾರಾಜನು ಅಪ್ಪಣೆಮಾಡಿ ಈ ಬ್ರಹ್ಮರ್ಷಿಯನ್ನು ನನ್ನೊಡನೆ ಕಳುಹಿಸಿರುವನು. ಈ ಮಹರ್ಷಿಯು ಕನ್ಯಾರ್ಥಿಯಾಗಿ ಬಂದಿರುವನು. ನಮ್ಮ ಕನ್ಯೆಯರಲ್ಲಿ ಯಾವಳು ಈ ಮಹರ್ಷಿಯನ್ನು ವಿವಾಹ ಮಾಡಿಕೊಳ್ಳಲು ಇಷ್ಟಪಡುತ್ತಾಳೆಯೋ ಅವಳ ಇಷ್ಟಕ್ಕೆ ನಾನು ಅಡ್ಡಿಬರುವುದಿಲ್ಲ ಎಂದು ಈ ಮಹರ್ಷಿಗೆ ಮಾತು ಕೊಟ್ಟಿರುವನು. ಎಂದು ಹೇಳಿದನು. ಈ ಮಾತನ್ನು ಕೇಳಿ ಆ ಎಲ್ಲ ಕನ್ಯೆಯರೂ ಸಲಗನನ್ನು ಹೆಣ್ಣಾನೆಗಳು ಅನುಸರಿಸುವಂತೆ ಅನುರಾಗದಿಂದಲೂ, ಕಾಮಬಾಧೆಯಿಂದಲೂ ಕೂಡಿ ನಾನು ತಾನೆಂದು ಆ ಮುನಿಯನ್ನು ವರಿಸಿದರು. ಮತ್ತು ತಮ್ಮಲ್ಲಿ ಮುಂದೆ ಹೇಳುವಂತೆ ಮಾತನಾಡಿಕೊಂಡರು.

೯೨-೯೪. ಅಕ್ಕ ತಂಗಿಯರೇ ನಾನು ಈತನನ್ನು ವರಿಸುತ್ತೇನೆ. ನಿನಗೆ ಅನುರೂಪನಲ್ಲ ನಾನು ವರಿಸುತ್ತೇನೆ. ಇವನನ್ನು ವಿಧಿಯು ನನ್ನ ಗಂಡನಾಗಿಯೇ

ಮಮೈವ ಭರ್ತಾ ವಿಧಿನೈಷ ಸೃಷ್ಟಃ
ಸೃಷ್ಟಾಹಮಸ್ಯೋಪಶಮಂ ಪ್ರಯಾಹಿ ॥ ೯೨ ॥

ವೃತೋ ಮಯಾಯಂ ಪ್ರಥಮಂ ಮಯಾಯಂ
ಗೃಹಂ ವಿಶನ್ನೇವ ವಿಹನ್ಯಸೇ ಕಿಂ ।
ಮಯಾಮಯೇತಿ ಕ್ಷಿತಿಪಾತ್ಮಜಾನಾಂ
ತದರ್ಥಮತ್ಯಂತಕಲಿರ್ಬಭೂವ ॥ ೯೩ ॥

ಯದಾ ತು ಸರ್ವಾಭಿರತೀವಹಾರ್ದಾ
ದ್ವೃತಸ್ಸ ಕನ್ಯಾಭಿರನಿಂದ್ಯಕೀರ್ತಿಃ ।
ತದಾ ಸ ಕನ್ಯಾಧಿಕೃತೋ ನೃಪಾಯ
ಯಥಾವದಾಚಷ್ಟ ವಿನಮ್ರಮೂರ್ತಿಃ ॥ ೯೪ ॥

॥ ಶ್ರೀ ಪರಾಶರಃ ॥

ತದವಗಮ್ಯ ಕಿಮೇತ್ಕಥಮೇತತ್ಕಿಂ ಕರೋಮಿ ಕಿಂ

---

ಸೃಷ್ಟಿಮಾಡಿರುವನು. ನಾನು ಮೊದಲು ವರಿಸಿದೆನು. ತಾನು ಮೊದಲು ವರಿಸಿದೆನು. ಎಂದು ಅವರವರಲ್ಲಿಯೇ ವಿಶೇಷವಾಗಿ ಜಗಳಕ್ಕೆ ಮೊದಲಾಯಿತು. ಸಮಸ್ತಕನ್ಯೆಯರೂ ಮನಃಪೂರ್ವಕವಾಗಿ ಅವನನ್ನು ವರಿಸಿದರೆಂದು ಅಂತಃಪುರಾಧಿಕಾರಿಯು ವಿನಯದಿಂದ ರಾಜನ ಸಮೀಪಕ್ಕೆ ಹೋಗಿ ನಿಜವಾದ ಸಂಗತಿಯನ್ನು ಹೇಳಿದನು.

೯೫-೯೬. ಇದನ್ನು ತಿಳಿದ ರಾಜನು ಇದೇನು ಕಾರಣದಿಂದ ಹೀಗಾಯಿತು ? ನಾನೇನು ಹೇಳಿದೆನು ? ಈಗ ನಾನೇನು ಮಾಡಲಿ ? ಎಂದು ಚಂಚಲಬುದ್ಧಿಯುಳ್ಳವ

ಮಯಾಭಿಹಿತಮಿತ್ಯಾಕುಲಮತಿ ರನಿಚ್ಛನ್ನಪಿ ಕಥಮಪಿ
ರಾಜಾನುಮೇನೇ ॥ ೯೫ ॥

ಕೃತಾನುರೂಪವಿವಾಹಶ್ಚ ಮಹರ್ಷಿಸ್ಸಕಲಾ ಏವ ತಾಃ ಕನ್ಯಾಃ
ಸ್ವಮಾಶ್ರಮಮನಯತ್ ॥ ೯೬ ॥

ತತ್ರ ಚಾಶೇಷಶಿಲ್ಪಕಲ್ಪಪ್ರಣೇತಾರಂ ಧಾತಾರಮಿವಾನ್ಯಂ ವಿಶ್ವ
ಕರ್ಮಾಣಮಾಹೂಯ ಸಕಲಕನ್ಯಕಾನಾಮೇಕೈಕಸ್ಯಾಃ ಪ್ರೋತ್ಫು
ಲ್ಲಪಂಕಜಾಃ ಕೂಜತ್ಕಲಹಂಸಕಾರಂಡವಾದಿವಿಹಂಗಮಾಭಿರಾ
ಮಜಲಾಶಯಸ್ಸೋಪಧಾನಾಸ್ಸಾವಕಾಶಾಸ್ಸಾಧುಕೃ
ಯ್ಯಾಪರಿಚ್ಛದಾಃ ಪ್ರಾಸಾದಾಃ ಕ್ರಿಯಂತಾಮಿತ್ಯಾದಿದೇಶ ॥ ೯೭ ॥

ತಚ್ಚ ತಥೈವಾನುಷ್ಠಿತಮಶೇಷಶಿಲ್ಪವಿಶೇಷಾಚಾರ್ಯಃ ತ್ವಷ್ಟಾ
ದರ್ಶಿತವಾನ್ ॥ ೯೮ ॥

---

ನಾಗಿ ತನಗೆ ಇಷ್ಟವಿಲ್ಲದಿದ್ದರೂ ಹೇಗೋ ಆ ಕನ್ಯೆಯರನ್ನು ಮಹರ್ಷಿಗೆ ಕೊಡಲು ಒಪ್ಪಿಕೊಂಡನು. ಆ ಮಹರ್ಷಿಯು ವಿವಾಹವನ್ನು ಮಾಡಿಕೊಂಡು ಆ ಕನ್ಯೆಯರೆಲ್ಲ ರನ್ನೂ ತನ್ನಾಶ್ರಮಕ್ಕೆ ಕರೆದುಕೊಂಡು ಹೋದನು.

೯೭-೧೦೦. ಅಲ್ಲಿ ಆ ಮುನಿಯು ಸಮಸ್ತ ಶಿಲ್ಪ ಕಲೆಯನ್ನೂ ಬಲ್ಲ, ಎರಡ ನೆಯ ಬ್ರಹ್ಮನಂತಿರುವ ವಿಶ್ವಕರ್ಮನೆಂಬ ದೇವಶಿಲ್ಪಿಯನ್ನು ಕರೆದು ಆ ಕನ್ಯೆಯರಲ್ಲಿ ಒಬ್ಬೊಬ್ಬರಿಗೂ ಅರಳಿದ ಕಮಲಗಳಿಂದಲೂ ಮಧುರಧ್ವನಿಮಾಡುವ ಹಂಸಕಾರಂಡ ಮುಂತಾದ ಹಕ್ಕಿಗಳಿಂದಲೂ ಕೂಡಿದ ಮನೋಹರವಾದ ಸರೋವರಗಳಿಂದಲೂ, ಉಪವನಗಳಿಂದಲೂ ಉತ್ತಮವಾದ ಹಾಸಿಗೆಗಳಿಂದಲೂ ಕೂಡಿದ ಉಪ್ಪರಿಗೆಯ ಮನೆಗಳನ್ನು ಮಾಡಿಕೊಡಬೇಕೆಂದು ಆಜ್ಞೆ ಮಾಡಿದನು. ಶಿಲ್ಪಾಚಾರ್ಯನಾದ

ತತಶ್ಚ ಪರಮರ್ಷಿಣಾ ಸೌಭರಿಣಾಜ್ಞಪ್ತೇಷು ಗೃಹೇಷ್ವನಪಾ
ಯೀ ನಂದನಮಹಾನಿಧಿರಾಸಾಂ ಚಕ್ರೇ ॥ ೯೯ ॥

ತತೋಽನವರತಭಕ್ಷ್ಯಭೋಜ್ಯಲೇಹ್ಯಾದ್ಯುಪಭೋಗೈರಾಗತಾನು
ಗತಭೃತ್ಯಾದೀನಹರ್ನಿಶಮಶೇಷಗೃಹೇಷು ತಾಃ ಕ್ಷಿತೀಶದುಹಿತ
ರೋ ಭೋಜಯಾಮಾಸುಃ ॥ ೧೦೦ ॥

ಏಕದಾ ದುಹಿತೃಸ್ನೇಹಾಕೃಷ್ಟಹೃದಯಸ್ಸ ಮಹೀಪತಿಃ ಕಿಮಿತಿ
ದುಃಖಿತಾಸ್ತಾ ಉತ ಸುಖಿತಾ ವೇತಿ ವಿಚಿಂತ್ಯ ತಸ್ಯ
ಮಹರ್ಷೇರಾಶ್ರಮಸಮೀಪಮುಪೇತ್ಯ ಸ್ಫುರದಂಶುಮಾಲಂ ಸ್ಫಟಿಕ
ಮಣಿಮಯ ಪ್ರಾಸಾದಮಾಲಮತಿರಮ್ಯೋಪವನ ಜಲಾಶಯಂ
ದದರ್ಶ ॥ ೧೦೧ ॥

ಪ್ರವಿಶ್ಯ ಚೈಕಂ ಪ್ರಾಸಾದಮಾತ್ಮಜಾಂ ಪರಿಷ್ವಜ್ಯ ಕೃತಾಸನ
ಪರಿಗ್ರಹಃ ಪ್ರವೃತ್ತಸ್ನೇಹನಯನಾಂಬುಗರ್ಭೋಽಬ್ರವೀತ್ ॥ ೧೦೨ ॥

---

ಅವನು ಹಾಗೆಯೇ ಮಾಡಿಕೊಟ್ಟನು. ಆ ಮೇಲೆ ಸೌಭರಿ ಮಹರ್ಷಿಯ ಅಪ್ಪಣೆಯಿಂದ ಮನೆಗಳಲ್ಲಿ ಶಾಶ್ವತವಾದ ಆನಂದವನ್ನುಂಟುಮಾಡುವ ಮಹಾನಿಧಿಯು ನೆಲಸಿತು. ಅಲ್ಲಿ ಕನ್ಯೆಯರು ಎಲ್ಲ ಮನೆಗಳಲ್ಲಿಯೂ ಯಾವಾಗಲೂ ಭಕ್ಷ್ಯಭೋಜ್ಯಾದಿಗಳಿಂದ ತಮ್ಮ ಜತೆಯಲ್ಲಿ ಬಂದ ಸೇವಕರನ್ನು ತೃಪ್ತಿಪಡಿಸುತ್ತಲಿದ್ದರು. ಮತ್ತು ತಾವೂ ಅವರೊಡನೆ ಸಂತೋಷ ಸುಖಾನುಭವಗಳಲ್ಲಿದ್ದರು.

೧೦೧-೧೦೩. ಒಂದಾನೊಂದುದಿನ ರಾಜನು ಹೆಣ್ಣುಮಕ್ಕಳ ಮೇಲಿನ ಪ್ರೀತಿಯಿಂದ ಅವರು ದುಃಖಪಡುತ್ತಿರುವರೋ ಸುಖಪಡುತ್ತಿರುವರೋ, ಎಂದು ಚಿಂತಿಸಿ ಆ ಮಹರ್ಷಿಯ ಆಶ್ರಮದ ಸಮೀಪಕ್ಕೆ ಬಂದು ಪ್ರಕಾಶ

ಅಯಿ ಪುತ್ರಿ ವತ್ಸೇ ಭವತ್ಯಾಸ್ಸುಖಮುತ ಕಿಂಚಿದಸುಖಂ
ಅಪಿ ತೇ ಮಹರ್ಷಿಸ್ಸ್ನೇಹವಾನುತ ನ ಸಂಸ್ಮರ್ಯತೇಽಸ್ಮದ್ಗೃ
ಹವಾಸ ಇತ್ಯುಕ್ತಾ ತತ್ತನಯಾಪಿ ಪಿತರಮಾಹ ॥ ೧೦೩ ॥

ತಾತಾತಿರಮಣೀಯೋಽತ್ರ ಪ್ರಾಸಾದೋಽತಿಮನೋಜ್ಞಮುಪವನ
ಮತಿಕಲವಾಕ್ಯವಿಹಂಗಾಭಿರುತಾಃ ಪ್ರೋತ್ಫುಲ್ಲಪದ್ಮಾಕರಜಲಾ
ಶಯಾ ಮನೋಽನುಕೂಲಭಕ್ಷ್ಯ ಭೋಜ್ಯಾನುಲೇಪನವಸ್ತ್ರ
ಭೂಷಾದಿಭೋಗೋ ಮೃದೂನಿ ಶಯನಾಸನಾನಿ ಸರ್ವಸಂ

ಪತ್ಸಮವೇತಮೇತದ್ಗಾರ್ಹಸ್ಥ್ಯಂ ॥ ೧೦೪ ॥

ತಥಾಪಿ ಕೇನ ವಾ ಜನ್ಮಭೂಮಿರ್ನ ಸ್ಮರ್ಯತೇ ॥ ೧೦೫ ॥

ತ್ವತ್ಪ್ರಸಾದಾದಿದಮಶೇಷಮತಿಶೋಭನಂ ॥ ೧೦೬ ॥

---

ಮಯವಾದ ಕಿರಣಗಳಿಂದ ಕೂಡಿದ ಸ್ಫಟಿಕ ನಿರ್ಮಿತವಾದ ಉಪ್ಪರಿಗೆಯ ಸಾಲುಗಳನ್ನೂ ಮನೋಹರವಾದ ಉಪವನಗಳನ್ನೂ, ಜಲಾಶಯಗಳನ್ನೂ ನೋಡಿದನು. ಒಂದು ಉಪ್ಪರಿಗೆಯ ಮನೆಯನ್ನು ಹೊಕ್ಕು ಮಗಳನು ಕಂಡು ಆಲಿಂಗಿಸಿ ಪೀಠದಲ್ಲಿ ಕುಳಿತು ಪ್ರೀತಿಯಿಂದ ಕಣ್ಣೀರನ್ನು ಸುರಿಸುತ್ತಾ ಮಾತನಾಡಿದನು. "ಪ್ರೀತಿಪಾತ್ರಳಾದ ಮಗಳೇ ಸುಖವಾಗಿರುವೆಯಾ ? ಯಾವ ದುಃಖವೂ ಇಲ್ಲವಷ್ಟೆ? ಮಹರ್ಷಿಯೂ ನಿನ್ನಲ್ಲಿ ಪ್ರೀತಿಯಿಂದ ಇರುವನೇ ? ನಮ್ಮ ಮನೆಯ ವಾಸವನ್ನು ಜ್ಞಾಪಿಸಿಕೊಳುವುದಿಲ್ಲವಷ್ಟೆ ? ಎಂದು ಪ್ರಶ್ನೆ ಮಾಡಿದನು.

೧೧೪-೧೦೭. ಮಗಳು "ತಂದೆಯೇ ಈ ಉಪ್ಪರಿಗೆ ಮನೆಯು ಸುಂದರವಾಗಿರುವುದು. ಇಲ್ಲಿರುವ ಉಪವನವೂ, ಮಧುರಧ್ವನಿಮಾಡುವ ಹಕ್ಕಿಗಳಿಂದಲೂ, ಅರಳಿದ ಕಮಲಗಳಿಂದಲೂ ಕೂಡಿದ ಸರೋವರವೂ ಮನಸ್ಸಿಗೆ ಹಿತವಾದ ಭಕ್ಷ್ಯ ಭೋಜ್ಯಗಳೂ, ಗಂಧ ಪುಷ್ಪ ವಸ್ತ್ರಾಭರಣಾದಿಗಳೂ, ಮೃದುವಾದ ಹಾಸಿಗೆಗಳೂ, ಪೀಠಗಳೂ ಸರ್ವಸಂಪತ್ತಿನಿಂದ ಕೂಡಿರುವುವು. ಇಂತಹ ಗೃಹಸ್ಥಧರ್ಮವನ್ನಾಚರಿ

ಕಿಂತ್ವೇಕಂ ಮಮೈತದ್ದುಃಖ ಕಾರಣಂ ಯದಸ್ಮದ್ಗೃಹಾನ್ಮಹ
ರ್ಷಿರಯಮಸ್ಮದ್ಭರ್ತಾ ನ ನಿಷ್ಕ್ರಾಮತಿ । ಮಮೈವ ಕೇವಲ
ಮಯಮತಿಪ್ರೀತ್ಯಾ ಸಮೀಪಪರಿವರ್ತೀ ನಾನ್ಯಾಸಾಮಸ್ಮ
ದ್ಭಗಿನೀನಾಂ ॥ ೧೦೭ ॥

ಏವಂ ಚ ಮಮ ಸೋದರಾಃ ದುಃಖಿತಾಃ ಇತ್ಯೇವಮ
ತಿದುಃಖಕಾರಣಮಿತ್ಯುಕ್ತಸ್ತಯಾ ದ್ವಿತೀಯಂ ಪ್ರಾಸಾದ
ಮುಪೇತ್ಯ ತನಯಾಂ ಪರಿಷ್ವಜ್ಯೋಪವಿಷ್ಟಸ್ತಥೈವ ಪೃಷ್ಟವಾನ್ ॥ ೧೦೮ ॥

ತಯಾಪಿ ಸರ್ವಮೇವ ಪ್ರಾಸಾದಾದ್ಯುಪಭೋಗಸುಖಂ ಭೃಶಮಾಖ್ಯಾತಂ
ಸ್ವಪಿತ್ರೇ ಮಮೈವ ಕೇವಲಮತಿಪ್ರೀತ್ಯಾ ಭರ್ತಾ ಪಾರ್ಶ್ವ
ಪರಿವರ್ತೀ ನಾನ್ಯಾಸಾಮಸ್ಮದ್ಭಗಿನೀನಾಮಿತ್ಯೇವಮಾದಿ ಶ್ರುತ್ವಾ
ಸಮಸ್ತಪ್ರಾಸಾದೇಷು ರಾಜಾ ಪ್ರವಿಶ್ಯ ತನಯಾಸ್ತಥೈವಾಪೃಚ್ಛತ್ ॥೧೦೯॥

---

ಸುತ್ತಿರುವೆವು. ಹೀಗಿದ್ದರೂ ಹುಟ್ಟಿದ ಮನೆಯನ್ನು ಯಾರು ಸ್ಮರಿಸದಿದ್ದಾರು. ನಿನ್ನ ಆಶೀರ್ವಾದದಿಂದ ಇವೆಲ್ಲವೂ ಅತ್ಯಂತ ಮಂಗಳಕರವಾಗಿರುವುವು ಆದರೆ ಒಂದು ವಿಷಯವು ಮಾತ್ರ ನನಗೆ ದುಃಖಕಾರಣವಾಗಿರುವುದು. ಅದೇನೆಂದರೆ:– ನನ್ನ ಪತಿಯಾದ ಮಹರ್ಷಿಯು ಈ ನನ್ನ ಮನೆಯಿಂದ ಹೊರಗೆ ಹೋಗುವುದೇ ಇಲ್ಲ ಅತ್ಯಂತ ಪ್ರೀತಿಯಿಂದ ನನ್ನ ಸಮೀಪದಲ್ಲಿಯೇ ಇರುವನು. ನನ್ನ ಸಹೋದರಿಯರ ಮನೆಗೆ ಇವನು ಹೋದುದೇ ಇಲ್ಲ. ಆದುದರಿಂದ ಅವರ ವಿಷಯ ದಲ್ಲಿ ಪತಿಯು ಪ್ರೀತಿಯಿಲ್ಲ ವೆಂದೂ, ಅವರು ದುಃಖಿಸುತ್ತಿರುವರೆಂದೂ ತಿಳಿದು ನಾನು ದುಃಖಪಡುತ್ತಿರುವೆನು.” ಎಂದಳು.

೧೦೮-೧೧೧. ರಾಜನು ಅವರ ಮಾತನ್ನು ಕೇಳಿ ಮತ್ತೊಂದು ಉಪ್ಪರಿಗೆಯ ಮನೆಯನ್ನು ಹೊಕ್ಕು ಮಗಳನ್ನು ಕಂಡು ಆಲಿಂಗಿಸಿ ಕುಳಿತುಕೊಂಡು ಅದೇ ಪ್ರಶ್ನೆಯನ್ನು ಕೇಳಿದನು. ಅವಳೂ ತನಗಿರುವ ಉಪ್ಪರಿಗೆಯ ಮನೆಯೇ ಮುಂತಾದ ಸಮಸ್ತ ಸುಖಸಾಧನಗಳನ್ನೂ ಹೇಳಿ ನನ್ನ ಪತಿಯು ನನ್ನೊಬ್ಬಳಲ್ಲಿಯೇ ಪ್ರೀತಿಯಿಂದ ಇರುವನು. ನನ್ನ ಸಹೋದರಿಯರಲ್ಲಿ ಯಾರಲ್ಲಿಯೂ ಇಷ್ಟು ಪ್ರೀತಿಯಿಂದಿಲ್ಲ

ಸರ್ವಾಭಿಸ್ತಾಭಿಸ್ತಥೈವಾಭಿಹಿತಃ ಪರಿತೋಷವಿಸ್ಮಯ
ನಿರ್ಭರವಿವಶಹೃದಯೋ ಭಗವಂತಂ ಸೌಭರಿಮೇಕಾಂತಾ
ವಸ್ಥಿತಮುಪೇತ್ಯ ಕೃತಪೂಜೋಽಬ್ರವೀತ್ ॥ ೧೧೦ ॥

ದೃಷ್ಟಸ್ತೇ ಭಗವನ್ ಸುಮಹಾನೇಷ ಸಿದ್ಧಿಪ್ರಭಾವಃ ನೈವಂವಿಧ
ಮನ್ಯಸ್ಯ ಕಸ್ಯಚಿದಸ್ಮಾಭಿರ್ವಿಭೂತಿವಿಲಸಿತಮುಪಲಕ್ಷಿತಂ ಕಿಯ
ದೇತದ್ಭಗವತಸ್ತಪಸಃ ಫಲಮಿತ್ಯಭಿಪೂಜ್ಯ ತಮೃಷಿಂ ತತ್ರೈವ
ತೇನರ್ಷಿವರ್ಯೇಣ ಸಹ ಕಿಂಚಿತ್ಕಾಲ...ಮುತೋಪಭೋಗಾನ್
ಬುಭುಜೇ ಸ್ವಪುರಂ ಚಾಜಗಾಮ ॥ ೧೧೧ ॥

ಕಾಲೇನ ಗಚ್ಛತಾ ತಸ್ಯ ತಾಸು ರಾಜತನಯಾಸು ಪುತ್ರಶತಂ
ಸಾರ್ಧಮಭವತ್ ॥ ೧೧೨ ॥

---

ಎಂಬಿವೇ ಮೊದಲಾದ ಮಾತನ್ನು ಕೇಳಿ ಎಲ್ಲ ಮಕ್ಕಳ ಮನೆಗೂ ತೆರಳಿ ಹಾಗೆಯೇ ಪ್ರಶ್ನೆ ಮಾಡಿದನು. ಎಲ್ಲರೂ ಒಂದೇ ಬಗೆಯ ಉತ್ತರವನ್ನು ಹೇಳಿದರು. ಇದರಿಂದ ಅವನು ಸಂತೋಷ ಮತ್ತು ಆಶ್ಚರ್ಯಗಳಿಂದ ತುಂಬಿದ ಮನಸ್ಸುಳ್ಳವನಾಗಿ ಏಕಾಂತವಾಗಿ ಕುಳಿತಿದ್ದ ಸೌಭರಿ ಮುನಿಯ ಸಮೀಪಕ್ಕೆ ಹೋಗಿ ಅವನ ಸತ್ಕಾರವನ್ನು ಪಡೆದು ಮಾತನಾಡಿದನು. ಮಹಾಮಹಿಮನಾದ ಮುನಿಯೇ! ನಿನ್ನ ಸಿದ್ಧಿಯ ಮಹಿಮೆಯನ್ನು ನೋಡಿದೆನು. ಇಂತಹ ವಿಭೂತಿ ವಿಲಾಸವನ್ನು ನಾನು ಮತ್ತೆಲ್ಲಿಯೂ ಯಾರಲ್ಲಿಯೂ ನೋಡಲಿಲ್ಲ. ನಿನ್ನ ತಪಸ್ಸಿನ ಮಹಿಮೆಯ ಫಲವು ಮಹತ್ತಾದುದು." ಎಂದು ಹೊಗಳಿ ಕೆಲವು ದಿನಗಳು ಆ ಮುನಿಯ ಜತೆಯಲ್ಲಿದ್ದು ತನಗಿಷ್ಟವಾದ ಸುಖಗಳನ್ನನುಭವಿಸಿ ತನ್ನ ಪಟ್ಟಣಕ್ಕೆ ಹಿಂದಿರುಗಿದನು.

೧೧೨–೧೧೫. ಕೆಲವು ಕಾಲದ ಮೇಲೆ ಆ ಸೌಭರಿ ಮುನಿಗೆ ಆ ರಾಜಪುತ್ರಿಯರಲ್ಲಿ ನೂರೈವತ್ತು ಜನ ಮಕ್ಕಳಾದರು, ದಿನ ದಿನಕ್ಕೆ ಆ ಮಕ್ಕಳಲ್ಲಿ ಪ್ರೀತಿಯು ಹೆಚ್ಚಿ ಅಭಿಮಾನವು ಹೆಚ್ಚಿತು. ಅವನು ನನ್ನ ಮಕ್ಕಳು ಮುದ್ದು ಮಾತನಾಡುತ್ತಾ

ಅನುದಿನಾನುರೂಢಸ್ನೇಹಪ್ರಸರಶ್ಚ ಸ ತತ್ರಾಶೀವ ಮಮತಾ
ಕೃಷ್ಟಹೃದಯೋಽಭವತ್ ॥ ೧೧೩ ॥

ಅಪ್ಯೇತೇಸ್ಮತ್ಪುತ್ರಾಃ ಕಲಭಾಷಿಣಃ ಪದ್ಭ್ಯಾಂ ಗಚ್ಛೇಯುಃ ।
ಅಪ್ಯೇತೇ ಯೌವನಿನೋ ಭವೇಯುಃ । ಅಪಿ ಕೃತದಾರಾನೇತಾ
ನ್ಪಶ್ಯೇಯಂ । ಅಪ್ಯೇಷಾಂ ಪುತ್ರಾ ಭವೇಯುಃ । ಅಪ್ಯೇತತ್ಪು
ತ್ರಾನ್ಪುತ್ರಸಮನ್ವಿತಾನ್ಪಶ್ಯೇಯಮಿತ್ಯಾದಿಮನೋರಥಾನನುದಿನಂ
ಕಾಲಸಂಪತ್ತಿ ವೃದ್ಧಾನವೇಕ್ಷ್ಯೈತಚ್ಚಿಂತಯಾಮಾಸ ॥ ೧೧೪ ॥

ಅಹೋ ಮೇ ಮೋಹಸ್ಯಾತಿವಿಸ್ತಾರಃ ॥ ೧೧೫ ॥

ಮನೋರಥಾನಾಂ ನ ಸಮಾಪ್ತಿರಸ್ತಿ
ವರ್ಷಾಯುತೇನಾಪ್ಯಥವಾಪಿ ಲಕ್ಷೈಃ ।
ಪೂರ್ಣೇಷು ಪೂರ್ಣೇಷು ಪುನರ್ನವಾನಾಂ
ಉತ್ಪತ್ತಯಸ್ಸಂತಿ ಮನೋರಥಾನಾಂ ॥ ೧೧೬ ॥

---

ಕಾಲಿನಿಂದ ನಡೆಯುವರೇ? ಅವರು ಪ್ರಾಯದವರಾಗುವರೇ? ವಿವಾಹ ಮಾಡಿಕೊಂಡ ಅವರನ್ನು ನೋಡುವೆನೇ? ಅವರಿಗೂ ಮಕಳಾಗುವರೇ? ಅವರ ಮಕ್ಕಳೂ ಮಕ್ಕಳನ್ನು ಪಡೆದುದನ್ನು ನೋಡುವೆನೇ? ಇತ್ಯಾದಿಯಾದ ಇಷ್ಟಾರ್ಥಗಳನ್ನು ಯೋಚಿಸುತ್ತ ದಿನ ದಿನಕ್ಕೆ ಹೆಚ್ಚುತ್ತಿರುವ ಇಷ್ಟಾರ್ಥಗಳನ್ನು ಕಂಡು ನನ್ನ ಅಜ್ಞಾನವು ಬಹಳವಾಗಿ ಬೆಳೆಯಿತು" ಎಂದು ಚಿಂತಿಸಿದನು.

೧೧೬-೧೧೭. ಹತ್ತು ಸಾವಿರ ವರ್ಷವಾಗಲಿ, ಲಕ್ಷ ವರ್ಷವಾಗಲಿ. ಇಷ್ಟಾರ್ಥಗಳು ಪೂರ್ತಿಯಾಗುವುದಿಲ್ಲ. ಒಂದೊಂದು ಇಷ್ಟಾರ್ಥಗಳು ಪೂರ್ತಿಯಾದರೆ ಹೊಸ ಇಷ್ಟಾರ್ಥಗಳು ಹುಟ್ಟುತ್ತಲೇ ಇರುವುವು. ನನ್ನ ಮಕ್ಕಳು ನಡಿಗೆಯನ್ನು ಕಲಿತರು. ಯೌವನವಂತರಾದರು. ಮದುವೆ ಮಾಡಿಕೊಂಡರು. ಮಕ್ಕಳನ್ನು

ಪದಾಭ್ಯಾಂ ಗತಾ ಯೌವನಿನಶ್ಚ ಜಾತಾ
ದಾರೈಶ್ಚ ಸಂಯೋಗಮಿತಾಃ ಪ್ರಸೂತಾಃ ।
ದೃಷ್ಟಾಸ್ಸುತಾಸ್ತತ್ತನಯಪ್ರಸೂತಿಂ
ದ್ರಷ್ಟುಂ ಪುನರ್ವಾಂಛತಿ ಮೇಂತರಾತ್ಮಾ ॥ ೧೧೭ ॥

ದ್ರಕ್ಷ್ಯಾಮಿ ತೇಷಾಮಪಿ ಚೇತ್ಪ್ರಸೂತಿಂ
ಮನೋರಥೋ ಮೇ ಭವಿತಾ ತತೋಽನ್ಯಃ ।
ಪೂರ್ಣೇಽಪಿ ತಸ್ಯಾಪ್ಯಪರಸ್ಯ ಜನ್ಮ
ನಿವಾರ್ಯತೇ ಕೇನ ಮನೋರಥಸ್ಯ ॥ ೧೧೮ ॥

ಆಮೃತ್ಯುತೋ ನೈವ ಮನೋರಥಾನಾಂ
ಅಂತೋಽಸ್ತಿ ವಿಜ್ಞಾನ ಮಿದಂ ಮಯಾದ್ಯ
ಮನೋರಥಾಸಕ್ತಿ ಪರಸ್ಯ ಚಿತ್ತಂ
ನ ಜಾಯತೇ ವೈ ಪರಮಾರ್ಥ ಸಂಗಿ ॥ ೧೧೯ ॥

---

ಪಡೆದರು. ಆ ಮಕ್ಕಳ ಮಕ್ಕಳನ್ನು ನೋಡಬೇಕೆಂದು ನನ್ನ ಮನಸ್ಸು ಅಪೇಕ್ಷಿಸುತ್ತಿರುವುದು.

೧೧೮-೧೧೯. ಅವರ ಮಕ್ಕಳನ್ನೂ ನೋಡಿದರೆ ನನಗೆ ಮತ್ತೊಂದು ಇಷ್ಟಾರ್ಥವು ಹುಟ್ಟುವುದು. ಅದೂ ಪೂರ್ತಿಯಾದರೆ ಮತ್ತೊಂದು ಹುಟ್ಟುವುದು. ಈ ಆಸೆಯನ್ನು ಯಾರು ತಡೆಯಬಲ್ಲರು. ಮರಣವು ಬರದಿದ್ದರೆ ಮನಸ್ಸಿನ ಆಸೆಯು ಕೊನೆಮುಟ್ಟುವುದೇ ಇಲ್ಲ ಎಂಬುದನ್ನು ನಾನು ತಿಳಿದೆನು. ಆಸೆಯುಳ್ಳವನ ಮನಸ್ಸು ಪರಮಾರ್ಥಜ್ಞಾನದಲ್ಲಾಸಕ್ತವಾಗುವುದಿಲ್ಲ.

ಸ ಮೇ ಸಮಾಧಿರ್ಜಲವಾಸಮಿತ್ರ
ಮತ್ಸ್ಯಸ್ಯ ಸಂಗಾತ್ಸಹಸೈವ ನಷ್ಟಃ ।
ಪರಿಗ್ರಹಸ್ಸಂಗಕೃತೋ ಮಮಾಯಂ
ಪರಿಗ್ರಹೋತ್ಥಾ ಚ ಮಮಾಪಿ ಲಿಪ್ಸಾ ॥ ೧೨೦ ॥

ದುಃಖಂ ಯದೈವೈಕ ಶರೀರಜನ್ಮ
ಶತಾರ್ಧಸಂಖ್ಯಾತಮಿದಂ ಪ್ರಸೂತಂ ।
ಪರಿಗ್ರಹೇಣ ಕ್ಷಿತಿಪಾತ್ಮಜಾನಾಂ
ಸುತೈರನೇಕೈರ್ಬಹುಳೀಕೃತಂ ತತ್ ॥ ೧೨೧ ॥

ಸುತಾತ್ಮಜೈಸ್ತತ್ತನಯೈಶ್ಚ ಭೂಯೋ
ಭೂಯಶ್ಚ ತೇಷಾಂ ಸ್ವಪರಿಗ್ರಹೇಣ ।
ವಿಸ್ತಾರಮೇಷ್ಯತ್ಯತಿದುಃಖಹೇತುಃ
ಪರಿಗ್ರಹೋ ವೈ ಮಮತಾಭಿಧಾನಃ ॥ ೧೨೨ ॥

---

೧೨೦-೧೨೧. ನೀರಿನಲ್ಲಿ ಕುಳಿತು ತಪಸ್ಸನ್ನು ಮಾಡುತ್ತಿದ್ದ ನನ್ನ ಸಮಾಧಿ ಸ್ಥಿತಿಯು ನೀರಿನಲ್ಲಿ ವಾಸಮಾಡುವ ಸ್ನೇಹಿತನಾದ ಮೀನಿನ ಸಂಗದಿಂದ ನಷ್ಟವಾಯಿತು. ಆ ಸಂಗದಿಂದ ವಿವಾಹಮಾಡಿಕೊಂಡೆನು. ಇದರಿಂದ ಆಸೆ ಹೆಚ್ಚಿತು. ನನ್ನ ಒಂದು ಶರೀರಗ್ರಹಣದಿಂದುಂಟಾದ ದುಃಖವು ಐವತ್ತು ಜನ ರಾಜಪುತ್ರಿಯರಲ್ಲಿ ವಿವಾಹ ಮಾಡಿಕೊಂಡುದರಿಂದ ಐವತ್ತರಷ್ಟು ಹೆಚ್ಚಿತು. ಅವರಿಗೆ ಅನೇಕ ಮಕ್ಕಳಾದುದರಿಂದ ಇನ್ನೂ ಹೆಚ್ಚಿತು.

೧೨೨-೧೨೩. ಮಕ್ಕಳು ಮೊಮ್ಮಕ್ಕಳು ಅವರ ಮಕ್ಕಳು ಮುಂತಾದವರ ಸಂಬಂಧದಿಂದ ವಿಶೇಷವಾಗಿ ದುಃಖವು ಹೆಚ್ಚುತ್ತಿರುವುದು. ನನ್ನದು ಎಂಬ ಅಭಿಮಾನದಿಂದ ಕೂಡಿದ ಈ ಸಂಬಂಧವು ಅತ್ಯಂತ ದುಃಖಕ್ಕೆ ಕಾರಣವಾದುದು. ನೀರಿ

ಚೀರ್ಣಂ ತಪೋ ಯತ್ತು ಜಲಾಶ್ರಯೇಣ
ತಸ್ಯರ್ಧಿರೇಷಾ ತಪಸಾಂತರಾಯಃ ।
ಮತ್ಸ್ಯಸ್ಯ ಸಂಗಾದಭವಚ್ಚ ಯೋ ಮೇ
ಸುತಾದಿರಾಗೋ ಮುಷಿತೋಽಸ್ಮಿ ತೇನ ॥ ೧೨೩ ॥

ನಿಸ್ಸಂಗತಾ ಮುಕ್ತಿಪದಂ ಯತೀನಾಂ
ಸಂಗಾದಶೇಷಾಃ ಪ್ರಭವಂತಿ ದೋಷಾಃ ।
ಆರೂಢಯೋಗೋಽಪಿ ನಿಪಾತ್ಯತೇಧಃ
ಸಂಗೇನ ಯೋಗೀ ಕಿಮುತಾಲ್ಪಸಿದ್ಧಿಃ ॥ ೧೨೪ ॥

ಸೋಽಹಂ ಚರಿಷ್ಯಾಮಿ ತಥಾತ್ಮವೋಽರ್ಥೇ
ಪರಿಗ್ರಹಗ್ರಾಹಗೃಹೀತ ಬುದ್ಧಿಃ ।
ಯಥಾ ಹಿ ಭೂಯಃ ಪರಿಹೀನದೋಷೋ
ಜನಸ್ಯ ದುಃಖೈರ್ಭವಿತಾ ನ ದುಃಖೀ ॥ ೧೨೫ ॥

---

ನಲ್ಲಿ ಕುಳಿತು ಮಾಡಿದ ತಪಸ್ಸಿಗೆ ಮೀನಿನ ಸಂಗದಿಂದ ಈ ಅಭಿಮಾನವು ವೃದ್ಧಿಯಾಗಿ ಅಡ್ಡಿಯುಂಟಾಯಿತು. ಮಕ್ಕಳು ಮುಂತಾದವರಲ್ಲಿ ಪ್ರೀತಿಯು ಹೆಚ್ಚಿತು. ಆದರಿಂದ ಮೋಸಹೋದೆನು.

೧೨೪-೧೨೫. ಯತಿಗಳಿಗೆ ಸಂಗವಿಲ್ಲದ ಸ್ವಭಾವವೇ ಮೋಕ್ಷವನ್ನುಂಟುಮಾಡುವುದು. ಸಂಗದಿಂದ ಅನೇಕ ದೋಷಗಳುಂಟಾಗುವುವು. ಯೋಗಸಿದ್ಧಿಯನ್ನು ಪಡೆದವನೂ ಸಂಗದಿಂದ ಪತಿತನಾಗುವನು. ಹೀಗೆಂದಮೇಲೆ ಅಲ್ಪವಾದ ಬುದ್ಧಿಯುಳ್ಳವನ ವಿಷಯವನ್ನು ಹೇಳುವುದೇನು ? ಸುಖಸಾಧನಗಳೆಂಬ ದುಷ್ಟಜಂತುಗಳಿಂದ ಹಿಡಿದ ಬುದ್ಧಿಯುಳ್ಳ ನಾನು ಆತ್ಮಲಾಭರೂಪಸುಖಾರ್ಥವಾಗಿ ತಪಸ್ಸನ್ನು ಮಾಡುವೆನು. ಮತ್ತೆ ದೋಷಗಳನ್ನು ಕಳೆದುಕೊಂಡು ಜನರ ದುಃಖಗಳಿಂದ ನಾನು ದುಃಖವನ್ನನುಭವಿಸುವುದಿಲ್ಲ.

ಸರ್ಗಸ್ಯ ಧಾತಾರಮಚಿಂತ್ಯ ರೂಪಂ
ಅಣೋರಣೀಯಾಂಸಮತಿಪ್ರಮಾಣಂ ।
ಸಿತಾಸಿತಂ ಚೇಶ್ವರಮೀಶ್ವರಾಣಾಂ
ಆರಾಧಯಿಷ್ಯೇ ತಪಸೈವ ವಿಷ್ಣುಂ ॥ ೧೨೬ ॥

ತಸ್ಮಿನ್ನಶೇಷೌಜಸಿ ಸರ್ವರೂಪಿ
ಣ್ಯವ್ಯಕ್ತವಿಸ್ಪಷ್ಟ ತನಾವನಂತೇ ।
ಮಮಾಚಲಂ ಚಿತ್ತಮಪೇತದೋಷಂ
ಸದಾಸ್ತು ವಿಷ್ಣಾವಭವಾಯ ಭೂಯಃ ॥ ೧೨೭ ॥

ಸಮಸ್ತಭೂತಾದಮಲಾದನಂತಾ
ತ್ಸರ್ವೇಶ್ವರಾದನ್ಯದನಾದಿ ಮಧ್ಯಾತ್ ।
ಯಸ್ಮಾನ್ನ ಕಿಂಚಿತ್ತಮಹಂ ಗುರೂಣಾಂ
ಪರಂ ಗುರುಂ ಸಂಶ್ರಯಮೇಮಿ ವಿಷ್ಣುಂ ॥ ೧೨೮ ॥

---

೧೨೬-೧೨೭. ಸಮಸ್ತ ಇಷ್ಟಾರ್ಥಗಳನ್ನೂ ಕೊಡುವ ಅತ್ಯಂತ ಸೂಕ್ಷ್ಮ ನಾದುದರಿಂದ ಮನಸ್ಸಿಗೂ ಗೋಚರವಾಗದ ರೂಪವುಳ್ಳ ಸ್ವಪ್ರಕಾಶಮಾನನಾಗಿ ಅಳತೆಗೆ ಸಿಕ್ಕದಿರುವ ಶುದ್ಧಸ್ವರೂಪನೂ ಪ್ರಪಂಚರೂಪದಿಂದ ತಾಮಸಾದಿ ಗುಣ ಸ್ವರೂಪನೂ ಆದ ಸಮಸ್ತರಿಗೂ ಸ್ವಾಮಿಯಾದ ವಿಷ್ಣುವನ್ನು ತಪಸ್ಸಿನಿಂದ ಸಂತೋಷ ಪಡಿಸುವೆನು. ಸಮಸ್ತ ಶಕ್ತಿಯುಕ್ತನಾದ ಸರ್ವಸ್ವರೂಪನಾಗಿ ಕಾರಣ ಕಾರ್ಯ ರೂಪವಾದ ಶರೀರವುಳ್ಳ ನಾಶರಹಿತನಾದ ವಿಷ್ಣುವಿನಲ್ಲಿ ನನ್ನ ಚಿತ್ತವು ದೋಷರಹಿತ ವಾಗಿ, ಯಾವಾಗಲೂ ನೆಲಸಿರಲಿ, ಇದರಿಂದ ಪುನರ್ಜನ್ಮವಿಲ್ಲದೆ ಹೋಗುವುದು.

೧೨೮. ಸಮಸ್ತ ಭೂತಸ್ವರೂಪನೂ, ಪರಿಶುದ್ಧನೂ, ನಾಶರಹಿತನೂ, ಸರ್ವೇಶ್ವರನೂ, ಆದಿ ಮಧ್ಯಾಂತವಿಲ್ಲದವನೂ, ಗುರುಗಳಿಗೆ ಗುರುವೂ ಆದ ವಿಷ್ಣುವಿಗಿಂತ ಶ್ರೇಷ್ಠವಾದ ಮತ್ತೊಂದು ವಸ್ತುವಿಲ್ಲವಾದುದರಿಂದ ಆ ವಿಷ್ಣುವನ್ನೇ ನಾನು ಆಶ್ರಯಿಸುವೆನು. (ಶರಣುಹೊಂದುವೆನು)

॥ ಶ್ರೀ ಪರಾಶರಃ ॥

ಇತ್ಯಾತ್ಮಾನಮಾತ್ಮನೈವಾಭಿಧಾಯಾಸೌ ಸೌಭರಿರಪಹಾಯ
ಸ್ವಪುತ್ರಗೃಹಾಸನಪರಿಚ್ಛದಾದಿಕಮಶೇಷಮರ್ಥಜಾತಂ
ಸಕಲಭಾರ್ಯಾಸಮವೇತೋ ವನಂ ಪ್ರವಿವೇಶ ॥ ೧೨೯ ॥

ತತ್ರಾಪ್ಯನುದಿನಂ ವೈಖಾನಸ ನಿಷ್ಪಾದ್ಯಮಶೇಷಕ್ರಿಯಾಕಲಾಪಂ
ನಿಷ್ಪಾದ್ಯ ಕ್ಷಪಿತಸಕಲಪಾಪಃ ಪರಿಪಕ್ವಮನೋ
ವೃತ್ತಿರಾತ್ಮನ್ಯಗ್ನೀನ್ಸಮಾರೋಪ್ಯ ಭಿಕ್ಷುರಭವತ್ ॥ ೧೩೦ ॥

ಭಗವತ್ಯಾಸಜ್ಯಾಖಿಲಕರ್ಮಕಲಾಪಮಜಮವಿಕಾರಮ
ಮರಣಾದಿ ಧರ್ಮಮವಾಪ ಪರಮನಂತಂ ಪರವತಾ
ಮಚ್ಯುತಪದಂ ॥ ೧೩೧ ॥

---

೧೨೯-೧೩೦ ಹೀಗೆ ಸೌಭರಿಯು ತನ್ನ ಮನಸ್ಸಿನಲ್ಲಿಯೇ ಆತ್ಮಸ್ವರೂಪವನ್ನು ನಿಶ್ಚಯಿಸಿ ತನ್ನ ಮಕ್ಕಳು, ಮನೆ ಸಮಸ್ತ ಧನ ಧಾನ್ಯಾದಿ ವಸ್ತುಗಳನ್ನು ಬಿಟ್ಟು ಸಮಸ್ತ ಪತ್ನಿಯರೊಡನೆ ವನಕ್ಕೆ ಪ್ರವೇಶಮಾಡಿದನು. (ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿದನು.) ಆ ವನಾಶ್ರಮದಲ್ಲಿ ಪ್ರತಿದಿನವೂ ವೈಖಾನಸಾಗಮ ರೀತಿಯಲ್ಲಿ ಸಮಸ್ತ ಕರ್ಮಗಳನ್ನೂ ಮಾಡುತ್ತಾ ಪಾಪಗಳನ್ನೆಲ್ಲ ಕಳೆದುಕೊಂಡು ಮನೋವೃತ್ತಿಯು ಪರಿಪಕ್ವವಾಗಲು ಅಗ್ನಿಯನ್ನು ಆತ್ಮಸಮಾರೋಪಣೆ ಮಾಡಿಕೊಂಡು ಸನ್ಯಾಸಾಶ್ರಮವನ್ನು ಸ್ವೀಕರಿಸಿದನು.

೧೩೧. ಸನ್ಯಾಸಾಶ್ರಮವನ್ನು ಸ್ವೀಕರಿಸಿದ ಆ ಸೌಭರಿ ಮುನಿಯು ತಾನು ಮಾಡುವ ಸಕಲ ಕರ್ಮಗಳನ್ನೂ ಭಗವಂತನಿಗೆ ಸಮರ್ಪಿಸಿ ಉತ್ಪತ್ತಿ ಮುಂತಾದ ವಿಕಾರವಿಲ್ಲದವನೂ ದೇಶ ಕಾಲಾದಿಗಳ ಅಳತೆಗೆ ಸಿಕ್ಕದವನೂ ಇಂದ್ರಿಯಾದಿಗಳಿಗಿಂತ ಶ್ರೇಷ್ಠನೂ ಪರಮಪುರುಷನೂ ಆದ ವಿಷ್ಣುಸ್ವರೂಪನಾದನು.

ಇತ್ಯೇತನ್ಮಾಂಧಾತೃದುಹಿತೃಸಂಬಂಧಾದ್ಯಾಖ್ಯಾತಂ ॥ ೧೩೨ ॥

ಯಶ್ಚೈತತ್ಸೌಭರಿಚರಿತಮನುಸ್ಮರತಿ ಪಠತಿ ಪಾಠಯತಿ ಶೃಣೋತಿ
ಶ್ರಾವಯತಿ ಅವಧಾರಯತಿ ಲಿಖತಿ ಲೇಖಯತಿ ಶಿಕ್ಷಯತಿ
ಅಧ್ಯಾಪಯತಿ ಉಪದಿಶತಿ ತಸ್ಯಾಷ್ಟೌ ಜನ್ಮಾನ್ಯ
ಸನ್ಮತಿರಪಧರ್ಮಃ ವಾಙ್ಮನಸೋರಸನ್ಮಾರ್ಗಾನುಸರಣಮಶೇ
ಷಹೇಯೇಷು ವಾ ಮಮತ್ವಂ ನ ಭವತೀತಿ ॥ ೧೩೩ ॥

ಇತಿ ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ ದ್ವಿತೀಯೋಽಧ್ಯಾಯಃ

---

೧೩೨-೧೩೩. ಮೈತ್ರೇಯನೇ! ಮಾಂಧಾತೃರಾಜನ ಪುತ್ರಿಯರ ವೃತ್ತಾಂತ ದಿಂದ ಈ ಸೌಭರಿ ಮುನಿಯ ಚರಿತ್ರೆಯನ್ನು ಹೇಳಿದೆನು. ಈ ಚರಿತ್ರೆಯನ್ನು ಯಾರು ಓದುತ್ತಾರೆಯೋ ಇತರರಿಗೆ ಹೇಳಿಕೊಡುತ್ತಾರೆಯೋ ಕೇಳುತ್ತಾರೆಯೋ ಬರೆಯು ತ್ತಾರೆಯೋ ಇತರರಿಗೆ ಕಲಿಸುತ್ತಾರೆಯೋ ಉಪದೇಶಮಾಡುತ್ತಾರೆಯೋ ಸ್ಮರಿಸು ತ್ತಾರೆಯೋ ಅವರು ಎಂಟು ಜನ್ಮಗಳವರೆಗೆ ದುರ್ಬುದ್ಧಿಯನ್ನೂ ಅಧರ್ಮಾಸಕ್ತಿ ಯನ್ನೂ ಮಾತು ಮತ್ತು ಮನಸ್ಸಿನಲ್ಲಿ ದುರ್ಮಾರ್ಗಾನುಸರಣೆಯನ್ನೂ ಪಡೆಯು ವುದಿಲ್ಲ. ಹೀನ ವಸ್ತುಗಳಲ್ಲಿ ನನ್ನದು ಎಂಬ ಅಭಿಮಾನವನ್ನು ಅವರು ಬಿಟ್ಟಿರುವರು.

ಎಂಬಲ್ಲಿಗೆ ಶ್ರೀ ವಿಷ್ಣುಪುರಾಣದ ಚತುರ್ಥಾಂಶದಲ್ಲಿ

ಎರಡನೆಯ ಅಧ್ಯಾಯವು ಮುಗಿದುದು

---

ಶ್ರೀಃ

# ಶ್ರೀ ವಿಷ್ಣು ಪುರಾಣೇ ಚತುರ್ಥಾಂಶೇ

## ತೃತೀಯೋಽಧ್ಯಾಯಃ

ಅತಶ್ಚ ಮಾಂಧಾತುಃ ಪುತ್ರಸಂತತಿರಭಿಧೀಯತೇ ॥ ೧ ॥

ಅಂಬರೀಷಸ್ಯ ಮಾಂಧಾತೃತನಯಸ್ಯ ಯುವನಾಶ್ವಃ
ಪುತ್ರೋಽಭವತ್ ॥ ೨ ॥

ತಸ್ಮಾದ್ಧರಿತಃ । ಯತೋಽಂಗಿರಸೋ ಹಾರೀತಾಃ ॥ ೩ ॥

ರಸಾತಲೇ ಚ ಮೌನೇಯಾ ನಾಮ ಗಂಧರ್ವಾ ಬಭೂವುಃ
ಷಟ್ಕೋಟಿಸಂಖ್ಯಾತಾಸ್ತೈರಶೇಷಾಣಿ ನಾಗಕುಲಾನ್ಯಪಹೃತ
ಪ್ರಧಾನರತ್ನಾಧಿಪತ್ಯಾನ್ಯಕ್ರಿಯಂತ ॥ ೪ ॥

---

## ಮೂರನೆಯ ಅಧ್ಯಾಯವು

೧-೩. ಇನ್ನು ಮುಂದೆ ಮಾಂಧಾತರಾಜನ ಮಕ್ಕಳ ಸಂತತಿಯನ್ನು ಹೇಳುವೆನು. ಮಾಂಧಾತರಾಜನ ಮಗನಾದ ಅಂಬರೀಷನಿಗೆ ಯುವನಾಶ್ವನೆಂಬ ಮಗನಾದನು. ಇವನಿಗೆ ಹರೀತನು ಮಗನು. ಹಾರೀತರು ಆಂಗೀರಸಗೋತ್ರಕ್ಕೆ ಸೇರಿದವರು. ಆಂಗೀರಸ, ಅಂಬರೀಷ, ಯೌವನಾಶ್ವವೆಂದು ಮೂರು ಋಷಿಗಳನ್ನು ಪ್ರವರದಲ್ಲಿ ಸೇರಿಸಿರುವರು.

೪-೫. ರಸಾತಲದಲ್ಲಿ ಕಾಶ್ಯಪಪತ್ನಿಯಾದ ಮುನಿಯೆಂಬವಳ ಮಕ್ಕಳಾದ ಮೌನೇಯರೆಂಬ ಗಂಧರ್ವರು ಇದ್ದರು. ಆರು ಕೋಟಿ ಸಂಖ್ಯೆಯ ಆ ಗಂಧರ್ವರು, ರಸಾತಲದಲ್ಲಿದ್ದ ನಾಗರ ಅಧಿಕಾರಗಳನ್ನೂ ಅವರಲ್ಲಿದ್ದ ಮುಖ್ಯರತ್ನಗಳನ್ನೂ ಅಪಹ

ಕೈಶ್ಚ ಗಂಧರ್ವವೀರ್ಯಾವಧೂತೈರುರಗೇಶ್ವರೈರ್ಭಗವಾ
ನ ಶೇಷದೇವೇಶಸ್ತವಶ್ರವಣೋನ್ಮೀಲಿತೋನ್ನಿದ್ರ ಪುಂಡರೀಕನಯನೋ
ಜಲಶಯನಃ ನಿದ್ರಾವಸಾನವಿಬುದ್ಧಃ ಪ್ರಣಿಪತ್ಯಾಭಿ
ಹಿತಃ–ಭಗವನ್ನಸ್ಮಾಕಮೇತೇಭ್ಯೋ ಗಂಧರ್ವೇಭ್ಯೋ
ಭಯಮುತ್ಪನ್ನಂ ಕಥಮುಪಶಮಮೇಷ್ಯತೀತಿ ॥ ೫ ॥

ಆಹ ಭಗವಾನನಾದಿ ನಿಧನಃ ಪುರುಷೋತ್ತಮೋ ಯೋಽಸೌ
ಯುವನಾಶ್ವಸ್ಯ ಮಾಂಧಾತುಃ ಪುರುಕುತ್ಸನಾಮಾ ಪುತ್ರಸ್ತಮ
ಹಮನುಪ್ರವಿಶ್ಯ ತಾನಶೇಷದುಷ್ಟಗಂಧರ್ವಾನುಪಶಮಂ
ನಯಿಷ್ಯಾಮೀತಿ ॥ ೬ ॥

ತದಾಕರ್ಣ್ಯ ಭಗವತೇ ಜಲಶಾಯಿನೇ ಕೃತಪ್ರಣಾಮಾಃ
ಪುನರ್ನಾಗಲೋಕಮಾಗತಾಃ ಪನ್ನಗಾಧಿಪತಯೋ
ನರ್ಮದಾಂ ಚ ಪುರುಕುತ್ಸಾನಯನಾಯ ಚೋದಯಾಮಾಸುಃ ॥ ೭ ॥

---

ರಿಸಿದರು. ಗಂಧರ್ವರ ಪರಾಕ್ರಮದಿಂದ ಸೋತ ನಾಗಾಧಿಪತಿಗಳು ಕ್ಷೀರಸಮುದ್ರದಲ್ಲಿ ಮಲಗಿದ್ದ ವಿಷ್ಣುವಿನ ಸಮೀಪಕ್ಕೆ ಹೋಗಿ ಸ್ತೋತ್ರಮಾಡಿದರು. ಅವರ ಸ್ತೋತ್ರವನ್ನು ಕೇಳಿ ಕಮಲನಯನನಾದ ವಿಷ್ಣುವು ಎಚ್ಚರಗೊಂಡನು. ನಾಗಾಧಿಪತಿಗಳು ಭಗವಂತನೇ ಗಂಧರ್ವರಿಂದ ನಮಗೆ ಭಯವುಂಟಾಗಿರುತ್ತದೆ. ಆ ಭಯವು ಹೇಗೆ ಶಾಂತವಾಗುವುದು ? ಎಂದು ಪ್ರಶ್ನೆಮಾಡಿದನು.

೬. ಹುಟ್ಟು ಸಾವುಗಳಿಲ್ಲದ ಪುರುಷಶ್ರೇಷ್ಠನಾದ ಆ ಭಗವಂತನು ಅವರನ್ನು ಕುರಿತು " ಮಾಂಧಾತರಾಜನ ವಂಶದ ಯೌವನಾಶ್ವನ ಮಗನಾದ ಪುರುಕುತ್ಸನೆಂಬ ರಾಜನಿರುವನು. ಅವನಲ್ಲಿ ನಾನು ಪ್ರವೇಶಮಾಡಿ ಆ ದುಷ್ಟ ಗಂಧರ್ವರನ್ನೆಲ್ಲ ನಾಶ ಮಾಡುವೆನು " ಎಂದು ಹೇಳಿದನು.

೭-೧೨. ನಾಗಾಧಿಪತಿಗಳು ಆ ಮಾತನ್ನು ಕೇಳಿ ಭಗವಂತನಾದ ನಾರಾಯಣನಿಗೆ ನಮಸ್ಕಾರವನ್ನು ಮಾಡಿ ನಾಗಲೋಕಕ್ಕೆ ಬಂದು ಪುರುಕುತ್ಸರಾಜನನ್ನು ಕರೆದು

ಸಾಚೈನಂ ರಸಾತಲಂ ನೀತವತೀ ॥ ೮ ॥

ರಸಾತಲಗತಶ್ಚಾಸೌ ಭಗವತ್ತೇಜಸಾಪ್ಯಾಯಿತಾತ್ಮವೀರ್ಯಸ್ಸ
ಕಲಗಂಧರ್ವಾನ್ನಿಜಘಾನ ॥ ೯ ॥

ಪುನಶ್ಚ ಸ್ವಪುರಮಾಜಗಾಮ ॥ ೧೦ ॥

ಸಕಲಪನ್ನಗಪತಯಶ್ಚ ನರ್ಮದಾಯೈ ವರಂ ದದುಃ ।
ಯಸ್ತೇನುಸ್ಮರಣಸಮವೇತಂ ನಾಮಗ್ರಹಣಂ ಕರಿಷ್ಯ
ತಿ ನ ತಸ್ಯ ಸರ್ಪವಿಷಭಯಂ ಭವಿಷ್ಯತೀತಿ ॥ ೧೧ ॥

ಅತ್ರ ಚ ಶ್ಲೋಕಃ ॥ ೧೨ ॥

ನರ್ಮದಾಯೈ ನಮಃ ಪ್ರಾತಃ ನರ್ಮದಾಯೈ ನಮೋನಿಶಿ ।
ನಮೋಽಸ್ತು ನರ್ಮದೇ ತುಭ್ಯಂ ತ್ರಾಹಿ ಮಾಂ ವಿಷಸರ್ಪತಃ ॥ ೧೩ ॥

---

ಕೊಂಡು ಬರುವುದಕ್ಕಾಗಿ ತಮ್ಮ ಸಹೋದರಿಯೂ ಪುರುಕುತ್ಸನ ಪತ್ನಿಯೂ ಆದ ನರ್ಮದೆಯನ್ನು ಕಳುಹಿಸಿದರು. ಅವಳು ಪುರುಕುತ್ಸನನ್ನು ರಸಾತಲಕ್ಕೆ ಕರೆದು ಕೊಂಡು ಹೋದಳು. ರಸಾತಳಕ್ಕೆ ಹೋದ ಪುರುಕುತ್ಸನು ಭಗವಂತನ ತೇಜಸ್ಸಿನಿಂದ ಕೂಡಿದ ತನ್ನ ಪರಾಕ್ರಮದಿಂದ ಸಮಸ್ತ ಗಂಧರ್ವರನ್ನೂ ಕೊಂದನು. ಆ ಮೇಲೆ ರಾಜನು ಪುನಃ ತನ್ನ ಪಟ್ಟಣಕ್ಕೆ ಬಂದನು. ನಾಗಾಧಿಪತಿಗಳೆಲ್ಲರೂ ನರ್ಮದೆಗೆ "ಯಾರು ನಿನ್ನನ್ನು ಸ್ಮರಿಸಿ ನಿನ್ನ ಹೆಸರನ್ನು ಹೇಳುವರೋ ಅವರಿಗೆ ಸರ್ಪ ವಿಷ ಭಯವುಂಟಾಗುವುದಿಲ್ಲ" ಎಂದು ವರವನ್ನು ಕೊಟ್ಟರು. ಈ ವಿಷಯದಲ್ಲಿ ಒಂದು ಶ್ಲೋಕವಿರುವುದು.

೧೩–೧೪. "ನರ್ಮದಾಯೈ ನಮಃ ಪ್ರಾತರ್ನರ್ಮದಾಯೈನ ಮೋನಿಶಿ । ನಮೋಸ್ತು ನರ್ಮದೇ ತುಭ್ಯಂ ತ್ರಾಹಿಮಾಂ ವಿಷಸರ್ಪತಃ ॥ ಹೀಗೆಂದು ಹೇಳಿದರೆ ಹಗಲಾಗಲಿ, ರಾತ್ರಿಯಾಗಲಿ, ಕತ್ತಲಾಗಿರುವ ಪ್ರದೇಶದಲ್ಲಾಗಲಿ ಸರ್ಪಗಳು

ಇತ್ಯುಚ್ಚಾರ್ಯೋರ್ಹರ್ನಿಶಮಂಧಕಾರಪ್ರದೇಶೇ ವಾ ಸರ್ಪೈರ್ನ
ದಶ್ಯತೇ । ನ ಚಾಪಿ ಕೃತಾನುಸ್ಮರಣಭುಜೋ ವಿಷಮಪಿ
ಭುಕ್ತಮುಪಘಾತಾಯ ಭವತಿ　　　　　　॥ ೧೪ ॥

ಪುರುಕುತ್ಸಾಯ ಚ ಸಂತತಿವಿಚ್ಛೇದೋ ನ ಭವಿಷ್ಯತೀ
ತ್ಯುರಗಪತಯೋ ವರಂ ದದುಃ　　　　　　॥ ೧೫ ॥

ಪುರುಕುತ್ಸೋ ನರ್ಮದಾಯಾಂ ತ್ರಸದಸ್ಯುಮಜೀಜನತ್　　　　　　॥ ೧೬ ॥

ತ್ರಸದಸ್ಯುತಸ್ಸಂಭೂತೋನರಣ್ಯಃ ತಂ ರಾವಣೋ ದಿಗ್ವಿಜಯೇ
ನಿಜಘಾನ　　　　　　॥ ೧೭ ॥

ಅನರಣ್ಯಸ್ಯ ಪೃಷದಶ್ವಃ ಪೃಷದಶ್ವಸ್ಯ ಹರ್ಯಶ್ವಃ
ಪುತ್ರೋऽಭವತ್　　　　　　॥ ೧೮ ॥

ತಸ್ಯ ಚ ಹಸ್ತಃ ಪುತ್ರೋऽಭವತ್　　　　　　॥ ೧೯ ॥

---

ಕಚ್ಚುವುದಿಲ್ಲ ಈ ಶ್ಲೋಕವನ್ನು ಸ್ಮರಿಸುತ್ತ ಭೋಜನ ಮಾಡಿದವರಿಗೆ ವಿಷವನ್ನು ಭೋಜನ ಮಾಡಿದರೂ ಅದರಿಂದ ಬಾಧೆಯಾಗುವುದಿಲ್ಲ

೧೫–೨೨. ಉರಗಾಧಿಪತಿಗಳು ಪುರುಕುತ್ಸನಿಗೆ ಸಂತತಿಯು ನಿಂತುಹೋಗ ಬಾರದೆಂದು ವರವನ್ನು ಕೊಟ್ಟರು. ಪುರುಕುತ್ಸನು ನರ್ಮದೆಯಲ್ಲಿ ತ್ರಸದಸ್ಯು ಎಂಬ ಮಗನನ್ನು ಹುಟ್ಟಿಸಿದನು. ತ್ರಸದಸ್ಯುವಿನ ಮಗನೇ ಅನರಣ್ಯನು. ಅವನನ್ನು ರಾವಣನು ದಿಗ್ವಿಜಯದಲ್ಲಿ ಕೊಂದನು. ಅನರಣ್ಯನಿಗೆ ಪೃಷದಶ್ವನೂ, ಪೃಷದಶ್ವನಿಗೆ ಹರ್ಯಶ್ವನೂ, ಅವನಿಗೆ ಹಸ್ತನೂ, ಹಸ್ತನಿಗೆ ವಸುಮನಸೂ, ವಸುಮನನಿಗೆ ತ್ರಿಧನ್ವನೂ, ತ್ರಿಧನ್ವನಿಗೆ ತ್ರಯ್ಯಾರುಣಿಯೂ, ತ್ರಯ್ಯಾರುಣಿಗೆ ಸತ್ಯವ್ರತನೂ ಮಕ್ಕಳಾದರು. ಸತ್ಯವ್ರತನೇ ತ್ರಿಶಂಕುವೆಂಬ ಹೆಸರನ್ನು ಪಡೆದನು. ಮತ್ತು ಚಂಡಾಲತ್ವವನ್ನೂ ಹೊಂದಿದನು. (ವಿವಾಹ ಕಾಲದಲ್ಲಿ ಬ್ರಾಹಣ ಕನ್ಯೆಯನ್ನು ಅಪಹರಿಸಿದುದರಿಂದ ತಂದೆಯಾದ ತ್ರಯ್ಯಾರುಣಿಯು ಸತ್ಯವ್ರತನಿಗೆ ಚಂಡಾಲನಾ

ತತಶ್ಚ ವಸುಮನಾಸ್ತಸ್ಯಾಪಿ ತ್ರಿಧನ್ವಾ ತ್ರಿಧನ್ವನಸ್ತ್ರಯ್ಯಾರುಣಿಃ ॥ ೨೦ ॥

ತ್ರಯ್ಯಾರುಣೇಸ್ಸತ್ಯವ್ರತಃ ಯೋಽಸೌ ತ್ರಿಶಂಕುಸಂಜ್ಞಾಮವಾಪ ॥ ೨೧ ॥

ಸ ಚಂಡಾಲತಾಮುಪಗತಶ್ಚ ॥ ೨೨ ॥

ದ್ವಾದಶವಾರ್ಷಿಕ್ಯಾಮನಾವೃಷ್ಟ್ಯಾಂ ವಿಶ್ವಾಮಿತ್ರಕಳತ್ರಾಪತ್ಯ
ಪೋಷಣಾರ್ಥಂ ಚಂಡಾಲಪ್ರತಿಗ್ರಹಪರಿಹರಣಾ
ಯ ಚ ಜಾಹ್ನವೀತೀರನ್ಯಗ್ರೋಧೇ ಮೃಗಮಾಂಸಮನು
ದಿನಂ ಬಬಂಧ ॥ ೨೩ ॥

ಸ ತು ಪರಿತುಷ್ಟೇನ ವಿಶ್ವಾಮಿತ್ರೇಣ ಸ ಶರೀರಸ್ಸ್ವರ್ಗಮಾ
ರೋಪಿತಃ ॥ ೨೪ ॥

---

ಗೆಂದು ಶಾಪವನ್ನು ಕೊಟ್ಟನು. ಗುರುವಾದ ವಸಿಷ್ಠರ ಹಸುವನ್ನು ಕೊಂದುದು, ಯಜ್ಞಾದಿಗಳಿಗೆ ಉಪಯೋಗಿಸದೆ ಮಾಂಸ ಭೋಜನ ಮಾಡಿದುದು. ಈ ಮೂರು ಸತ್ಯವ್ರತನ ಅಪರಾಧಗಳು, ದುಃಖಜನಕವಾದ ಇವರಿಂದಲೇ ಅವನಿಗೆ ತ್ರಿಶಂಕು ವೆಂದು ಹೆಸರು ಬಂದಿತು.)

೨೩-೨೪. ಚಂಡಾಲನಾದ ತ್ರಿಶಂಕುವು ಹನ್ನೆರಡು ವರ್ಷ ಮಳೆಯಿಲ್ಲದೆ ಕ್ಷಾಮವು ಪ್ರಾಪ್ತವಾಗಿದ್ದಾಗ ವಿಶ್ವಾಮಿತ್ರನ ಹೆಂಡತಿ ಮಕ್ಕಳನ್ನು ಕಾಪಾಡುವುದ ಕ್ಕಾಗಿ ಪ್ರತಿದಿನವೂ ಮೃಗದ ಮಾಂಸವನ್ನು ತಂದು ಚಂಡಾಲನಿಂದ ಪ್ರತಿಗ್ರಹಿಸುವು ದಿಲ್ಲವಾದುದರಿಂದ ಗಂಗಾ ತೀರದಲ್ಲಿದ್ದ ಒಂದು ಆಲದ ಮರದಲ್ಲಿ ಮಾಂಸವನ್ನು ಕಟ್ಟುತ್ತಿದ್ದನು. ಇದನ್ನು ತಿಂದು ವಿಶ್ವಾಮಿತ್ರನ ಹೆಂಡತಿ ಮಕ್ಕಳು ಜೀವಿಸಿದುದ ರಿಂದ ವಿಶ್ವಾಮಿತ್ರನು ಸಂತೋಷ ಹೊಂದಿ ತ್ರಿಶಂಕುವನ್ನು ಶರೀರ ಸಹಿತವಾಗಿ ಸ್ವರ್ಗಕ್ಕೇರಿಸಿದನು.

ತ್ರಿಶಂಕೋರ್ಹರಿಶ್ಚಂದ್ರಃ । ತಸ್ಮಾದ್ರೋಹಿತಾಶ್ವಃ । ತತಶ್ಚ ಹರಿತಃ ।
ಹರಿತಸ್ಯಾಪಿ ಚಂಚುಃ । ಚಂಚೋರ್ವಿಜಯವಸುದೇವೌ ।
ರುರುಕೋ ವಿಜಯಾತ್ । ರುರುಕಸ್ಯ ವೃಕಃ ॥ ೨೫ ॥

ವೃಕಸ್ಯ ಬಾಹುಃ । ಯೋಽಸೌ ಹೈಹಯತಾಳಜಂಘಾದಿಭಿಃ
ಪರಾಜಿತೋಽಂತರ್ವತ್ನ್ಯಾ ಮಹಿಷ್ಯಾ ಸಹ ವನಂ ವಿವೇಶ ॥ ೨೬ ॥

ತಸ್ಯಾಶ್ಚ ಸಪತ್ನ್ಯಾಗರ್ಭಸ್ತಂಭನಾಯ ಗರೋ ದತ್ತಃ । ॥ ೨೭ ॥

ತೇನಾಸ್ಯಾ ಗರ್ಭಸ್ಸಪ್ತವರ್ಷಾಣಿ ಜಠರ ಏವ ತಸ್ಥೌ । ॥ ೨೮ ॥

ಸ ಚ ಬಾಹುರ್ವೃದ್ಧಭಾವಾ ದೌರ್ವಾಶ್ರಮ ಸಮೀಪೇಮಮಾರ ॥ ೨೯ ॥

ಸಾ ತಸ್ಯ ಭಾರ್ಯಾಚಿತಾಂ ಕೃತ್ವಾ ತಮಾರೋಪ್ಯಾನುಮರಣ
ಕೃತನಿಶ್ಚಯಾ ಭೂತ್ ॥ ೩೦ ॥

---

೨೫–೩೦. ಆ ತ್ರಿಶಂಕುವಿನ ಮಗನೇ ಹರಿಶ್ಚಂದ್ರನು. ಅವನ ಮಗನು ರೋಹಿತಾಶ್ವನು. ಅವನಿಗೆ ಹರಿತನು, ಹರಿತನಿಗೆ ಚಂಚುವು, ಚಂಚುವಿಗೆ ವಿಜಯ, ವಸುದೇವರು ಮಕ್ಕಳು. ವಿಜಯನಿಗೆ ವೃಕನೂ, ವೃಕನಿಗೆ ಬಾಹುವೂ ಮಕ್ಕಳು. ಬಾಹುವು ಹೈಹಯ, ತಾಳಜಂಘ ಎಂಬವರಿಗೆ ಸೋತು ಗರ್ಭಿಣಿಯಾದ ರಾಣಿಯೊಡನೆ ಕಾಡಿಗೆ ಹೋದನು. ರಾಣಿಗೆ ಅವಳ ಸವತಿಯು ಗರ್ಭವನ್ನು ಸ್ತಂಭಿಸುವುದಕ್ಕಾಗಿ (ಪ್ರಸವವಾಗದಂತೆ ತಡೆವುದಕ್ಕಾಗಿ) ವಿಷವನ್ನು ಕೊಟ್ಟಳು. ಆದರಿಂದ ಏಳುವರ್ಷದವರೆಗೆ ಗರ್ಭವು ಹೊಟ್ಟೆಯಲ್ಲಿಯೇ ಇದ್ದಿತು. ಬಾಹುರಾಜನು ಮುದುಕನಾಗಿ ಔರ್ವನೆಂಬ ಋಷಿಯ ಆಶ್ರಮದಲ್ಲಿ ಮರಣ ಹೊಂದಿದನು. ಅವನ ಪತ್ನಿಯು ಚಿತಿಯಲ್ಲಿ ಶರೀರವನ್ನಿಟ್ಟು ಸಹಗಮನವನ್ನು ಮಾಡಬೇಕೆಂದು ನಿಶ್ಚಯಿಸಿದಳು.

ಅಥೈನಾಮತೀತಾನಾಗತವರ್ತಮಾನಾದಿವೇದೀ ಭಗವಾನೌರ್ವಃ

ಸ್ವಾಶ್ರಮಾನ್ನಿರ್ಗತ್ಯಾಬ್ರವೀತ್ ॥ ೩೧ ॥

ಅಲಮಲಮನೇನಾಸದ್ಗ್ರಾಹೇಣ ಅಖಿಲಭೂಮಂಡಲಪತಿರತಿ ವೀರ್ಯ
ಪರಾಕ್ರಮೋಽನೇಕಯಜ್ಞಕೃದರಾತಿಪಕ್ಷಕ್ಷಯಕರ್ತಾ
ತವೋದರೇ ಚಕ್ರವರ್ತೀ ತಿಷ್ಠತಿ ॥ ೩೨ ॥

ಮೈವಮತಿಸಾಹಸಾಧ್ಯವಸಾಯಿನೀ ಭವೇತ್ಯುಕ್ತೇ ಚ ಸಾ

ತಸ್ಮಾದನುಮರಣ ನಿರ್ಬಂಧಾ ದ್ವಿರರಾಮ ॥ ೩೩ ॥

ತೇನೈವ ಚ ಭಗವತಾ ಸಾ ಸ್ವಾಶ್ರಮಮಾನೀಯತ ॥ ೩೪ ॥

ಕತಿಪಯದಿನಾಭ್ಯಂತರೇ ಸಹೈವ ತೇನ ಗರೇಣಾತಿ

ತೇಜಸ್ವೀ ಬಾಲಕೋ ಜಜ್ಞೇ ॥ ೩೫ ॥

---

೩೧–೩೪. ಭೂತಭವಿಷ್ಯದ್ವರ್ತಮಾನಗಳನ್ನು ತಿಳಿದ ಮಹಾಮಹಿಮನಾದ ಔರ್ವಮುನಿಯು ತನ್ನ ಆಶ್ರಮದಿಂದ ಹೊರಟು ರಾಣಿಯನ್ನು ಕುರಿತು ಹೇಳಿದನು. “ಎಲೈ ರಾಣಿಯೇ ವ್ಯರ್ಥವಾದ ಈ ಸಹಗಮನವನ್ನು ಬಿಡು. ಸಮಸ್ತ ಭೂಮಂಡಲಕ್ಕೆ ಒಡೆಯನೂ, ವಿಶೇಷವಾದ ಬಲ ಪರಾಕ್ರಮವುಳ್ಳವನೂ, ಅನೇಕ ಯಜ್ಞಗಳನ್ನು ಮಾಡುವವನೂ ಶತ್ರುಗಳನ್ನು ನಾಶಮಾಡುವವನೂ ಆದ ಚಕ್ರವರ್ತಿಯು ನಿನ್ನ ಗರ್ಭದಲ್ಲಿರುವನು. ಈ ಸಾಹಸಕಾರ್ಯ ನಿಶ್ಚಯವನ್ನು ಮಾಡಬೇಡ” ಎಂದು ಹೇಳುತ್ತಲು ಅವಳು ಸಹಗಮನ ಪ್ರಯತ್ನವನ್ನು ಬಿಟ್ಟಳು. ಆ ಮಹಾಮಹಿಮನಾದ ಔರ್ವನೇ ಅವಳನ್ನು ತನ್ನಾಶ್ರಮಕ್ಕೆ ಕರೆದುಕೊಂಡು ಹೋದನು.

೩೫-೩೯. ಕೆಲವು ದಿನಗಳ ಮೇಲೆ ಅವಳ ಗರ್ಭದಿಂದ ವಿಷ (ಗರ) ದೊಡನೆ ಮಹಾತೇಜಸ್ವಿಯಾದ ಬಾಲಕನು ಹುಟ್ಟಿದನು. ಅವನಿಗೆ ಔರ್ವನು ಜಾತಕರ್ಮಾದಿ

ತಸ್ಯ ಚೌರ್ವೋ ಜಾತಕರ್ಮಾದಿಕಾಃ ಕ್ರಿಯಾಃ ನಿಷ್ಪಾದ್ಯ ಸಗರ
ಇತಿ ನಾಮ ಚಕಾರ ॥ ೩೭ ॥

ಕೃತೋಪನಯನಂ ಚೈನಮೌರ್ವೋ ವೇದಶಾಸ್ತ್ರಾಣ್ಯ ಶೇಷಾಣ್ಯಸ್ತ್ರಂ
ಚಾಗ್ನೇಯಂ ಭಾರ್ಗವಾಖ್ಯಮಧ್ಯಾಪಯಾಮಾಸ ॥ ೩೭ ॥

ಉತ್ಪನ್ನ ಬುದ್ಧಿಶ್ಚ ಸ ಮಾತರಮಪೃಚ್ಛತ್ ॥ ೩೮ ॥

ಅಂಬ ಕಥಯ ಕಥಮತ್ರ ವಯಂ ಕ್ವತಾತೋಽಸ್ಮಾಕಮಿತ್ಯೇವ ಮಾದಿ
ಪೃಚ್ಛಂತಂ ತಂ ಮಾತಾಸರ್ವಮೇವಾವೋಚತ್ ॥ ೩೯ ॥

ತತಶ್ಚ ಪಿತೃರಾಜ್ಯಾಪಹರಣಾಮರ್ಷಿತೋ ಹೈಹಯ

ತಾಲಜಂಘಾದಿ ವಧಾಯ ಪ್ರತಿಜ್ಞಾಮಕರೋತ್ ॥ ೪೦ ॥

ಪ್ರಾಯಶಶ್ಚ ಹೈಹಯತಾಳ ಜಂಘಾನ್ ಜಘಾನ ॥ ೪೧ ॥

ಶಕಯವನ ಕಾಂಭೋಜಪಾರದಪಹ್ಲವಾಹನ್ಯಮಾನಾ

---

ಸಂಸ್ಕಾರಗಳನ್ನು ಮಾಡಿ ಸಗರನೆಂದು ನಾಮಕರಣಮಾಡಿದನು. ಮತ್ತು ಉಪನಯನವಾದ ಮೇಲೆ ವೇದಶಾಸ್ತ್ರಗಳನ್ನೂ ಅಗ್ನೇಯ ಭಾರ್ಗವವೆಂಬ ಸಮಸ್ತ ಅಸ್ತ್ರವಿದ್ಯೆಯನ್ನೂ ಕಲಿಸಿದನು. ತಿಳುವಳಿಕೆಯು ಬಂದಮೇಲೆ ಸಗರನು ತಾಯಿಯನ್ನು ಕುರಿತು "ಅಮ್ಮಾ! ನಾವು ಇಲ್ಲಿಗೆ ಹೇಗೆ ಬಂದೆವು? ನಮ್ಮ ತಂದೆಯೆಲ್ಲಿ? ಎಂಬಿವೇ ಮುಂತಾದ ಪ್ರಶ್ನೆಗಳನ್ನು ಕೇಳಿದನು. ತಾಯಿಯು ಅವನಿಗೆ ಎಲ್ಲವನ್ನೂ ಹೇಳಿದಳು.

೪೦-೪೫. ಆ ಮೇಲೆ ಸಗರನು ತಂದೆಯ ರಾಜ್ಯವನ್ನು ಅಪಹರಿಸಿದ ಹೈಹಯ, ತಾಲಜಂಘರಮೇಲೆ ಕೋಪಗೊಂಡು ಅವರನ್ನು ಕೊಲ್ಲುವೆನೆಂದು ಪ್ರತಿಜ್ಞೆಮಾಡಿದನು. ಹೈಹಯ, ತಾಲಜಂಘರನ್ನು ಕೊಂದಮೇಲೆ ಶಕ, ಯವನ

ಸ್ತತ್ಕುಲಗುರುಂ ವಸಿಷ್ಠಂ ಶರಣಂ ಯಯುಃ ॥ ೪೨ ॥

ಅಥೈತಾನ್ವಸಿಷ್ಠೋ ಜೀವನ್ಮೃತಕಾನ್ ಕೃತ್ವಾ ಸಗರಮಾಹ ॥ ೪೩ ॥

ವತ್ಸಾಲಮೇಭಿರ್ಜೀವನ್ಮೃತಕೈರನುಮೃತೈಃ ॥ ೪೪ ॥

ಏತೇ ಹಿ ಮಯೈವ ತ್ವತ್ಪ್ರತಿಜ್ಞಾ ಪರಿಪಾಲನಾಯ
ನಿಜಧರ್ಮದ್ವಿಜಸಂಗಪರಿತ್ಯಾಗಂ ಕಾರಿತಾಃ ॥ ೪೫ ॥

ತಥೇತಿ ತದ್ಗುರುವಚನಮಭಿನಂದ್ಯ ತೇಷಾಂ ವೇಷಾ
ನ್ಯತ್ವಮಕಾರಯತ್ ॥ ೪೬ ॥

ಯವನಾನ್ ಮುಂಡಿತಶಿರಸೋಽರ್ಧಮುಂಡಾನ್
ಶಕಾನ್ ಪ್ರಲಂಬಕೇಶಾನ್ ಪಾರದಾನ್ ಪಹ್ಲವಾನ್
ಶ್ಮಶ್ರುಧರಾಸ್ ನಿಸ್ವಾಧ್ಯಾಯವಷಟ್ಕಾ ರಾನೇತಾನನ್ಯಾಂಶ್ಚ
ಕ್ಷತ್ರಿಯಾಂಶ್ಚಕಾರ ॥ ೪೭ ॥

---

ಕಾಂಭೋಜ, ಪಾರದ, ಪಹ್ಲವರು, ಸಗರನ ಏಟನ್ನು ತಡೆಯಲಾರದೆ ಗುರುವಾದ ವಸಿಷ್ಠರ ಮರೆ ಹೊಕ್ಕರು ವಸಿಷ್ಠರು ಅವರನ್ನು ಜೀವನ್ಮೃತರನ್ನಾಗಿ ಮಾಡಿ ಸಗರನನ್ನು ಕುರಿತು " ಪ್ರೀತಿಪಾತ್ರನಾದ ಮಗುವೇ! ಜೀವನ್ಮೃತರಾದ ಇವರನ್ನು ಕೊಲ್ಲಬೇಡ. ಇವರನ್ನು ನಾನೇ ನಿನ್ನ ಪ್ರತಿಜ್ಞೆಯನ್ನು ನಡೆಸುವುದಕ್ಕಾಗಿ ತಮ್ಮ ಧರ್ಮವನ್ನೂ, ದ್ವಿಜರ ಸಂಗವನ್ನೂ ಬಿಡುವಂತೆ ಮಾಡಿರುವೆನು" ಎಂದು ಹೇಳಿದನು.

೪೬–೪೭. ಸಗರನು ಹಾಗೆಯೇ ಆಗಲೆಂದು ಗುರುವಿನ ಮಾತಿಗೆ ಗೌರವವನ್ನು ಕೊಟ್ಟು ಅವರಿಗೆ ಬೇರೆ ವೇಷದಿಂದಿರಬೇಕೆಂದು ಆಜ್ಞೆಮಾಡಿ ಅದರಂತೆ ಮಾಡಿದನು. ಯವನರ ತಲೆಯನ್ನು ಬೋಳಿಸಿದನು. ಶಕರು ತಲೆಯನ್ನು ಅರ್ಧ ಭಾಗ ಬೋಳಿಸಿದರು ಪಾರದರು ತಲೆಯಕೂದಲನ್ನು ಬಿಚ್ಚಿಕೊಂಡಿರುವಂತೆ ಮಾಡಿದನು. ಪಹ್ಲವರು ಮೀಸೆಯನ್ನು ಧರಿಸಿರುವಂತೆ ಮಾಡಿದನು. ಮಿಕ್ಕ ಕ್ಷತ್ರಿಯರು

ತೇ ಚಾತ್ಮಧರ್ಮಪರಿತ್ಯಾಗಾದ್ಬ್ರಾಹ್ಮಣೈಃ ಪರಿತ್ಯಕ್ತಾಃ
ಮ್ಲೇಚ್ಛತಾಂ ಯಯುಃ ॥ ೪೮ ॥

ಸಗರೋಽಪಿ ಸ್ವಮಧಿಷ್ಠಾನಮಾಗತ್ಯ ಸ್ಖಲಿತಚಕ್ರ
ಸ್ಸಪ್ತದ್ವೀಪವತೀಮಿಮಾಮುರ್ವೀಂ ಪ್ರಶಶಾಸ ॥ ೪೯ ॥

ಇತಿ ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ ತೃತೀಯೋಽಧ್ಯಾಯಃ

---

ವೇದಾಧ್ಯಯನವನ್ನೂ ಯಜ್ಞಾದಿಗಳನ್ನೂ ಮಾಡದಂತೆ ಮಾಡಿದನು. ಅವರೆಲ್ಲರೂ ತಮ್ಮ ಧರ್ಮವನ್ನು ಬಿಟ್ಟುದರಿಂದ ಬ್ರಾಹ್ಮಣರು ಅವರನ್ನು ತ್ಯಾಗಮಾಡಿದರು. ಇದರಿಂದ ಅವರು ಮ್ಲೇಚ್ಛರಾದರು.

೪೯. ಸಗರನು ತನ್ನ ರಾಜಧಾನಿಗೆ ಬಂದು ತಡೆಯಿಲ್ಲದ ಆಜ್ಞಾಬಲವೂ, ಸೈನ್ಯ ಬಲವೂ ಉಳ್ಳವನಾಗಿ ಸಪ್ತದ್ವೀಪಗಳಿಂದ ಕೂಡಿದ ಈ ಭೂಮಂಡಲವನ್ನು ಆಳುತ್ತಿದ್ದನು.

ಎಂಬಲ್ಲಿಗೆ ಶ್ರೀ ವಿಷ್ಣುಪುರಾಣದ ಚತುರ್ಥಾಂಶದಲ್ಲಿ

ಮೂರನೆಯ ಅಧ್ಯಾಯವು ಮುಗಿದುದು

---

॥ಶ್ರೀಃ॥

# ಶ್ರೀ ವಿಷ್ಣುಪುರಾಣೇ ತೃತೀಯಾಂಶೇ

## ಚತುರ್ಥೋಽಧ್ಯಾಯಃ

---

॥ ಶ್ರೀ ಪರಾಶರಃ ॥

ಕಾಶ್ಯಪದುಹಿತಾ ಸುಮತಿರ್ವಿದರ್ಭರಾಜತನಯಾ ಕೇಶಿನೀ
ಚ ದ್ವೇಭಾರ್ಯೇ ಸಗರಸ್ಯಾಸ್ತಾಂ ॥ ೧ ॥

ತಾಭ್ಯಾಂ ಚಾಪತ್ಯಾರ್ಥಮೌರ್ವಃ ಪರಮೇಣ ಸಮಾಧಿ
ನಾರಾಧಿತೋ ವರಮದಾತ್ ॥ ೨ ॥

ಏಕಾ ವಂಶಕರಮೇಕಂ ಪುತ್ರಮಪರಾ ಷಷ್ಟಿಂ ಪುತ್ರಸಹಸ್ರಾಣಿ
ಜನಯಿಷ್ಯತಿ । ಯಸ್ಯಾ ಯದಭಿಮತಂ ತದಿಚ್ಛಯಾ
ಗೃಹ್ಯತಾಮಿತ್ಯಾಕರ್ಣ್ಯ ಕೇಶಿನ್ಯೇಕಂ ವರಯಾಮಾಸ ॥ ೩ ॥

---

### ನಾಲ್ಕನೆಯ ಅಧ್ಯಾಯವು

೧–೪. ಸಗರನಿಗೆ ಕಾಶ್ಯಪನ ಮಗಳಾದ ಸುಮತಿಯೆಂಬವಳೂ, ವಿದರ್ಭ ರಾಜನ ಮಗಳಾದ ಕೇಶಿನಿಯೆಂಬುವಳೂ ಪತ್ನಿಯರಾಗಿದ್ದರು. ಅವರಲ್ಲಿ ಪುತ್ರರನ್ನು ಪಡೆಯಬೇಕೆಂದು ಸಗರನು ಏಕಾಗ್ರಚಿತ್ತದಿಂದ ಔರ್ವನನ್ನು ಪೂಜಿಸಿದನು. ಔರ್ವನು ವರವನ್ನು ಕೊಟ್ಟನು. ಒಬ್ಬಳು ವಂಶೋದ್ಧಾರಕನಾದ ಒಬ್ಬ ಮಗನನ್ನೂ, ಮತ್ತೊಬ್ಬಳು ಅರವತ್ತು ಸಾವಿರ ಮಕ್ಕಳನ್ನೂ ಪಡೆಯುವಳು. ಯಾರಿಗೆ ಯಾವುದು

ಸುಮತಿಃ ಪುತ್ರಸಹಸ್ರಾಣಿ ಷಷ್ಟಿಂ ವವ್ರೇ ॥ ೪ ॥

ತಥೇತ್ಯುಕ್ತೇ ಅಲ್ಪೈರಹೋಭಿಃ ಕೇಶಿನೀ ಪುತ್ರಮೇಕ
ಮಸಮಂಜಸನಾಮಾನಂ ವಂಶಕರಮಸೂತ ॥ ೫ ॥

ಕಾಶ್ಯಪತನಯಾಯಾಸ್ತು ಸುಮತ್ಯಾಃ ಷಷ್ಟಿಃಪುತ್ರ
ಸಹಸ್ರಾಣ್ಯಭವನ್ ॥ ೬ ॥

ತಸ್ಮಾದಸಮಂಜಸಾದಂಶುಮಾನ್ನಾಮ ಕುಮಾರೋ ಜಜ್ಞೇ ॥ ೭ ॥

ಸತ್ವಸಮಂಜಸೋ ಬಾಲೋ ಬಾಲ್ಯಾದೇವಾಸದ್ವೃತ್ತೋಽಭೂತ್ ॥ ೮ ॥

ಪಿತಾ ಚಾಸ್ಯಾಚಿಂತಯುತ್ । ಅಯಮತೀತಬಾಲ್ಯಸ್ಸು
ಬುದ್ಧಿಮಾನ್ ಭವಿಷ್ಯತೀತಿ ॥ ೯ ॥

ಅಥ ತತ್ರಾಪಿ ವಯಸ್ಯತೀತೇ ಅಸಚ್ಚರಿತಮೇನಂ
ಪಿತಾ ತತ್ಯಾಜ ॥ ೧೦ ॥

---

ಇಷ್ಟವೋ ಅದನ್ನವರು ಪಡೆಯಬಹುದು ಎಂದ ಮಾತನ್ನು ಕೇಳಿ ಕೇಶಿನಿಯು ಒಬ್ಬನೇ ಮಗನನ್ನೂ ಸುಮತಿಯು ಅರವತ್ತು ಸಾವಿರ ಮಕ್ಕಳನ್ನೂ ಕೇಳಿಕೊಂಡರು.

೫-೬. ಔರ್ವನು ಹಾಗೆಯೇ ಆಗಲೆಂದು ವರವನ್ನು ಕೊಟ್ಟ ಮೇಲೆ ಸ್ವಲ್ಪ ದಿನದಲ್ಲಿಯೇ ಕೇಶಿನಿಯು ಅಸಮಂಜಸನೆಂಬ ವಂಶವೃದ್ಧಿಕರನಾದ ಒಬ್ಬನೇ ಮಗನನ್ನು ಹೆತ್ತಳು. ಕಾಶ್ಯಪನಮಗಳಾದ ಸುಮತಿಗೆ ಅರವತ್ತು ಸಾವಿರ ಮಕ್ಕಳಾದರು.

೭-೧೦. ಅಸಮಂಜಸನಿಗೆ ಅಂಶುಮಂತನೆಂಬ ಮಗನು ಹುಟ್ಟಿದನು. ಅಸಮಂಸಜನು ಬಾಲ್ಯದಿಂದಲೇ ದುರ್ಮಾರ್ಗಾಸಕ್ತನಾಗಿದ್ದನು. ತಂದೆಯು ಇವನು ಬಾಲ್ಯವನ್ನು ಕಳೆದರೆ ಒಳ್ಳೆಯ ಬುದ್ಧಿಯುಳ್ಳವನಾಗುವನೆಂದು ತಿಳಿದಿದ್ದನು. ಆದರೆ ದೊಡ್ಡವನಾದ ಮೇಲೆಯೂ ದುರ್ಮಾರ್ಗದಲ್ಲಿ ನಡೆಯುತ್ತಿದ್ದ ಅವನನ್ನು ತಂದೆಯು ತ್ಯಾಗಮಾಡಿದನು.

ತಾನ್ಯಪಿ ಷಷ್ಟಿ ಪುತ್ರಸಹಸ್ರಾಣಿ ಅಸಮಂಜಸ ಚರಿ
ತಮೇವಾನುಚಕ್ರುಃ ॥ ೧೧ ॥

ತತಶ್ಚಾಸಮಂಜಸಚರಿತಾನುಸಾರಿಭಿಸ್ಸಾಗರೈರಪಧ್ವಸ್ತಯ
ಜ್ಞಾದಿಸನ್ಮಾರ್ಗೇ ಜಗತಿ ದೇವಾಸ್ಸಕಲವಿದ್ಯಾಮಯಮಸಂ
ಸ್ಪೃಷ್ಟಮಶೇಷದೋಷೈರ್ಭಗವತಃ ಪುರುಷೋತ್ತಮಸ್ಯಾಂಶ
ಭೂತಂ ಕಪಿಲಂ ಪ್ರಣಮ್ಯ ತದರ್ಥಮೂಚುಃ ॥ ೧೨ ॥

ಭಗವನ್ನೇಭಿಃ ಸಗರತನಯೈರಸಮಂಜಸಚರಿತಮನುಗಮ್ಯತೇ ॥ ೧೩ ॥

ಕಥಮೇಭಿರಸದ್ವೃತ್ತಮನುಸರದ್ಭಿರ್ಜಗದ್ಭವಿಷ್ಯತೀತಿ ॥ ೧೪ ॥

ಆರ್ತಜಗತ್ಪರಿತ್ರಾಣಾಯ ಚ ಭಗವತೋಽತ್ರ ಶರೀರಗ್ರಹಣಮಿತ್ಯಾ
ಕರ್ಣ್ಯ ಭಗವಾನಲ್ಪೈರೇವಾಹೋಭಿರ್ವಿನಂಕ್ಷ್ಯತೀತ್ಯುಕ್ತವಾನ್ ॥ ೧೫ ॥

ಅತ್ರಾಂತರೇ ಚ ಸಗರೋಽಶ್ವಮೇಧಮಾರಭತ ॥ ೧೬ ॥
ತತ್ರ ಚ ಪುತ್ರೈರಧಿಷ್ಠಿತಮಸ್ಯಾಶ್ವಂ ಕೋಽಪ್ಯಪಹೃತ್ಯ ಭುವೋ

---

೧೧-೧೫. ಸಗರನ ಅರವತ್ತು ಸಾವಿರ ಮಕ್ಕಳೂ ಅಸಮಂಜಸನ ನಡತೆಯನ್ನೇ ಅನುಸರಿಸಿದರು. ಅವರು ಜಗತ್ತಿನಲ್ಲಿ ನಡೆವ ಯಜ್ಞಾದಿ ಸನ್ಮಾರ್ಗಾಚರಣೆಗಳನ್ನು ನಾಶಮಾಡುತ್ತಲು, ದೇವತೆಗಳು ಸಕಲವಿದ್ಯಾಸ್ವರೂಪನೂ ಯಾವದೋಷವೂ ಇಲ್ಲದವನೂ ಭಗವಂತನಾದ ಪುರುಷೋತ್ತಮನ ಅಂಶದಿಂದ ಅವತರಿಸಿದವನೂ ಆದ ಕಪಿಲ ಮುನಿಗೆ ನಮಸ್ಕಾರಮಾಡಿ ಈ ವಿಚಾರವನ್ನು ತಿಳಿಸಿದರು. "ಮಹಾತ್ಮನೇ! ಸಗರಪುತ್ರರು ಅಸಮಂಜಸನ ನಡತೆಯನ್ನನುಸರಿಸಿದರು. ದುರ್ನಡತೆಯುಳ್ಳ ಇವರಿಂದ ಜಗತ್ತು ಹೇಗಾಗುವುದೋ? ದುಃಖಿತವಾದ ಜಗತ್ತನ್ನು ರಕ್ಷಿಸುವುದಕ್ಕಾಗಿಯೇ ನೀನು ಶರೀರಗ್ರಹಣ ಮಾಡಿರುವೆ" ಎಂದ ಮಾತನ್ನು ಕೇಳಿ ಕಪಿಲಮುನಿಯು ಅವರು ಸ್ವಲ್ಪದಿನದಲ್ಲಿಯೇ ನಾಶರಾಗುವರೆಂದು ಹೇಳಿದನು.

೧೬-೨೦. ಈ ಸಂದರ್ಭದಲ್ಲಿ ಸಗರನು ಅಶ್ವಮೇಧ ಯಜ್ಞವನ್ನು ಪ್ರಾರಂಭಿಸಿದನು. ಪುತ್ರರ ರಕ್ಷಣೆಯಿಂದ ಅವನು ಬಿಟ್ಟಿದ್ದ ಯಜ್ಞದ ಕುದುರೆಯನ್ನು ಯಾರೋ

ಬಿಲಂ ಪ್ರವಿವೇಶ ॥ ೧೭ ॥

ತತಶ್ಚ ತತ್ತನಯಾಃ ಅಶ್ವಖುರಗತಿನಿರ್ಬಂಧೇನ ವಸುಧಾ
ತಲಮೇಕೈಕಂ ಯೋಜನಮವನೇಶ್ಚ ನಿಚಖ್ನುಃ ॥ ೧೮ ॥

ಪಾತಾಳೇ ಚಾಶ್ವಂ ಪರಿಭ್ರಮಂತಮವನಿಪತಿ ತನಯಾಸ್ತೇ
ದದೃಶುಃ ॥ ೧೯ ॥

ನಾತಿದೂರಾವಸ್ಥಿತಂ ಭಗವಂತಮಪಘನೇ ಶರತ್ಕಾಲೇರ್ಕಇವ
ತೇಜೋಭಿರನವರತಮೂರ್ಧ್ವಮಧಶ್ಚಾಶೇಷದಿಶಶ್ಚೋದ್ಭಾಸಯ
ಮಾನಂ ಕಪಿಲರ್ಷಿಮಪಶ್ಯನ್ ॥ ೨೦ ॥

ತತಶ್ಚೋದ್ಯತಾಯುಧಾ ದುರಾತ್ಮಾನೋ ಹಯಹರ್ತಾಯಮ
ಸ್ಮದಪಕಾರೀ ಯಜ್ಞವಿಘ್ನಕರ್ತಾ ಹನ್ಯತಾಂ ಹನ್ಯತಾಮಿತ್ಯವೋ
ಚನ್ನಭ್ಯಧಾವಂಶ್ಚ ॥ ೨೧ ॥

---

ಅಪಹರಿಸಿ ಭೂಮಿಯ ಬಿಲವನ್ನು ಪ್ರವೇಶಿಸಿದರು. ಆ ಮೇಲೆ ಅವನ ಅರವತ್ತು ಸಾವಿರ ಮಕ್ಕಳೂ ಕುದುರೆಯ ಗೊರಸಿನ ಗುರುತನ್ನು ಆಶ್ರಯಿಸಿ ಒಬ್ಬೊಬ್ಬನೂ ಒಂದೊಂದು ಯೋಜನ ವಿಸ್ತಾರವಾದ ಭೂಮಿಯನ್ನು ಅಗೆದುಕೊಂಡು ಪಾತಾಳ ಲೋಕಕ್ಕೆ ಹೋಗಿ ಅಲ್ಲಿ ಸಂಚರಿಸುತ್ತಿರುವ ಯಜ್ಞದ ಕುದುರೆಯನ್ನು ಕಂಡರು. ಸಮೀಪದಲ್ಲಿಯೇ ಮೋಡವಿಲ್ಲದ ಶರತ್ಕಾಲದಲ್ಲಿನ ಸೂರ್ಯನ ಕಾಂತಿಯಂತೆ ಯಾವಾಗಲೂ ಸುತ್ತಲೂ ತನ್ನ ತೇಜಸ್ಸನ್ನು ಹರಡಿ ದಿಕ್ಕನ್ನು ಪ್ರಕಾಶಪಡಿಸುತ್ತಿರುವ ಮಹಾಮಹಿಮನಾದ ಕಪಿಲಋಷಿಯನ್ನು ಕಂಡರು.

೨೧–೨೨. ಆ ಮೇಲೆ ದುಷ್ಟರಾದ ಅವರು ಆಯುಧಗಳನ್ನು ಹಿಡಿದು "ನಮ್ಮ ಯಜ್ಞದಕುದುರೆಯನ್ನು ಕದ್ದು ಯಜ್ಞಕ್ಕೆ ವಿಘ್ನವನ್ನು ಮಾಡಿದವನೇ ಇವನು. ಇವನನ್ನು ಕೊಲ್ಲಿರಿ" ಎಂದು ಹೇಳುತ್ತಾ ಆ ಋಷಿಯ ಸಮೀಪಕ್ಕೆ

ತತಸ್ತೇನಾಪಿ ಭಗವತಾ ಕಿಂಚಿದೀಷತ್ಪರಿವರ್ತಿತಲೋಚನೇನಾ
ಅವಲೋಕಿತಾಃ ಸ್ವಶರೀರಸಮುತ್ಥೇನಾಗ್ನಿನಾ ದಹ್ಯಮಾನಾ
ವಿನೇಶುಃ ॥ ೨೨ ॥

ಸಗರೋಽಪ್ಯವಗಮ್ಯಾಶ್ವಾನುಸಾರಿ ತತ್ಪುತ್ರಬಲಮಶೇಷಂ
ಪರಮರ್ಷಿಣಾ ಕಪಿಲೇನ ದಗ್ಧಂ ತತೋಂಽಶು
ಮಂತಮಸಮಂಜಸಪುತ್ರಮಾಹೂಯಾಶ್ವಾನ್ವೇಷಣಾಯ
ಯುಯೋಜ ॥ ೨೩ ॥

ಸ ತು ಸಗರತನಯಖಾತಮಾರ್ಗೇಣ ಕಪಿಲಮಭ್ಯು
ಪಗಮ್ಯ ಭಕ್ತಿನಮ್ರಸ್ತಥಾ ತುಷ್ಟಾವ ॥ ೨೪ ॥

ಅಥೈನಂ ಭಗವಾನಾಹ ॥ ೨೫ ॥

---

ಓಡಿಬಂದರು. ಆಗ ಮಹಾಮಹಿಮನಾದ ಕಪಿಲಮುನಿಯು ಕಣ್ಣುಬಿಟ್ಟು ನೋಡುತ್ತಲು ಅವರೆಲ್ಲರೂ ತಮ್ಮ ಶರೀರದಲ್ಲಿಯೇ ಹುಟ್ಟಿದ ಅಗ್ನಿಯಿಂದ ಸುಟ್ಟುನಾಶವಾದರು.

೨೩-೨೪. ಸಗರನು ಕುದುರೆಯನ್ನನುಸರಿಸಿ ಹೋದ ತನ್ನ ಮಕ್ಕಳ ಸೈನ್ಯವು ಕಪಿಲ ಮುನಿಯ ತೇಜಸ್ಸಿನಿಂದ ಸುಟ್ಟುಹೋದದನ್ನು ತಿಳಿದು ಅಸಮಂಜಸನ ಮಗನಾದ ಅಂಶುಮಂತನನ್ನು ಕರೆದು ಕುದುರೆಯನ್ನು ಹುಡುಕಿ ತರುವಂತೆ ಗೊತ್ತು ಮಾಡಿದನು. ಅವನು ಸಗರಪುತ್ರರು ಅಗೆದ ದಾರಿಯಲ್ಲಿಯೇ ಕಪಿಲಮುನಿಯ ಸಮೀಪಕ್ಕೆ ಹೋಗಿ ಭಕ್ತಿಯಿಂದ ನಮಸ್ಕರಿಸಿ ಸ್ತೋತ್ರಮಾಡಿದನು.

೨೫-೨೬. ಕಪಿಲ ಮುನಿಯು “ ಎಲೈ ಅಂಶುಮಂತನೇ ಯಜ್ಞಮಾಡುವುದಕ್ಕಾಗಿ ಈ ಕುದುರೆಯನ್ನು ನಿನ್ನ ಪಿತಾಮಹನಿಗೆ ತೆಗೆದುಕೊಂಡುಹೋಗಿ ಕೊಡು.

ಗಚ್ಛೈನಂ ಪಿತಾಮಹಾಯಾಶ್ವಂ ಪ್ರಾಪಯ ವರಂ ವೃಣೀಷ್ವ
ಚ ಪುತ್ರ ಪೌತ್ರಸ್ತೇ ಸ್ವರ್ಗಾದ್ಗಂಗಾಂ ಭುವಮಾ
ನಯಿಷ್ಯತೀತಿ ॥ ೨೬ ॥

ಅಥಾಂಶುಮಾನಪಿ ಬ್ರಹ್ಮದಂಡಹತಾ
ನಾಮಸ್ಮತ್ಪಿತ್ಯಣಾಂ ಸ್ವರ್ಗಾಯೋಗ್ಯಾನಾಂ ಸ್ವರ್ಗಪ್ರಾ
ಪ್ತಿಕರಂ ವರಮಸ್ಮಾಕಂ ಭಗವಾನ್ ಪ್ರಯಚ್ಛತ್ವಿತ್ಯಾಹ ॥ ೨೭ ॥

ತದಾಕರ್ಣ್ಯ ತಂ ಚಾಹ ಭಗವಾನ್ಕಪಿಲರ್ಷಿಃ
ಉಕ್ತಮೇವೈತನ್ಮಯಾ ಪೌತ್ರಸ್ತೇ ತ್ರಿದಿವಾದ್ಗಂಗಾಂ
ಭುವಮಾನಯಿಷ್ಯತೀತಿ ॥ ೨೮ ॥

ತದಂಭಸಾ ಚ ಸಂಸ್ಪೃಷ್ಟೇಷ್ವಸ್ಥಿಭಸ್ಮಸ್ವೇತೇ ಸ್ವರ್ಗ
ಮಾರೋಕ್ಷ್ಯಂತಿ ॥ ೨೯ ॥

---

ಮತ್ತು ನಿನಗಿಷ್ಟವಾದ ವರವನ್ನು ಕೇಳು. ಎಲೈ ಪುತ್ರನೇ! ನಿನ್ನ ಮೊಮ್ಮಗನು ಗಂಗೆಯನ್ನು ಭೂಲೋಕಕ್ಕೆ ತರುವನು. ಎಂದು ಹೇಳಿದನು.

೨೭. ಆ ಬಳಿಕ ಅಂಶುಮಂತನು "ಮಹಾಮಹಿಮನಾದ ಕಪಿಲ ಮುನಿಯೇ ಬ್ರಾಹ್ಮಣನನ್ನು ಕೊಲ್ಲುವುದಕ್ಕಾಗಿ ಹೋಗಿ ನಾಶರಾದ ನಮ್ಮ ಪಿತೃಗಳಿಗೆ ( ಚಿಕ್ಕಪ್ಪಂದಿರು ) ಸ್ವರ್ಗವುಂಟಾಗುವ ವರವನ್ನು ಕರುಣಿಸಬೇಕು." ಎಂದು ಕೇಳಿಕೊಂಡನು.

೨೮-೩೩. ಆ ಮಾತನ್ನು ಕೇಳಿ ಕಪಿಲಮುನಿಯು "ಅಂಶುಮಂತನೇ! ನಿನ್ನ ಮೊಮ್ಮಗನು ಸ್ವರ್ಗದಿಂದ ಗಂಗೆಯನ್ನು ಭೂಲೋಕಕ್ಕೆ ತರುವನೆಂದು ಹೇಳಲಿಲ್ಲವೇ? ಆ ಗಂಗೆಯ ನೀರು ನಿಮ್ಮ ಪಿತೃಗಳ ಮೂಳೆ ಮತ್ತು ಬೂದಿಗಳಿಗೆ ತಗುಲಿದರೆ ಅವರೆಲ್ಲರೂ ಸ್ವರ್ಗಕ್ಕೆ ಹೋಗುವರು. ಭಗವಂತನಾದ ವಿಷ್ಣುವಿನ ಪಾದದ ಹೆಬ್ಬೆರ

ಭಗವದ್ವಿಷ್ಣುಪಾದಾಂಗುಷ್ಠವಿನಿರ್ಗತಸ್ಯ ಹಿ ಜಲಸ್ಯೈತ
ನ್ಮಾಹಾತ್ಮ್ಯಂ ॥ ೩೦ ॥

ಯನ್ನ ಕೇವಲಮಭಿಸಂಧಿಪೂರ್ವಕಂ ಸ್ನಾನಾದ್ಯುಪಭೋ
ಗೇಷೂಪಕಾರಕಂ । ಕಿಂತು ಅನಭಿಸಂಧಿತಮಪ್ಯಸ್ಯಾ
ಪೇತಪ್ರಾಣಸ್ಯ ಭಸ್ಮಾಸ್ಥಿಚರ್ಮಸ್ನಾಯುಕೇಶಾ
ದ್ಯುತ್ಸೃಷ್ಟಂಶರೀರಜಂ ಯದಪಿ ಪತಿತಂ ಸದ್ಯಃ ಶರೀರಿಣಂ
ಸ್ವರ್ಗಂ ನಯತೀತ್ಯುಕ್ತಃ । ಪ್ರಣಮ್ಯ ಭಗವತೇಽಶ್ವಮಾದಾಯ
ಪಿತಾಮಹಯಜ್ಞಮಾಜಗಾಮ ॥ ೩೧ ॥

ಸಗರೋಽಪ್ಯಶ್ವಮಾಸಾದ್ಯ ತಂ ಯಜ್ಞಂ ಸಮಾಪಯಾಮಾಸ ॥ ೩೨ ॥

ಸಾಗರಂ ಚ ಸ್ವಾತ್ಮಜಪ್ರೀತ್ಯಾ ಪುತ್ರತ್ವೇ ಕಲ್ಪಿತವಾನ್ ॥ ೩೩ ॥

---

ಳಿನಿಂದ ಹೊರಟ ನೀರಿಗೆ ಈ ಮಹಿಮೆಯಿರುವುದು. ಆ ಗಂಗೆಯ ನೀರು ಸಂಕಲ್ಪ ಪೂರ್ವಕವಾಗಿ (ಫಲಾಪೇಕ್ಷೆಯಿಂದ) ಸ್ನಾನಾದಿಗಳನ್ನು ಮಾಡಿದವರಿಗೆ ಮಾತ್ರ ಫಲವನ್ನುಂಟುಮಾಡುವುದೆಂದು ತಿಳಿಯಬಾರದು. ಫಲಾಪೇಕ್ಷೆಯಿಲ್ಲದಿದ್ದರೂ ಪ್ರಾಣತ್ಯಾಗ ಮಾಡಿದ ಜೀವನ ಶರೀರದ ಮೂಳೆ, ಬೂದಿ, ಚರ್ಮ, ಕೂದಲು ಮುಂತಾದ ಯಾವ ಭಾಗಗಳು ಗಂಗೆಯ ನೀರಿನಲ್ಲಿ ಬಿದ್ದರೂ ಆ ಕ್ಷಣದಲ್ಲಿಯೇ ಆಜೀವನು ಸ್ವರ್ಗಕ್ಕೆ ಹೋಗುವನು" ಎಂದು ಹೇಳಿದನು. ಆ ಮಾತನ್ನು ಕೇಳಿ ಅಂಶುಮಂತನು ಭಗವಂತನಾದ ಕಪಿಲಮುನಿಗೆ ನಮಸ್ಕಾರವನ್ನು ಮಾಡಿ ಕುದುರೆಯನ್ನು ತೆಗೆದುಕೊಂಡು ಪಿತಾಮಹನು ಯಜ್ಞಮಾಡುವ ಪ್ರದೇಶಕ್ಕೆ ಬಂದನು. ಸಗರನು ಕುದುರೆಯನ್ನು ಪಡೆದು ಆ ಯಜ್ಞವನ್ನು ಪೂರ್ಣಮಾಡಿದನು. ತನ್ನ ಪುತ್ರರು ಅಗೆದು ವಿಸ್ತಾರಮಾಡಿದ ಸಾಗರವನ್ನು ಪುತ್ರ ಪ್ರೀತಿಯಿಂದ ಭಾವಿಸಿದನು.

ತಸ್ಯಾಪ್ಯಂಶುಮತೋ ದಿಲೀಪಃ ಪುತ್ರೋಽಭವತ್ ॥ ೩೪ ॥

ದಿಲೀಪಸ್ಯಾಪಿ ಭಗೀರಥಃ ಯೋಽಸೌ ಗಂಗಾಂ ಸ್ವರ್ಗಾ
ದಿಹಾನೀಯ ಭಾಗೀರಥೀಸಂಜ್ಞಾಂ ಚಕಾರ ॥ ೩೫ ॥

ಭಗೀರಥಾತ್ಸುಹೋತ್ರಸ್ತಸ್ಯಾಪಿ ನಾಭಾಗಸ್ತತೋಂಬರೀಷ
ಸ್ತತ್ಪುತ್ರಸ್ಸಿಂಧುದ್ವೀಪ ಸ್ಸಿಂಧುದ್ವೀಪಾದಯುತಾಯುಃ ॥ ೩೬ ॥

ತತ್ಪುತ್ರಶ್ಚ ಋತುಪರ್ಣೋ ನಳಸಹಾಯೋಽಕ್ಷಹೃದ
ಯಜ್ಞೋಽಭೂತ್ ॥ ೩೭ ॥

ಋತುಪರ್ಣಪುತ್ರಸ್ಸರ್ವಕಾಮಃ ॥ ೩೮ ॥

ತತ್ತನಯಸ್ಸುದಾಸಃ ॥ ೩೯ ॥

ಸುದಾಸಾತ್ಸೌದಾಸೋ ಮಿತ್ರಸಹೋ ನಾಮ ॥ ೪೦ ॥

---

೩೪–೪೦. ಅಂಶುಮಂತನಿಗೆ ದಿಲೀಪನು ಮಗನು, ದಿಲೀಪನ ಮಗನೇ ಸ್ವರ್ಗದಿಂದ ಭೂಲೋಕಕ್ಕೆ ಗಂಗೆಯನ್ನು ತಂದ ಭಗೀರಥನು. ಭಗೀರಥನು ತಂದುದರಿಂದ ಗಂಗೆಗೆ ಭಾಗೀರಥಿಯೆಂದು ಹೆಸರಾಯಿತು. ಭಗೀರಥನಿಗೆ ಸುಹೋತ್ರನೂ, ಅವನಿಗೆ ನಾಭಾಗನೂ, ನಾಭಾಗನಿಗೆ ಅಂಬರೀಷನೂ, ಅವನಿಗೆ ಸಿಂಧು ದ್ವೀಪನೂ, ಸಿಂಧುದ್ವೀಪನಿಗೆ ಅಯುತಾಯುವೂ, ಅಯುತಾಯುವಿಗೆ ಋತುಪರ್ಣನೂ, ಮಕ್ಕಳಾದರು. ಋತುಪರ್ಣನು ಅಕ್ಷಹೃದಯವನ್ನು (ಪಗಡೆಯ ಆಟದ ರಹಸ್ಯ) ತಿಳಿದವನು. ನಳರಾಜನಿಗೆ ಇದನ್ನು ಹೇಳಿಕೊಟ್ಟು ಸಹಾಯಮಾಡಿದನು. ಋತುಪರ್ಣನಿಗೆ ಸರ್ವಕಾಮನೆಂಬವನು ಮಗನು. ಅವನ ಮಗನು ಸುದಾಸನು. ಸುದಾಸನ ಮಗನೇ ಸೌದಾಸನು. ಇವನಿಗೆ ಮಿತ್ರಸಹನೆಂದು ಮತ್ತೊಂದು ಹೆಸರಿರುವುದು.

ಸ ಚಾಟವ್ಯಾಂ ಮೃಗಯಾರ್ಥಪಟನ್ ವ್ಯಾಘ್ರದ್ವಯ
ಮಪಶ್ಯತ್ ॥ ೪೧ ॥

ತಾಭ್ಯಾಂ ಚ ತದ್ವನಮುಪಗತಮೃಗಂ ಕೃತಂ ಮತ್ವೈಕಂ
ತಯೋರ್ಬಾಣೇನ ಜಘಾನ ॥ ೪೨ ॥

ಮ್ರಿಯಮಾಣಶ್ಚಾಸಾವತಿಭೀಷಣಾಕೃತಿರತಿಕರಾಳವದನೋ
ರಾಕ್ಷಸೋಽಭೂತ್ ॥ ೪೩ ॥

ದ್ವಿತೀಯೋಽಪಿ ಪ್ರತಿಕ್ರಿಯಾಂ ತೇ ಕರಿಷ್ಯಾಮೀತ್ಯುಕ್ತ್ವಾಂತ
ರ್ಧಾನಂ ಜಗಾಮ ॥ ೪೪ ॥

ಕಾಲೇನ ಗಚ್ಛತಾಸೌ ಸೌದಾಸೋ ಯಜ್ಞಮಯಜತ್ ॥ ೪೫ ॥

---

೪೧–೪೪ ಮಿತ್ರಸಹನು ಕಾಡಿನಲ್ಲಿ ಮೃಗಗಳ ಬೇಟೆಗೆ ಹೋಗಿದ್ದಾಗ ಎರಡು ಹುಲಿಗಳನ್ನು ಕಂಡನು. ಆ ಹುಲಿಗಳು ಕಾಡಿನಲ್ಲಿದ್ದ ಜಿಂಕೆಗಳನ್ನೆಲ್ಲ ತಿಂದುವೆಂದು ತಿಳಿದು ಅವುಗಳಲ್ಲಿ ಒಂದನ್ನು ಬಾಣದಿಂದ ಕೊಂದನು. ಸಾಯುವಾಗ ಆ ಹುಲಿಯು ಅತಿ ಭಯಂಕರವೂ, ಕ್ರೂರವಾದ ಬಾಯಿಯೂ ಉಳ್ಳ ರಾಕ್ಷಸನಾಯಿತು. ಮತ್ತೊಂದು ಹುಲಿಯು ನಿನಗೆ ಪ್ರತಿಕ್ರಿಯೆಯನ್ನು ಮಾಡುತ್ತೇನೆಂದು ಹೇಳಿ ಮಾಯವಾಯಿತು.

೪೫–೪೯. ಕೆಲವು ಕಾಲದ ಮೇಲೆ ಸೌದಾಸನು ಯಜ್ಞವನ್ನು ಮಾಡಿದನು. ಯಜ್ಞಮಾಡುತ್ತಿರುವಾಗ ಗುರುವಾದ ವಸಿಷ್ಠನು ಯಜ್ಞಶಾಲೆಯಲ್ಲಿಲ್ಲದ ಸಮಯದಲ್ಲಿ ಆ ರಾಕ್ಷಸನು ವಸಿಷ್ಠನ ರೂಪದಿಂದ ಬಂದು ರಾಜನನ್ನು ಕುರಿತು, ಯಜ್ಞದ ಕೊನೆ

ಪರಿನಿಷ್ಠಿತಯಜ್ಞೇ ಚಾಚಾರ್ಯೇ ವಸಿಷ್ಠೇ ನಿಷ್ಕ್ರಾಂತೇ ತದ್ರಕ್ಷೋ
ವಸಿಷ್ಠರೂಪಮಾಸ್ಥಾಯ ಯಜ್ಞಾವಸಾನೇಮಮ
ಮನುಷ್ಯ ಮಾಂಸಭೋಜನಂ ದೇಯಂ ತತ್ಸಂಸ್ಕ್ರಿಯತಾಂ
ಕ್ಷಣಾದಾಗಮಿಷ್ಯಾ ಮೀತ್ಯುಕ್ತ್ವಾ ನಿಷ್ಕ್ರಾಂತಃ ॥ ೪೬ ॥

ಭೂಯಸ್ಸೂದವೇಷಂ ಕೃತ್ವಾ ರಾಜಾಜ್ಞಯಾ ಮಾ
ನುಷಮಾಂಸಂಸಂಸ್ಕೃತ್ಯ ರಾಜ್ಞೇ ನ್ಯವೇದಯತ್ ॥ ೪೭ ॥

ಅಸಾವಪಿ ಹಿರಣ್ಯಪಾತ್ರಸ್ಥಿತಮಾಂಸಮಾದಾಯ
ವಸಿಷ್ಠಾಗಮನಪ್ರತೀಕ್ಷೋಽಭವತ್ ॥ ೪೮ ॥

ಆಗತಾಯ ವಸಿಷ್ಠಾಯ ಚ ನಿವೇದಿತವಾನ್ ॥ ೪೯ ॥

ಸ ಚಾಪ್ಯಚಿಂತಯತ್ ಅಹೋಽಸ್ಯ ರಾಜ್ಞೋ ದೌಶ್ಶೀಲ್ಯಂ
ಯೇನೈತನ್ಮಾಂಸಮಸ್ಮಾಕಂ ಪ್ರಯಚ್ಛತಿ ಕಿ
ಮೇತದ್ದ್ರವ್ಯ ಜಾತಮಿತಿ ಧ್ಯಾನಪರೋಽಭವತ್ ॥ ೫೦ ॥

---

ಯಲ್ಲಿ ನನಗೆ ಮನುಷ್ಯ ಮಾಂಸದ ಭೋಜನವನ್ನು ಮಾಡಿಸಬೇಕು. ಅದನ್ನು ಸಿದ್ಧಮಾಡು ಒಂದು ಕ್ಷಣದೊಳಗಾಗಿ ಬರುತ್ತೇನೆ ಎಂದು ಹೇಳಿ ಹೊರಟುಹೋದನು. ಪುನಃ ಅಡಿಗೆಯವನ ವೇಷದಿಂದ ಬಂದು ರಾಜನ ಅಪ್ಪಣೆಯಿಂದ ಮನುಷ್ಯ ಮಾಂಸವನ್ನು ಸಿದ್ಧಮಾಡಿ ರಾಜನಿಗೆ ಒಪ್ಪಿಸಿದನು. ರಾಜನು ಚಿನ್ನದ ಪಾತ್ರೆಯಲ್ಲಿರುವ ಮಾಂಸವನ್ನು ಹಿಡಿದುಕೊಂಡು ವಸಿಷ್ಠರು ಬರುವುದನ್ನೇ ನಿರೀಕ್ಷಿಸುತ್ತಿದ್ದು ಬಂದ ವಸಿಷ್ಠರಿಗೆ ಅದನ್ನು ಕೊಟ್ಟನು.

೫೦–೫೩. ವಸಿಷ್ಠನು ಅದನ್ನು ನೋಡಿ "ರಾಜನು ದುರ್ನಡತೆಯುಳ್ಳವನು, ಈ ಮಾಂಸವನ್ನು ನನಗೆ ಕೊಟ್ಟನು. ಇದರಲ್ಲಿರುವ ವಸ್ತುಗಳಾವುವು" ಎಂದು

ಅಪಶ್ಯಚ್ಚ ತನ್ಮಾನುಷಮಾಂಸಂ ॥ ೩೧ ॥

ಅತಃ ಕ್ರೋಧಕಲುಷೀಕೃತಚೇತಾ ರಾಜನಿ ಶಾಪಮುತ್ಸಸರ್ಜ ॥ ೩೨ ॥

ಯಸ್ಮಾದಭೋಜ್ಯಮೇತದಸ್ಮದ್ವಿಧಾನಾಂ ತಪಸ್ವಿನಾಂ ಅವ
ಗಚ್ಛನ್ನಪಿ ಭವಾನ್ಮಹ್ಯಂ ದದಾತಿ ತಸ್ಮಾತ್ತವೈವಾತ್ರ
ಲೋಲುಪತಾ ಭವಿಷ್ಯತೀತಿ ॥ ೩೩ ॥

ಅನಂತರಂ ಚ ತೇನಾಪಿ ಭಗವತೈವಾಭಿಹಿತೋಽಸ್ಮೀತ್ಯುಕ್ತೇ ಕಿಂ ಕಿಂ
ಮಯೈವಾಭಿಹಿತಮಿತಿ ಪುನರಪಿ ಸಮಾಧೌ ತಸ್ಥೌ ॥ ೩೪ ॥

ಸಮಾಧಿ ವಿಜ್ಞಾನಾವಗತಾರ್ಥಶ್ಚಾನುಗ್ರಹಂ ತಸ್ಮೈ ಚಕಾರ
ನಾತ್ಯಂತಿಕಮೇತದ್ದ್ವಾದಶಾಬ್ದಂ ತವ ಭೋಜನಂ ಭವಿಷ್ಯತೀತಿ ॥ ೩೫ ॥

---

ಯೋಗದೃಷ್ಟಿಯಿಂದ ವಿಚಾರಮಾಡಿದನು. ಅದನ್ನು ಮನುಷ್ಯ ಮಾಂಸವೆಂದು ತಿಳಿದನು. ಇದರಿಂದ ಕೋಪದ ಮನಸ್ಸುಳ್ಳವನಾಗಿ "ನಮ್ಮಂತಹ ತಪಸ್ವಿಗಳಿಗೆ ಇದನ್ನು ಕೊಡಬಾರದೆಂದು ನೀನು ತಿಳಿದಿದ್ದರೂ ಭೋಜನಕ್ಕೆ ಅಯೋಗ್ಯವಾದ ಮನುಷ್ಯಮಾಂಸವನ್ನು ನನಗೆ ನೀನು ಕೊಟ್ಟಿದ್ದರಿಂದ ನಿನಗೆ ಇದರ ಆಹಾರದಲ್ಲಿಯೇ ಆಸಕ್ತಿಯುಂಟಾಗಲಿ" ಎಂದು ಶಾಪವನ್ನು ಕೊಟ್ಟನು. (ರಾಕ್ಷಸನಾಗೆಂದು ಶಾಪದ ಅಭಿಪ್ರಾಯವು.)

೩೪-೩೫. ಆಮೇಲೆ ರಾಜನು ನನಗೆ ನೀವೇ ಹೇಳಿದಿರೆಂದು ಹೇಳುತ್ತಲು ವಸಿಷ್ಠನು "ಏನು ! ಏನು !! ನಾನೇ ಹೇಳಿದೆನೆ ?" ಎಂದು ಪುನಃ ಸಮಾಧಿ ನಿಷ್ಠನಾಗಿ ಜ್ಞಾನ ದೃಷ್ಟಿಯಿಂದ ನಿಜವನ್ನು ತಿಳಿದು ಇದು ರಾಕ್ಷಸನು ಮಾಡಿದುದು, ರಾಜನ ದೋಷವಿಲ್ಲವೆಂದು ರಾಜನಿಗೆ ಅನುಗ್ರಹವನ್ನು ಮಾಡುತ್ತ ಈ ಶಾಪವು ನಿನಗೆ ಯಾವಜ್ಜೀವವೂ ಇರುವುದಿಲ್ಲ, ಹನ್ನೆರಡು ವರ್ಷದವರೆಗೆ ಮಾತ್ರವಿರುವುದೆಂದು ಹೇಳಿದನು.

ಅಸಾವಪಿ ಪ್ರಗೃಹ್ಯೋದಕಾಂಜಲಿಂ ಮುನಿ ಶಾಪಪ್ರದಾನಾ
ಯೋದ್ಯತೋ ಭಗವನ್ನಯಮಸ್ಮದ್ಗುರುರ್ನಾರ್ಹಸ್ಯೇನಂ
ಕುಲದೇವತಾ ಭೂತಮಾಚಾರ್ಯಂ ಶಪ್ತುಮಿತಿ ಮದಯಂತ್ಯಾ
ಸ್ವಪತ್ನ್ಯಾ ಪ್ರಸಾದಿತಃ ಸಸ್ಯಾಂಬುದರಕ್ಷಣಾರ್ಥಂ
ತಚ್ಛಾಪಾಂಬುನೋರ್ವ್ಯಾಂ ನ ಚಾಕಾಶೇ ಚಿಕ್ಷೇಪ । ಕಿಂ ತು
ತೇನೈವ ಸ್ವಪಾದೌ ಸಿಷೇಚ ॥ ೫೬ ॥

ತೇನ ಚ ಕ್ರೋಧಾಗ್ನ್ಯಶ್ರಿತೇನಾಂಬುನಾ ದಗ್ಧಚ್ಛಾಯೌತೌ ತತ್ಪಾದೌ
ಕಲ್ಮಾಷತಾಮುಪಗತೌ । ತತಸ್ಸಃ ಕಲ್ಮಾಷಪಾದ ಸಂಜ್ಞಾಮವಾಪ ॥ ೫೭ ॥

ವಸಿಷ್ಠಶಾಪಾಚ್ಚ ಷಷ್ಠೇ ಷಷ್ಠೇ ಕಾಲೇ ರಾಕ್ಷಸಸ್ವಭಾವಮುಪೇತ್ಯಾಟವ್ಯಾಂ
ಪರ್ಯಟನ್ ಅನೇಕಶೋ ಮಾನುಷಾನಭಕ್ಷಯತ್ ॥ ೫೮ ॥

---

೫೬–೫೭. ಸೌದಾಸರಾಜನು ಕೈಬೊಗಸೆಯಲ್ಲಿ ನೀರನ್ನು ಹಿಡಿದು ವಸಿಷ್ಠ ಮುನಿಗೆ ಶಾಪವನ್ನು ಕೊಡಲು ಪ್ರಯತ್ನಪಟ್ಟನು. ಆಗ ಅವನ ಪತ್ನಿಯಾದ ಮದಯಂತಿಯು " ಮಹಾಮಹಿಮನಾದ ರಾಜನೇ! ಇವರು ನಮ್ಮ ಗುರುಗಳು ಕುಲದೇವತಾ ಸ್ವರೂಪರಾದ ಆಚಾರ್ಯರಿಗೆ ಶಾಪವನ್ನು ಕೊಡಲಾಗದು" ಎಂದು ತಡೆಯುತ್ತಲು ರಾಜನು ಆ ಶಾಪದ ನೀರನ್ನು ಸಸ್ಯವನ್ನೂ, ಮೇಘವನ್ನೂ ರಕ್ಷಿಸುವುದಕ್ಕಾಗಿ ಭೂಮಿಗೂ ಆಕಾಶಕ್ಕೂ ಚೆಲ್ಲಲಿಲ್ಲ. ಅದನ್ನು ತನ್ನ (ಪಾದ) ಹೆಜ್ಜೆಯ ಮೇಲೆ ಹಾಕಿಕೊಂಡನು. ಕೋಪಾಗ್ನಿಯಿಂದ ಕೂಡಿದ ಆ ನೀರಿನಿಂದ ರಾಜನ ಹೆಜ್ಜೆಗಳು ಕಪ್ಪು ಬಿಳುಪು ಬಣ್ಣಗಳನ್ನು ಪಡೆದುವು. ಇದರಿಂದ ಆ ರಾಜನಿಗೆ ಕಲ್ಮಾಷಪಾದನೆಂದು ಹೆಸರಾಯಿತು. (ಮಿತ್ರರೂಪಳಾದ ಪತ್ನಿಯ ಮಾತನ್ನು ಕೇಳಿ ಶಾಂತನಾದುದರಿಂದ ಮಿತ್ರಸಹನೆಂದೂ ಹೆಸರಾಯಿತು.)

೫೮–೬೧. ಸೌದಾಸರಾಜನು ವಸಿಷ್ಠರ ಶಾಪದಿಂದ ರಾಕ್ಷಸ ಸ್ವಭಾವವುಳ್ಳವನಾಗಿ ಪ್ರತಿ ಮೂರನೆಯ ದಿವಸದ ಕೊನೆಯಲ್ಲಿ ಭೋಜನ ಕಾಲದಲ್ಲಿ ಅಡವಿಯಲ್ಲಿ

ಏಕದಾ ತು ಕಂಚಿನ್ಮುನಿಮೃತುಕಾಲೇ ಭಾರ್ಯಾಸಂಗತಂ
ದದರ್ಶ ॥ ೫೯ ॥

ತಯೋಶ್ಚ ತಮತಿಭೀಷಣಂ ರಾಕ್ಷಸರೂಪಮವೇಕ್ಷ್ಯ
ತ್ರಾಸಾದ್ದಂಪತ್ಯೋಃ ಪ್ರಧಾವಿತಯೋಃ ಬ್ರಾಹ್ಮಣಂ ಜಗ್ರಾಹ ॥ ೬೦ ॥

ತತಸ್ಸಾ ಬ್ರಾಹ್ಮಣೀ ಬಹುಶಸ್ತಮಭಿಯಾಚಿತವತೀ ॥ ೬೧ ॥

ಪ್ರಸೀದೇಕ್ಷ್ವಾಕುಲತಿಲಕಭೂತಸ್ತ್ವಂ ಮಹಾರಾಜೋ ಮಿತ್ರ
ಸಹೋ ನಾಮ ನ ರಾಕ್ಷಸಃ ॥ ೬೨ ॥

ನಾರ್ಹಸಿ ಸ್ತ್ರೀಧರ್ಮಸುಖಾಭಿಜ್ಞೋ ಮಯ್ಯಕೃತಾರ್ಥಾಯಾ
ಮಿಮಮಸ್ಮದ್ಭರ್ತಾರಂ ಹಂತುಮಿತ್ಯೇವಂ ಬಹುಪ್ರಕಾರಂ
ತಸ್ಯಾಂ ವಿಲಪಂತ್ಯಾಂ ವ್ಯಾಘ್ರಃ ಪಶುಮಿವಾರಣ್ಯೇ ಅಭಿಮತಂ
ತಂ ಬ್ರಾಹ್ಮಣಮಭಕ್ಷಯತ್ ॥ ೬೩ ॥

ತತಶ್ಚಾತಿಕೋಪಸಮನ್ವಿತಾ ಬ್ರಾಹ್ಮಣೀ ತಂ ರಾಜಾನಂ ಶಶಾಪ ॥ ೬೪ ॥

---

ಮನುಷ್ಯರನ್ನು ತಿಂದನು. ಹೀಗಿರುತ್ತಿರಲು ಅವನು ಒಂದು ದಿನ ಋತು ಸಮಯದಲ್ಲಿ ಪತ್ನಿಯೊಡನೆ ಕೂಡಿದ್ದ ಒಬ್ಬ ಮುನಿಯನ್ನು ಕಾಡಿನಲ್ಲಿಕಂಡನು. ದಂಪತಿಗಳಾದ ಅವರಿಬ್ಬರೂ ಅತಿ ಭಯಂಕರವಾದ ಅವನ ರಾಕ್ಷಸ ರೂಪವನ್ನು ನೋಡಿ ಭಯದಿಂದ ಓಡಿಹೋಗುತ್ತಿರಲು ಅವನು ಬ್ರಾಹ್ಮಣನನ್ನು ಹಿಡಿದುಕೊಂಡನು. ಆಗ ಬ್ರಾಹ್ಮಣ ಸ್ತ್ರೀಯು ಬಹು ವಿಧದಲ್ಲಿ ಬೇಡಿಕೊಂಡಳು.

೬೨-೬೬. "ಎಲೈ ರಾಜನೇ! ಪ್ರಸನ್ನನಾಗು. ನೀನು ರಾಕ್ಷಸನಲ್ಲ. ಇಕ್ಷ್ವಾಕು ಕುಲಶ್ರೇಷ್ಠನಾದ ಮಿತ್ರಸಹನೆಂಬ ರಾಜನು. ನೀನು ಸ್ತ್ರೀ ಧರ್ಮವಾದ ಸಂಭೋಗ ಸುಖವನ್ನು ಬಲ್ಲವನು. ನಾನು ನನ್ನ ಪತಿಯಿಂದ ಸುಖವನ್ನು ಸಂಪೂರ್ಣವಾಗಿ ಹೊಂದದಿರುವಾಗ ನೀನು ಅವನನ್ನು ಕೊಲ್ಲಬಾರದು" ಎಂದು ಅನೇಕ ಬಗೆಯಲ್ಲಿ ಅವಳು ಅಳುತ್ತಿದ್ದರೂ ಅವನು ಅರಣ್ಯದಲ್ಲಿ ಹುಲಿಯು ಮೃಗವನ್ನು ತಿನ್ನುವಂತೆ

ಯಸ್ಮಾದೇವಂ ಮಯ್ಯತೃಪ್ತಾಯಾಂ ತ್ವಯಾಯಂ
ಮತ್ಪತಿರ್ಭಕ್ಷಿತಃ ತಸ್ಮಾತ್ತ್ವಮಪಿ ಕಾಮೋಪಭೋ
ಗಪ್ರವೃತ್ತೋಂತಂ ಪ್ರಾಪ್ಸ್ಯಸೀತಿ ॥ ೬೫ ॥

ಶಪ್ತ್ವಾ ಚೈವಂ ಸಾಗ್ನಿಂ ವಿವೇಶ ॥ ೬೬ ॥

ತತಸ್ತಸ್ಯ ದ್ವಾದಶಾಬ್ದ ಪರ್ಯಯೇ ವಿಮುಕ್ತ ಶಾಪಸ್ಯ
ಸ್ತ್ರೀವಿಷಯಾಭಿಲಾಷಿಣೋ ಮದಯಂತೀ ತಂ
ಸ್ಮಾರಯಾಮಾಸ ॥ ೬೭ ॥

ತತಃ ಪರಮಸೌಸ್ತ್ರೀಭೋಗಂ ತತ್ಯಾಜ ॥ ೬೮ ॥

ವಸಿಷ್ಠಶ್ಚಾಪುತ್ರೇಣ ರಾಜ್ಞಾ ಪುತ್ರಾರ್ಥಮಭ್ಯರ್ಥಿತೋ
ಮದಯಂತ್ಯಾಂ ಗರ್ಭಾಧಾನಂ ಚಕಾರ ॥ ೬೯ ॥

---

ತನಗಿಷ್ಟನಾದ ಬ್ರಾಹ್ಮನನ್ನು ತಿಂದುಬಿಟ್ಟನು. ಆ ಮೇಲೆ ಬ್ರಾಹ್ಮಣಸ್ತ್ರೀಯು ವಿಶೇಷವಾದ ಕೋಪದಿಂದ ಕೂಡಿ "ನಾನು ಪತಿಸುಖದಿಂದ ತೃಪ್ತಿಪಡದಿರುವಾಗ ನನ್ನ ಪತಿಯನ್ನು ನೀನು ತಿಂದುದರಿಂದ ನೀನೂ ನಿನ್ನ ಸ್ತ್ರೀಯಲ್ಲಿ ಕಾಮೋಪಭೋಗಕ್ಕೆ ಪ್ರಯತ್ನಿಸಿದಾಗ ಮರಣವನ್ನು ಹೊಂದು" ಎಂದು ಶಾಪವನ್ನು ಕೊಟ್ಟಳು. ಬಳಿಕ ಆ ಬ್ರಾಹ್ಮಣ ಸ್ತ್ರೀಯು ಅಗ್ನಿಪ್ರವೇಶವನ್ನು ಮಾಡಿದಳು.

೬೭-೬೮. ಹನ್ನೆರಡು ವರ್ಷವಾದ ಮೇಲೆ ರಾಜನ ಶಾಪವು ಬಿಡುಗಡೆಯಾಗುತ್ತಲು ಸ್ತ್ರೀ ಸಂಭೋಗವನ್ನಪೇಕ್ಷಿಸಿದ ರಾಜನಿಗೆ ಅವನ ಪತ್ನಿಯಾದ ಮದಯಂತಿಯು ಬ್ರಾಹ್ಮಣಸ್ತ್ರೀಯ ಶಾಪವನ್ನು ಜ್ಞಾಪಿಸಿದಳು. ಅಲ್ಲಿಂದ ಮುಂದೆ ಆ ರಾಜನು ಸ್ತ್ರೀ ಸಂಭೋಗವನ್ನು ಬಿಟ್ಟುಬಿಟ್ಟನು.

೬೯-೭೨. ಮಕ್ಕಳಿಲ್ಲದ ರಾಜನು ತನಗೆ ಪುತ್ರರಾಗಬೇಕೆಂದು ವಸಿಷ್ಠರನ್ನು ಕೇಳಿಕೊಂಡನು. ಆಗ ವಸಿಷ್ಠನು ಅವನ ಪ್ರಾರ್ಥನೆಯಂತೆ ಅವನ ಪತ್ನಿಯಾದ

ಯದಾ [redacted] ಸಪ್ತವರ್ಷಾಣ್ಯಸೌ ಗರ್ಭೋ ನ ಜಜ್ಞೇ ।

ತತಸ್ತಂ ಗರ್ಭಮಶ್ಮನಾ ಸಾ ದೇವೀ ಜಘಾನ ॥ ೨೦ ॥

ಪುತ್ರಶ್ಚಾಜಾಯತ ॥ ೨೧ ॥

ತಸ್ಯ ಚಾಶ್ಮಕ ಇತ್ಯೇವ ನಾಮಾಭವತ್ ॥ ೨೨ ॥

ಅಶ್ಮಕಸ್ಯ ಮೂಲಕೋ ನಾಮ ಪುತ್ರೋಽಭವತ್ ॥ ೨೩ ॥

ಯೋಽಸೌ ಪರಶುರಾಮೇಣ ನಿಃ ಕ್ಷತ್ರೇ ಕ್ಷ್ಮಾತಲೇ ಸ್ತ್ರಿಯ
ಮಾಣೇ ಸ್ತ್ರೀಭಿರ್ವಿವಸ್ತ್ರಾಭಿಃ ಪರಿವಾರ್ಯ ಪರಿರಕ್ಷಿತಃ
ತತಸ್ತಂ ನಾರೀಕವಚಂ ಸಮುದಾಹರಂತಿ ॥ ೨೪ ॥

ಮೂಲಕಾದ್ದಶರಥಃ । ತಸ್ಮಾದಿಲಿಬಿಲಿಃ । ತತಶ್ಚ ವಿಶ್ವಸಹಃ ॥ ೨೫ ॥

ತಸ್ಮಾಚ್ಚ ಖಟ್ವಾಂಗಃ । ಯೋಽಸೌ ದೇವಾಸುರಾಣಾಂ
ಸಂಗ್ರಾಮೇ ದೇವೈರಭ್ಯರ್ಥಿತೋ ಹ್ಯಸುರಾನ್ ಜಘಾನ ॥ ೨೬ ॥

---

ಮದಯಂತಿಯಲ್ಲಿ ಗರ್ಭಾಧಾನವನ್ನು ಮಾಡಿದನು. ಏಳು ವರ್ಷಗಳಾದರೂ ಗರ್ಭವು ಪ್ರಸವವಾಗದಿರಲು ರಾಣಿಯು ಆ ಗರ್ಭವನ್ನು ಕಲ್ಲಿನಿಂದ ಹೊಡೆದಳು. ಆಗ ಪುತ್ರನು ಹುಟ್ಟಿದನು. ಆದರಿಂದ ಅವನಿಗೆ ಅಶ್ಮಕನೆಂದು ಹೆಸರಾಯಿತು.

೨೩-೨೬. ಅಶ್ಮಕನಿಗೆ ಮೂಲಕನೆಂಬ ಮಗನು ಹುಟ್ಟಿದನು. ಪರಶುರಾಮನು ಭೂಮಿಯಲ್ಲಿ ಕ್ಷತ್ರಿಯರನ್ನು ನಾಶಮಾಡುತ್ತಿದ್ದಾಗ ವಸ್ತ್ರವನ್ನು ಧರಿಸದೆ ಬೆತ್ತಲೆಯಾದ ಸ್ತ್ರೀಯರು ಮೂಲಕನನ್ನು ತಮ್ಮ ಗುಂಪಿನ ನಡುವೆ ಇಟ್ಟುಕೊಂಡು ಕಾಪಾಡಿದುದರಿಂದ ಇವನಿಗೆ ನಾರೀಕವಚನೆಂಬ ಹೆಸರಾಯಿತು. ಮೂಲಕನಿಗೆ ದಶರಥನೂ, ಅವನಿಗೆ ಇಲಿಬಿಲಿಯೂ, ಅವನಿಗೆ ವಿಶ್ವಸಹನೂ, ವಿಶ್ವಸಹನಿಗೆ ಖಟ್ವಾಂಗನೂ ಮಕ್ಕಳಾದರು । ಖಟ್ವಾಂಗನು ದೇವಾಸುರ ಯುದ್ಧದಲ್ಲಿ ದೇವತೆಗಳ ಪ್ರಾರ್ಥನೆಯಿಂದ ಅಸುರರನ್ನು ನಾಶಮಾಡಿದನು.

ಸ್ವರ್ಗೇ ಚ ಕೃತಪ್ರಿಯೈರ್ದೇವೈರ್ವರಗ್ರಹಣಾಯ
ಚೋದಿತಃ ಪ್ರಾಹ ॥ ೭೭ ॥

ಯದ್ಯವಶ್ಯಂ ವರೋ ಗ್ರಾಹ್ಯಸ್ತನ್ಮಮಾಯುಃ ಕಥ್ಯತಾಮಿತಿ ॥ ೭೮ ॥

ಅನಂತರಂ ಚ ತೈರುಕ್ತಮೇಕಮುಹೂರ್ತಪ್ರಮಾಣಂ ತವಾ
ಯುರಿತ್ಯುಕ್ತೋಽಥಾಸ್ಖಲಿತಗತಿನಾ ವಿಮಾನೇನ ಲಘಿಮ್ನಾ
ಯುಕ್ತೋ ಮರ್ತ್ಯಲೋಕಮಾಗಮ್ಯೇದಮಾಹ ॥ ೭೯ ॥

ಯಥಾ ನ ಬ್ರಾಹ್ಮಣೇಭ್ಯಸ್ಸಕಾಶಾದಾತ್ಮಾ ಮೇ ಪ್ರಿಯತರಃ
ನ ಚ ಸ್ವಧರ್ಮೋಲ್ಲಂಘನಂ ಮಯಾ ಕದಾಚಿದಪ್ಯನುಷ್ಠಿತಂ
ನ ಚ ಸಕಲದೇವಮಾನುಷಪಶುಪಕ್ಷಿವೃಕ್ಷಾದಿಕೇಷ್ವಚ್ಯುತ
ವ್ಯತಿರೇಕವರ್ತಿನೀದೃಷ್ಟಿರ್ಮಮಾಭೂತ್ । ತಥಾ ತಮೇವ ದೇವಂ
ಮುನಿಜನಾನುಸ್ಮೃತಂ ಭಗವಂತಮಸ್ಖಲಿತಗತಿಃ ಪ್ರಾಪ್ಸ್ಯಮೀ
ತ್ಯಶೇಷದೇವಗುರೌ ಭಗವತ್ಯನಿರ್ದೇಶ್ಯವಪುಷಿ ಸತ್ತಾ

---

೭೭-೭೯. ಸ್ವರ್ಗದಲ್ಲಿ ದೇವತೆಗಳು ರಾಜನನ್ನು ಕುರಿತು, ನಮಗೆ ಹಿತವನ್ನು ಉಂಟುಮಾಡಿದುದರಿಂದ ಬೇಕಾದ ವರವನ್ನು ಕೇಳೆಂದು ಹೇಳಿದರು. ಆಗ ರಾಜನು ನಿಮ್ಮ ವರವನ್ನು ಪಡೆಯಬೇಕಾದರೆ ನನಗೆ ಎಷ್ಟುಕಾಲ ಆಯುಸ್ಸಿರುವುದೆಂಬುದನ್ನು ಹೇಳಿರೆಂದನು. ಆಮೇಲೆ ಅವರು ಒಂದು ಮುಹೂರ್ತ ಮಾತ್ರ ನಿನಗೆ ಆಯುಸ್ಸಿರುವುದೆಂದರು. ಈ ಮಾತನ್ನು ಕೇಳಿ ರಾಜನು ದೇವತೆಗಳು ಕೊಟ್ಟ ತಡೆಯಿಲ್ಲದ ವೇಗವುಳ್ಳ ವಿಮಾನದಲ್ಲಿ ಕುಳಿತು ಭೂಲೋಕಕ್ಕೆ ಬಂದು ಮುಂದೆ ಹೇಳುವ ಮಾತುಗಳನ್ನಾಡಿದನು.

೮೦. ನನಗೆ ಬ್ರಾಹ್ಮಣರಿಗಿಂತಲೂ ನನ್ನ ಆತ್ಮವೂ ಪ್ರಿಯವಾದುದಲ್ಲ. ನಾನು ಯಾವಾಗಲೂ ನನ್ನ ಧರ್ಮವನ್ನು ಮೀರಿ ನಡೆದಿಲ್ಲ. ಸಮಸ್ತ ದೇವತೆಗಳು, ಮನುಷ್ಯರು, ಪಶು, ಪಕ್ಷಿಮೃಗಗಳು, ವೃಕ್ಷಾದಿಗಳು ಇವುಗಳಲ್ಲಿ ನಾಶರಹಿತನಾದ

ಮಾತ್ಮಾತ್ಮನ್ಯಾತ್ಮಾನಂ ಪರಮಾತ್ಮನಿ ವಾಸುದೇವಾಖ್ಯೇ
ಯುಯೋಜ । ತತ್ರೈವ ಚ ಲಯಮವಾಪ ॥ ೮೦ ॥

ಅತ್ರಾಪಿ ಶ್ರೂಯತೇ ಶ್ಲೋಕೋ ಗೀತಸ್ಸಪ್ತರ್ಷಿಭಿಃ ಪುರಾ ।
ಖಟ್ವಾಂಗೇನ ಸಮೋ ನಾನ್ಯಃ ಕಶ್ಚಿದುರ್ವ್ಯಾಂ ಭವಿಷ್ಯತಿ ॥ ೮೧ ॥

ಯೇನ ಸ್ವರ್ಗಾದಿಹಾಗಮ್ಯ ಮುಹೂರ್ತಂ ಪ್ರಾಪ್ಯ ಜೀವಿತಂ ।
ತ್ರಯೋಽನುಸಂಧಿತಾ ಲೋಕಾ ಬುದ್ಧ್ಯಾ ಸತ್ಯೇನ ಚೈವ ಹಿ ॥ ೮೨ ॥

ಖಟ್ವಾಂಗಾದ್ದೀರ್ಘಬಾಹುಃ ಪುತ್ರೋಽಭವತ್ ॥ ೮೩ ॥

ತತೋ ರಘುರಭವತ್ ॥ ೮೪ ॥

ತಸ್ಮಾದಪ್ಯಜಃ ॥ ೮೫ ॥

---

ವಿಷ್ಣುವಿಗಿಂತ ಇವುಬೇರೆ ಎಂಬ ಬುದ್ಧಿಯು ಉಂಟಾಗದಿರಲಿ. ಮುನಿಜನರು ಸ್ಮರಿಸುವ ಮಹಾಮಹಿಮನಾದ [illegible] ದೇವನನ್ನೇ ಯಾವ ತಡೆಯೂ ಇಲ್ಲದೆ ಸೇರುವೆನು. ಎಂದು ಸರ್ವೇಶ್ವರನೂ, ಸತ್ತಾಮಾತ್ರ ಸ್ವರೂಪನೂ ಆದ ವಾಸುದೇವನೆಂಬ ಪರಮಾತ್ಮನಲ್ಲಿ ತನ್ನ ಆತ್ಮವನ್ನು ಸೇರಿಸಿ ಅಲ್ಲಿಯೇ ಲೀನನಾದನು.

೮೧-೮೨. ಈ ವಿಷಯದಲ್ಲಿ ಸಪ್ತರ್ಷಿಗಳು ಒಂದು ಶ್ಲೋಕವನ್ನು ಗಾನ ಮಾಡಿರುವರು. ಆ ಶ್ಲೋಕಾಭಿಪ್ರಾಯವೇನೆಂದರೆ:—ಖಟ್ವಾಂಗರಾಜನ ಸಮಾನರಾದವರು ಯಾರೂ ಭೂಮಿಯಲ್ಲಿ ಹುಟ್ಟುವುದಿಲ್ಲ. ಆ ರಾಜನು ಒಂದು ಮುಹೂರ್ತಕಾಲ ಮಾತ್ರ ಜೀವಿಸಿರುವೆನೆಂದು ತಿಳಿದು ಪರಮಾರ್ಥ ಜ್ಞಾನದಿಂದ ಮೂರು ಲೋಕವನ್ನೂ ವಾಸುದೇವ ಸ್ವರೂಪವಾಗಿ ಅನುಸಂಧಾನ ಮಾಡಿದನು. (ಒಂದು ಮುಹೂರ್ತದೊಳಗಾಗಿ ಮೋಕ್ಷವನ್ನು ಪಡೆದನೆಂದು ಅಭಿಪ್ರಾಯವು.)

೮೩-೮೭. ಖಟ್ವಾಂಗನಿಗೆ ದೀರ್ಘಬಾಹುವೂ, ಅವನಿಗೆ ರಘುವೂ, ರಘುವಿಗೆ ಅಜನೂ, ಅಜನಿಗೆ ದಶರಥನೂ, ಧಶರಥನಿಗೆ ಕಮಲನಾಭನಾದ ವಿಷ್ಣುವು ಲೋಕ

ಅಜಾದ್ದಶರಥಃ ॥ ೮೭ ॥

ತಸ್ಯಾಪಿ ಭಗವಾನಬ್ಜನಾಭೋ ಜಗತಃ ಸ್ಥಿತ್ಯರ್ಥಮಾ
ತ್ಮಾಂಶೇನ ರಾಮಲಕ್ಷ್ಮಣಭರತಶತ್ರುಘ್ನರೂಪೇಣ ಚತುರ್ಧಾ
ಪುತ್ರತ್ವಮಯಾಸೀತ್ ॥ ೮೭ ॥

ರಾಮೋಽಪಿ ಬಾಲ್ಯ ಏವ ವಿಶ್ವಾಮಿತ್ರಯಜ್ಞರಕ್ಷಣಾಯ
ಗಚ್ಛಂಸ್ತಾಟಕಾಂ ಜಘಾನ ॥ ೮೮ ॥

ಯಜ್ಞೇ ಚ ಮಾರೀಚಮಿಷುಪಾತಾಹತಂ ಸಮುದ್ರೇ ಚಿಕ್ಷೇಪ ॥ ೮೯ ॥

ಸುಬಾಹುಪ್ರಮುಖಾಂಶ್ಚ ಕ್ಷಯಮನಯತ್ ॥ ೯೦ ॥

ದರ್ಶನಮಾತ್ರೇಣೈವ ಅಹಲ್ಯಾಮಪಾಪಾಂ ಚಕಾರ ॥ ೯೧ ॥

ಜನಕಗೃಹೇ ಚ ಮಾಹೇಶ್ವರಂ ಚಾಪಮನಾಯಾಸೇನ ಬಭಂಜ ॥ ೯೨ ॥

ಸೀತಾಂ ಚಾಯೋನಿಜಾಂ ಜನಕರಾಜತನಯಾಂ
ವೀರ್ಯಶುಲ್ಕಾಂ ಲೇಭೇ ॥ ೯೩ ॥

---

ರಕ್ಷಣಾರ್ಥವಾಗಿ ತನ್ನಂಶದಿಂದ ರಾಮ, ಲಕ್ಷ್ಮಣ, ಭರತ, ಶತ್ರುಘ್ನರೂಪದಿಂದ ನಾಲ್ಕು ಭಾಗವಾಗಿ ಮಕ್ಕಳಾಗಿ ಜನಿಸಿದನು.

೮೮–೯೩. ರಾಮನು ಬಾಲ್ಯದಲ್ಲಿಯೇ ವಿಶ್ವಾಮಿತ್ರ ಮುನಿಯ ಯಜ್ಞರಕ್ಷಣೆಗಾಗಿ ಹೋಗುತ್ತ ತಾಟಕೆಯನ್ನು ಕೊಂದನು. ಯಜ್ಞದಲ್ಲಿ ಮಾರೀಚನನ್ನು ಬಾಣದಿಂದ ಹೊಡೆದು ಸಮುದ್ರಕ್ಕೆ ಹಾಕಿದನು. ಸುಬಾಹು ಮುಂತಾದವರನ್ನು ನಾಶಮಾಡಿದನು. ತನ್ನನ್ನು (ತಾನು) ದರ್ಶನ ಮಾಡಿದ ಮಾತ್ರದಿಂದಲೇ ಅಹಲ್ಯೆಯನ್ನು ಪಾಪವಿಲ್ಲದವಳನ್ನಾಗಿ ಮಾಡಿದನು. ಜನಕರಾಜನ ಮನೆಯಲ್ಲಿ ಶಿವನ ಧನುಸ್ಸನ್ನು ಆಯಾಸವಿಲ್ಲದೆ ಮುರಿದು ಹಾಕಿದನು. ಅಯೋನಿಜಳೂ, ಜನಕನ ಮಗಳೂ ಆದ ಸೀತೆಯನ್ನು ಪರಾಕ್ರಮವನ್ನು ತೋರಿಸಿ ವಿವಾಹ ಮಾಡಿಕೊಂಡನು.

ಸಕಲಕ್ಷತ್ರಕ್ಷಯಕಾರಣಮಶೇಷಹೈಹಯಕುಲಧೂಮಕೇತುಂ
ಚ ಪರಶುರಾಮಮಪಾಸ್ತವೀರ್ಯಬಲಾವಲೇಪಂ ಚಕಾರ ॥ ೯೪ ॥

ಪಿತೃವಚನಾಚ್ಚಾಗಣಿತರಾಜ್ಯಾಭಿಲಾಷೋ ಭ್ರಾತೃಭಾ
ರ್ಯಾಸಮೇತೋ ವನಂ ಪ್ರವಿವೇಶ ॥ ೯೫ ॥

ವಿರಾಧ ಖರದೂಷಣಾದೀನ್ ಕಬಂಧವಾಲಿನೌ ಜಘಾನ ॥ ೯೬ ॥

ಬಧ್ವಾ ಚಾಂಭೋನಿಧಿಮಶೇಷರಾಕ್ಷಸಕುಲಕ್ಷಯಂ
ಕೃತ್ವಾ ದಶಾನನಾಪಹೃತಾಂ ತದ್ವಧಾಪಹೃತಕಲಂಕಾಮ
ಪ್ಯನಲಪ್ರವೇಶಶುದ್ಧಾಮಶೇಷದೇವೇಶಸಂಸ್ತೂಯ
ಮಾನಶೀಲಾಂ ಜನಕರಾಜತನಯಾಮಯೋಧ್ಯಾಮಾನಿನ್ಯೇ । ॥ ೯೭ ॥

ತತಸ್ತಯೋರಭಿಷೇಕಮಂಗಳಂ ಮೈತ್ರೇಯ ವರ್ಷಶತೇನಾಪಿ
ವಕ್ತುಂ ನ ಶಕ್ಯತೇ । ಸಂಕ್ಷೇಪೇಣ ಶ್ರೂಯತಾಂ ॥ ೯೮ ॥

---

ಸಮಸ್ತ ಕ್ಷತ್ರಿಯರ ನಾಶಕ್ಕೆ ಕಾರಣನಾಗಿ ಹೈಹಯದೇಶದ ರಾಜನಾದ ಕಾರ್ತವೀರ್ಯನ ವಂಶನಾಶಕನೂ ಆದ ಪರಶುರಾಮನನ್ನು ಬಲವೀರ್ಯಗಳ ಗರ್ವವಿಲ್ಲದವನನ್ನಾಗಿ ಮಾಡಿದನು.

೯೫–೯೮. ತಂದೆಯ ಮಾತಿನಿಂದ ರಾಜ್ಯಾಭಿಲಾಷೆಯನ್ನು ಲೆಕ್ಕಿಸದೆ ಹೆಂಡತಿ ಮತ್ತು ತಮ್ಮನೊಡನೆ ವನಪ್ರವೇಶಮಾಡಿದನು. ಕಾಡಿನಲ್ಲಿ ವಿರಾಧ, ಖರದೂಷಣಾದಿಗಳನ್ನೂ, ಕಬಂಧ ವಾಲಿಗಳನ್ನೂ ಕೊಂದನು. ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ ಸಮಸ್ತ ರಾಕ್ಷಸ ವಂಶವನ್ನು ನಾಶಮಾಡಿ ರಾವಣನು ಅಪಹರಿಸಿದುದರಿಂದ ಅವನನ್ನು ಕೊಂದು, ದೋಷವಿಲ್ಲದವಳಾದರೂ ಅಗ್ನಿಪ್ರವೇಶದಿಂದ ಶುದ್ಧಳೂ, ಸಮಸ್ತ ದೇವತೆಗಳೂ ಹೊಗಳುತ್ತಿರುವ ನಡತೆಯುಳ್ಳವಳೂ ಆದ ಜನಕರಾಜಪುತ್ರಿಯನ್ನು ಅಯೋಧ್ಯೆಗೆ ಕರೆದುಕೊಂಡು ಬಂದನು. ಮೈತ್ರೇಯನೇ! ಆ ಸೀತಾರಾಮರ ಪಟ್ಟಾಭಿಷೇಕೋತ್ಸವವನ್ನು ನೂರು ವರ್ಷ ವರ್ಣಿಸಿದರೂ ಮುಗಿಯದು, ಸಂಗ್ರಹವಾಗಿ ಹೇಳುವೆನು ಕೇಳು.

ಲಕ್ಷ್ಮಣ ಭರತಶತ್ರುಘ್ನ ಸುಗ್ರೀವಾಂಗದಜಾಂಬವದ್ಧನುಮತ್ಪ್ರಭೃತಿ
ಭಿಸ್ಸಮುತ್ಫುಲ್ಲವದನೈಃಛತ್ರ ಚಾಮರಾದಿಯುತೈಸ್ಸೇವ್ಯಮಾನೋ
ಬ್ರಹ್ಮೇಂದ್ರಾಗ್ನಿಯಮನಿಋತಿವರುಣವಾಯುಕುಬೇರೇಶಾನ
ಪ್ರಭೃತಿಭಿಸ್ಸರ್ವಾಮರ್ರೈರ್ವಸಿಷ್ಠವಾಮದೇವವಾಲ್ಮೀಕಿ ಮಾರ್ಕಂಡೇಯ
ವಿಶ್ವಾಮಿತ್ರಭರದ್ವಾಜಾಗಸ್ತ್ಯಪ್ರಭೃತಿಭಿರ್ಮುನಿವರ್ಯೈಃ
ಋಗ್ಯಜುಸ್ಸಾಮಾದ್ಯೈಃ ಸಂಸ್ತೂಯಮಾನೋ ನೃತ್ತಗೀತ
ವಾದ್ಯಾದ್ಯಖಿಲಮಂಗಳವಾಕ್ಯೈರ್ವೀಣಾವೇಣುಮೃದಂಗಭೇರಿ
ಪಟಹಶಂಖಕಾಹಳಗೋಮುಖಪ್ರಭೃತಿಭಿಸ್ಸುನಾದೈಸ್ಸಮಸ್ತ
ಭೂಭೃತಾಂ ಮಧ್ಯೇ ಸಕಲಲೋಕರಕ್ಷಣಾರ್ಥಂ ಯಥೋಚಿ
ತಮಭಿಷಿಕ್ತೋ ದಾಶರಥಿಃ ಕೋಸಲೇಂದ್ರೋ ರಘುಕುಲತಿಲಕೋ

---

೯೮. ದಶರಥ ಪುತ್ರನೂ, ರಘುಕುಲದಲ್ಲಿ ಶ್ರೇಷ್ಠನೂ, ಜಾನಕೀದೇವಿಗೆ ಪ್ರೀತಿಪಾತ್ರನೂ, ತನ್ನ ಮೂರು ಜನ ಸಹೋದರರಿಗೂ ಪ್ರೀತಿಪಾತ್ರನೂ ಆದ ರಾಮನನ್ನು ಸಕಲ ರಾಜರ ನಡುವೆ ಸಿಂಹಾಸನದಲ್ಲಿ ಕುಳ್ಳಿರಿಸಿ ವಸಿಷ್ಠ, ವಾಮದೇವ, ವಾಲ್ಮೀಕಿ, ಮಾರ್ಕಂಡೇಯ, ವಿಶ್ವಾಮಿತ್ರ, ಭರದ್ವಾಜ, ಅಗಸ್ತ್ಯನೇ ಮುಂತಾದ ಮಹರ್ಷಿಗಳು ಪಟ್ಟಾಭಿಷೇಕ ಮಾಡುತ್ತಿರಲು ವೀಣೆ, ಕೊಳಲು, ಮೃದಂಗ, ನಗಾರಿ, ತಮಟೆ, ಶಂಖ, ಕಹಳೆ, ಗೋಮುಖ ಮುಂತಾದ ವಾದ್ಯಗಳು ಧ್ವನಿಮಾಡುತ್ತಿದ್ದುವು. ಋಷಿಗಳು ಋಗ್ಯಜುಸ್ಸಾಮಾದಿ ಮಂತ್ರಗಳಿಂದ ಸ್ತೋತ್ರ ಮಾಡುತ್ತಿದ್ದರು. ನೃತ್ಯ, ಗೀತಾದಿಗಳು ನಡೆಯುತ್ತಿದ್ದುವು. ಲಕ್ಷ್ಮಣ, ಭರತ, ಶತ್ರುಘ್ನ, ವಿಭೀಷಣ, ಸುಗ್ರೀವ, ಅಂಗದ, ಜಾಂಬವಂತ, ಹನುಮಂತ ಮುಂತಾದವರು ಸಂತೋಷದಿಂದ ಛತ್ರ ಚಾಮರಾದಿಗಳನ್ನು ಹಿಡಿದು ಸೇವಿಸುತ್ತಿದ್ದರು. ಬ್ರಹ್ಮ, ಇಂದ್ರ, ಅಗ್ನಿ, ಯಮ, ನಿಋತಿ, ವರುಣ, ವಾಯು, ಕುಬೇರ ಈಶಾನ ಮುಂತಾದ ದೇವತೆಗಳು ಸ್ತೋತ್ರಮಾಡುತ್ತಿದ್ದರು. ಹೀಗೆ ಸಕಲ ಲೋಕ ರಕ್ಷಣಾ

ಜಾನಕೀಪ್ರಿಯೋ ಭ್ರಾತೃತ್ರಯಪ್ರಿಯಃ ಸಿಂಹಾಸನಗ
ತಸ್ತ್ವೇಕಾದಶಾಬ್ದ ಸಹಸ್ರಾಣಿ ರಾಜ್ಯಮಕರೋತ್ ॥ ೯೯ ॥

ಭರತೋಽಪಿ ಗಂಧರ್ವವಿಷಯಸಾಧನಾಯ ಗಚ್ಛನ್ ಸಂಗ್ರಾಮೇ
ಗಂಧರ್ವಕೋಟೀಸ್ತಿಸ್ರೋ ಜಘಾನ ॥ ೧೦೧ ॥

ಶತ್ರುಘ್ನೇನಾಪ್ಯತಿಬಲಪರಾಕ್ರಮೋ ಮಧುಪುತ್ರೋ ಲವಣೋ
ನಾಮ ರಾಕ್ಷಸೇಶ್ವರೋ ನಿಹತಃ ಮಥುರಾ [redacted] ನಿವೇಶಿತಾ ॥ ೧೦೧ ॥

ಇತ್ಯೇವಮಾದ್ಯತಿಬಲಪರಾಕ್ರಮವಿಕ್ರಮಣೈರತಿದುಷ್ಟನಿಬರ್ಹ
ಣಾದಶೇಷಸ್ಯಾಸ್ಯ ಜಗತೋ ನಿಷ್ಪಾದಿತಸ್ಥಿತಯೋ ರಾಮಲಕ್ಷ್ಮಣ
ಭರತಶತ್ರುಘ್ನಾಃ ಪುನರಪಿ ದಿವಮಾರೂಢಾಃ ॥ ೧೦೨ ॥

ಯೇಽಪಿ ತೇಷು ಭಗವದಂಶೇಷ್ವನುರಾಗಿಣಃ ಕೋಸಲನಗರ
ಜಾನಪದಾಸ್ತೇಽಪಿ ತನ್ಮನಸಸ್ತತ್ಸಾಲೋಕ್ಯಮವಾಪುಃ ॥ ೧೦೩ ॥

---

ರ್ವವಾಗಿ ಪಟ್ಟಾಭಿಷೇಕವನ್ನು ಮಾಡಿಸಿಕೊಂಡ ಶ್ರೀ ರಾಮನು ಹನ್ನೊಂದು ಸಾವಿರ ವರ್ಷಗಳವರೆಗೆ ರಾಜ್ಯಭಾರ ಮಾಡುತ್ತಿದ್ದನು.

೧೦೦-೧೦೩. ಭರತನು ಗಂಧರ್ವರ ರಾಜ್ಯವನ್ನು ಸ್ವಾಧೀನ ಮಾಡಿಕೊಳ್ಳಬೇಕೆಂದು ಹೋಗಿ ಯುದ್ಧ ಮಾಡಿ ಮೂರು ಕೋಟಿ ಗಂಧರ್ವರನ್ನು ನಾಶಮಾಡಿದನು. ಶತ್ರುಘ್ನನು ಮಹಾಬಲ ಪರಾಕ್ರಮವುಳ್ಳ ಮಧುವೆಂಬ ರಾಕ್ಷಸನ ಮಗನಾದ ಲವಣಾಸುರನನ್ನು ಕೊಂದನು. ಮತ್ತು ಮಥುರಾ ಪಟ್ಟಣವನ್ನು ಕಟ್ಟಿದನು. ಹೀಗೆಯೇ ರಾಮ ಲಕ್ಷ್ಮಣ ಭರತ ಶತ್ರುಘ್ನರು ತಮ್ಮ ವಿಶೇಷವಾದ ಬಲಪರಾಕ್ರಮಗಳಿಂದ ದುಷ್ಟರನ್ನು ನಿಗ್ರಹಿಸಿ ಸಮಸ್ತ ಜಗತ್ತನ್ನೂ ಕಾಪಾಡಿ ಪುನಃ ಸ್ವರ್ಗಕ್ಕೆ ಹೋದರು. ಆ ಭಗವಂತನ ವಂಶಸಂಭೂತರಲ್ಲಿ ಪ್ರೀತಿಯುಳ್ಳ ಕೋಸಲ ರಾಜ್ಯದ ಜನರೂ ಅವರಲ್ಲಿಯೇ ಮನಸ್ಸುಳ್ಳವರಾಗಿ ಅವರೊಡನೆ ಸಾಲೋಕ್ಯ ಮುಕ್ತಿಯನ್ನು ಪಡೆದರು.

ಅತಿದುಷ್ಟಸಂಹಾರಿಣಃ ರಾಮಸ್ಯ ಹಿ ಕುಶಲವೌ ದ್ವೌ ಪುತ್ರೌ
ಲಕ್ಷ್ಮಣಸ್ಯಾಂಗದಚಂದ್ರಕೇತೂ ತಕ್ಷಕಪುಷ್ಕಲೌ
ಭರತಸ್ಯ ಸುಬಾಹುಶೂರಸೇನೌ ಶತ್ರುಘ್ನಸ್ಯ ॥ ೧೦೪ ॥

ಕುಶಸ್ಯಾತಿಥಿಃ । ಅತಿಥೇರಪಿ ನಿಷಧಃ ಪುತ್ರೋಽಭವತ್ ॥ ೧೦೫ ॥

ನಿಷಧಸ್ಯಾಪ್ಯನಲಸ್ತಸ್ಯಾಪಿ ನಭಃ । ನಭಸಃ ಪುಂಡರೀಕಃ ।
ತತ್ತನಯಃ ಕ್ಷೇಮಧನ್ವಾ । ತಸ್ಯ ಚ ದೇವಾನೀ
ಕಸ್ತಸ್ಯಾಪ್ಯಹೀನಗುಃ । ಅಹೀನಗೋರಪಿ ಗುರುಃ ತಸ್ಯ ಚ
ಪಾರಿಯಾತ್ರಃ। ಪಾರಿಯಾತ್ರಾದ್ಬಲಃ ಬಲಾಚ್ಛಲಃ ತಸ್ಯಾಪ್ಯುತ್ಕಃ
ಉತ್ಕಾದ್ವಜ್ರನಾಭಃ । ತಸ್ಮಾಚ್ಛಂಖಣಃ ।
ತಸ್ಮಾದ್ಯ್ಯುಷಿತಾಶ್ವಸ್ತತಶ್ಚ ವಿಶ್ವಸಹೋ ಜಜ್ಞೇ ॥ ೧೦೬ ॥

ತಸ್ಮಾದ್ಧಿರಣ್ಯನಾಭಃ । ಮಹಾಯೋಗೀಶ್ವರಾಜ್ಜೈಮಿ
ನೇಃ ಶಿಷ್ಯಾದ್ಯಾಜ್ಞವಲ್ಕ್ಯಾದ್ಯೋಗಮವಾಪ ॥ ೧೦೭ ॥

---

೧೦೪–೧೦೬. ದುಷ್ಟ ಸಂಹಾರಕನಾದ ರಾಮನಿಗೆ ಕುಶ, ಲವರೆಂಬ ಇಬ್ಬರು ಮಕ್ಕಳು. ಲಕ್ಷ್ಮಣನಿಗೆ ಅಂಗದ, ಚಂದ್ರಕೇತುಗಳು, ಭರತನಿಗೆ ತಕ್ಷಕ, ಪುಷ್ಕಲರು, ಶತ್ರುಘ್ನನಿಗೆ ಸುಬಾಹು, ಶೂರಸೇನರು ಎಂಬ ಮಕ್ಕಳಿದ್ದರು. ಕುಶನಿಗೆ ಅತಿಥಿಯೂ, ಅತಿಥಿಗೆ ನಿಷಧನೂ, ನಿಷಧನಿಗೆ ಅನಲನೂ, ಅನಲನಿಗೆ ನಭಸನೂ, ನಭಸ್ಸಿಗೆ ಪುಂಡರೀಕನೂ, ಅವನಿಗೆ ಕ್ಷೇಮಧನ್ವನೂ, ಅವನಿಗೆ ದೇವಾನೀಕನೂ, ದೇವಾನೀಕನಿಗೆ ಅಹೀನಗುವೂ, ಅಹೀನಗುವಿಗೆ ಗುರುವೂ, ಗುರುವಿಗೆ ಪಾರಿಯಾತ್ರನೂ, ಪಾರಿಯಾತ್ರನಿಗೆ ಬಲನೂ, ಬಲನಿಗೆ ಛಲನೂ, ಛಲನಿಗೆ ಉತ್ಕನೂ, ಉತ್ಕನಿಗೆ ವಜ್ರನಾಭನೂ, ವಜ್ರನಾಭನಿಗೆ ಶಂಖಣನೂ, ಶಂಖಣನಿಗೆ ದ್ಯ್ಯುಷಿತಾಶ್ವನೂ, ಅವನಿಗೆ ವಿಶ್ವಸಹನೂ ಮಕ್ಕಳಾಗಿ ಹುಟ್ಟಿದರು.

೧೦೭–೧೧೦. ವಿಶ್ವಸಹನ ಮಗನಾದ ಹಿರಣ್ಯನಾಭನು ಜೈಮಿನಿ ಮಹರ್ಷಿಯ ಶಿಷ್ಯನೂ ಮಹಾ ಯೋಗೀಶ್ವರನೂ ಆದ ಯಾಜ್ಞವಲ್ಕ್ಯನಿಂದ ಯೋಗವನ್ನು

ಹಿರಣ್ಯನಾಭಸ್ಯ ಪುತ್ರಃ ಪುಷ್ಯಃ ತಸ್ಮಾದ್ಧ್ರುವಸಂಧಿಃ
ತತಸ್ಸುದರ್ಶನಸ್ತಸ್ಮಾದಗ್ನಿವರ್ಣಃ ತತಶ್ಶೀಘ್ರಗಸ್ತಸ್ಮಾಪಿ
ಮರುಃ ಪುತ್ರೋಽಭವತ್ ॥ ೧೦೮ ॥

ಯೋಽಸೌ ಯೋಗಮಾಸ್ಥಾಯಾದ್ಯಾಪಿ ಕಲಾಪಗ್ರಾ
ಮಮಾಶ್ರಿತ್ಯ ತಿಷ್ಠತಿ ॥ ೧೦೯ ॥

ಆಗಾಮಿಯುಗೇ ಸೂರ್ಯವಂಶಕ್ಷತ್ರಪ್ರವರ್ತಯಿತಾ
ಭವಿಷ್ಯತಿ ॥ ೧೧೦ ॥

ತಸ್ಯಾತ್ಮಜಃ ಪ್ರಶುಶ್ರುಕಃ ತಸ್ಮಾತ್ಸುಸಂಧಿಸ್ತತಶ್ಚಾಪ್ಯಮರ್ಷಃ
ತಸ್ಯ ಚ ಸಹಸ್ವಾನ್ ತತಶ್ಚ ವಿಶ್ವಭವಃ ॥ ೧೧೧ ॥

ತಸ್ಮಾಚ್ಚ ಬೃಹದ್ಬಲಃ ಯೋಽರ್ಜುನತನಯೇನಾಭಿ
ಮನ್ಯುನಾ ಭಾರತೇ ಯುದ್ಧೇ ಕ್ಷಯಮನೀಯತ ॥ ೧೧೨ ॥

---

ಅಭ್ಯಾಸಮಾಡಿ ಸಿದ್ಧಿಯನ್ನು ಪಡೆದನು. ಹಿರಣ್ಯನಾಭನಿಗೆ ಪುಷ್ಯನೂ, ಪುಷ್ಯನಿಗೆ ಧ್ರುವಸಂಧಿಯೂ, ಅವನಿಗೆ ಸುದರ್ಶನನೂ, ಸುದರ್ಶನನಿಗೆ ಅಗ್ನಿವರ್ಣನೂ, ಅಗ್ನಿವರ್ಣನಿಗೆ ಶೀಘ್ರಗನೂ, ಅವನಿಗೆ ಮಗುವೂ ಮಕ್ಕಳಾದರು. ಮರುವು ಯೋಗಿಯಾಗಿ ಈಗಲೂ ಕಲಾಪವೆಂಬ ಗ್ರಾಮದಲ್ಲಿರುವನು. ಮುಂದಿನ ಕೃತಯುಗದಲ್ಲಿ ಸೂರ್ಯವಂಶದ ಕ್ಷತ್ರಿಯರಿಗೆ ಮೂಲ ಪುರುಷನಾಗುವನು.

೧೧೧–೧೧೨. ಮರುವಿನ ಮಗನೇ ಪ್ರಶುಶ್ರುಕನು. ಇವನಿಗೆ ಸುಸಂಧಿಯೂ ಸುಸಂಧಿಗೆ ಅಮರ್ಷನೂ, ಅಮರ್ಷನಿಗೆ ಸಹಸ್ವಂತನೂ, ಸಹಸ್ವಂತನಿಗೆ ವಿಶ್ವಭವನೂ, ವಿಶ್ವಭವನಿಗೆ ಬೃಹದ್ಬಲನೂ ಮಕ್ಕಳು. ಈ ಬೃಹದ್ಬಲನನ್ನು ಭಾರತ ಯುದ್ಧದಲ್ಲಿ ಅರ್ಜುನನ ಮಗನಾದ ಅಭಿಮನ್ಯುವು ಕೊಂದನು.

ಏತೇ ಹೀಕ್ಷ್ವಾಕುಭೂಪಾಲಾಃ ಪ್ರಾಧಾನ್ಯೇನ ಮಯೇರಿತಾಃ ।
ಏತೇಷಾಂ ಚರಿತಂ ಶೃಣ್ವನ್ ಸರ್ವಪಾಪೈಃ ಪ್ರಮುಚ್ಯತೇ ॥ ೧೧೩ ॥

ಪಠತ್ಯೇಷಾಂ ತು ಚರಿತಂ ಯೋ ವೈ ಶ್ರದ್ಧಾಸಮನ್ವಿತಃ ।
ಸರ್ವಾನ್ಕಾಮಾನವಾಪ್ನೋತಿಹ ಹ್ಯಂತೇ ಸ್ವರ್ಗೇ ಮಹೀಯತೇ ॥ ೧೧೪ ॥

ಇತಿ ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ ಚತುರ್ಥೋಽಧ್ಯಾಯಃ

---

೧೧೩-೧೧೪. ಮೈತ್ರೇಯನೇ! ಇವರೆಲ್ಲರೂ ಇಕ್ಷ್ವಾಕು ವಂಶದ ರಾಜರು. ಮುಖ್ಯರಾದವರನ್ನೇ ನಾನು ಹೇಳಿರುವೆನು. ಇವರ ಚರಿತ್ರೆಯನ್ನು ಕೇಳುತ್ತಿದ್ದರೆ ಸಮಸ್ತ ಪಾಪಗಳೂ ಬಿಡುಗಡೆಯಾಗುವುವು. ಯಾರು ಇವರ ಚರಿತ್ರೆಯನ್ನು ಅತ್ಯಂತಾಸಕ್ತಿಯಿಂದ ಓದುವರೋ ಅವರು ಇಹಲೋಕದಲ್ಲಿ ಸಮಸ್ತ ಇಷ್ಟಾರ್ಥಗಳನ್ನೂ ಹೊಂದಿ ಸ್ವರ್ಗದಲ್ಲಿಯೂ ಮಹಾಮಹಿಮರಾಗಿ ಸುಖವನ್ನನುಭವಿಸುವರು.

ಎಂಬಲ್ಲಿಗೆ ಶ್ರೀ ವಿಷ್ಣು ಪುರಾಣದ ಚತುರ್ಥಾಂಶದಲ್ಲಿ

ನಾಲ್ಕನೆಯ ಅಧ್ಯಾಯವು ಮುಗಿದುದು.

---

ಶ್ರೀಃ

# ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ

## ಪಂಚಮೋಽಧ್ಯಾಯಃ

॥ ಶ್ರೀ ಪರಾಶರಃ ॥

ಇಕ್ಷ್ವಾಕುತನಯೋಽಸೌ ನಿಮಿನಾಮಾ ಸ ತು ಸಹಸ್ರಂ
ಸಂವತ್ಸರಂ ಸತ್ರಮಾರೇಭೇ ॥ ೧ ॥

ವಸಿಷ್ಠಂ ಚ ಹೋತಾರಂ ವರಯಾಮಾಸ ॥ ೨ ॥

ತಮಾಹ ವಸಿಷ್ಠಃ ಅಹಮಿಂದ್ರೇಣ ಪಂಚವರ್ಷ
ಶತಂ ಯಾಗಾರ್ಥಂ ಪ್ರಥಮಂ ವೃತಃ ॥ ೩ ॥

---

### ಐದನೆಯ ಅಧ್ಯಾಯವು

೧-೪. ಇಕ್ಷ್ವಾಕು ರಾಜನ ಮಗನಾದ ನಿಮಿಯೆಂಬ ರಾಜನು ಸಾವಿರ ವರ್ಷ ಮಾಡಬೇಕಾದ ಒಂದು ಯಜ್ಞವನ್ನು ಪ್ರಾರಂಭಿಸಿದನು. ಆ ಯಜ್ಞದಲ್ಲಿ ವಸಿಷ್ಠ ಮುನಿಯು ಹೋತೃವಾಗಿರಬೇಕೆಂದು ಕೇಳಿಕೊಂಡನು. ವಸಿಷ್ಠನು ಆ ರಾಜನನ್ನು ಕುರಿತು "ನನ್ನನ್ನು ದೇವೇಂದ್ರನು ಐದು ನೂರು ವರ್ಷಗಳವರೆಗೆ ಮಾಡಬೇಕಾದ ಯಜ್ಞಕ್ಕಾಗಿ ನಿನಗಿಂತ ಮುಂಚೆಯೇ ವರಣ ಮಾಡಿರುವನು. ಅಲ್ಲಿಯವರೆಗೂ ನನ್ನನ್ನು ನಿರೀಕ್ಷಿಸಿಕೊಂಡಿರು. ಇಂದ್ರನ ಯಜ್ಞವಾದ ಮೇಲೆ ಬಂದು ನಿನ್ನ ಯಜ್ಞ ವನ್ನು ನಡೆಸಿಕೊಡುವೆನು" ಎಂದು ಹೇಳಿದನು. ನಿಮಿಯು ಧರ್ಮಕಾರ್ಯವು

ತದನಂತರಂ ಚ ಪ್ರತಿಪಾಲ್ಯತಾಮಾಗತಸ್ತವಾಪಿ
ಋತ್ವಿಗ್ಭವಿಷ್ಯಾಮೀತ್ಯುಕ್ತೇ ಸ ಪೃಥಿವೀಪತಿರ್ನ ಕಿಂಚಿದುಕ್ತವಾನ್ ॥ ೪ ॥

ವಸಿಷ್ಠೋಽಪ್ಯನೇನ ಸಮನ್ವಿಚ್ಛಿತಮಿತ್ಯಮರಪತೇರ್ಯಾ
ಗಮಕರೋತ್ ॥ ೫ ॥

ಸೋಽಪಿ ತತ್ಕಾಲ ಏವ ಅನ್ಯೈರ್ಗೌತಮಾದಿಭಿರ್ಯಾಗ
ಮಕಾರಯತ್ ॥ ೬ ॥

ಸಮಾಪ್ತೇ ಚಾಮರಪತೇರ್ಯಾಗೇ ತ್ವರಮಾಣೋ ವಸಿಷ್ಠೋ
ನಿಮಿಯಜ್ಞಂ ಕರಿಷ್ಯಾಮೀತ್ಯಾಜಗಾಮ ॥ ೭ ॥

ತತ್ಕರ್ಮಕರ್ತೃತ್ವಂ ಚ ತತ್ರ ಗೌತಮಸ್ಯ ದೃಷ್ಟ್ವಾಥ ಸ್ವಪತೇ
ಸ ತಸ್ಮೈ ರಾಜ್ಞೇ ಮಾಮಪ್ರತ್ಯಾಖ್ಯಾಯ್ಯೈತದನೇ
ಗೌತಮಾಯ ಕರ್ಮಾಂತರಂ ಸಮರ್ಪಿತಂ ಯಸ್ಮಾ
ತ್ತಸ್ಮಾದಯಂ ವಿದೇಹೋಽಭವಿಷ್ಯತೀತಿ ಶಾಪಂ ದದೌ ॥ ೮ ॥

---

ಸಾವಕಾಶವಾಗುವುದನ್ನು ಸಹಿಸದೆ ವಸಿಷ್ಠರ ಭಯದಿಂದ ಯಾವ ಉತ್ತರವನ್ನೂ ಹೇಳದೆ ಸುಮ್ಮನಿದ್ದನು.

೫-೧೦. ವಸಿಷ್ಠನು ರಾಜನು ತಾನು ಹೇಳಿದ ಮಾತಿಗೆ ಒಪ್ಪಿದನೆಂದು ತಿಳಿದು ದೇವೇಂದ್ರನು ಮಾಡುವ ಯಾಗಕ್ಕೆ ಹೊರಟುಹೋದನು. ನಿಮಿಯು ಅದೇ ಸಮಯದಲ್ಲಿಯೇ ಗೌತಮಾದಿ ಋಷಿಗಳಿಂದ ಯಾಗವನ್ನು ಮಾಡಿಸಿದನು. ದೇವೇಂದ್ರನಯಾಗವು ಮುಗಿದ ಮೇಲೆ ವಸಿಷ್ಠನು ಆತುರದಿಂದ ನಿಮಿಗೆ ಯಜ್ಞವನ್ನು ಮಾಡಿಸಬೇಕೆಂದು ಬಂದನು. ಗೌತಮನು ಅಲ್ಲಿ ಯಾಗ ಮಾಡಿಸುತ್ತಿದ್ದುದನ್ನು ನೋಡಿ, ರಾಜನು ನನಗೇ ಮೊದಲು ಯಾಗವನ್ನು ಮಾಡಿಸಬೇಕೆಂದು ಹೇಳದೆ ಸುಮ್ಮನಿದ್ದು ಗೌತಮನಿಂದ ಯಜ್ಞವನ್ನು ಮಾಡಿಸಿಕೊಂಡನೆಂದು ಕೋಪಿಸಿ ನಿದ್ರೆ

ಪ್ರಬುದ್ಧಶ್ಚಾಸಾವವನಿಪತಿರಪಿ ಪ್ರಾಹ ॥ ೯ ॥
ಯಸ್ಮಾನ್ಮಾಮಸಂಭಾಷ್ಯಾಜಾನತ ಏವ ಶಯಾನಸ್ಯ

ಶಾಪೋತ್ಸರ್ಗಮಸೌ ದುಷ್ಟಗುರುಶ್ಚಕಾರ । ತಸ್ಮಾತ್ತಸ್ಯಾಪಿ ದೇಹಃ
ಪತಿಷ್ಯತೀತಿ ಪ್ರತಿಶಾಪಂ ದತ್ವಾ ದೇಹಮತ್ಯಜತ್ ॥ ೧೦ ॥

ತಚ್ಛಾಪಾಚ್ಚ ಮಿತ್ರಾವರುಣಯೋಸ್ತೇಜಸಿ ವಸಿಷ್ಠಚೇತಃ ಪ್ರವಿಷ್ಟಂ ॥೧೧॥

ಊರ್ವಶೀದರ್ಶನಾದುದ್ಭೂತಬೀಜಪ್ರಪಾತಯೋಸ್ಸಯೋಸ್ತ್ರಕಾಶಾದ್ವ
ಸಿಷ್ಠೋ ದೇಹಮಪರಂ ಲೇಭೇ ॥ ೧೨ ॥

ನಿಮೇರಪಿ ತಚ್ಛರೀರಮತಿಮನೋಹರತೈಲ ಗಂಧಾದಿಭಿರುಪಸಂಸ್ಕ್ರಿ
ಯಮಾಣಂ ನೈವಕ್ಲೇದಾದಿಕಂ ದೋಷಮವಾಪ । ಸದ್ಯೋ
ಮೃತಮಿವ ತಸ್ಥೌ ॥ ೧೩ ॥

---

ಮಾಡುತ್ತಿದ್ದ ರಾಜನಿಗೆ ಅವನು ಮಾಡಿದ ತಪ್ಪಿಗಾಗಿ ವಿದೇಹನಾಗೆಂದು ಶಾಪವನ್ನು ಕೊಟ್ಟನು. ನಿದ್ರೆಯಿಂದ ಎಚ್ಚರಗೊಂಡ ರಾಜನೂ ಕೂಡ ನನ್ನೊಡನೆ ಮಾತನಾಡದೆ ನನಗೆ ತಿಳಿಯದಂತೆ ಮಲಗಿದ್ದ ನನಗೆ ಈ ದುಷ್ಟ ಗುರುವು ಶಾಪವನ್ನು ಕೊಟ್ಟುದರಿಂದ ಅವನ ದೇಹವೂ ಬೀಳಲಿ" .ಎಂದು ಪ್ರತಿಶಾಪವನ್ನು ಕೊಟ್ಟು ತನ್ನ ದೇಹವನ್ನು ಬಿಟ್ಟನು.

೧೧–೧೨. ರಾಜನ ಶಾಪದಿಂದ ವಸಿಷ್ಠನ ಮನಸ್ಸು ಮಿತ್ರಾವರುಣರ ತೇಜಸ್ಸಿನಲ್ಲಿ ಪ್ರವೇಶಿಸಿತು. ಊರ್ವಶಿಯನ್ನು ನೋಡಿದುದರಿಂದುಂಟಾದ ಮಿತ್ರಾವರುಣರ ವೀರ್ಯಪತನದಿಂದ ವಸಿಷ್ಠನು ಮತ್ತೊಂದು ದೇಹವನ್ನು ಪಡೆದನು.

೧೩–೧೪. ಮರಣ ಹೊಂದಿದ ನಿಮಿಯ ಶರೀರವನ್ನು ಸುಗಂಧವಾದ ಎಣ್ಣೆ ಮುಂತಾದುವುಗಳಿಂದ ಕಾಪಾಡಿ ಇಟ್ಟುದರಿಂದ ಆ ಶರೀರವು ಯಾವ ದೋಷಕ್ಕೂ ಗುರಿಯಾಗದೆ ಆಗತಾನೆ ಪ್ರಾಣಹೋದ ಶರೀರದಂತೆ ಇತ್ತು. ಯಜ್ಞವು ಮುಗಿದ

ಯಜ್ಞಸಮಾಪ್ತೌ ಚ ಭಾಗಗ್ರಹಣಾಯ ದೇವಾನಾಗತಾನೃತ್ವಿಜ
ಊಚುಃ ಯಜಮಾನಾಯ ವರೋ ದೀಯತಾಮಿತಿ ॥ ೧೪ ॥

ದೇವೈಶ್ಛಂದಿತೋಽಸೌ ನಿಮಿರಾಹ ॥ ೧೫ ॥

ಭಗವಂತೋಽಖಿಲಸಂಸಾರದುಃಖಹಂತಾರಃ ॥ ೧೬ ॥

ನ ಹ್ಯೇತಾದೃಗನ್ಯ ದುಃಖಮಸ್ತಿ ಯಚ್ಛರೀರಾತ್ಮನೋರ್ವಿ
ಯೋಗೇ ಭವತಿ ॥ ೧೭ ॥

ತದಹಮಿಚ್ಛಾಮಿ ಸಕಲಲೋಕಲೋಚನೇಷು ವಸ್ತುಂ ನ ಪುನಃ
ಶರೀರಗ್ರಹಣಂ ಕರ್ತುಮಿತ್ಯೇವಮುಕ್ತೈರ್ದೇವೈ
ರಸಾವಶೇಷಭೂತಾನಾಂ ನೇತ್ರೇಷ್ವವತಾರಿತಃ ॥ ೧೮ ॥

ತತೋ ಭೂತಾನ್ಯುನ್ಮೇಷನಿಮೇಷಂ ಚಕ್ರುಃ ॥ ೧೯ ॥

---

ಮೇಲೆ ಹವಿರ್ಭಾಗವನ್ನು ತೆಗೆದುಕೊಳ್ಳುವುದಕ್ಕಾಗಿ ಬಂದಿದ್ದ ದೇವತೆಗಳನ್ನು ಕುರಿತು ಋತ್ವಿಕ್ಕುಗಳು "ಯಜಮಾನನಿಗೆ ವರವನ್ನು ಕೊಡಬೇಕು." ಎಂದು ಕೇಳಿಕೊಂಡರು.

೧೫–೧೯. ದೇವತೆಗಳು ಪುತ್ರನನ್ನು ವರವಾಗಿ ಪಡೆ ಎಂದುದಕ್ಕೆ ನಿಮಿಯು ದೇವತೆಗಳನ್ನು ಕುರಿತು "ಮಹಾಮಹಿಮರಾದ ದೇವತೆಗಳೇ ನೀವು ಸಮಸ್ತ ಸಂಸಾರ ದುಃಖಗಳನ್ನೂ ನಾಶಮಾಡತಕ್ಕವರು. ಆತ್ಮನು ಶರೀರವನ್ನು ಬಿಡುವ ದುಃಖಕ್ಕಿಂತ ಪ್ರಬಲವಾದ ಮತ್ತೊಂದು ದುಃಖವಿಲ್ಲ. ಆದುದರಿಂದ ನಾನು ಸಮಸ್ತ ಜನರ ಕಣ್ಣುಗಳಲ್ಲಿ ವಾಸಮಾಡಲು ಇಚ್ಛಿಸುತ್ತೇನೆ. ಪುನಃ ಶರೀರವನ್ನು ಧರಿಸುವ ಇಷ್ಟವು ನನಗೆ ಇಲ್ಲ" ಎಂದು ಹೇಳಿದ ಮೇಲೆ ದೇವತೆಗಳು ಅವನನ್ನು ಸಮಸ್ತ ಜನರ ಕಣ್ಣುಗಳಲ್ಲಿ ನೆಲೆಗೊಳಿಸಿದರು. ಈ ಕಾರಣದಿಂದಲೇ ಜನರು ಕಣ್ಣುರೆಪ್ಪೆಗಳನ್ನು ಮುಚ್ಚುವ ತೆರೆವ ಕಾರ್ಯವನ್ನು ಮಾಡುತ್ತಿರುವರು.

ಅಪುತ್ರಸ್ಯ ತಸ್ಯ ಭೂಭುಜಶ್ಶರೀರಮರಾಜಕಭೀರವಸ್ತೇ
ಮುನಯೋಽರಣ್ಯಾಂ ಮಮಂಥುಃ ॥ ೨೮ ॥

ತತಸ್ತ್ವ ಕುಮಾರೋ ಜಜ್ಞೇ ॥ ೨೧ ॥

ಜನನಾಜ್ಜನಕಸಂಜ್ಞಾಮವಾಪ ॥ ೨೨ ॥

ಅಭೂದ್ವಿದೇಹೋಽಸ್ಯ ಪಿತೇತಿ ವೈದೇಹಃ ಮಥನಾನ್ಮಿಥಿರಿತಿ ॥ ೨೩ ॥

ತಸ್ಯೋದಾವಸುಃ ಪುತ್ರೋಽಭವತ್ ॥ ೨೪ ॥

ಉದಾವಸೋರ್ನಂದಿವರ್ಧನಃ ತತ್ಪುತ್ರಃ ಸುಕೇತುಃ ತಸ್ಮಾಚ್ಚ
ದೇವರಾತಃ ತತಶ್ಚ ಬೃಹದುಕ್ಥಃ ತಸ್ಯ ಚ ಮಹಾವೀರ್ಯಃ
ತಸ್ಯಾಪಿ ಸುಧೃತಿಃ ॥ ೨೫ ॥

ತತಶ್ಚ ಧೃಷ್ಟಕೇತುರಜಾಯತ ॥ ೨೬ ॥

---

೨೦-೨೩. ದೇಶವು ಅರಾಜಕವಾಗುವುದೆಂದು ಭಯಪಟ್ಟ ಮುನಿಗಳು ಮಕ್ಕಳಿಲ್ಲದ ಆ ರಾಜನ ಶರೀರವನ್ನು ಅರಣಿಯಲ್ಲಿಟ್ಟು ಮಥನಮಾಡಿದರು. ಆ ಶರೀರದಿಂದ ಪುತ್ರನು ಹುಟ್ಟಿದನು. ಅವನಿಗೆ ಜನಕನೆಂದು ಹೆಸರಾಯಿತು. ಇವನ ತಂದೆಯು ವಿದೇಹನಾದುದರಿಂದ ವೈದೇಹನೆಂದೂ ಮಥಿಸಿ ಹುಟ್ಟಿದುದರಿಂದ ಮಿಥಿಯೆಂದೂ ಮತ್ತೆರಡು ಹೆಸರುಗಳೂ ಇದ್ದುವು.

೨೪-೨೬. ಜನಕನಿಗೆ ಉದಾವಸುವೂ, ಉದಾವಸುವಿಗೆ ನಂದಿವರ್ಧನನೂ, ಅವನಿಗೆ ಸುಕೇತುವೂ, ಸುಕೇತುವಿಗೆ ದೇವರಾತನೂ, ದೇವರಾತನಿಗೆ ಬೃಹದುಕ್ಥನೂ, ಅವನಿಗೆ ಮಹಾವೀರನೂ, ಮಹಾವೀರನಿಗೆ ಸುಧೃತಿಯೂ, ಸುಧೃತಿಗೆ ಧೃಷ್ಟಕೇತುವೂ, ಧೃಷ್ಟಕೇತುವಿಗೆ ಹರ್ಯಶ್ವನೂ, ಹರ್ಯಶ್ವನಿಗೆ ಮರುವೂ, ಮರುವಿಗೆ ಪ್ರತೀಕನೂ, ಅವನಿಗೆ ಕೃತಿರಥನೂ, ಅವನಿಗೆ ದೇವಮೀಢನೂ ಇದೇ ಕ್ರಮದಲ್ಲಿ ವಿಬುಧ, ಮಹಾ

ಧೃಷ್ಟಕೇತೋರ್ಹರ್ಯಶ್ವಃ ತಸ್ಯ ಚ ಮರೋ ಮರೋಃ
ಪ್ರತೀಕಃ ತಸ್ಮಾತ್ಕೃತಿರಥಃ ತಸ್ಯ ದೇವಮೀಢಃ ತಸ್ಯಾಪಿ ವಿಬುಧಃ
ವಿಬುಧಸ್ಯಾಪಿ ಮಹಾಧೃತಿಃ ತತಶ್ಚ ಕೃತರಾತಃ
ತತೋ ಮಹಾರೋಮಾ ತಸ್ಯ ಸ್ವರ್ಣರೋಮಾ ತಸ್ಯ
ಪುತ್ರೋ ಹ್ರಸ್ವರೋಮಾ ಹ್ರಸ್ವರೋಮ್ಣಃ ಸೀರಧ್ವಜೋಽಭವತ್ ॥ ೨೭ ॥

ತಸ್ಯ ಪುತ್ರಾರ್ಥಂ ಯಜ್ಞಭುವಂ ಕೃಷತಃ ಸೀರೇ ಸೀತಾ
ಸಮುತ್ಪನ್ನಾ ದುಹಿತಾ ಚ ॥ ೨೮ ॥

ಸೀರಧ್ವಜಸ್ಯ ಭ್ರಾತಾ ಸಾಂಕಾಶ್ಯಾಧಿಪತಿಃ ಕುಶಧ್ವಜ
ನಾಮಾಸೀತ್ ॥ ೨೯ ॥

ಸೀರಧ್ವಜಸ್ಯಾಪತ್ಯಂ ಭಾನುಮಾನ್ ಭಾನುಮತಶ್ಶತದ್ಯುಮ್ನಃ
ತಸ್ಯ ಚ ಶುಚಿಃ ತಸ್ಮಾಚ್ಚೋರ್ಜನಾಮಾ ಪುತ್ರೋ ಜಜ್ಞೇ ॥ ೩೦ ॥

---

ಧೃತಿ, ಕೃತರಾತ, ಮಹಾರೋಮ, ಸ್ವರ್ಣರೋಮ, ಹ್ರಸ್ವರೋಮ, ಸೀರಧ್ವಜ, ಇವರು ಮಕ್ಕಳಾದರು.

೨೮-೩೨. ಸೀರಧ್ವಜನು ಪುತ್ರಕಾಮೇಷ್ಟಿ ಯಾಗವನ್ನು ಮಾಡುವುದಕ್ಕಾಗಿ ಭೂಮಿಯನ್ನು ಉಳುತ್ತಿದ್ದಾಗ ನೇಗಿಲ ಗೆರೆಯಲ್ಲಿ ಸೀತೆಯು ಹುಟ್ಟಿದಳು. ಅವಳೇ ಅವನಿಗೆ ಮಗಳಾದಳು. ಸೀರಧ್ವಜನ ತಮ್ಮನಾದ ಕುಶಧ್ವಜನು ಸಾಂಕಾಶ್ಯವೆಂಬ ಪಟ್ಟಣದಲ್ಲಿ ರಾಜನಾಗಿದ್ದನು. ಸೀರಧ್ವಜನಿಗೆ ಭಾನುಮಂತನು ಮಗನು. ಭಾನುಮಂತನಿಗೆ ಶತದ್ಯುಮ್ನನೂ, ಶತದ್ಯುಮ್ನನಿಗೆ ಶುಚಿಯೂ, ಶುಚಿಗೆ ಊರ್ಜನೂ, ಊರ್ಜನಿಗೆ ಶತಧ್ವಜನೂ ಹೀಗೆಯೇ ಕ್ರಮವಾಗಿ ಕೃತಿ, ರಂಜನ, ಪುರುಜಿತ್, ಅರಿಷ್ಟನೇಮಿ, ಶ್ರುತಾಯು, ಸುಪಾರ್ಶ್ವ, ಸೃಂಜಯ, ಕ್ಷೇಮಾವಿ, ಅನೇನ, ಭೌಮರಥ, ಸತ್ಯರಥ, ಉಪಗು, ಉಪಗುಪ್ತ, ಸ್ವಾಗತ, ಸ್ವಾಂಗ, ಸ್ವಾಪನ, ಸುವರ್ಚ, ಸುಭಾಷ,

ತಸ್ಯಾಪಿ ಶತಧ್ವಜಃ ತತಃ ಕೃತಿಃ ತತೋ ರಂಜನಃ ತತ್ಪುತ್ರಃ
ಪುರುಜಿತ್ ತತೋರಿಷ್ಟನೇಮಿಃ ತಸ್ಮಾಚ್ಛ್ರುತಾಯುಃ
ಶ್ರುತಾಯುಷಸ್ಸುಪಾರ್ಶ್ವಃ ತಸ್ಮಾತ್ಸೃಂಜಯಃ ತತಃ
ಕ್ಷೇಮಾವೀ ಕ್ಷೇಮಾವಿನಃ ಅನೇನಾಃ ತಸ್ಮಾದ್ಭೌಮರಥಃ
ತಸ್ಯ ಚ ಸತ್ಯರಥಃ ತಸ್ಮಾದುಪಗುಃ ಉಪಗೋರುಪಗುಪ್ತಃ
ತತ್ಪುತ್ರಃ ಸ್ವಾಗತಃ ತಸ್ಮಾಚ್ಚ ಸ್ವಾಂಗಃ ತಸ್ಯ ಚ
ಸ್ವಾಪನಃ ತಸ್ಮಾಚ್ಚ ಸುವರ್ಚಾಃ ತಸ್ಯಾಪಿ ಸುಭಾಷಃ
ತತಸ್ಸುಶ್ರುತಃ ತಸ್ಮಾಜ್ಜಯಃ ಜಯಪುತ್ರೋ ವಿಜಯಃ
ವಿಜಯಸ್ಯ ಋತಃ ಋತಾತ್ಸುನಯಃ ಸುನಯಾದ್ವೀತಹವ್ಯಃ ತಸ್ಮಾದ್ಧೃತಿಃ

ಧೃತೇ ರ್ಬಹುಳಾಶ್ವಃ ತಸ್ಯ ಪುತ್ರಃ ಕೃತಿಃ ॥ ೩೧ ॥

ಕೃತೌ ಸಂತಿಷ್ಠತ್ಯಯಂ ಜನಕವಂಶಃ ॥ ೩೨ ॥

ಇತ್ಯೇತೇ ಮೈಥಿಲಾಃ ॥ ೩೩ ॥

ಪ್ರಾಯೇಣೈತೇ ಆತ್ಮವಿದ್ಯಾಶ್ರಯಿಣೋ ಭೂಪಾಲಾ ಭವಂತಿ ॥ ೩೪ ॥

ಇತಿ ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ ಪಂಚಮೋಽಧ್ಯಾಯಃ

---

ಸುಶ್ರುತ, ಜಯ, ವಿಜಯ, ಋತ, ಸುನಯ, ವೀತಹವ್ಯ, ಧೃತಿ, ಬಹುಳಾಶ್ವ, ಕೃತಿ ಇವರು ಮಕ್ಕಳಾಗಿ ಜನಕನ ವಂಶವು ಬೆಳೆಯಿತು. ಕೃತಿಗೆ ಆ ವಂಶವು ನಿಂತು ಹೋಯಿತು.

೩೩-೩೪. ಇವರೆಲ್ಲ ಮಿಥಿಲದೇಶದ ರಾಜರು. ಪ್ರಾಯಶಃ ಇವರೆಲ್ಲರೂ ಆತ್ಮವಿದ್ಯಾಭ್ಯಾಸವನ್ನು ಮಾಡಿದ ರಾಜರಾಗಿದ್ದರು.

ಎಂಬಲ್ಲಿಗೆ ವಿಷ್ಣುಪುರಾಣದ ಚತುರ್ಥಾಂಶದಲ್ಲಿ

ಐದನೆಯ ಅಧ್ಯಾಯವು ಮುಗಿದುದು.

॥ಶ್ರೀಃ॥

# ಶ್ರೀ ವಿಷ್ಣು ಪುರಾಣೇ ಚತುರ್ಥಾಂಶೇ

## ಷಷ್ಠೋಽಧ್ಯಾಯಃ

॥ ಮೈತ್ರೇಯಃ ॥

ಸೂರ್ಯಸ್ಯ ವಂಶ್ಯಾ ಭಗವನ್ ಕಥಿತಾ ಭವತಾ ಮಮ ।
ಸೋಮಸ್ಯಾಪ್ಯಖಿಲಾನ್ವಂಶ್ಯಾನ್ ಶ್ರೋತುಮಿಚ್ಛಾಮಿ ಪಾರ್ಥಿವಾನ್ ॥ ೧ ॥

ಕೀರ್ತ್ಯತೇ ಸ್ಥಿರಕೀರ್ತೀನಾಂ ಯೇಷಾಮದ್ಯಾಪಿ ಸಂತತಿಃ ।
ಪ್ರಸಾದಸುಮುಖಸ್ತಾನ್ಮೇ ಬ್ರಹ್ಮನ್ನಾಖ್ಯಾತುಮರ್ಹಸಿ ॥ ೨ ॥

॥ ಶ್ರೀ ಪರಾಶರಃ ॥

ಶ್ರೂಯತಾಂ ಮುನಿಶಾರ್ದೂಲ ವಂಶಃ ಪ್ರಥಿತತೇಜಸಃ
ಸೋಮಸ್ಯಾನುಕ್ರಮಾತ್ ಖ್ಯಾತಾ ಯತ್ರೋರ್ವೀಪತಯೋಽಭವನ್ ॥೩॥

---

## ಆರನೆಯ ಅಧ್ಯಾಯವು.

೧-೨. ಮೈತ್ರೇಯನು 'ಮಹಾಮಹಿಮರೇ! ತಾವು ನನಗೆ ಸೂರ್ಯವಂಶದ ರಾಜರ ವಿಷಯವನ್ನೆಲ್ಲ ಹೇಳಿದಿರಿ. ಚಂದ್ರವಂಶದ ಸಮಸ್ತ ರಾಜರ ವಿಷಯವನ್ನೂ ಕೇಳಬೇಕೆಂದು ಬಯಸುವೆನು. ಶಾಶ್ವತವಾದ ಕೀರ್ತಿಯುಳ್ಳ ಆ ಚಂದ್ರವಂಶದ ರಾಜರ ಸಂತತಿಯು ಈಗಲೂ ಇರುವುದು. ಅನುಗ್ರಹವಿಟ್ಟು ಅವುಗಳನ್ನು ನನಗೆ ಹೇಳಬೇಕು' ಎಂದನು.

೩-೪. ಪರಾಶರರು ಹೇಳುವರು :—ಮುನಿಶ್ರೇಷ್ಠನೇ! ಶ್ರೇಷ್ಠವಾದ ತೇಜಸ್ಸುಳ್ಳ ಚಂದ್ರವಂಶದಲ್ಲಿ ಪ್ರಸಿದ್ಧರಾದ ರಾಜರಿದ್ದರು. ಅವರ ವಂಶಕ್ರಮವನ್ನು

ಅಯಂ ಹಿ ವಂಶೋಽತಿಬಲಪರಾಕ್ರಮದ್ಯುತಿಶೀಲಚೇಷ್ಟಾವ
ದ್ಭಿರತಿಗುಣಾನ್ವಿತೈರ್ನಹುಷಯಯಾತಿ ಕಾರ್ತವೀರ್ಯಾರ್ಜು
ನಾದಿಭಿರ್ಭೂಪಾಲೈರಲಂಕೃತಃ ತಮಹಂ ಕಥಯಾಮಿ
ಶ್ರೂಯತಾಂ ॥ ೪ ॥

ಅಖಿಲಜಗತ್ಸ್ರಷ್ಟುರ್ಭಗವತೋ ನಾರಾಯಣಸ್ಯ ನಾಭಿ ಸರೋ
ಸಮುದ್ಭವಾಬ್ಜಯೋನೇಃ ಬ್ರಹ್ಮಣಃ ಪುತ್ರೋಽತ್ರಿಃ ॥ ೫ ॥

ಅತ್ರೇಸ್ಸೋಮಃ ॥ ೬ ॥

ತಂ ಚ ಭಗವಾನಬ್ಜಯೋನಿಃ ಅಶೇಷೌಷಧೀದ್ವಿಜ
ನಕ್ಷತ್ರಾಣಾಮಾಧಿಪತ್ಯೇಽಭ್ಯಷೇಚಯತ್ ॥ ೭ ॥

ಸ ಚ ರಾಜಸೂಯಮಕರೋತ್ ॥ ೮ ॥

---

ಹೇಳುವೆನು ಕೇಳು. ಈ ಚಂದ್ರವಂಶವು ವಿಶೇಷವಾದ ಬಲ ಪರಾಕ್ರಮಗಳೂ ಒಳ್ಳೆಯನಡತೆಯೂ, ಒಳ್ಳೆಯ ಗುಣಗಳೂ ಉಳ್ಳ ನಹುಷ, ಯಯಾತಿ, ಕಾರ್ತವೀರ್ಯಾರ್ಜುನ ಮುಂತಾದ ರಾಜರಿಂದ ಅಲಂಕಾರವಾಗಿದ್ದಿತು. ಅದನ್ನೇ ಹೇಳುವೆನು ಕೇಳು.

೫-೧೨. ಸಮಸ್ತಜಗತ್ತನ್ನೂ ಸೃಷ್ಟಿಸಿದ ಮಹಾಮಹಿಮನಾದ ನಾರಾಯಣನ ನಾಭಿಕಮಲದಲ್ಲಿ ಹುಟ್ಟಿದ ಬ್ರಹ್ಮನಿಗೆ ಅತ್ರಿಯು ಮಗನು. ಅತ್ರಿಪುತ್ರನೇ ಚಂದ್ರನು, ಆ ಚಂದ್ರನಿಗೆ ಬ್ರಹ್ಮನು ಸಮಸ್ತ ಓಷಧಿಗಳು, ದ್ವಿಜರು, ನಕ್ಷತ್ರಗಳು ಇವುಗಳ ಮೇಲಿನ ಅಧಿಕಾರವನ್ನು ಕೊಟ್ಟು ರಾಜಪಟ್ಟಾಭಿಷೇಕ ಮಾಡಿದನು. ಅವನು ರಾಜಸೂಯವೆಂಬ ಯಜ್ಞವನ್ನು ಮಾಡಿದನು. ಅದರ ಮಹಿಮೆಯಿಂದ ಉತ್ಕೃಷ್ಟವಾದ ಆಧಿಪತ್ಯವು ಪ್ರಾಪ್ತವಾಗಿ ಅವನಿಗೆ ಮದವು ಹೆಚ್ಚಿತು. ಮದದಿಂದುಂಟಾದ ಗರ್ವದಿಂದ ಅವನು ಸಕಲ ದೇವತೆಗಳಿಗೂ ಗುರುವಾದ ಬೃಹಸ್ಪತಿಯ ಹೆಂಡತಿಯಾದ

ತತ್ಪ್ರಭಾವಾದತ್ಯುತ್ಕೃಷ್ಟಾಧಿಪತ್ಯಾಧಿಷ್ಠಾತೃತ್ವಾಚ್ಚೈನಂ
ಮದ ಆವಿವೇಶ ॥ ೯ ॥

ಮದಾವಲೇಪಾಚ್ಚ ಸಕಲದೇವಗುರೋರ್ಬೃಹಸ್ಪತೇಸ್ತಾರಾಂ
ನಾಮ ಪತ್ನೀಂ ಜಹಾರ ॥ ೧೦ ॥

ಬಹುಶಶ್ಚ ಬೃಹಸ್ಪತಿಚೋದಿತೇನ ಭಗವತಾ ಬ್ರಹ್ಮಣಾ
ಚೋದ್ಯಮಾನಸ್ಸಕಲೈಶ್ಚ ದೇವರ್ಷಿಭಿರ್ಯಾಚ್ಯಮಾನೋಽಪಿ
ನ ಮುಮೋಚ ॥ ೧೧ ॥

ತಸ್ಯ ಚಂದ್ರಸ್ಯ ಚ ಬೃಹಸ್ಪತೇರ್ದ್ವೇಷಾದುಶನಾಪಾರ್ಷ್ಣಿಗ್ರಾಹೋಽಭೂತ್
ಅಂಗಿರಸಶ್ಚ ಸಕಾಶಾದುಪಲಬ್ಧವಿದ್ಯೋ ಭಗವಾನ್ ರುದ್ರೋ
ಬೃಹಸ್ಪತೇಸ್ಸಾಹಾಯ್ಯಮಕರೋತ್ ॥ ೧೨ ॥

ಯತಶ್ಯೋಶನಾ ತತೋ ಜಂಭಕುಂಭಾದ್ಯಾಃ ಸಮಸ್ತಾ
ಏವ ದೈತ್ಯದಾನವನಿಕಾಯಾ ಮಹಾಂತಮುದ್ಯಮಂ ಚಕ್ರುಃ ॥ ೧೪ ॥

---

ತಾರೆಯೆಂಬವಳನ್ನು ಅಪಹಾರ ಮಾಡಿದನು. ಬೃಹಸ್ಪತಿಯು ಬ್ರಹ್ಮನಿಗೆ ಹೇಳಿ ಬ್ರಹ್ಮನು ಅನೇಕ ಬಾರಿ ಚಂದ್ರನಿಗೆ ಹೇಳಿದರೂ ಸಮಸ್ತ ದೇವತೆಗಳೂ, ಋಷಿಗಳೂ ಬೇಡಿಕೊಂಡರೂ ಚಂದ್ರನು ಅವಳನ್ನು ಬಿಡಲಿಲ್ಲ. ಶುಕ್ರನು ಬೃಹಸ್ಪತಿಯ ಮೇಲಿನ ದ್ವೇಷದಿಂದ ಚಂದ್ರನಿಗೆ ಸಹಾಯಕನಾಗಿದ್ದನು.

೧೩-೧೮. ಈ ವಿಷಯದಲ್ಲಿ ಅಂಗಿರಸನ ಶಿಷ್ಯನಾದ ರುದ್ರನು ಗುರುಪುತ್ರನೆಂದು ಬೃಹಸ್ಪತಿಗೆ ಸಹಾಯಕನಾಗಿದ್ದನು. ಶುಕ್ರನು ರಾಕ್ಷಸರ ಗುರುವಾಗಿ ಅವರ ಪಕ್ಷವನ್ನು ವಹಿಸಿದುದರಿಂದ ಜಂಭ, ಕುಂಭ ಮುಂತಾದ ಸಮಸ್ತ ದೈತ್ಯರೂ, ದಾನವರೂ ಯುದ್ಧಕ್ಕೆ ಸಿದ್ಧರಾದರು. ದೇವೇಂದ್ರನು ಸಕಲ ದೇವಸೇನೆಯೊಡನೆ ಬೃಹಸ್ಪತಿಗೆ ಸಹಾಯಕನಾಗಿ ನಿಂತನು. ಒಟ್ಟಿನಲ್ಲಿ ತಾರೆಯ ಕಾರಣದಿಂದ ತಾರಕಾಮ

ಬೃಹಸ್ಪತೇರಪಿ ಸಕಲದೇವಸೈನ್ಯಯುತಸ್ಸಹಾಯಃ ಶಕ್ರೋ
ಅಭವತ್ ॥ ೧೫ ॥

ಏವಂ ಚ ತಯೋರತೀವೋಗ್ರಸಂಗ್ರಾಮಸ್ತಾರಾನಿಮಿತ್ತಸ್ತಾ
ರಕಾಮಯೋ ನಾಮಾಭೂತ್ ॥ ೧೬ ॥

ತತಶ್ಚ ಸಮಸ್ತಶಸ್ತ್ರಾಣ್ಯಸುರೇಷು ರುದ್ರಪುರೋಗಮಾ
ದೇವಾಃ ದೇವೇಷು ಚಾಶೇಷದಾನವಾ ಮುಮುಚುಃ ॥ ೧೭ ॥

ಏವಂ ದೇವಾಸುರಾಹವಸಂಕ್ಷೋಭಕ್ಷುಬ್ಧಹೃದಯಮಶೇ
ಷಮೇವ ಜಗದ್ಬ್ರಹ್ಮಾಣಂ ಶರಣಂ ಜಗಾಮ ॥ ೧೮ ॥

ತತಶ್ಚ ಭಗವಾನಬ್ಜಯೋನಿರಪ್ಯುಶನಸಂ ಶಂಕರಮಸುರಾ
ನ್ ದೇವಾಂಶ್ಚ ನಿವಾರ್ಯ ಬೃಹಸ್ಪತಯೇ ತಾರಾಮದಾ
ಪಯತ್ ॥ ೧೯ ॥

ತಾಂ ಚಾಂತಃ ಪ್ರಸವಾಮವಲೋಕ್ಯ ಬೃಹಸ್ಪತಿರಪ್ಯಾಹ ॥ ೨೦ ॥

---

ಯವೆಂಬ ಭಯಂಕರವಾದ ದೇವಾಸುರ ಯುದ್ಧವು ಉಂಟಾಯಿತು. ಆ ಯುದ್ಧ ದಲ್ಲಿ ರುದ್ರನೇ ಮುಂತಾದ ದೇವತೆಗಳು ಸಮಸ್ತ ಶಸ್ತ್ರಾಸ್ತ್ರಗಳನ್ನು ಅಸುರರ ಮೇಲೆಯೂ, ಅಸುರರು ದೇವತೆಗಳ ಮೇಲೆಯೂ ಪ್ರಯೋಗಿಸಿದರು. ಈ ದೇವಾ ಸುರ ಯುದ್ಧದಿಂದ ತೊಂದರೆಯನ್ನು ಅನುಭವಿಸಿದ ಸಮಸ್ತ ಜಗತ್ತೂ ಬ್ರಹ್ಮನನ್ನು ಮರೆಹೊಕ್ಕಿತು.

೧೯-೨೩. ಆಮೇಲೆ ಬ್ರಹ್ಮನು ಶುಕ್ರನಿಗೂ, ಶಂಕರನಿಗೂ, ದೇವತೆಗಳಿಗೂ ಅಸುರರಿಗೂ ಹೇಳಿ ಯುದ್ಧವನ್ನು ನಿಲ್ಲಿಸಿ ಬೃಹಸ್ಪತಿಗೆ ತಾರೆಯನ್ನು ಕೊಡಿಸಿದನು. ತಾರೆಯು ಗರ್ಭಿಣಿಯಾಗಿರುವುದನ್ನು ನೋಡಿ ಬೃಹಸ್ಪತಿಯು "ನನ್ನ ಕ್ಷೇತ್ರವಾದ ನಿನ್ನ ಶರೀರದಲ್ಲಿ ಮತ್ತೊಬ್ಬನ ಮಗನನ್ನು ಧರಿಸಿರುವುದು ಯುಕ್ತವಾದುದಲ್ಲ. ಈ

ನ್ನೈಷ ಮಮ ಕ್ಷೇತ್ರೇ ಭವತ್ಯಾನ್ಯಸ್ಯ ಸುತೋ ಧಾರ್ಯ
ಸ್ಸಮುತ್ಸೃಜೈನಮಲಮತಿಧಾರ್ಷ್ಟ್ಯೇನೇತಿ ॥ ೨೦ ॥

ಸಾ ಚ ತೇನೈವಮುಕ್ತಾತಿಪತಿವ್ರತಾ ಭರ್ತೃವಚನಾನಂತರಂ
ತಮಿಷೀಕಾಸ್ತಂಬೇ ಗರ್ಭಮುತ್ಸಸರ್ಜ ॥ ೨೧ ॥

ಸ ಚೋತ್ಸೃಷ್ಟಮಾತ್ರ ಏವಾತಿತೇಜಸಾ ದೇವಾನಾಂ
ತೇಜಾಂಸ್ಯಾಚಿಕ್ಷೇಪ ॥ ೨೩ ॥

ಬೃಹಸ್ಪತಿಮಿಂದುಂ ಚ ತಸ್ಯ ಕುಮಾರಸ್ಯಾತಿ ಚಾರುತಯಾ
ಸಾಭಿಲಾಷಾದ್ದೃಷ್ಟ್ವಾ ದೇವಾಸ್ಸ ಮುತ್ಪನ್ನ ಸಂದೇಹಾಸ್ತಾರಾಂ
ಪಪ್ರಚ್ಛುಃ ॥ ೨೪ ॥

ಸತ್ಯಂ ಕಥಯಾಸ್ಮಾಕಮಿತಿ ಸುಭಗೇ ಸೋಮಸ್ಯಾಥವಾ
ಬೃಹಸ್ಪತೇರಯಂ ಪುತ್ರ ಇತಿ ॥ ೨೫ ॥

---

ನೀಚತನವನ್ನು ಬಿಟ್ಟು ಗರ್ಭವನ್ನು ತ್ಯಾಗಮಾಡು" ಎಂದು ಅವಳಿಗೆ ಹೇಳಿದನು ಪತಿವ್ರತೆಯಾದ ಅವಳು ಗಂಡನ ಮಾತಿನಂತೆ ಚಂದ್ರನಿಂದುಂಟಾದ ಗರ್ಭವನ್ನು ಒಂದು ಜೊಂಡಿನಲ್ಲಿ ತ್ಯಾಗಮಾಡಿದಳು. ಆ ಗರ್ಭವು ತ್ಯಾಗಮಾಡಿದ ಕ್ಷಣದಲ್ಲಿಯೇ ಕುಮಾರನಾಗಿ ತನ್ನ ವಿಶೇಷವಾದ ತೇಜಸ್ಸಿನಿಂದ ದೇವತೆಗಳ ತೇಜಸ್ಸನ್ನು ಅಪಹರಿಸಿದನು.

೨೪-೨೫. ದೇವತೆಗಳು ಆ ಕುಮಾರನ ಸೌಂದರ್ಯದಿಂದ ಬೃಹಸ್ಪತಿಯನ್ನೂ ಚಂದ್ರನನ್ನೂ ನೋಡಿ ಯಾರ ಮಗನೆಂದು ತಿಳಿಯದೆ ಸಂದೇಹದಿಂದ ತಾರೆಯನ್ನು ಕುರಿತು, "ಸೌಭಾಗ್ಯವತಿಯೇ! ಈ ಕುಮಾರನು ಚಂದ್ರನಿಂದ ಹುಟ್ಟಿದವನೇ ಅಥವಾ ಬೃಹಸ್ಪತಿಯಿಂದ ಹುಟ್ಟಿದವನೇ ನಿಜವನ್ನು ನಮಗೆ ಹೇಳು" ಎಂದು ಪ್ರಶ್ನೆ ಮಾಡಿದರು.

ಏವಂ ತೈರುಕ್ತಾ ಸಾ ತಾರಾ ಹ್ರಿಯಾ ಕಿಂಚಿನ್ನೋವಾಚ ॥ ೨೬ ॥

ಬಹುಶೋಽಪ್ಯಭಿಹಿತಾ ಯದಾಸೌ ದೇವೇಭ್ಯೋ ನಾಚಚಕ್ಷೇ
ತತಸ್ಸಕುಮಾರಸ್ತಾಂ ಶಪ್ತುಮುದ್ಯತಃ ಪ್ರಾಹ ॥ ೨೭ ॥

ದುಷ್ಟೇಂಬ ಕಸ್ಮಾನ್ಮಮ ತಾತಂ ನಾಖ್ಯಾಸಿ ॥ ೨೮ ॥

ಅದ್ಯೈವ ತೇ ವ್ಯಳೀಕಲಜ್ಜಾವತ್ಯಾಸ್ತಥಾ ಶಾಸ್ತಿ
ಮಹಂ ಕರೋಮಿ ॥ ೨೯ ॥

ಯಥಾ ಚ ನೈವಮದ್ಯಾಪ್ಯತಿಮಂಥರವಚನಾ ಭವಿಷ್ಯಸೀತಿ ॥ ೩೦ ॥

ಅಥಾಹ ಭಗವಾನ್ಪಿತಾಮಹಃ ತಂ ಕುಮಾರಂ
ಸನ್ನಿವಾರ್ಯ ಸ್ವಯಮಪೃಚ್ಛತ್ತಾರಾಂ ॥ ೩೧ ॥

ಕಥಯ ವತ್ಸೇ ಕಸ್ಯಾಯಮಾತ್ಮಜಃ ಸೋಮಸ್ಯ ವಾ
ಬೃಹಸ್ಪತೇರ್ವಾ ಇತ್ಯುಕ್ತಾ ಲಜ್ಜಮಾನಾಹ ಸೋಮಸ್ಯೇತಿ ॥ ೩೨ ॥

---

೨೬-೩೦. ದೇವತೆಗಳ ಪ್ರಶ್ನೆಗೆ ತಾರೆಯು ನಾಚಿಕೆಯಿಂದ ಯಾವ ಉತ್ತರವನ್ನೂ ಹೇಳಲಿಲ್ಲ ದೇವತೆಗಳು ಅನೇಕ ಬಗೆಯಲ್ಲಿ ಕೇಳಿದರೂ ತಾರೆಯು ಯಾವ ಉತ್ತರವನ್ನೂ ಹೇಳದಿದ್ದುದರಿಂದ ಆ ಕುಮಾರನು ಅವಳಿಗೆ ಶಾಪವನ್ನು ಕೊಡುವ ಪ್ರಯತ್ನದಲ್ಲಿ "ದುಷ್ಟಳಾದ ತಾಯೇ! ನನ್ನ ತಂದೆಯು ಇಂಥವನೆಂದು ಏಕೆ ಹೇಳುವುದಿಲ್ಲ? ಸುಳ್ಳು ನಾಚಿಕೆಯನ್ನು ತೋರಿಸುತ್ತಿರುವ ನಿನಗೆ ಈಗಲೇ ಮೌನವನ್ನಾಶ್ರಯಿಸದಂತೆ ತಕ್ಕ ಶಾಸ್ತಿಯನ್ನು ನಾನು ಮಾಡುವೆನು" ಎಂದನು.

೩೧-೩೨. ಆ ಮೇಲೆ ಮಹಾ ಮಹಿಮನಾದ ಬ್ರಹ್ಮನು ಆ ಕುಮಾರನನು ಶಾಪ ಕೊಡದಂತೆ ತಡೆದು ತಾನೇ ಆ ತಾರೆಯನ್ನು ಕುರಿತು "ಮಗಳೇ! ಈ ಕುಮಾರನು ಚಂದ್ರನ ಮಗನೋ, ಬೃಹಸ್ಪತಿಯ ಮಗನೋ ಹೇಳು" ಎಂದು ಕೇಳುತ್ತಲು ಅವಳು ನಾಚಿಕೆಯಿಂದ ಚಂದ್ರನ ಮಗನೆಂದು ಹೇಳಿದಳು.

**ತತಃ ಪ್ರಸ್ಫುರದಚ್ಛಸಿತಾಮಲಕಪೋಲಕಾಂತಿ ಗರ್ಭ**
**ವಾನುಡುಪತಿಃ ಕುಮಾರಮಾಲಿಂಗ್ಯ ಸಾಧು ಸಾಧುವತ್ಸ**
**ಪ್ರಾಜ್ಞೋಸೀತಿ ಬುಧ ಇತಿ ತಸ್ಯ ಚ ನಾಮ ಚಕ್ರೇ** ॥ ೩೩ ॥

**ತಥಾಖ್ಯಾತಮೇವೈತತ್ ಸ ಚ ಯಥೈಳಾಯಾಮಾತ್ಮಜಂ**
**ಪುರೂರವಸಮುತ್ಪಾದಯಾಮಾಸ** ॥ ೩೪ ॥

**ಪುರೂರವಾಸ್ತ್ವತಿದಾನಶೀಲೋಽತಿಯಜ್ವಾಽತಿ ತೇಜಸ್ವೀ ಯಂ ಸತ್ಯ**
**ವಾದಿನಮತಿರೂಪಸ್ವಿನಂ ಮನಸ್ವಿನಂ ಮಿತ್ರಾವರುಣಶಾಪಾ**
**ನ್ಮಾನುಷಲೋಕೇ ಮಯಾ ವಸ್ತವ್ಯಮಿತಿ ಕೃತಮತಿರೂರ್ವಶೀ**
**ದದರ್ಶ** ॥ ೩೫ ॥

**ದೃಷ್ಟಮಾತ್ರೇ ಚ ತಸ್ಮಿನ್ ಅಪಹಾಯಮಾನಮಶೇಷ**
**ಮಪಾಸ್ಯ ಸ್ವರ್ಗಸುಖಾಭಿಲಾಷಂ ತನ್ಮನಸ್ಕಾ ಭೂತ್ವಾ**
**ತಮೇವೋಪತಸ್ಥೇ** ॥ ೩೬ ॥

---

೩೩-೩೪. ಆಮೇಲೆ ಚಂದ್ರನು ವಿಶೇಷವಾದ ನಿರ್ಮಲವಾದ ಕಾಂತಿಯಿಂದ ಕೂಡಿದ ಕೆನ್ನೆಗಳುಳ್ಳವನಾಗಿ ಮಗನನ್ನು ತಬ್ಬಿಕೊಂಡು "ಪುತ್ರನೇ! ಒಳ್ಳೆಯ ಮಾತನ್ನಾಡಿದೆ. ಜ್ಞಾನಿಯಾಗಿರುವೆಯಾದುದರಿಂದ ನಿನಗೆ ಬುಧನೆಂದು ಹೆಸರಾಗಲಿ ಎಂದು ಹೇಳಿದನು. ಈ ಬುಧನು ಇಳಾ ಎಂಬವಳಲ್ಲಿ ಪುರೂರವನೆಂಬ ಪುತ್ರನನ್ನು ಪಡೆದ ವೃತ್ತಾಂತವನ್ನು ನಾನು ಹಿಂದೆಯೇ ಹೇಳಿರುವೆನು

೩೫-೩೬. ಪುರೂರವನು ಸತ್ಯವಾದಿಯೂ, ಯಜ್ಞಗಳನ್ನು ಮಾಡತಕ್ಕವನೂ ದಾನಮಾಡತಕ್ಕವನೂ ಆಗಿ ವಿಶೇಷವಾದ ಸೌಂದರ್ಯ ತೇಜಸ್ಸುಗಳಿಂದ ಕೂಡಿದ್ದನು. ಇಂಥವನನ್ನು ಮಿತ್ರಾವರುಣರ ಶಾಪದಿಂದ ಮನುಷ್ಯಲೋಕದಲ್ಲಿ ತಾನು ವಾಸಮಾಡಬೇಕೆಂದು ನಿಶ್ಚಯಿಸಿದ್ದ ಊರ್ವಶಿಯು ನೋಡಿದಳು. ಅವನನ್ನು ನೋಡಿದ ಕ್ಷಣದಲ್ಲಿಯೇ ತನ್ನ ಗೌರವವನ್ನೂ ಸ್ವರ್ಗಸುಖಾಭಿಲಾಷೆಯನ್ನೂ ಬಿಟ್ಟು ಅವನ

ಸೋಽಪಿ ಚ ತಾಮತಿಶಯಿತ ಸಕಲಲೋಕಸ್ತ್ರೀಕಾಂತಿಸೌ
ಕುಮಾರ್ಯಲಾವಣ್ಯಗತಿವಿಲಾಸಹಾಸಾದಿಗುಣಾಮವ
ಲೋಕ್ಯ ತದಾಯತ್ತಚಿತ್ತವೃತ್ತಿರ್ಬಭೂವ ॥ ೩೭ ॥

ಉಭಯಮಪಿ ತನ್ಮನಸ್ಕಮನನ್ಯದೃಷ್ಟಿ ಪರಿತ್ಯಕ್ತ
ಸಮಸ್ತಾನ್ಯಪ್ರಯೋಜನಮಭೂತ್ ॥ ೩೮ ॥

ರಾಜಾ ತು ಪ್ರಾಗಲ್ಭ್ಯಾತ್ತಾಮಾಹ ॥ ೩೯ ॥

ಸುಭ್ರು ತ್ವಾಮಹಮಭಿಕಾಮೋಽಸ್ಮಿ ಪ್ರಸೀದಾನುರಾಗ
ಮುದ್ವಹೇತ್ಯುಕ್ತಾ ಲಜ್ಜಾವಖಂಡಿತಮೂರ್ವಶೀ ತಂ ಪ್ರಾಹ ॥ ೪೦

ಭವತ್ಯೇವಂ ಯದಿ ಮೇ ಸಮಯಪರಿಪಾಲನಂ
ಭವಾನ್ ಕರೋತೀತ್ಯಾಖ್ಯಾತೇ ಪುನರಪಿ ತಾಮಾಹ ॥ ೪೧ ॥

---

ಲ್ಲಿಯೇ ಮನಸ್ಸುಳ್ಳವಳಾಗಿ ಅವನ ಸಮೀಪಕ್ಕೆ ಹೋದಳು. ಅವನೂ ಕೂಡು ಸಕಲ ಲೋಕದ ಸ್ತ್ರೀಯರನ್ನೂ ಮೀರಿಸಿದ ಕಾಂತಿ, ಸೌಕುಮಾರ್ಯ, ಸೊಗಸು, ನಡಿಗೆಯ ರೀತಿ, ವಿಲಾಸ ಮುಂತಾದ ಗುಣಗಳನ್ನು ಅವಳಲ್ಲಿ ಕಂಡು ಅವಳಲ್ಲಿಯೇ ಮನಸ್ಸುಳ್ಳವನಾದನು. ಇಬ್ಬರೂ ಮತ್ತೊಂದು ವಿಷಯದಲ್ಲಿ ದೃಷ್ಟಿಯಿಡದೆ ಸಮಸ್ತವಾದ ಬೇರೆ ಪ್ರಯೋಜನಗಳನ್ನು ತೊರೆದು ಪರಸ್ಪರಾಸಕ್ತಚಿತ್ತರಾದರು.

೩೯–೪೭. ರಾಜನು "ಭಯವಿಲ್ಲದೆ ಮಂಗಳಕರವಾದ ಹುಬ್ಬುಗಳುಳ್ಳವಳೇ! ನಿನ್ನನ್ನು ನಾನು ಕಾಮಿಸುತ್ತೇನೆ. ಪ್ರಸನ್ನಳಾಗಿ ನನ್ನಲ್ಲಿ ಅನುರಾಗವನ್ನು ತೋರಿಸು" ಎಂದು ಹೇಳುತ್ತಲು ಊರ್ವಶಿಯು ನಾಚಿಕೆಯಿಂದ ಮೆಲ್ಲಗೆ ಮಾತನಾಡಿದಳು. "ನನ್ನ ಪ್ರತಿಜ್ಞೆಯನ್ನು ನಡೆಸಿಕೊಡುವುದಾದರೆ ನೀನು ಹೇಳಿದಂತೆ ಆಗಲಿ" ಎಂದ ಊರ್ವಶಿಯ ಮಾತನ್ನು ಕೇಳಿ ರಾಜನು "ನಿನ್ನ ಪ್ರತಿಜ್ಞೆ ಏನೆಂಬುದನ್ನು ಹೇಳು" ಎಂದನು. ಹೀಗೆಂದು ಪ್ರಶ್ನೆ ಮಾಡಿದ ರಾಜನಿಗೆ ಊರ್ವಶಿಯು ಹೇಳಿದಳು, "ನನ್ನ ಹಾಸಿಗೆಯ ಸಮೀಪದಲ್ಲಿ ಮಕ್ಕಳಂತೆ ಇರುವ ನನ್ನ ಎರಡು ಕುರಿಗಳು ಯಾವಾಗಲೂ

ಆಖ್ಯಾಹಿ ಮೇ ಸಮಯಮಿತಿ ॥ ೪೨ ॥

ಅಥ ಪೃಷ್ಟಾ ಪುನರಪ್ಯಬ್ರವೀತ್ ॥ ೪೩ ॥

ಶಯನಸಮೀಪೇ ಮಮೋರಣಕದ್ವಯಂ ಪುತ್ರಭೂತಂ
ನಾಪನೇಯಂ ॥ ೪೪ ॥

ಭವಾಂಶ್ಚ ಮಯಾ ನ ನಗ್ನೋ ದ್ರಷ್ಟವ್ಯಃ ॥ ೪೫ ॥

ಘೃತಮಾತ್ರಂ [illegible] ಮಮಾಹಾರಃ ಇತಿ ॥ ೪೬ ॥

ಏವಮೇವೇತಿ ಭೂಪತಿರಪ್ಯಾಹ ॥ ೪೭ ॥

ತಯಾ ಸಹ ಸ ಚಾವನಿಪತಿರಲಕಾಯಾಂ ಚೈತ್ರ
ರಥಾದಿವನೇಷ್ವಮಲಪದ್ಮಷಂಡೇಷು ಮಾನಸಾದಿ
ಸರಸ್ಸ್ವತಿರಮಣೀಯೇಷು ರಮಮಾಣ ಏಕ ಷಷ್ಟಿ
ವರ್ಷಾಣ್ಯನುದಿನಪ್ರವರ್ಧಮಾನಪ್ರಮೋದೋನಯತ್ ॥ ೪೮ ॥

---

ಇರಬೇಕು. ಅವುಗಳನ್ನು ಅಲ್ಲಿಂದ ತೆಗೆಯಕೂಡದು. ನೀನು ಬೆತ್ತಲೆಯಾಗಿರುವುದನ್ನು ನಾನು ನೋಡಬಾರದು. ತುಪ್ಪವೊಂದನ್ನೇ ನಾನು ಆಹಾರವಾಗಿ ಉಪಯೋಗಿಸುವೆನು" ಎಂದು ಪ್ರತಿಜ್ಞೆಯನ್ನು ಹೇಳಿದಳು. ರಾಜನು ಹಾಗೆಯೇ ಆಗಲೆಂದು ಒಪ್ಪಿಕೊಂಡನು.

೪೮–೫೦ ಆ ರಾಜನು ಊರ್ವಶಿಯೊಡನೆ ಅಲಕಾ ಪಟ್ಟಣದಲ್ಲಿಯೂ ಚೈತ್ರರಥವೇ ಮುಂತಾದ ವನಗಳಲ್ಲಿಯೂ, ನಿರ್ಮಲವಾದ ಕಮಲಗಳುಳ್ಳ ಸರೋವರಗಳಲ್ಲಿಯೂ ಕ್ರೀಡಿಸುತ್ತ ದಿನ ದಿನಕ್ಕೆ ಸಂತೋಷವು ಹೆಚ್ಚುತ್ತಿರಲು ಅರವತ್ತೊಂದು ವರ್ಷಗಳನ್ನು ಕಳೆದನು. ಊರ್ವಶಿಯೂ ಅವನಿಂದುಂಟಾದ ಸುಖಾನುಭವದಿಂದ ದಿನ ದಿನಕ್ಕೆ ಹೆಚ್ಚುತ್ತಿರುವ ಪ್ರೀತಿಯುಳ್ಳವಳಾಗಿ ದೇವಲೋಕದ ವಾಸದಲ್ಲಿಯೂ ಇಷ್ಟಪಡದಿದ್ದಳು. ಊರ್ವಶಿಯು ಇಲ್ಲದಿರುವುದರಿಂದ ದೇವಲೋಕವು ಅಪ್ಸರಸ್ತ್ರೀಯರಿಗೂ, ಗಂಧರ್ವರಿಗೂ ಚೆಂದಗಾಣಿಸಲಿಲ್ಲ.

ಊರ್ವಶೀ ಚ ತದುಪಭೋಗಾತ್ಪ್ರತಿದಿನಪ್ರವರ್ಧ
ಮಾನಾನುರಾಗಾಮರಲೋಕೇ ವಾಸೇಽಪಿ ನ ಸ್ಪೃಹಾಂ ಚಕಾರ ॥ ೪೯ ॥

ವಿನಾ ಚೋರ್ವಶ್ಯಾಸುರಲೋಕೋಪ್ಸರಸಾಂ ಸಿದ್ಧ
ಗಂಧರ್ವಾಣಾಂ ಚ ನಾತಿರಮಣೀಯೋಽಭವತ್ ॥ ೫೦ ॥

ತತಶ್ಚೋರ್ವಶೀಪುರೂರವಸೋಸ್ಸಮಯವಿದ್ವಿಶ್ವಾವಸುಃ ಗಂಧರ್ವಸಮ
ವೇತೋ ನಿಶಿ ಶಯನಾಭ್ಯಾಶಾದೇಕ ಮುರಣಕಂ ಜಹಾರ ॥ ೫೧ ॥

ತಸ್ಯ ಚಾಕಾಶೇ ನೀಯಮಾನಸ್ಯೋರ್ವಶೀಶಬ್ದಮಶೃಣೋತ್ ॥ ೫೨ ॥
ಏವಮೂಹ ಚ ಮಮಾನಾಥಾಯಾಃ ಪುತ್ರಃ
ಕೇನಾಪ್ಯಪಹ್ರಿಯತೇ ಕಂ ಶರಣಮುಪಯಾಮೀತಿ ॥ ೫೩ ॥

ತದಾ ಕರ್ಣ್ಯ ರಾಜಾ ಮಾಂ ನಗ್ನಂ ದೇವೀ ವೀಕ್ಷ್ಯತೀತಿ
ನ ಯಯೌ ॥ ೫೪ ॥

---

೫೧-೫೩. ಆ ಮೇಲೆ ಊರ್ವಶೀ ಪುರೂರವರ (ಸಮಯ) ಪ್ರತಿಜ್ಞೆಯನ್ನು ತಿಳಿದ ವಿಶ್ವಾವಸುವೆಂಬವನು ಗಂಧರ್ವರೊಡನೆ ಬಂದು ರಾತ್ರಿಯಲ್ಲಿ ಅವರ ಮಂಚದ ಸಮೀಪದಲ್ಲಿದ್ದ ಎರಡು ಕುರಿಗಳಲ್ಲಿ ಒಂದನ್ನು ಅಪಹರಿಸಿದನು ಅವನು ಅದನ್ನು ಆಕಾಶದಲ್ಲಿ ತೆಗೆದುಕೊಂಡು ಹೋಗುತ್ತಿರುವಾಗ ಅದರ ಶಬ್ದವನ್ನು ಊರ್ವಶಿಯು ಕೇಳಿದಳು. ಅವಳು "ದಿಕ್ಕಿಲ್ಲದ ನನ್ನ ಮಗುವಾದ ಕುರಿಯನ್ನು ಯಾರೋ ಅಪಹರಿಸಿ ಕೊಂಡು ಹೋಗುತ್ತಿರುವರು. ಈಗ ನಾನು ಯಾರನ್ನು ಮರೆಹೋಗಲಿ?" ಎಂದು ಹೇಳಿದಳು.

೫೪-೫೭. ಈ ಮಾತನ್ನು ಕೇಳಿ ರಾಜನು ಬೆತ್ತಲೆಯಾದ ನನ್ನನ್ನು ಊರ್ವಶಿಯು ನೋಡುವಳೆಂದು ತಿಳಿದು ಹೋಗಲಿಲ್ಲ. ಆ ಮೇಲೆ ಮತ್ತೊಂದು ಕುರಿ

ಅಥಾನ್ಯಮಪ್ಯುರಣಕಮಾದಾಯ ಗಂಧರ್ವಾ ಯಯುಃ ॥ ೫೫ ॥

ತಸ್ಯಾಪ್ಯಪಹ್ರಿಯಮಾಣಸ್ಯಾಕರ್ಣ್ಯ ಶಬ್ದಮಾಕಾಶೇ
ಪುನರಪ್ಯನಾಥಾಸ್ಮ್ಯಹಮಭರ್ತೃಕಾ ಕಾ ಪುರುಷಾಶ್ರ
ಯೇತ್ಯಾರ್ತರಾವಿಣೀ ಬಭೂವ ॥ ೫೬ ॥

ರಾಜಾಪ್ಯಮರ್ಷವಶಾದಂಧಕಾರಮೇತದಿತಿ ಖಡ್ಗಮಾದಾಯ ದುಷ್ಟ
ದುಷ್ಟಹತೋಽಸೀತಿ ವ್ಯಾಹರನ್ನಭ್ಯಧಾವತ್ ॥ ೫೭ ॥

ತಾವಚ್ಚ ಗಂಧರ್ವೈರಪ್ಯತೀವೋಜ್ಜ್ವಲಾ ವಿದ್ಯುಜ್ಜನಿತಾ ॥ ೫೮ ॥

ತತ್ಪ್ರಭಯಾ ಚೋರ್ವಶೀ ರಾಜಾನಮಪಗತಾಂಬರಂ ದೃಷ್ಟ್ವಾ
ಪವೃತ್ತಸಮಯಾ ತ ತ್ಕ್ಷಣಾದೇವಾಪಕ್ರಾಂತಾ ॥ ೫೯ ॥

ಪರಿತ್ಯಜ್ಯ ತಾವಪ್ಯುರಣಕೌ ಗಂಧರ್ವಾಸ್ಸುರಲೋಕಮುಪಗತಾಃ ॥ ೬೦ ॥

---

ಯನ್ನೂ ಗಂಧರ್ವರು ತೆಗೆದುಕೊಂಡು ಹೋದರು. ಆಕಾಶದಲ್ಲಿ ಗಂಧರ್ವರು ತೆಗೆದುಕೊಂಡು ಹೋಗುತ್ತಿರುವ ಆ ಕುರಿಯ ಶಬ್ದವನ್ನು ಕೇಳಿ ಪುನಃ ಊರ್ವಶಿಯು "ನಾನು ಗಂಡನಿಲ್ಲದವಳಾಗಿ ದಿಕ್ಕಿಲ್ಲದಿರುವಳಾಗಿ ಇರುವೆನು, ನೀಚಪುರುಷನನ್ನಾಶ್ರಯಿಸಿರುವೆನು" ಎಂದು ಅಳುತ್ತಾ ಕೂಗಿಕೊಂಡಳು.

೫೭-೬೦. ರಾಜನು ರೋಷದಿಂದ ಕತ್ತಿಯನ್ನು ಹಿಡಿದುಕೊಂಡು ರಾತ್ರಿಯು ಕತ್ತಲೆಯಿಂದ ತುಂಬಿದುದೆಂದು "ದುಷ್ಟನೇ! ದುಷ್ಟನೇ! ನೀನು ಸತ್ತೆ" ಎಂದು ಹೇಳುತ್ತ ಅವರ ಕಡೆಗೆ ಓಡಿದನು. ಅಷ್ಟರಲ್ಲಿಯೇ ಗಂಧರ್ವರಿಂದಲೂ ಅತ್ಯಂತ ಪ್ರಕಾಶವಾದ ಮಿಂಚು ಹುಟ್ಟಿತು. ಅದರ ಕಾಂತಿಯಿಂದ ಊರ್ವಶಿಯು ಬೆತ್ತಲೆಯಾದ ರಾಜನನ್ನು ನೋಡಿ ಪ್ರತಿಜ್ಞಾ ಭಂಗದಿಂದ ಆ ಕ್ಷಣವೇ ಹೊರಟುಹೋದಳು. ಗಂಧರ್ವರು ■ ಎರಡು ಕುರಿಗಳನ್ನೂ ಬಿಟ್ಟು ದೇವಲೋಕಕ್ಕೆ ಹೊರಟುಹೋದರು.

ರಾಜಾಪಿ ಚ ತೌ ಮೇಷಾವಾದಾಯಾತಿಹೃಷ್ಟಮನಾಃ
ಸ್ವಶಯನಮಾಯಾತೋ ನೋರ್ವಶೀಂ ದದರ್ಶ ॥ ೬೧ ॥

ತಾಂ ಚಾಪಶ್ಯನ್ ವ್ಯಪಗತಾಂಬರ ಏವೋನ್ಮತ್ತರೂಪೋ ಬಭ್ರಾಮ ॥ ೬೨ ॥

ಕುರುಕ್ಷೇತ್ರೇ ಚಾಂಭೋಜಸರಸ್ಯನ್ಯಾಭಿಶ್ಚತಸೃಭಿರಪ್ಸರಸೋ
ಭಿಸ್ಸಮವೇತಾಮೂರ್ವಶೀಂ ದದರ್ಶ ॥ ೬೩ ॥

ತತಶ್ಚೋನ್ಮತ್ತರೂಪೋ ಜಾಯೇ ಹೇ ತಿಷ್ಠ
ಮನಸಿ ಘೋರೇ ತಿಷ್ಠ ವಚಸಿ ಕಪಟಿಕೇ ಹೇ ತಿಷ್ಠೇತ್ಯೇವ
ಮನೇಕಪ್ರಕಾರಂ ಸೂಕ್ತಮವೋಚತ್ ॥ ೬೪ ॥

ಆಹ ಚೋರ್ವಶೀ ॥ ೬೫ ॥

ಮಹಾರಾಜಾಲಮನೇನಾವಿವೇಕಚೇಷ್ಟಿತೇನ ॥ ೬೬ ॥

---

೬೧-೬೪. ರಾಜನು ಆ ಎರಡು ಕುರಿಗಳನ್ನೂ ತೆಗೆದುಕೊಂಡು ಅತ್ಯಂತ ಸಂತೋಷದಿಂದ ತನ್ನ ಹಾಸಿಗೆಯ ಸಮೀಪಕ್ಕೆ ಬಂದು ನೋಡಲು ಊರ್ವಶಿಯು ಕಾಣಲಿಲ್ಲ. ಅವಳನ್ನು ನೋಡದಿದ್ದುದರಿಂದ ರಾಜನು ಬೆತ್ತಲೆಯಾಗಿಯೇ ಹುಚ್ಚ ನಂತೆ ತಿರುಗುತ್ತಿದ್ದನು. ಹೀಗೆ ತಿರುಗುತ್ತ ಕುರುಕ್ಷೇತ್ರದಲ್ಲಿ ಕಮಲದಿಂದ ಕೂಡಿದ ಒಂದು ಸರೋವರದಲ್ಲಿ ಬೇರೆ ನಾಲ್ಕು ಜನ ಅಪ್ಸರ ಸ್ತ್ರೀಯರೊಡನೆ ಇದ್ದ ಊರ್ವಶಿ ಯನ್ನು ಕಂಡನು. ಆ ಮೇಲೆ ಹುಚ್ಚನಂತೆಯೇ "ಎಲೈ ಪತ್ನಿಯೇ ! ಮನಸ್ಸಿನಲ್ಲಿ ಕ್ರೂರಳೇ ! ಮಾತಿನಲ್ಲಿ ಕಪಟವುಳ್ಳವಳೇ ! ನಿಲ್ಲು. ಇತ್ಯಾದಿಯಾದ ಅನೇಕ ಬಗೆಯ ಮಾತುಗಳನ್ನಾಡಿದನು.

೬೫-೬೬. ಊರ್ವಶಿಯು ರಾಜನನ್ನು ಕುರಿತು "ಮಹಾರಾಜನೇ ಈ ! ಅವಿವೇಕ ಚೇಷ್ಟೆಯನ್ನು ಬಿಡು. ನಾನು ಗರ್ಭಿಣಿಯಾಗಿರುವೆನು. ಒಂದು ವರ್ಷದ ಮೇಲೆ ನೀನು ಇಲ್ಲಿಗೆ ಬರಬೇಕು. ನಿನಗೊಬ್ಬ ಕುಮಾರನಾಗುವನು. ಒಂದು

ಅಂತರ್ವರ್ತ್ಸ್ಯಹಮುಬ್ದಾಂತೇ ಭವತ್ಸಾಗಂತವ್ಯಂ ಕುಮಾರಸ್ತೇ
ಭವಿಷ್ಯತಿ ಏಕಾಂ ಚ ನಿಶಾಮಹಂ ತ್ವಯಾ ಸಹ ವತ್ಸ್ಯಾಮೀ
ತ್ಯುಕ್ತಃ ಪ್ರಹೃಷ್ಟಸ್ಸ್ವಪುರಂ ಜಗಾಮ ॥ ೬೭ ॥

ತಾಸಾಂ ಚಾಪ್ಸರಸಾಮೂರ್ವಶೀ ಕಥಯಾಮಾಸ ॥ ೬೮ ॥

ಅಯಂ ಸ ಪುರುಷೋತ್ಕೃಷ್ಟೋ ಯೇನಾಹಮೇತಾವಂತಂ
ಕಾಲಮನುರಾಗಾಕೃಷ್ಟಮಾನಸಾ ಸಹೋಷಿತೇತಿ ॥ ೬೯ ॥

ಏವಮುಕ್ತಾಸ್ತಾಶ್ಚಾಪ್ಸರಸ ಊಚುಃ ॥ ೭೦ ॥

ಸಾಧುಸಾಧ್ವಸ್ಯರೂಪಮಪ್ಯನೇನ ಸಹಾಸ್ಮಾಕಮಪಿ
ಸರ್ವಕಾಲಮಾಸ್ಯಾ ಭವೇದಿತಿ ॥ ೭೧ ॥

ಅಬ್ದೇ ಚ ಪೂರ್ಣೇ ಸ ರಾಜಾತ್ರಾ ಜಗಾಮ ॥ ೭೨ ॥

---

ರಾತ್ರಿ ನಾನು ನಿನ್ನೊಡನೆ ಇರುವೆನು" ಎಂದು ಹೇಳಿದಳು. ರಾಜನು ಈ ಮಾತನ್ನು ಕೇಳಿ ಸಂತೋಷದಿಂದ ತನ್ನ ಪಟ್ಟಣಕ್ಕೆ ಹೋದನು.

೬೮-೭೧. ಬಳಿಕ ಊರ್ವಶಿಯು ತನ್ನ ಜತೆಯಲ್ಲಿದ್ದ ಅಪ್ಸರ ಸ್ತ್ರೀಯರಿಗೆ "ಈ ರಾಜನು ಪುರುಷಶ್ರೇಷ್ಠನು, ಆದುದರಿಂದಲೇ ಇವನೊಡನೆ ನಾನು ಇಷ್ಟು ಕಾಲವೂ ಇವನ ಪ್ರೀತಿಗೆ ಅಧೀನವಾದ ಮನಸ್ಸುಳ್ಳವಳಾಗಿದ್ದೆನು" ಎಂದು ಹೇಳಿದಳು. ಈ ಮಾತನ್ನು ಕೇಳಿ ಅವರು "ನೀನು ಹೇಳಿದುದು ಯುಕ್ತವಾದುದು. ಇವನ ರೂಪವನ್ನು ನೋಡಿದರೆ ನಮಗೂ ಇವನೊಡನೆ ಯಾವಾಗಲೂ ಇರಬೇಕೆಂದು ಮನಸ್ಸಾಗುವುದು" ಎಂದರು.

೭೨-೭೪. ಒಂದು ವರ್ಷವಾದ ಮೇಲೆ ಪುರೂರವ ರಾಜನು ಅಲ್ಲಿಗೆ ಬಂದನು. ಊರ್ವಶಿಯು ಆಯುವೆಂಬ ಕುಮಾರನನ್ನು ಕೊಟ್ಟಳು. ಒಂದು ರಾತ್ರಿ ಅವನ ಜೊತೆಯಲ್ಲಿ ವಾಸಮಾಡಿ ಐದು ಜನ ಪುತ್ರರನ್ನು ಪಡೆವುದಕ್ಕಾಗಿ ಗರ್ಭವನ್ನು

ಕುಮಾರಂ ಚಾಯುಷಮಸ್ಮೈ ಚೋರ್ವಶೀ ದದೌ ॥ ೭೩ ॥

ದತ್ವಾ ಚೈಕಾಂ ನಿಶಾಂತೇನ ರಾಜ್ಞಾ ಸಹೋಷಿತ್ವಾ
ಪಂಚಪುತ್ರೋತ್ಪತ್ತ್ಯಯೇ ಗರ್ಭಮವಾಪ ॥ ೭೪ ॥

ಉವಾಚ ಚೈನಂ ರಾಜಾನಮಸ್ಮತ್ಪ್ರೀತ್ಯಾ ಮಹಾರಾಜಾಯ
ಸರ್ವ ಏವ ಗಂಧರ್ವಾ ವರದಾಸ್ಸಂವೃತ್ತಾಃ
ವ್ರಿಯತಾಂ ಚ ವರ ಇತಿ ॥ ೭೫ ॥

ಆಹ ಚ ರಾಜಾ ॥ ೭೬ ॥

ವಿಜಿತ ಸಕಲಾರಾತಿರವಿಹತೇಂದ್ರಿಯಸಾಮರ್ಥ್ಯೋ ಬಂಧು
ಮಾನಮಿತಬಲಕೋಶೋಸ್ಮಿ ನಾನ್ಯದಸ್ಮಾಕಮೂರ್ವಶೀ
ಸಾಲೋಕ್ಯಾತ್ ಪ್ರಾಪ್ತವ್ಯಮಸ್ತಿ ತದಹಮನಯಾ
ಸಹೋರ್ವಶ್ಯಾ ಕಾಲಂ ನೇತುಮಭಿಲಷಾಮೀತ್ಯುಕ್ತೇ
ಗಂಧರ್ವಾ ರಾಜ್ಞೇಗ್ನಿಸ್ಥಾಲೀಂ ದದುಃ ॥ ೭೭ ॥

---

ಧರಿಸಿದಳು. (ತನ್ನ ಜೊತೆಯಲ್ಲಿದ್ದ ನಾಲ್ವರು ಸಖಿಯರೂ ತನ್ನ ವಿಭೂತಿಯ ಅಂಶವಾದುದರಿಂದ ಐದು ರೂಪದಿಂದ ಐದು ಮಕ್ಕಳು ಹುಟ್ಟುವುದಕ್ಕಾಗಿ ಗರ್ಭವನ್ನು ಧರಿಸಿದಳೆಂದು ಅಭಿಪ್ರಾಯವು. ನಾವೂ ಇವನೊಡನೆ ಇರಬೇಕೆಂಬ ಮನಸ್ಸಾಗುವುದೆಂದು ಹೇಳಿದ ಮಾತೇ ಇದಕ್ಕೆ ಪ್ರಮಾಣವು.)

೭೫-೭೭. ಬಳಿಕ ಊರ್ವಶಿಯು ರಾಜನನ್ನು ಕುರಿತು "ನಮ್ಮಲ್ಲಿರುವ ಪ್ರೀತಿಯಿಂದ ಮಹಾರಾಜನಿಗೆ ಸಮಸ್ತ ಗಂಧರ್ವರೂ ವರವನ್ನು ಕೊಡಲು ಇಷ್ಟಪಡುವರು. ಆದುದರಿಂದ ಬೇಕಾದ ವರವನ್ನು ಕೇಳಬೇಕು" ಎಂದಳು. "ಸಕಲ ಶತ್ರುಗಳನ್ನೂ ಜಯಿಸಿರುವೆನು ಇಂದ್ರಿಯ ಶಕ್ತಿಯೂ ಕುಂದಿಲ್ಲ ಅನೇಕ ಬಂಧುಗಳು ವಿಶೇಷವಾದ ಬೊಕ್ಕಸ ಮತ್ತು ಸೇನೆಗಳೂ ಇರುವವು. ನನಗೆ ಊರ್ವಶಿಯ ಸಾಲೋಕ್ಯಕ್ಕಿಂತ ಬೇರೆಯಾದ ಹೊಂದಬೇಕಾದ ವಸ್ತುವಾವುದೂ ಇರುವುದಿಲ್ಲ.

**ಊಚುಶ್ಚೈನಮಗ್ನಿಮಾಮ್ನಾಯಾನುಸಾರೀ ಭೂತ್ವಾ**
**ತ್ರಿಧಾಕೃತ್ಯೋರ್ವಶೀ ಸಲೋಕತಾಮನೋರಥಮುದ್ದಿಶ್ಯ**
**ಸಮ್ಯಗ್ಯಜೇಥಾಃ ತತೋಽವಶ್ಯಮಭಿಲಷಿತಮವಾಪ್ಸ್ಯಸೀತ್ಯುಕ್ತಸ್ತಾಮಗ್ನಿಸ್ಥಾಲೀ ಮಾದಾಯ ಜಗಾಮ** ॥ ೭೮ ॥

**ಅಂತರಟವ್ಯಾಮಚಿಂತಯತ್ ಅಹೋ ಮೇತೀವ**
**ಮೂಢತಾ ಕಿಮಹಮಕರವಂ** ॥ ೭೯ ॥

**ವಹ್ನಿಸ್ಥಾಲೀಮಯ್ಯೈಷಾ ನೀತಾನೋರ್ವಶೀತಿ** ॥ ೮೦ ॥

**ಅಥೈನಾಮಟವ್ಯಾಮೇವಾಗ್ನಿ ಸ್ಥಾಲೀಂ ತತ್ಯಾಜ**
**ಸ್ವಪುರಂ ಚ ಜಗಾಮ** ॥ ೮೧ ॥

**ವ್ಯತೀತೇರ್ಧರಾತ್ರೇ ವಿನಿದ್ರಶ್ಚಾಚಿಂತಯತ್** ॥ ೮೨ ॥
**ಮಮೋರ್ವಶೀ ಸಾಲೋಕ್ಯಪ್ರಾಪ್ತ್ಯರ್ಥಮಗ್ನಿಸ್ಥಾಲೀ ಗಂಧರ್ವೈರ್ದತ್ತಾ**

---

ಆದುದರಿಂದ ನಾನು ಊರ್ವಶಿಯೊಡನೆ ಕಾಲವನ್ನು ಕಳೆಯಲು ಅಪೇಕ್ಷಿಸುವೆನು" ಎಂದು ಹೇಳುತ್ತಲು ಗಂಧರ್ವರು ರಾಜನಿಗೆ ಅಗ್ನಿಸ್ಥಾಲಿಯನ್ನು ಕೊಟ್ಟು " ಎಲೈ ರಾಜನೇ ಈ ಅಗ್ನಿಯನ್ನು ವೇದವಿಧಿಗನುಸಾರವಾಗಿ ಗಾರ್ಹಪತ್ಯ, ಆಹವನೀಯ ದಕ್ಷಿಣಾಗ್ನಿಯೆಂದು ಮೂರು ಭಾಗವನ್ನು ಮಾಡಿ ಊರ್ವಶೀಸಾಲೋಕ್ಯ ಫಲವನ್ನು ಉದ್ದೇಶಿಸಿ ಯಜ್ಞವನ್ನು ಮಾಡು. ಇದರಿಂದ ನಿನ್ನ ಇಷ್ಟಾರ್ಥವನ್ನು ಪಡೆಯುವೆ " ಎಂದರು. ರಾಜನು ಅಗ್ನಿಸ್ಥಾಲಿಯನ್ನು ತೆಗೆದುಕೊಂಡು ಬರುತ್ತ ನಡುಗಾಡಿನಲ್ಲಿ ಆಲೋಚಿಸಿದನು. 'ಅಯ್ಯೋ ನಾನು ಎಂತಹ ಮೂಢನು ? ಏನು ಕೆಲಸ ಮಾಡಿದೆ? ಅಗ್ನಿಸ್ಥಾಲಿಯನ್ನು ಮಾತ್ರ ತಂದೆನು. ಊರ್ವಶಿಯನ್ನು ತರಲಿಲ್ಲ' ಎಂದು ಆ ಅಗ್ನಿಸ್ಥಾಲಿಯನ್ನು ಅಡವಿಯಲ್ಲಿಯೇ ಬಿಟ್ಟು ತನ್ನ ಪಟ್ಟಣಕ್ಕೆ ಹೋದನು.

೮೨–೮೮. ಅರ್ಧರಾತ್ರಿಯು ಕಳೆದಮೇಲೆ ರಾಜನು ನಿದ್ರೆಯಿಲ್ಲದೆ ಮನಸ್ಸಿನಲ್ಲಿ ನನಗೆ ಊರ್ವಶೀ ಸಾಲೋಕ್ಯ ಪ್ರಾಪ್ತಿಗಾಗಿ ಗಂಧರ್ವರು ಅಗ್ನಿಸ್ಥಾಲಿಯನ್ನು

ಸಾ ಚ ಮಯಾಟವ್ಯಾಂ ಪರಿತ್ಯಕ್ತಾ ॥ ೮೩ ॥

ತದಹಂ ತತ್ರ ತದಾಹರಣಾಯ ಯಾಸ್ಯಾಮೀತ್ಯುಕ್ತ್ವಾ ಯ
ತತ್ರಾಪ್ಯುಪಗತೋ ನಾಗ್ನಿಸ್ಥಾಲೀಮಪಶ್ಯತ್ ॥ ೮೪ ॥

ಶಮೀಗರ್ಭಂ ಚಾಶ್ವತ್ಥಮಗ್ನಿಸ್ಥಾಲೀ ಸ್ಥಾನೇ
ದೃಷ್ಟ್ವಾಚಿಂತಯತ್ ॥ ೫೮ ॥

ಮಯಾತ್ರಾಗ್ನಿಸ್ಥಾಲೀ ನಿಕ್ಷಿಪ್ತಾ ಸಾ ಚಾಶ್ವತ್ಥಶ್ಶಮೀಗರ್ಭೋಽ
ಭೂತ್ ॥ ೮೬ ॥

ತದೇನಮೇವಾಹಮಗ್ನಿರೂಪಮಾದಾಯ ಸ್ವಪುರಮಭಿಗಮ್ಯಾರಣಿಂ
ಕೃತ್ವಾ ತದುತ್ಪನ್ನಾಗ್ನೇರುಪಾಸ್ತಿಂ ಕರಿಷ್ಯಾಮೀತಿ ॥ ೮೭ ॥

ಏವಮೇವ ಸ್ವಪುರಮುಪಗತೋಽರಣಿಂ ಚಕಾರ ॥ ೮೮ ॥

ತತ್ಪ್ರಮಾಣಂ ಚಾಂಗುಳ್ಯೈಃ ಕುರ್ವನ್ ಗಾಯತ್ರೀಮಪಠತ್ ॥ ೮೯ ॥

---

ಕೊಟ್ಟೆನು. ನಾನು ಅದನ್ನು ಕಾಡಿನಲ್ಲಿ ಬಿಟ್ಟು ಬಂದೆನು. ಆದುವರಿಂತ ಅದನ್ನು ತರುವುದಕ್ಕಾಗಿ ಅಲ್ಲಿಗೆ ಹೋಗುವೆನು. ಎಂದು ಅಲ್ಲಿಗೆ ಹೋಗಿ ನೋಡಲು ಅಗ್ನಿ ಸ್ಥಾಲಿಯು ಇರಲಿಲ್ಲ. ಅದು ಇದ್ದ ಕಡೆಯಲ್ಲಿ ಬನ್ನಿಯಮರವು ತನ್ನಲ್ಲಿಯೇ ಸೇರಿಕೊಂಡಿರುವ ಅಶ್ವತ್ಥ ವೃಕ್ಷವಿದ್ದಿತು. ರಾಜನು ಅಗ್ನಿರೂಪವಾದ ಇದನ್ನೇ ನಾನು ಪಟ್ಟಣಕ್ಕೆ ತೆಗೆದುಕೊಂಡು ಹೋಗಿ ಅರಣಿಯನ್ನು ಮಾಡಿ ಅದರಲ್ಲಿ ಹುಟ್ಟಿದ ಅಗ್ನಿಯಲ್ಲಿ ಯಜ್ಞವನ್ನು ಮಾಡುವೆನು ಎಂದು ಹಾಗೆಯೇ ಮಾಡಿ ತನ್ನ ಪಟ್ಟಣಕ್ಕೆ ಬಂದು ಅರಣಿಯನ್ನು ಮಾಡಿದನು.

೮೯—೯೨. ಗಾಯತ್ರೀ ಮಂತ್ರವನ್ನು ಹೇಳುತ್ತ ಅದರಲ್ಲಿ ಎಷ್ಟು ಅಕ್ಷರಗಳಿವೆಯೋ ಅಷ್ಟು ಅಂಗುಲ ಅಳತೆಯ ಅರಣಿಯನ್ನು ಮಾಡಿ ಅದರಲ್ಲಿ ಅಗ್ನಿಯನ್ನು ಹುಟ್ಟಿಸಿ ವೇದ ವಿಧಿಗನುಸಾರವಾಗಿ ಅಗ್ನಿಯನ್ನು ಮೂರು ಭಾಗವಾಗಿ ಮಾಡಿ

ಪಠತಶ್ಚಾಕ್ಷರಸಂಖ್ಯಾನ್ಯೇವಾಂಗುಳಾನ್ಯರಣ್ಯಭವತ್ ॥ ೯೦ ॥

ತತ್ರಾಗ್ನಿಂ ನಿರ್ಮಥ್ಯಾಗ್ನಿತ್ರಯಮಾಮ್ನಾಯಾನುಸಾರೀ
ಭೂತ್ವಾ ಜುಹಾವ ॥೯೧॥

ಊರ್ವಶೀ ಸಾಲೋಕ್ಯಂ ಫಲಮಭಿಸಂಧಿತವಾನ್ ॥ ೯೨ ॥

ತೇನೈವ ಚಾಗ್ನಿವಿಧಿನಾ ಬಹುವಿಧಾನ್ಯಜ್ಞಾನಿಷ್ಟ್ವಾ ಗಾಂಧರ್ವ
ಲೋಕಾನವಾಪ್ಯೋರ್ವಶ್ಯಾ ಸಹಾವಿಯೋಗಮವಾಪ ॥ ೯೩ ॥

ಏಕೋಗ್ನಿರಾದಾವಭವತ್ ಏಕೇನ ತ್ವತ್ರ ಮನ್ವಂತರೇ ತ್ರೇತಾ
ಪ್ರವರ್ತಿತಾ ॥ ೯೪ ॥

ಇತಿ ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ ಷಷ್ಠೋಽಧ್ಯಾಯಃ

---

ಹೋಮ ಮಾಡಿದನು. ಆ ಹೋಮಗಳಿಗೆಲ್ಲಾ ಊರ್ವಶೀ ಸಾಲೋಕ್ಯ ರೂಪವಾದ ಫಲವನ್ನೇ ಅಪೇಕ್ಷಿಸಿದನು.

೯೩. ಆ ರಾಜನು ಅದೇ ತ್ರೇತಾಗ್ನಿ ವಿಧಿಯಿಂದ ಅನೇಕ ಯಜ್ಞಗಳನ್ನು ಮಾಡಿ ಗಾಂಧರ್ವಲೋಕ ವಾಸವನ್ನು ಪಡೆದು ಊರ್ವಶಿಯ ವಿಯೋಗವಿಲ್ಲದೆ ಇದ್ದನು.

೯೪. ಆದಿಯಲ್ಲಿ ಯಜ್ಞಮಾಡುವವರು ಒಂದೇ ಅಗ್ನಿಯಲ್ಲಿ ಯಜ್ಞವನ್ನು ಮಾಡುತ್ತಿದ್ದರು. ಈ ವೈವಸ್ವತಮನ್ವಂತರದಲ್ಲಿ ಒಂದೇ ಅಗ್ನಿಯಿಂದ ತ್ರೇತಾಗ್ನಿಗಳುಂಟಾದುವು. ಆದುದರಿಂದ ಎಲ್ಲರೂ ಗಾರ್ಹಪತ್ಯ, ಆಹವನೀಯ, ದಕ್ಷಿಣಾಗ್ನಿಗಳೆಂದು ಮೂರು ಅಗ್ನಿಗಳಲ್ಲಿ ಯಜ್ಞಗಳನ್ನು ಮಾಡುವರು.

ಎಂಬಲ್ಲಿಗೆ ಶ್ರೀ ವಿಷ್ಣುಪುರಾಣದ ಚತುರ್ಥಾಂಶದಲ್ಲಿ

ಆರನೆಯ ಅಧ್ಯಾಯವು ಮುಗಿದುದು.

ಶ್ರೀಃ॥

# ಶ್ರೀ ವಿಷ್ಣು ಪುರಾಣೇ ಚತುರ್ಥಾಂಶೇ

## ಸಪ್ತಮೋಽಧ್ಯಾಯಃ

---

॥ ಶ್ರೀ ಪರಾಶರಃ ॥

ತಸ್ಯಾಪ್ಯಾಯುರ್ಧೀಮಾನಮಾವಸುರ್ವಿಶ್ವಾವಸುಶ್ಶ್ರುತಾಯುಶ್ಶ
ತಾಯುರಯುತಾಯುರಿತಿ ಸಂಜ್ಞಾಃ ಷಟ್ಪುತ್ರಾ ಅಭವನ್ ॥ ೧ ॥

ತಥಾಮಾವಸೋರ್ಭೀಮನಾಮಾ ಪುತ್ರೋಽಭವತ್ ॥ ೨ ॥

ಭೀಮಸ್ಯ ಕಾಂಚನಃ ಕಾಂಚನಾತ್ಸುಹೋತ್ರಃ ತಸ್ಯಾಪಿ ಜಹ್ನುಃ ॥ ೩ ॥

ಯೋಽಸೌ ಯಜ್ಞವಾಟಮಖಿಲಂ ಗಂಗಾಂಭಸಾ
ಪ್ಲಾವಿತಮವಲೋಕ್ಯ ಕ್ರೋಧಸಂರಕ್ತಲೋಚನೋ ಭಗವಂತಂ

---

## ಏಳನೆಯ ಅಧ್ಯಾಯವು

೧–೩. ಆ ಪುರೂರವನಿಗೆ ಬುದ್ಧಿವಂತನಾದ ಆಯುಃಕುಮಾರನೂ, ಅಮಾವಸು, ವಿಶ್ವಾವಸು, ಶ್ರುತಾಯು, ಶತಾಯು, ಅಯುತಾಯು ಎಂದು ಆರು ಜನ ಮಕ್ಕಳಿದ್ದರು. ಇವರಲ್ಲಿ ಅಮಾವಸುವಿಗೆ ಭೀಮನೂ, ಭೀಮನಿಗೆ ಕಾಂಚನನೂ, ಕಾಂಚನನಿಗೆಸುಹೋತ್ರನೂ, ಸುಹೋತ್ರನಿಗೆ ಜಹ್ನುವೂ ಮಕ್ಕಳಾದರು.

೪ ೬. ಈ ಜಹ್ನುವೇ ತನ್ನ ಯಜ್ಞವಾಟವೆಲ್ಲವೂ ಗಂಗೆಯ ನೀರಿನಲ್ಲಿ ತೇಲುತ್ತಿರುವುದನ್ನು ಕಂಡು ಕೋಪದಿಂದ ಮಹಾಮಹಿಮನಾದ ಯಜ್ಞಪುರುಷ

ತಂ ಯಜ್ಞಪುರುಷಮಾತ್ಮನಿ ಪರಮೇಣ ಸಮಾಧಿನಾ
ಸಮಾರೋಪ್ಯಾಖಿಲಮೇವ ಗಂಗಾಮಪಿಬತ್ ॥ ೪ ॥

ಅಥೈನಂ ದೇವರ್ಷಯಃ ಪ್ರಸಾದಯಾಮಾಸುಃ ॥ ೫ ॥

ದುಹಿತೃತ್ವೇ ಚಾಸ್ಯ ಗಂಗಾಮನಯನ್ ॥ ೬ ॥

ಜಹ್ನೋಶ್ಚ ಸುಮಂತುರ್ನಾಮ ಪುತ್ರೋಽಭವತ್ ॥ ೭ ॥

ತಸ್ಯಾಪ್ಯಜಕಸ್ತತೋ ಬಲಕಾಶ್ವಸ್ತಸ್ಮಾತ್ಕುಶಸ್ತಸ್ಯಾಪಿ
ಕುಶಾಂಬ ಕುಶನಾಭಾಧೂರ್ತರಜಸೋವಸುಶ್ಚೇತಿ
ಚತ್ವಾರಃ ಪುತ್ರಾಃ ಬಭೂವುಃ ॥ ೮ ॥

ತೇಷಾಂ ಕುಶಾಂಬಃ ಶಕ್ರತುಲ್ಯೋ ಮೇ ಪುತ್ರೋ
ಭವೇದಿತಿ ತಪಶ್ಚಕಾರ ॥ ೯ ॥

ತಂ ಚೋಗ್ರತಪಸಮವಲೋಕ್ಯ ಮಾ ಭವತ್ವನ್ಯೋಽಸ್ಮ
ತ್ತುಲ್ಯವೀರ್ಯ ಇತ್ಯಾತ್ಮನೈವಾಸ್ಯೇಂದ್ರಃ ಪುತ್ರತ್ವಮ ಗಚ್ಛತ್ ॥ ೧೦ ॥

---

ನನ್ನು ಸಮಾಧಿಯಿಂದ ಆತ್ಮಸಮಾರೋಪಣೆಯನ್ನು ಮಾಡಿಕೊಂಡು ಗಂಗೆಯ ನೀರನ್ನೆಲ್ಲಾ ಕುಡಿದುಬಿಟ್ಟನು. ಆ ಮೇಲೆ ದೇವತೆಗಳೂ, ಋಷಿಗಳೂ ಅವನನ್ನು ಪ್ರಾರ್ಥಿಸಿ ಅವನ ಮಗಳ ರೂಪದಲ್ಲಿ ಜಹ್ನುಕನ್ಯೆ (ಜಾಹ್ನವಿ) ಎಂದು ಗಂಗೆಯನ್ನು ತೆಗೆದುಕೊಂಡು ಹೋದರು.

೭–೧೦. ಜಹ್ನುವಿಗೆ ಸುಮಂತುವೂ, ಸುಮಂತುವಿಗೆ ಅಜಕನೂ, ಅಜಕನಿಗೆ ಬಲಾಕಾಶ್ವನೂ, ಬಲಾಕಾಶ್ವನಿಗೆ ಕುಶನೂ, ಕುಶನಿಗೆ ಕುಶಾಂಬ, ಕುಶನಾಭ, ಧೂರ್ತ ರಜಸ, ವಸು ಎಂಬ ನಾಲ್ವರೂ ಮಕ್ಕಳಾದರು. ಅವರಲ್ಲಿ ಕುಶಾಂಬನು ತನಗೆ ದೇವೇಂದ್ರನಸಮನಾದ ಮಗನಾಗಬೇಕೆಂದು ತಪಸ್ಸನ್ನು ಮಾಡಿದನು. ಅವನು ಕ್ರೂರವಾಗಿ

ಸ ಗಾಧಿರ್ನಾಮ ಪುತ್ರಃ ಕೌಶೀಕೋಽಭತ್ ॥ ೧೧ ॥

ಗಾಧಿಶ್ಚ ಸತ್ಯವತೀಂ ಕನ್ಯಾಮಜನಯತ್ ॥ ೧೨ ॥

ತಾಂ ಚ ಭಾರ್ಗವಃ ಋಚಿಕೋ ವವ್ರೇ ॥ ೧೩ ॥

ಗಾಧಿರಪ್ಯತಿರೋಷಣಾಯಾತಿವೃದ್ಧಾಯ ಬ್ರಾಹ್ಮಣಾಯ
ದಾತುಮನಿಚ್ಛನ್ ಏಕತಶ್ಶ್ಯಾಮಕರ್ಣಾನಾಮಿಂದುವರ್ಚಸಾ
ಮನಿಲರಂಹಸಾಮಶ್ವಾನಾಂ ಸಹಸ್ರಂಕನ್ಯಾಶುಲ್ಕಮಯಾಚತ ॥ ೧೪ ॥

ತೇನಾಪಿ ಋಷಿಣಾ ವರುಣಸಕಾಶಾದುಪಲಭ್ಯಾಶ್ವತೀರ್ಥೋತ್ಪನ್ನಂ
ತಾದೃಶಮಶ್ವಸಹಸ್ರಂ ದತ್ತಂ ॥ ೧೫ ॥

ತತಸ್ತಾಂ ಋಚಿಕಸ್ಸ ಕನ್ಯಾಮುಪಯೇಮೇ ॥ ೧೬ ॥

ಋಚಿಕಸ್ಚ ತಸ್ಯಾಶ್ಚರುಮಪತ್ಯಾರ್ಥಂ ಚಕಾರ ॥ ೧೭ ॥

---

ತಪಸ್ಸುಮಾಡುವುದನ್ನು ಕಂಡ ದೇವೇಂದ್ರನು ತನಗೆ ಸಮಾನವಾದ ಪರಾಕ್ರಮವುಳ್ಳವನಾಗಬಾರದೆಂದು ತಾನೇ ಅವನಿಗೆ ಪುತ್ರನಾದನು. ಅವನೇ ಗಾಧಿ ಎಂಬ ಮಗನು. ಅವನಿಗೆ ಕೌಶಿಕನೆಂದೂ ಹೆಸರು. ಗಾಧಿಗೆ ಸತ್ಯವತಿಯೆಂಬ ಮಗಳಾದಳು.

೧೩-೧೯. ಆ ಸತ್ಯವತಿಯನ್ನು ಭೃಗುವಂಶದ ಋಚೀಕನು ವಿವಾಹ ಮಾಡಿಕೊಡೆಂದು ಗಾಧಿಯನು ಕೇಳಿದನು. ಅವನು ಹೆಚ್ಚು ವೃದ್ಧನೂ, ಕೋಪವುಳ್ಳವನೂ ಬ್ರಾಹ್ಮಣನೂ ಆದ ಆ ಋಚೀಕನಿಗೆ ತನ್ನ ಮಗಳನ್ನು ಕೊಡಲು ಇಷ್ಟವಿಲ್ಲದೆ ಒಂದು ಕಿವಿ ಕಪ್ಪಾಗಿಯೂ, ಚಂದ್ರನಂತೆ ಕಾಂತಿಯುಳ್ಳವುಗಳಾಗಿಯೂ, ಗಾಳಿಯಂತೆ ವೇಗವುಳ್ಳವುಗಳಾಗಿಯೂ ಇರುವ ಒಂದು ಸಾವಿರ ಕುದುರೆಗಳನ್ನು ಕನ್ಯಾಶುಲ್ಕವಾಗಿ ಕೇಳಿದನು. ಆ ಋಷಿಯು ವರುಣನಿಂದ ಅಶ್ವತೀರ್ಥದಲ್ಲಿ ಹುಟ್ಟಿದ ಅವನು ಕೇಳಿದಂತಹ ಸಾವಿರಕುದುರೆಗಳನ್ನು ತಂದುಕೊಟ್ಟನು. ಬಳಿಕ ಋಚೀಕನು ಸತ್ಯವತಿಯನ್ನು ವಿವಾಹ ಮಾಡಿಕೊಂಡನು. ಋಚೀಕನು ತನ್ನ ಪತ್ನಿಯಲ್ಲಿ ಪುತ್ರನನ್ನು ಪಡೆವುದಕ್ಕಾಗಿ ಚರುವನ್ನು ಮಾಡಿದನು ಮತ್ತು ತನ್ನ ಪತ್ನಿಯು ಕೇಳಿಕೊಂಡುದರಿಂದ

ತತ್ಪ್ರಸಾದಿತಶ್ಚ ತನ್ಮಾತ್ರೇ ಕ್ಷತ್ರವರಪುತ್ರೋತ್ಪತ್ತಯೇ
ಚರುಮಪರಂ ಸಾಧಯಾಮಾಸ ॥ ೧೮ ॥

ಏಷ ಚರುರ್ಭವತ್ಯಾ ಅಯಮಪರಶ್ಚರುಸ್ತ್ವನ್ಮಾತ್ರಾ
ಸಮ್ಯಗುಪಯೋಜ್ಯ ಇತ್ಯುಕ್ತ್ವಾ ವನಂ ಜಗಾಮ ॥ ೧೯ ॥

ಉಪಯೋಗಕಾಲೇ ಚ ತಾಂ ಮಾತಾ ಸತ್ಯವತೀಮಾಹ ॥ ೨೦ ॥

ಪುತ್ರಿ ಸರ್ವ ಏವಾತ್ಮಪುತ್ರಮತಿಗುಣಮಭಿಲಷತಿ
ನಾತ್ಮಜಾಯಾಭ್ರಾತೃಗುಣೇಷ್ವತೀವಾದರೋ ಭವತೀತಿ ॥ ೨೧ ॥

ಅತೋಽರ್ಹಸಿ ಮಮಾತ್ಮೀಯಂ ಚರುಂ ದಾತುಂ
ಮದೀಯಂ ಚರುಂ ಆತ್ಮನೋಪಯೋಕ್ತುಂ ॥ ೨೨ ॥

ಮತ್ಪುತ್ರೇಣ ಹಿ ಸಕಲ ಭೂಮಂಡಲಪರಿಪಾಲನಂ ಕಾರ್ಯಂ
ಕಿಯದ್ವಾ ಬ್ರಾಹ್ಮಣಸ್ಯ ಬಲವೀರ್ಯಸಂಪದೇತ್ಯುಕ್ತಾ ಸಾ
ಸ್ವಚರುಂ ಮಾತ್ರೇ ದತ್ತವತೀ ॥ ೨೩ ॥

---

ಅವಳ ತಾಯಿಗೂ ಕ್ಷತ್ರಿಯ ಶ್ರೇಷ್ಠನಾದ ಪುತ್ರನು ಹುಟ್ಟುವುದಕ್ಕಾಗಿ ಮತ್ತೊಂದು ಚರುವನ್ನು ಪಾಕಮಾಡಿದನು. ಈ ಚರುವನ್ನು ನೀನೂ ಮತ್ತೊಂದು ಚರುವನ್ನು ನಿಮ್ಮ ತಾಯಿಯೂ ಉಪಯೋಗಿಸಬೇಕೆಂದು ಹೇಳಿ ದರ್ಭೆಯನ್ನು ತರುವುದಕ್ಕಾಗಿ ಆ ಮುನಿಯು ಕಾಡಿಗೆ ಹೋದನು.

೨೦-೨೩. ಚರುವನ್ನು ಉಪಯೋಗಿಸುವ ಕಾಲದಲ್ಲಿ ತಾಯಿಯು ಸತ್ಯವತಿಯನ್ನು ಕುರಿತು "ಮಗಳೇ! ಎಲ್ಲರೂ ತನ್ನ ಮಕ್ಕಳು ಗುಣವಂತರಾಗಿರಬೇಕೆಂದು ಬಯಸುವರು. ತನ್ನ ಪತ್ನಿಯ ಸಹೋದರರ ಗುಣಗಳ ವಿಷಯದಲ್ಲಿ ಅಷ್ಟು ಆದರವಿರುವುದಿಲ್ಲ. ಆದುದರಿಂದ ನಿನ್ನ ಚರುವನ್ನು ನನಗೆ ಕೊಡು ನನ್ನ ಚರುವನ್ನು ನೀನು ಉಪಯೋಗಿಸು. ನನ್ನ ಮಗನು ಸಕಲ ಭೂಮಂಡಲವನ್ನೂ ರಕ್ಷಿಸಬೇಕು. ಬ್ರಾಹ್ಮಣನ ಬಲ, ವೀರ್ಯ ಸಂಪತ್ತುಗಳು ಎಷ್ಟರದು" ಎಂದು ಹೇಳಿದಳು. ಈ ಮಾತನ್ನು ಕೇಳಿ ಅವಳು ತನ್ನ ಚರುವನ್ನು ತಾಯಿಗೆ ಕೊಟ್ಟಳು. ತಾಯಿಯ ಚರುವನ್ನು ತಾನು ಭೋಜನಮಾಡಿದಳು.

ಅಥ ವನಾದಾಗತ್ಯ ಸತ್ಯವತೀಮೃಷಿರಪಶ್ಯತ್ ॥ ೨೪ ॥

ಆಹ ಚೈನಾಮತಿಪಾಪೇ ಕಿಮಿದಮಕಾರ್ಯಂ ಭವತ್ಯಾ
ಕೃತಂ ಅತಿರೌದ್ರಂ ತೇ ವಪುರ್ಲಕ್ಷ್ಯತೇ ॥ ೨೫ ॥

ನೂನಂ ತ್ವಯಾತ್ಮನ್ಮಾತೃಸಾತ್ಕೃತಶ್ಚರುರುಪಯುಕ್ತಃ
ನ ಯುಕ್ತಮೇತತ್ ॥ ೨೬ ॥

ಮಯಾ ಹಿ ತತ್ರ ಚರೌ ಸಕಲೈಶ್ವರ್ಯವೀರ್ಯ
ಶೌರ್ಯಬಲಸಂಪದಾರೋಪಿತಾ ತ್ವದೀಯಚರಾ
ವಪ್ಯಖಿಲಶಾಂತಿಜ್ಞಾನತಿತಿಕ್ಷಾದಿ ಬ್ರಾಹ್ಮಣಗುಣಸಂಪತ್ ॥ ೨೭ ॥

ತಚ್ಚ ವಿಪರೀತಂ ಕುರ್ವಂತ್ಯಾಸ್ತವಾತಿರೌದ್ರಾ
ಸ್ತ್ರಧಾರಣಪಾಲನನಿಷ್ಠಃ ಕ್ಷತ್ರಿಯಾಚಾರಃ ಪುತ್ರೋ ಭವಿಷ್ಯತಿ
ತಸ್ಯಾಶ್ಚೋಪಶಮರುಚಿರ್ಬ್ರಾಹ್ಮಣಾಚಾರ
ಇತ್ಯಾಕರ್ಣ್ಯೈವ ಸಾ ತಸ್ಯ ಪಾದೌ ಜಗ್ರಾಹ
ಪ್ರಣಿಪತ್ಯ ಚೈನಮಾಹ ॥ ೨೮ ॥

---

೨೪-೨೮. ಋಚೀಕನು ವನದಿಂದ ಬಂದು ಸತ್ಯವತಿಯನ್ನು ನೋಡಿದನು. ಅವಳನ್ನು ಕುರಿತು "ಎಲೈ ಪಾಪಿಯೇ! ನಿನ್ನ ಶರೀರವು ಕ್ರೂರವಾಗಿ ಕಾಣುವುದು. ನೀನು ಎಂತಹ ಅಕಾರ್ಯವನ್ನು ಮಾಡಿದೆ? ನಿನ್ನ ತಾಯಿಗಾಗಿ ಇದ್ದ ಚರು ವನ್ನು ನೀನೇ ಉಪಯೋಗಿಸಿದೆ. ಇದು ಯೋಗ್ಯವಾದುದಲ್ಲ. ನಾನು ಆ ಚರುವಿನಲ್ಲಿ ಸಕಲೈಶ್ವರ್ಯವನ್ನೂ ಬಲ ಪರಾಕ್ರಮಾದಿ ಸಂಪತ್ತುಗಳನ್ನೂ ಸೇರಿಸಿದ್ದೆನು. ನಿನ್ನ ಚರುವಿನಲ್ಲಿ ಶಾಂತಿ, ಜ್ಞಾನ, ಸಹನೆ ಮುಂತಾದ ಬ್ರಾಹ್ಮಣ ಗುಣಸಂಪತ್ತನ್ನು ಕೂಡಿಸಿದ್ದೆನು. ಅದನ್ನು ವ್ಯತ್ಯಾಸಮಾಡಿದ ನಿನಗೆ ಮಹಾಕ್ರೂರಿಯೂ, ಅಸ್ತ್ರವಿದ್ಯಾ ನಿಪುಣನೂ, ಕ್ಷತ್ರಿಯಾಚಾರ ಸಂಪನ್ನನೂ ಆದ ಮಗನು ಹುಟ್ಟುವನು. ಅವಳಿಗೆ ಶಾಂತಿ ಗುಣದಲ್ಲಾಸಕ್ತನೂ ಬ್ರಾಹಣಾಚಾರಸಂಪನ್ನನೂ ಆದ ಮಗನು ಹುಟ್ಟುವನು" ಎಂದು ಹೇಳಿದ ಮಾತನ್ನು ಕೇಳಿ ಸತ್ಯವತಿಯು ಪತಿಯ ಪಾದಗಳನ್ನು ಹಿಡಿದು ಕೊಂಡು ನಮಸ್ಕಾರಮಾಡಿ ಅವನನ್ನು ಕುರಿತು ಮಾತನಾಡಿದಳು.

ಭಗವನ್ಮಯ್ಯೈತದಜ್ಞಾನಾದನುಷ್ಠಿತಂ ಪ್ರಸಾದಂ ಮೇ
ಕುರು ಮೈವಂ ವಿಧಃ ಪುತ್ರೋ ಭವತು ಕಾಮಮೇವಂ
ವಿಧಃ ಪೌತ್ರೋ ಭವತ್ವಿತ್ಯುಕ್ತೇ ಮುನಿರಪ್ಯಾಹ ॥ ೩೦ ॥

ಏವಮಸ್ತ್ವಿತಿ ॥ ೩೧ ॥

ಅನಂತರಂ ಚ ಸಾ ಜಮದಗ್ನಿಮಜೀಜನತ್ ॥ ೩೨ ॥

ತನ್ಮಾತಾ ಚ ವಿಶ್ವಾಮಿತ್ರಂ ಜನಯಾಮಾಸ ॥ ೩೩ ॥

ಸತ್ಯವತ್ಯಪಿ ಕೌಶಿಕೀ ನಾಮ ನದ್ಯಭವತ್ ॥ ೩೪ ॥

ಜಮದಗ್ನಿರಿಕ್ಷ್ವಾಕು ವಂಶೋದ್ಭವಸ್ಯ ರೇಣೋಸ್ತನ
ಯಾಂ ರೇಣುಕಾಮುಪಯೇಮೇ ॥ ೩೫ ॥

ತಸ್ಯಾಂ ಚಾಶೇಷಕ್ಷತ್ರಹಂತಾರಂ ಪರಶುರಾಮ
ಸಂಜ್ಞಂ ಭಗವತಸ್ಸಕಲಲೋಕ ಗುರೋರ್ನಾರಾಯಣಸ್ಯಾಂಶಂ
ಜಮದಗ್ನಿರಜೀಜನತ್ ॥ ೩೬ ॥

---

೩೦-೩೪. "ಮಹಾಮಹಿಮನೆ! ನಾನು ತಿಳಿಯದೆ ಈ ಕೆಲಸವನ್ನು ಮಾಡಿದೆನು ನನ್ನಲ್ಲಿ ಅನುಗ್ರಹವಿಡು. ಇಂತಹ ಮಗನು ನನಗಾಗದಿರಲಿ. ಮೊಮ್ಮಗನು ಅಂಥವನಾದರೆ ಆಗಲಿ" ಎಂದು ಹೇಳುತ್ತಲು ಮುನಿಯು ಹಾಗೆಯೇ ಆಗಲೆಂದನು. ಬಳಿಕ ಅವಳು ಜಮದಗ್ನಿಯನ್ನು ಹೆತ್ತಳು. ಅವಳ ತಾಯಿಯು ವಿಶ್ವಾಮಿತ್ರನನ್ನು ಹೆತ್ತಳು. ಆ ಮೇಲೆ ಸತ್ಯವತಿಯು ಕೌಶಿಕಿಯೆಂಬ ನದಿಯಾದಳು.

೩೫-೩೬. ಜಮದಗ್ನಿಯು ಇಕ್ಷ್ವಾಕು ವಂಶದಲ್ಲಿ ಹುಟ್ಟಿದ ರೇಣುವೆಂಬವನ ಮಗಳಾದ ರೇಣುಕೆಯನ್ನು ವಿವಾಹ ಮಾಡಿಕೊಂಡನು ಅವಳಲ್ಲಿ ಸಮಸ್ತ ಕ್ಷತ್ರಿಯರನ್ನೂ ನಾಶಮಾಡುವವನೂ ಸಕಲ ಲೋಕಗುರುವಾದ ನಾರಾಯಣನ ಅಂಶ ಸಂಭೂತನೂ ಆದ ಪರಶುರಾಮನೆಂಬ ಮಗನನ್ನು ಪಡೆದನು.

ವಿಶ್ವಾಮಿತ್ರಪುತ್ರಸ್ತು ಭಾರ್ಗವ ಏವ ಶುನಶ್ಯೇಫೋ
ದೇವೈರ್ದತ್ತಃ ತತಶ್ಚ ದೇವರಾತನಾಮಾಭವತ್ ॥ ೩೭ ॥

ತತಶ್ಚಾನ್ಯೇ ಮಧುಚ್ಛಂದೋ ಧನಂಜಯಕೃತ
ದೇವಾಷ್ಟಕ ಕಚ್ಛಪ ಹರಿತಾಖ್ಯಾ ವಿಶ್ವಾಮಿತ್ರಪುತ್ರಾ ಬಭೂವುಃ ॥ ೩೮ ॥

ತೇಷಾಂ ಚ ಬಹೂನಿ ಕೌಶಿಕಗೋತ್ರಾಣಿ ಋಷ್ಯಂತ
ರೇಷು ವಿವಾಹ್ಯಾನ್ಯಭವನ್ ॥ ೩೯ ॥

ಇತಿ ಶ್ರೀ ವಿಷ್ಣುಪುರಾಣೇಚತುರ್ಥಾಂಶೇ ಸಪ್ತಮೋಽಧ್ಯಾಯಃ

---

೩೭–೩೯. ಋಚೀಕನ ಎರಡನೆಯ ಮಗನಾದ ಶುನಶ್ಯೇಫನೇ ದೇವತೆಗಳಿಂದ ವಿಶ್ವಾಮಿತ್ರನಿಗೆ ಕೊಡಲ್ಪಟ್ಟವನಾದುದರಿಂದ ದೇವರಾತನೆಂಬ ಹೆಸರಿನಿಂದ ವಿಶ್ವಾಮಿತ್ರ ಪುತ್ರನೆನಿಸಿಕೊಂಡನು. ವಿಶ್ವಾಮಿತ್ರನಿಗೆ ಮಧುಚ್ಛಂದ, ಧನಂಜಯ, ಕೃತ, ದೇವಾಷ್ಟಕ, ಕಚ್ಛಪ, ಹರಿ ಎಂಬಹೆಸರಿನ ಬೇರೆ ಮಕ್ಕಳುಗಳೂ ಇದ್ದರು. ಇವರಿಂದ ವಿಶ್ವಾಮಿತ್ರ ಗೋತ್ರಗಳು ಅನೇಕ ಬಗೆಯಾದುವು. ಇವರೆಲ್ಲರೂ ಪ್ರವರ ಭೇದದಿಂದ ಕೂಡಿದ ಬೇರೆಯ ಋಷಿಗಳ ಗೋತ್ರದವರೊಡನೆ ವಿವಾಹ ಸಂಬಂಧವನ್ನು ಮಾಡುವವರಾದರು.

ಎಂಬಲ್ಲಿಗೆ ಶ್ರೀ ವಿಷ್ಣುಪುರಾಣದ ಚತುರ್ಥಾಂಶದಲ್ಲಿ

ಏಳನೆಯ ಅಧ್ಯಾಯವು ಮುಗಿದುದು.

# ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ

## ಅಷ್ಟಮೋಽಧ್ಯಾಯಃ

---

॥ ಶ್ರೀ ಪರಾಶರಃ ॥

ಪುರೂರವಸೋ ಜ್ಯೇಷ್ಠಪುತ್ರೋ ಯಸ್ತ್ವಾಯುರ್ನಾಮಾ ಸ
ರಾಹೋರ್ದುಹಿತರಮುಪಯೇಮೇ ॥ ೧ ॥

ತಸ್ಯಾಂ ಚ ಪಂಚಪುತ್ರಾನುತ್ಪಾದಯಾಮಾಸ ॥ ೨ ॥

ನಹುಷಕ್ಷತ್ರವೃದ್ಧರಂಭರಜಿಸಂಜ್ಞಾಸ್ತಥೈವಾನೇನಾಃ
ಪಂಚಮಃ ಪುತ್ರೋಽಭೂತ್ ॥ ೩ ॥

ಕ್ಷತ್ರವೃದ್ಧಾತ್ಸುಹೋತ್ರಃ ಪುತ್ರೋಽಭವತ್ ॥ ೪ ॥

ಕಾಶ್ಯಪಕಾಶಗೃತ್ಸಮದಾಸ್ತ್ರಯಸ್ತಸ್ಯ ಪುತ್ರಾ ಬಭೂವುಃ ॥ ೫ ॥

ಗೃತ್ಸಮದಸ್ಯ ಶೌನಕಶ್ಚಾತುರ್ವರ್ಣ್ಯಪ್ರವರ್ತಯಿತಾ ಅಭೂತ್ ॥ ೬ ॥

---

### ಎಂಟನೆಯ ಅಧ್ಯಾಯವು.

೧-೬. ಪುರೂರವನ ಹಿರಿಯ ಮಗನಾದ ಆಯುವು ರಾಹುವಿನ ಮಗಳನ್ನು ವಿವಾಹಮಾಡಿಕೊಂಡನು. ಅವಳಲ್ಲಿ ನಹುಷ, ಕ್ಷತ್ರವೃದ್ಧ, ರಂಭ, ರಜಿ, ಅನೇನ, ಎಂಬ ಐವರು ಮಕ್ಕಳನ್ನು ಪಡೆದನು. ಕ್ಷತ್ರವೃದ್ಧನಿಗೆ ಸುಹೋತ್ರನು ಮಗನಾದನು. ಅವನಿಗೆ ಕಾಶ್ಯ, ಕಾಶ, ಗೃತ್ಸಮದರೆಂಬ ಮೂವರು ಮಕ್ಕಳಾದರು. ಗೃತ್ಸಮದನಿಗೆ ಶೌನಕನೆಂಬ ಮಗನು ಹುಟ್ಟಿ ಅವನು ನಾಲ್ಕು ವರ್ಣಗಳನ್ನು ಲೋಕದಲ್ಲಿ ಸೃಷ್ಟಿಸಿದನು.

ಕಾಶ್ಯಸ್ಯ ಕಾಶೇಯಃ ಕಾಶೀರಾಜಃ ತಸ್ಮಾದ್ರಾಷ್ಟ್ರಃ
ರಾಷ್ಟ್ರಸ್ಯ ದೀರ್ಘತಪಾಃ ಪುತ್ರೋಽಭವತ್ ॥ ೭ ॥
ಧನ್ವಂತರಿಸ್ತು ದೀರ್ಘತಪಸಃ ಪುತ್ರೋಽಭವತ್ ॥ ೮ ॥
ಸ ಹಿ ಸಂಸಿದ್ಧಕಾರ್ಯಕರಣಸ್ಸಕಲಸಂಭೂತಿಷ್ವಶೇ
ಷಜ್ಞಾನವಿದಾ ಭಗವತಾ ನಾರಾಯಣೇನ ಚಾತೀತ
ಸಂಭೂತೌ ತಸ್ಮೈ ವರೋ ದತ್ತಃ ॥ ೯ ॥
ಕಾಶೀರಾಜಗೋತ್ರೇಽವತೀರ್ಯ ತ್ವಮಷ್ಟಧಾ ಸಮ್ಯಗಾಯುರ್ವೇದಂ
ಕರಿಷ್ಯಸಿ ಯಜ್ಞಭಾಗಭುಗ್ಭವಿಷ್ಯಸೀತಿ ॥ ೧೦ ॥
ತಸ್ಯ ಚ ಧನ್ವಂತರೇಃ ಪುತ್ರಃ ಕೇತುಮಾನ್ ಕೇತುಮತೋ
ಭೀಮರಥಃ ತಸ್ಯಾಪಿ ದಿವೋದಾಸಃ ತಸ್ಯಾಪಿ ಪ್ರತರ್ದನಃ ॥ ೧೧ ॥

---

೭–೧೦. ಕಾಶ್ಯನಿಗೆ ಕಾಶೇಯನೆಂಬ ಮಗನು ಹುಟ್ಟಿ ಕಾಶೀ ರಾಜನಾಗಿದ್ದನು. ಅವನಿಗೆ ರಾಷ್ಟ್ರನೂ, ರಾಷ್ಟ್ರನಿಗೆ ದೀರ್ಘತಪನೂ, ದೀರ್ಘತಪನಿಗೆ ಧನ್ವಂತರಿಯೂ ಮಕ್ಕಳಾದರು. ಧನ್ವಂತರಿಯು ಮುಪ್ಪು ಮುಂತಾದ ದೋಷಗಳಿಲ್ಲದ ಶರೀರೇಂದ್ರಿಯಗಳುಳ್ಳವನಾಗಿದ್ದನು ಅವನು ಹಿಂದೆ ಕ್ಷೀರ ಸಮುದ್ರದಲ್ಲಿ ಹುಟ್ಟಿದಾಗ ಸಮಸ್ತ ಸೃಷ್ಟಿ ವಿಷಯವಾದ ಜ್ಞಾನವನ್ನುಳ್ಳ ನಾರಾಯಣನು "ನೀನು ಕಾಶೀ ರಾಜನ ಗೋತ್ರದಲ್ಲಿ ಹುಟ್ಟಿ ಆಯುರ್ವೇದವನ್ನು ಎಂಟುಭಾಗವಾಗಿ ಮಾಡುವೆ" ಯೆಂದೂ ನಿನಗೆ ಯಜ್ಞಭಾಗವು ಬರುವುದೆಂದೂ ವರವನ್ನು ಕೊಟ್ಟನು. (ಕಾಯ, ಬಾಲಗ್ರಹ, ಊರ್ಧ್ವಾಂಗ, ಶಲ್ಯ, ದಂಷ್ಟ್ರ, ಜರ, ವಿಷ, ಚಿಕಿತ್ಸಾ ಎಂಬಿವೇ ಆಯುರ್ವೇದದ ಅಷ್ಟಾಂಗಗಳು.)

೧೧–೧೫. ಧನ್ವಂತರಿಗೆ ಕೇತುಮಂತನೂ, ಕೇತುಮಂತನಿಗೆ ಬೀಮರಥನೂ, ಅವನಿಗೆ ದೀವೋದಾಸನೂ ದೀವೋದಾಸನಿಗೆ ಪ್ರತರ್ದನನೂ ಮಕ್ಕಳಾದರು. ಪ್ರತರ್ದನನು ಭದ್ರಶ್ರೇಣ್ಯ ವಂಶವನ್ನು ನಾಶಮಾಡಿ ಶತ್ರುಗಳನ್ನು ಜಯಿಸಿದುದ

ಸ ಚ ಭದ್ರಶ್ರೇಣ್ಯವಂಶವಿನಾಶಾದಶೇಷಶತ್ರವೋಽನೇನಜಿತಾ
ಇತಿ ಶತ್ರುಜಿದಭವತ್ ॥ ೧೩ ॥

ತೇ ಚ ಪ್ರೀತಿಮತಾತ್ಮಪುತ್ರೋ ವತ್ಸೇತ್ಯಭಿಹಿತೋ ವತ್ಸೋಽಭವತ್
ಸತ್ಯಪರತಯಾ ಚ ಋತಧ್ವಜ ಸಂಜ್ಞಾಮವಾಪ ॥ ೧೪ ॥

ತತಶ್ಚ ಕುವಲಯನಾಮಾನಮಶ್ವಂ ಲೇಭೇ ತತಃ ಕುವಲಯಾಶ್ವ
ಇತ್ಯಸ್ಯಾಂ ಪೃಥಿವ್ಯಾಂ ಪ್ರಥಿತಃ ॥ ೧೫ ॥

ತಸ್ಯ ಚ ವತ್ಸಸ್ಯ ಪುತ್ರೋಽಳರ್ಕೋ ನಾಮಾಭವತ್
ಯಸ್ಯಾಯಮದ್ಯಾಪಿ ಶ್ಲೋಕೋ ಗೀಯತೇ ॥ ೧೬ ॥

ಷಷ್ಟಿರ್ವರ್ಷಸಹಸ್ರಾಣಿ ಷಷ್ಟಿರ್ವರ್ಷಶತಾನಿ ಚ ।
ಅಳರ್ಕಾದಪರೋ ನಾನ್ಯೋ ಬುಭುಜೇ ಮೇದಿನೀಂ ಯುವಾ ॥ ೧೭ ॥

---

ರಿಂದ ಶತ್ರುಜಿತನೆಂದೂ ಪ್ರೀತಿಯಿಂದ ಕೂಡಿದ ಇವನ ತಂದೆಯು ತನ್ನ ಮಗನನ್ನು ವತ್ಸ; ವತ್ಸನೆಂದು ಕರೆಯುತ್ತಿದ್ದುದರಿಂದ ವತ್ಸನೆಂದೂ, ಸತ್ಯವಾದ ಮಾತನಾಡುತ್ತಿದ್ದುದರಿಂದ ಋತಧ್ವಜನೆಂದೂ, ಕುವಲಯವೆಂಬ ಹೆಸರಿನ ಕುದುರೆಯನ್ನು ಪಡೆದುದರಿಂದ ಕುವಲಯಾಶ್ವನೆಂದೂ ಈ ಪ್ರಪಂಚದಲ್ಲಿ ಪ್ರಸಿದ್ಧಿಹೊಂದಿದನು

೧೬-೧೭. ವತ್ಸರಾಜನಿಗೆ ಅಳರ್ಕನೆಂಬ ಮಗನು ಹುಟ್ಟಿದನು. ಅಳರ್ಕನು ಅರುಸಾವಿರದ ಆರುನೂರು ವರ್ಷಗಳವರೆಗೆ ಭೂಮಿಯಲ್ಲಿ ರಾಜ್ಯವನ್ನು ಸುಖದಿಂದ ಅನುಭವಿಸಿದನು. ಇವನ ಸಮನಾದ ರಾಜನು ಮತ್ತಾರೂ ಇರಲಿಲ್ಲ ಎಂದು ಈಗಲೂ ಪ್ರಸಿದ್ಧಿಯಿರುವುದು.

ತಸ್ಯಾಪ್ಯಳರ್ಕಸ್ಯ ಸನ್ನತಿ ನಾಮಾಭವದಾತ್ಮಜಃ ॥ ೧೮ ॥

ಸನ್ನತೇಸ್ಸುನೀಥಃ ತಸ್ಯಾಪಿ ಸುಕೇತುಃ ತಸ್ಮಾಚ್ಚ ಧರ್ಮ
ಕೇತುರ್ಜಜ್ಞೇ ॥ ೧೯ ॥

ತತಶ್ಚ ಸತ್ಯಕೇತುಃ ತಸ್ಮಾದ್ವಿಭುಃ ತತ್ತನಯಃ ಸ್ವವಿಭುಃ
ತತಶ್ಚ ಸುಕುಮಾರಸ್ತಸ್ಯಾಪಿ ಧೃಷ್ಟಕೇತುಃ—ತತಶ್ಚ ವೀತಿಹೋತ್ರಃ
ತಸ್ಮಾದ್ಭಾರ್ಗಃ ಭಾರ್ಗಸ್ಯ ಭಾರ್ಗಭೂಮಿಃ—ತತಶ್ಚಾ
ತುರ್ವರ್ಣ್ಯಪ್ರವೃತ್ತಿರಿತ್ಯೇತೇ ಕಾಶೇಯಾಃಭೂಭೃತಃ ಕಥಿತಾಃ ॥ ೨೦ ॥

ರಜೇಸ್ತು ಸಂತತಿಃ ಶ್ರೂಯತಾಂ ॥ ೨೧ ॥

ಇತಿ ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ ಅಷ್ಟಮೋಽಧ್ಯಾಯಃ

---

೧೮-೨೦. ಅಳರ್ಕನಿಗೆ ಸನ್ನತಿಯೆಂಬ ಮಗನೂ, ಸನ್ನತಿಗೆ ಸುನೀಥನೂ, ಸುನೀಥನಿಗೆ ಸುಕೇತುವೂ, ಸುಕೇತುವಿಗೆ ಧರ್ಮಕೇತುವೂ, ಧರ್ಮಕೇತುವಿಗೆ ಸತ್ಯಕೇತುವೂ, ಸತ್ಯಕೇತುವಿಗೆ ವಿಭುವೂ, ವಿಭುವಿಗೆಸ್ವವಿಭುವೂ, ಸ್ವವಿಭುವಿಗೆ ಸುಕುಮಾರನೂ ಸುಕುಮಾರನಿಗೆ ಧೃಷ್ಟಕೇತುವೂ ಧೃಷ್ಟಕೇತುವಿಗೆ ವೀತಿಹೋತ್ರನೂ, ವೀತಿಹೋತ್ರನಿಗೆ ಭಾರ್ಗವನೂ, ಭಾರ್ಗವನಿಗೆ ಭಾರ್ಗಭೂಮಿಯು ಮಕ್ಕಳಾದರು. ಭಾರ್ಗಭೂಮಿಯು ನಾಲ್ಕು ವರ್ಣಧರ್ಮಗಳನ್ನು ಸ್ಥಾಪಿಸಿದನು. ಇಲ್ಲಿಗೆ ಕಾಶೇಯನೆಂಬ ಕಾಶೀರಾಜನ ವಂಶವು ಮುಗಿಯಿತು.

೨೧. ಆಯುವಿನ ಮಗನಾದ ಕ್ಷತ್ರವೃದ್ಧನ ವಂಶವನ್ನು ಹೇಳಿಯಾಯಿತು. ಅವನ ಸಹೋದರನಾದ ರಜಿಯ ವಂಶವನ್ನು ಹೇಳುವೆನು ಕೇಳು.

ಎಂಬಲ್ಲಿಗೆ ಶ್ರೀ ವಿಷ್ಣುಪುರಾಣದ ಚತುರ್ಥಾಂಶದಲ್ಲಿ

ಎಂಟನೆಯ ಅಧ್ಯಾಯವು ಮುಗಿದುದು.

ಶ್ರೀಃ

# ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ

## ನವಮೋಽಧ್ಯಾಯಃ

॥ ಶ್ರೀ ಪರಾಶರಃ ॥

ರಜೇಸ್ತು ಪಂಚಪುತ್ರಶತಾನ್ಯತುಲಬಲವೀರ್ಯಪರಾಕ್ರ
ಮಸಾರಾಣ್ಯಾಸನ್ ॥ ೧ ॥

ದೇವಾಸುರಸಂಗ್ರಾಮಾರಂಭೇ ಚ ಪರಸ್ಪರವಧೇಪ್ಸವೋ
ದೇವಾಶ್ಚಾಸುರಾಶ್ಚ ಬ್ರಹ್ಮಾಣಮುಪೇತ್ಯ ಪಪ್ರಚ್ಛುಃ ॥ ೨ ॥

ಭಗವನ್ನಸ್ಮಾಕಮತ್ರ ವಿರೋಧೇ ಕಃ ಶಮಃ ಪಕ್ಷೋ
ಜೇತಾ ಭವಿಷ್ಯತೀತಿ ॥ ೩ ॥

---

### ಒಂಭತ್ತನೆಯ ಅಧ್ಯಾಯವು

೧-೩. ಆಯುವಿನ ಮಗನಾದ ರಜಿ ಎಂಬುವನಿಗೆ ಅಸಮಾನವಾದ ಬಲ ಪರಾಕ್ರಮಗಳಿಂದ ಕೂಡಿದ ಐನೂರು ಜನ ಮಕ್ಕಳಿದ್ದರು. ದೇವಾಸುರರ ಯುದ್ಧಾರಂಭದಲ್ಲಿ ಒಬ್ಬರನ್ನೊಬ್ಬರು ಕೊಲ್ಲಬೇಕೆಂದು ಅಪೇಕ್ಷಿಸಿದ ದೇವತೆಗಳೂ ಅಸುರರೂ ಬ್ರಹ್ಮನ ಸಮೀಪಕ್ಕೆ ಹೋಗಿ "ಮಹಾಮಹಿಮನಾದ ಬ್ರಹ್ಮನೇ ನಮ್ಮಿಬ್ಬರಿಗೂ ವಿರೋಧ ಬಂದಿರುವಲ್ಲಿ ಯಾವ ಗುಂಪಿನವರು ಗೆಲ್ಲುವರೆಂಬುದನ್ನು ಹೇಳಬೇಕು." ಎಂದು ಪ್ರಶ್ನೆಮಾಡಿದರು.

ಅಥಾಹ ಭಗವಾನ್ ॥ ೪ ॥

ಯೇಷಾಮರ್ಥೇ ರಜಿರಾತ್ತಾತ್ತಾಯುಧೋ ಯೋತ್ಸ್ಯತಿ
ತತ್ಪಕ್ಷೋ ಜೇತೇತಿ ॥ ೫ ॥

ಅಥ ದೈತ್ಯೈರುಪೇತ್ಯ ರಜಿರಾತ್ಮಸಾಹಾಯ್ಯದಾನಾ
ಯಾಭ್ಯರ್ಥಿತಃ ಪ್ರಾಹ ॥ ೬ ॥

ಯೋತ್ಸ್ಯೇಽಹಂ ಭವತಾಮರ್ಥೇ ಯದ್ಯಹಮಮರ
ಜಯಾದ್ಭವತಾಮಿಂದ್ರೋ ಭವಿಷ್ಯಾಮೀತ್ಯಾಕರ್ಣ್ಯೈ
ತತ್ತೈರಭಿಹಿತಂ ॥ ೭ ॥

ನ ವಯಮನ್ಯಥಾ ವದಿಷ್ಯಾಮೋಽನ್ಯಥಾ ಕರಿಷ್ಯಾಮೋಽಸ್ಮಾಕಮಿಂದ್ರಃ
ಪ್ರಹ್ಲಾದಸ್ತದರ್ಥಮೇವಾಯಮುದ್ಯಮ ಇತ್ಯುಕ್ತ್ವಾ ಗತೇಷ್ವಸುರೇಷು

---

೪–೮. ಬ್ರಹ್ಮನು "ಯಾರ ಪಕ್ಷದಲ್ಲಿ ರಜಿಯು ನಿಂತು ತನ್ನ ಆಯುಧ ಗಳಿಂದ ಯುದ್ಧಮಾಡುವನೋ ಆ ಗುಂಪಿನವರು ಜಯವನ್ನು ಪಡೆವರು" ಎಂದು ಹೇಳಿದನು. ಇವನ್ನು ಕೇಳಿದಮೇಲೆ ದೈತ್ಯರು ರಜಿಯ ಸಮೀಪಕ್ಕೆ ಬಂದು ತಮಗೆ ಸಹಾಯಕನಾಗಿ ಯುದ್ಧವನ್ನು ಮಾಡಬೇಕೆಂದು ಕೇಳಿಕೊಂಡರು. ಆಗ ರಜಿಯು ಅವರನ್ನು ಕುರಿತು "ನಾನು ನಿಮಗೆ ಸಹಾಯಕನಾಗಿ ಯುದ್ಧಮಾಡುವೆನು ಆದರೆ ದೇವತೆಗಳನ್ನು ನಾನು ಜಯಿಸಿದರೆ ನಾನು ನಿಮಗೆಲ್ಲ ದೇವೇಂದ್ರನಾಗಬೇಕು." ಎಂದನು. ಈ ಮಾತನ್ನು ಕೇಳಿ ದೈತ್ಯರು 'ನಾವು ಕಾರ್ಯಸಿದ್ಧಿಯಾಗಬೇಕೆಂದು ಈಗ ಒಂದು ಬಗೆಯಲ್ಲಿ ಮಾತನಾಡಿ ಕಾರ್ಯಸಿದ್ಧಿಯಾದ ಮೇಲೆ ಮತ್ತೊಂದು ಬಗೆ ಯಲ್ಲಿ ಮಾತನಾಡುವವರಲ್ಲ. ಮತ್ತು ಬೇರೆ ವಿಧದಿಂದ ಕಾರ್ಯವನ್ನು ಮಾಡ ತಕ್ಕವರೂ ಅಲ್ಲ. ನಮಗೆ ಪ್ರಹ್ಲಾದನೇ ರಾಜನು. ಅವನು ಇಂದ್ರನಾಗಬೇಕೆಂದೇ ನಾವು ಈ ಯುದ್ಧೋದ್ಯೋಗವನ್ನು ಮಾಡಿರುವೆವು." ಎಂದು ಹೇಳಿ ಹೊರಟುಹೋಗು

ದೇವೈರಪ್ಯಸಾವವನಿಪತಿರೇವಮೇವೋಕ್ತಸ್ತೇನಾಪಿ
ಚ ತಥೈವೋಕ್ತೇ ದೇವೈರಿಂದ್ರಸ್ತ್ವಂ ಭವಿಷ್ಯಸೀತಿ
ಸಮನ್ವಿಚ್ಛಿತಂ ॥ ೮ ॥

ರಜಿನಾಪಿ ದೇವಸೈನ್ಯಸಹಾಯೇನಾನೇಕೈರ್ಮಹಾಸ್ತ್ರೈ
ಸ್ತದಶೇಷಮಸುರಬಲಂ ನಿಷೂದಿತಂ ॥ ೯ ॥

ಅಥ ಜಿತಾರಿಪಕ್ಷಶ್ಚ ದೇವೇಂದ್ರೋ ರಜಿಚರಣಯುಗಳಮಾತ್ಮನಃ
ಶಿರಸಾ ನಿಪೀಡ್ಯಾಹ ॥ ೧೦ ॥

ಭಯತ್ರಾಣಾದನ್ನದಾನಾದ್ಭವಾನಸ್ಮತ್ಪಿತಾ ಶೇಷಲೋಕಾ
ನಾಮುತ್ತಮೋ ಭವಾನ್ ಯಸ್ಯಾಹಂ ಪುತ್ರಸ್ತ್ರಿಲೋಕೇಂದ್ರಃ ॥ ೧೧ ॥

ಸ ಚಾಪಿ ರಾಜಾ ಪ್ರಹಸ್ಯಾಹ ॥ ೧೨ ॥

ಏವಮಸ್ತ್ವೇವಮಸ್ತ್ವನತಿಕ್ರಮಣೀಯಾ ಹಿ ವೈರಿಪಕ್ಷಾದಪ್ಯ
ನೇಕವಿಧಚಾಟುವಾಕ್ಯಗರ್ಭಾ ಪ್ರಣತಿರಿತ್ಯುಕ್ತ್ವಾ ಸ್ವಪುರಂ ಜಗಾಮ ॥೧೩॥

---

ತ್ತಲು ದೇವತೆಗಳು ರಾಜನ ಸಮೀಪಕ್ಕೆ ಬಂದು ಸಹಾಯವನ್ನು ಕೇಳಿ ಅವನು ಹೇಳಿದ ಮಾತಿಗೆ ಉತ್ತರವಾಗಿ ನೀನು ಇಂದ್ರನಾಗಬಹುದು. ಎಂದು ಒಪ್ಪಿಕೊಂಡರು.

೯-೧೪. ರಜಿಯು ದೇವತೆಗಳ ಸೈನ್ಯಗಳ ಸಹಾಯದಿಂದ ಅನೇಕ ಮಹಾಸ್ತ್ರ ಗಳಿಂದ ಅಸುರ ಸೇನೆಗಳನ್ನು ನಾಶಮಾಡಿದನು. ಶತ್ರುಗಳನ್ನು ಜಯಿಸಿದ ದೇವೇಂದ್ರನು ರಜಿಯ ಪಾದಗಳಿಗೆ ತನ್ನ ತಲೆಯನ್ನಿಟ್ಟು ನಮಸ್ಕಾರಮಾಡಿ ಭಯ ದಿಂದ ರಕ್ಷಿಸಿ ಅನ್ನದಾನ ಮಾಡಿದುದರಿಂದ ನೀನು ನಮ್ಮ ತಂದೆಯಾಗಿರುವೆ. ಮೂರು ಲೋಕಕ್ಕೂ ಒಡೆಯನಾಗಿ ದೇವೇಂದ್ರನೆನಿಸಿದ ನಾನು ನಿನ್ನ ಪುತ್ರನಾಗಿರುವು ದರಿಂದ ಸಮಸ್ತ ಲೋಕಗಳಲ್ಲಿಯೂ ನೀನು ಉತ್ತಮೋತ್ತಮನೆನಿಸಿರುವೆ" ಎಂದು ಹೊಗಳಿದನು. ರಾಜನು ಈ ಮಾತನ್ನು ಕೇಳಿ ನಕ್ಕು ಹಾಗೆಯೇ ಆಗಲಿ ಶತ್ರುಗಳಾ

ಶತಕ್ರತುರಪೀಂದ್ರತ್ವಂ ಚಕಾರ ॥ ೧೪ ॥

ಸ್ವರ್ಯಾತೇ ತು ರಜೌ ನಾರದರ್ಷಿಚೋದಿತಾ ರಜಿಪುತ್ರಾ
ಶ್ಶತಕ್ರತುಮಾತ್ಮಪಿತೃಪುತ್ರಂ ಸಮಾಚಾರಾದ್ರಾಜ್ಯಂ
ಯಾಚಿತವಂತಃ ॥ ೧೫ ॥

ಅಪ್ರದಾನೇನ ಚ ವಿಜಿತ್ಯೇಂದ್ರಮತಿ ಬಲಿನಃ ಸ್ವಯಮಿಂದ್ರತ್ವಂ
ಚಕ್ರುಃ ॥ ೧೬ ॥

ತತಶ್ಚ ಬಹುತಿಥೇಕಾಲೇಹ್ಯತೀತೇ ಬೃಹಸ್ಪತಿ ಮೇಕಾಂತೇ
ದೃಷ್ಟ್ವಾ ಅಪಹೃತತ್ರೈಲೋಕ್ಯ ಯಜ್ಞಭಾಗಃ ಶತಕ್ರತುರುವಾಚ ॥ ೧೭ ॥

ಬದರೀಫಲ ಮಾತ್ರಮಪ್ಯರ್ಹಸಿ ಮಮಾಪ್ಯಾಯನಾಯ
ಪುರೋಡಾಶಖಂಡಂದಾತುಮಿತ್ಯುಕ್ತೋ ಬೃಹಸ್ಪತಿರುವಾಚ ॥ ೧೮ ॥

---

ದರೂ ಇಂತಹ ಪ್ರಿಯವೂ ಹಿತವೂ ಆದ ಮಾತುಗಳನ್ನಾಡಿ ನಮಸ್ಕಾರ ಮಾಡಿದರೆ ಅದನ್ನೂ ಮೀರತಕ್ಕುದಲ್ಲ, ಅಲ್ಲವೇ ?" ಎಂದು ಹೇಳಿ ತನ್ನ ಪಟ್ಟಣಕ್ಕೆ ಹೋದನು. ದೇವೇಂದ್ರನು ದೇವರಾಜನಾಗಿಯೇ ಇದ್ದನು.

೧೫–೧೬. ರಜಿಯು ಮರಣಹೊಂದಿದಮೇಲೆ ನಾರದ ಋಷಿಯ ಮಾತನ್ನು ಕೇಳಿ ರಜಿಪುತ್ರರು ತಮ್ಮ ತಂದೆಗೆ ದೇವೇಂದ್ರನು ಪುತ್ರನಾದುದರಿಂದ ತಂದೆಯ ಆಸ್ತಿಯು ಮಕ್ಕಳಿಗೆ ಬರಬೇಕೆಂಬ ನ್ಯಾಯವನ್ನನುಸರಿಸಿ ತಮಗೆ ರಾಜ್ಯಭಾರವನ್ನು ಕೊಡಬೇಕೆಂದು ದೇವೇಂದ್ರನನ್ನು ಕೇಳಿದರು. ಅವನು ಕೊಡದಿದ್ದುದರಿಂದ ಮಹಾ ಬಲಶಾಲಿಗಳಾದ ಅವರು ದೇವೇಂದ್ರನನ್ನು ಜಯಿಸಿ ತಾವೇ ದೇವೇಂದ್ರನ ರಾಜ್ಯವನ್ನು ಕಾಪಾಡುತ್ತಿದ್ದರು.

೧೭–೧೮. ಹೀಗೆ ಅನೇಕ ದಿನಗಳು ಕಳೆಯುತ್ತಲು ಮೂರು ಲೋಕದಲ್ಲಿಯೂ ಯಜ್ಞಭಾಗವಿಲ್ಲದ ದೇವೇಂದ್ರನು ಗುಟ್ಟಾಗಿ ಬೃಹಸ್ಪತಿಯ ಹತ್ತಿರಕ್ಕೆ ಹೋಗಿ "ಎಲೈ ಗುರುವೇ ! ನೀನು ನನ್ನ ತೃಪ್ತಿಗಾಗಿ ಒಂದು ಎಲಚಿಯ ಹಣ್ಣಿನ

ಯದ್ಯೇವಂ ತ್ವಯಾಹಂ ಪೂರ್ವಮೇವ ಚೋದಿತಸ್ಸ್ಯಾಂ
ತನ್ಮಯಾ ತ್ವದರ್ಥಂ ಕಿಮಕರ್ತವ್ಯಮಿತ್ಯಲ್ಪೈರೇವಾಹೋ
ಭಿಸ್ತ್ವಾಂ ನಿಜಪದಂ ಪ್ರಾಪಯಿಷ್ಯಾಮೀತ್ಯಭಿಧಾಯ
ತೇಷಾಮನುದಿನಮಭಿಚಾರಕಂ ಬುದ್ಧಿಮೋಹಾಯ
ಶಕ್ರಸ್ಯ ತೇಜೋಭಿವೃದ್ಧಯೇ ಜುಹಾವ ॥ ೧೯ ॥

ತೇ ಚಾಪಿ ತೇನ ಬುದ್ಧಿಮೋಹೇನಾಭಿಭೂಯಮಾನಾ
ಬ್ರಹ್ಮದ್ವಿಷೋ ಧರ್ಮತ್ಯಾಗಿನೋ ವೇದವಾದಪರಾಙ್ಮುಖಾ
ಬಭೂವುಃ ॥ ೨೦ ॥

ತತಸ್ತಾನಪೇತಧರ್ಮಾಚಾರಾನಿಂದ್ರೋ ಜಘಾನ ॥ ೨೧ ॥

ಪುರೋಹಿತಾಪ್ಯಾಯಿತತೇಜಾಶ್ಚ ಶಕ್ರಃ ದಿವಮಾಕ್ರಮತ್ ॥ ೨೨ ॥

ಏತದಿಂದ್ರಸ್ಯ ಸ್ವಪದಚ್ಯವನಾ ದಾರೋಹಣಂ ಶ್ರುತ್ವಾ ಪುರುಷಃ

---

ಗಾತ್ರವಾದರೂ ಪುರೋಡಾಶವನ್ನು ಕೊಡಲು ಶಕ್ತನಾಗಿಲ್ಲ" ಎಂದು ಹೇಳಿದುದಕ್ಕೆ ಬೃಹಸ್ಪತಿಯು ಎಲೈ ದೇವೇಂದ್ರನೇ ನೀನು ನನಗೆ ಮೊದಲೇ ಇದನ್ನು ಹೇಳಿದ್ದರೆ ನಿನಗಾಗಿ ನಾನು ಏನಾದರೂ ಪ್ರಯತ್ನ ಮಾಡುತ್ತಿದ್ದೆ. ಈಗಲೂ ಸ್ವಲ್ಪ ದಿನಗಳಲ್ಲಿಯೇ ನಿನ್ನ ಸ್ಥಾನವು ನಿನಗೆ ದೊರೆಯುವಂತೆ ಮಾಡುತ್ತೇನೆ" ಎಂದು ಹೇಳಿ ಪ್ರತಿದಿನವೂ ರಜಿಪುತ್ರರ ಬುದ್ಧಿಭ್ರಾಂತವಾಗುವಾಂತೆಯೂ, ದೇವೇಂದ್ರನ ತೇಜಸ್ಸು ಹೆಚ್ಚುವಂತೆಯೂ ಆಭಿಚಾರಿಕ ಹೋಮವನ್ನು ಮಾಡುತ್ತಿದ್ದನು.

೨೦-೨೨. ರಜಿಪುತ್ರರು ಬುದ್ಧಿಭ್ರಾಂತಿಯಿಂದ ಬ್ರಹ್ಮದ್ವೇಷಿಗಳಾಗಿಯೂ, ಧರ್ಮವನ್ನು ಬಿಟ್ಟು ವೇದವಾದವನ್ನು ತಿರಸ್ಕರಿಸುವವರಾಗಿಯೂ ಆದರು. ಧರ್ಮಾಚಾರಗಳನ್ನು ಬಿಟ್ಟ ಅವರನ್ನು ಇಂದ್ರನು ಕೊಂದುಹಾಕಿದನು. ತನ್ನ ಪುರೋಹಿತನಿಂದ ತೇಜಸ್ಸನ್ನು ಹೆಚ್ಚಿಸಿಕೊಂಡ ಇಂದ್ರನು ಸ್ವರ್ಗವನ್ನಾಕ್ರಮಿಸಿದನು. ದೇವೇಂದ್ರನ ಅಧಿಕಾರವನ್ನು ಕಳೆದುಕೊಂಡು ಮತ್ತೆ ತನ್ನ ಪದವಿಯನ್ನು ಪಡೆದ ಈ ವೃತ್ತಾಂತ

ಸ್ವಪದಭ್ರಂಶಂ ದೌರಾತ್ಮ್ಯಂ ಚ ನಾಪ್ನೋತಿ ॥ ೨೩ ॥

ರಂಭಸ್ತ್ವನಪತ್ಯೋಽಭವತ್ ॥ ೨೪ ॥

ಕ್ಷತ್ರವೃದ್ಧಸುತಃ ಪ್ರತಿಕ್ಷತ್ರೋಽಭವತ್ ॥ ೨೫ ॥

ತತ್ಪುತ್ರಸ್ಸಂಜಯಃ ತಸ್ಯಾಪಿ ಜಯಃ ತಸ್ಯಾಪಿ ವಿಜಯಃ
ತಸ್ಮಾಚ್ಚ ಜಜ್ಞೇ ಕೃತಃ ॥ ೨೬ ॥

ತಸ್ಯ ಚ ಹರ್ಯಧನಃ ಹರ್ಯಧನಸುತಸ್ಸಹದೇವಃ
ತಸ್ಮಾದದೀನಸ್ತಸ್ಯ ಚ ಜಯತ್ಸೇನಃ ತತಶ್ಚ ಸಂಕೃತಿಃ
ತತ್ಪುತ್ರಃ ಕ್ಷತ್ರಧರ್ಮಾ ಇತ್ಯೇತೇ ಕ್ಷತ್ರವೃದ್ಧಸ್ಯ ವಂಶ್ಯಾಃ ॥ ೨೭ ॥

ತತೋ ನಹುಷವಂಶಂ ಪ್ರವಕ್ಷ್ಯಾಮಿ ॥ ೨೮ ॥

ಇತಿ ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ ನವಮೋಽಧ್ಯಾಯಃ

---

ವನ್ನು ಕೇಳಿದ ಮನುಷ್ಯನು ತನ್ನ ಪದವಿಯ ನಾಶವನ್ನೂ, ದುಷ್ಟ ಮನಸ್ಸನ್ನೂ ಪಡೆಯುವುದಿಲ್ಲ.

೨೪–೨೭. ಆಯುವಿನ ಮಗನಾದ ರಂಭನಿಗೆ ಮಕ್ಕಳಾಗಲಿಲ್ಲ. ಹಿಂದೆ ಕ್ಷತ್ರವೃದ್ಧನ ಮಗನಾದ ಸುಹೋತ್ರನ ವಂಶವನ್ನು ಹೇಳಿಯಾಯಿತು. ಆ ಕ್ಷತ್ರವೃದ್ಧನಿಗೆ ಪ್ರತಿಕ್ಷತ್ರನೆಂಬ ಮತ್ತೊಬ್ಬ ಮಗನಿದ್ದನು. ಪ್ರತಿಕ್ಷತ್ರನಿಗೆ ಸಂಜಯನೂ, ಸಂಜಯನಿಗೆ ಜಯನೂ, ಜಯನಿಗೆ ವಿಜಯನೂ ವಿಜಯನಿಗೆ ಕೃತನೂ, ಕೃತನಿಗೆ ಹರ್ಯಧನನೂ, ಹರ್ಯಧನನಿಗೆ ಸಹದೇವನೂ, ಸಹದೇವನಿಗೆ ಅದೀನನೂ, ಅದೀನನಿಗೆ ಜಯತ್ಸೇನನೂ, ಜಯತ್ಸೇನನಿಗೆ ಸಂಕೃತಿಯೂ, ಸಂಕೃತಿಗೆ ಕ್ಷತ್ರಧರ್ಮನೂ ಮಕ್ಕಳಾದರು. ಇವರೆಲ್ಲ ಕ್ಷತ್ರವೃದ್ಧನ ವಂಶದವರು.

೨೮. ಇನ್ನು ಮುಂದೆ ನಹುಷನ ವಂಶವನ್ನು ಹೇಳುವೆನು ಕೇಳು.

ಎಂಬಲ್ಲಿಗೆ ಶ್ರೀ ವಿಷ್ಣುಪುರಾಣದ ಚತುರ್ಥಾಂಶದಲ್ಲಿ

ಒಂಭತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಶ್ರೀ ವಿಷ್ಣು ಪುರಾಣೇ ಚತುರ್ಥಾಂಶೇ

## ದಶಮೋಧ್ಯಾಯಃ

---

॥ ಶ್ರೀ ಪರಾಶರಃ ॥

ಯತಿಯಯಾತಿ ಸಂಯಾತ್ಯಾಯಾತಿವಿಯಾತಿಕೃತಿಸಂಜ್ಞಾ
ನಹುಷಸ್ಯ ಷಟ್ಪುತ್ರಾ ಮಹಾಬಲಪರಾಕ್ರಮಾ ಬಭೂವುಃ ॥ ೧ ॥

ಯತಿಸ್ತು ರಾಜ್ಯಂ ನೈಚ್ಛತ್ ॥ ೨ ॥

ಯಯಾತಿಸ್ತು ಭೂಭೃದಭವತ್ ॥ ೩ ॥

ಉಶನಸಶ್ಚ ದುಹಿತರಂ ದೇವಯಾನೀಂ ವಾರ್ಷಪರ್ವಣೀಂಚ
ಶರ್ಮಿಷ್ಠಾಮುಪಯೇಮೇ ॥ ೪ ॥

---

### ಹತ್ತನೆಯ ಅಧ್ಯಾಯವು.

೧-೬. ಆಯುವಿನ ಮಗನಾದ ನಹುಷನಿಗೆ ಯತಿ, ಯಯಾತಿ, ಸಂಯಾತಿ, ಆಯಾತಿ, ವಿಯಾತಿ, ಕೃತಿ ಎಂಬ ಆರು ಜನ ಮಹಾ ಬಲ ಪರಾಕ್ರಮಶಾಲಿಗಳಾದ ಮಕ್ಕಳಿದ್ದರು. ಯತಿಯು ರಾಜ್ಯವನ್ನಪೇಕ್ಷಿಸಲಿಲ್ಲ. ಯಯಾತಿಯು ರಾಜನಾದನು. ಅವನು ಶುಕ್ರಾಚಾರ್ಯರ ಮಗಳಾದ ದೇವಯಾನೆಯನ್ನೂ, ವೃಷಪರ್ವನೆಂಬ ದೈತ್ಯರಾಜನ ಪುತ್ರಿಯಾದ ಶರ್ಮಿಷ್ಠೆಯನ್ನೂ ವಿವಾಹಮಾಡಿಕೊಂಡಿದ್ದನು. ಅವನಿಗೆ

ಅತ್ರಾನುವಂಶಶ್ಲೋಕೋ ಭವತಿ ॥ ೫ ॥

ಯದುಂ ಚ ದುರ್ವಸುಂ ಚೈವ ದೇವಯಾನೀ ವ್ಯಜಾಯತ ।
ದ್ರುಹ್ಯಂ ಚಾನುಂ ಚ ಪೂರುಂ ಚ ಶರ್ಮಿಷ್ಠಾ ವಾರ್ಷಪರ್ವಣೀ ॥ ೬ ॥

ಕಾವ್ಯಶಾಪಾಚ್ಚಾಕಾಲೇನೈವ ಯಯಾತಿರ್ಜರಾಮವಾಪ ॥ ೭ ॥

ಪ್ರಸನ್ನಶುಕ್ರವಚನಾಚ್ಚ ಸ್ವಜರಾಂ ಸಂಕ್ರಾಮಯಿತುಂ
ಜ್ಯೇಷ್ಠಂಪುತ್ರಂ ಯದುಮುವಾಚ ॥ ೮ ॥

ವತ್ಸ ತ್ವನ್ಮಾತಾಮಹಶಾಪಾದಿಯಮಕಾಲೇನೈವ ಜರಾ
ಮಮೋಪಸ್ಥಿತಾ । ತಾಮಹಂ ತಸ್ಯೈವಾನುಗ್ರಹಾದ್ಭವತಸ್ಸಂ
ಚಾರಯಾಮಿ ॥ ೯ ॥

ಏಕಂ ವರ್ಷಸಹಸ್ರಮತೃಪ್ತೋಽಸ್ಮಿ ವಿಷಯೇಷು ತ್ವದ್ವಯಸಾ
ವಿಷಯಾನಹಂ ಭೋಕ್ತುಮಿಚ್ಛಾಮಿ ॥ ೧೦ ॥

---

ದೇವಯಾನೆಯಲ್ಲಿ ಯದು, ದುರ್ವಸು ಎಂಬಿಬ್ಬರೂ, ವೃಷಪರ್ವನ ಮಗಳಾದ ಶರ್ಮಿಷ್ಠೆಯಲ್ಲಿ ದ್ರುಹ್ಯ, ಅನು, ಪೂರು ಎಂಬ ಮೂವರೂ ಮಕ್ಕಳಾದರು.

೭–೧೨. ವೃಷಪರ್ವನು ತನ್ನ ಮಗಳಾದ ಶರ್ಮಿಷ್ಠೆಯನ್ನು ತನ್ನ ಗುರುವಿನ ಮಗಳೂ ಯಯಾತಿಯ ಪತ್ನಿಯೂ ಆದ ದೇವಯಾನೆಗೆ ದಾಸಿಯಾಗಿ ಕೊಟ್ಟಿದ್ದುದರಿಂದ ಯಯಾತಿಯು ಅವಳಲ್ಲಿ ಮಕ್ಕಳನ್ನು ಪಡೆದನೆಂದು ದೇವಯಾನೆಯು ಶುಕ್ರಾಚಾರ್ಯನಿಗೆ ಹೇಳಿದಳು. ಇದನ್ನು ಕೇಳಿ ಶುಕ್ರನು ಕೋಪದಿಂದ ಯಯಾತಿಗೆ ಅಕಾಲದಲ್ಲಿ ಮುಪ್ಪು ಪ್ರಾಪ್ತವಾಗಲೆಂದು ಶಾಪವನ್ನು ಕೊಟ್ಟನು. ಪುನಃ ಪ್ರಸನ್ನನಾದ ಶುಕ್ರನು ನಿನ್ನ ಮುಪ್ಪನ್ನು ಯಾರಿಗೆ ಕೊಡುವೆಯೋ ಅವನ ಯೌವನವು ನಿನಗೆ ಬರುವುದೆಂದು ಹೇಳಿದನು. ಯಯಾತಿಯು ಹಿರಿಯ ಮಗನಾದ ಯದುವನ್ನು ಕರೆದು "ಎಲೈ ಪ್ರೀತಿಪಾತ್ರನಾದ ಪುತ್ರನೇ! ನಿನ್ನ ಮಾತಾಮಹನಾದ ಶುಕ್ರನ ಶಾಪದಿಂದ ಅಕಾಲದಲ್ಲಿ ಈ ಮುಪ್ಪು ನನಗೆ ಬಂದಿರುವುದು. ನಾನು ಇದನ್ನು ಆ ನಿನ್ನ

ನಾತ್ರ ಭವತಾ ಪ್ರತ್ಯಾಖ್ಯಾನಂ ಕರ್ತವ್ಯಮಿತ್ಯುಕ್ತಸ್ಸ ಯದು
ರ್ನೈಚ್ಛತ್ತಾಂ ಜರಾಮಾದಾತುಂ　　　　॥ ೧೧ ॥

ತಂ ಚ ಪಿತಾ ಶಶಾಪ ತ್ವತ್ಪ್ರಸೂತಿರ್ನ ರಾಜ್ಯಾರ್ಹೋ ಭವಿಷ್ಯತೀತಿ ॥ ೧೨ ॥

ಅನಂತರಂ ಚ ದುರ್ವಸುಂ ದ್ರುಹ್ಯಮನುಂ ಚ
ಪೃಥಿವೀಪತಿರ್ಜರಾಗ್ರಹಣಾರ್ಥಂ ಸ್ವಯೌವನಪ್ರದಾನಾಯ
ಚ ಅಭ್ಯರ್ಥಯಾಮಾಸ　　　　॥ ೧೩ ॥

ತೈರಪ್ಯೇಕೈಕೇನ ಪ್ರತ್ಯಾಖ್ಯಾತಸ್ತಾನ್ ಶಶಾಪ　　　　॥ ೧೪ ॥

ಅಥ ಶರ್ಮಿಷ್ಠಾತನಯಮಶೇಷಕನೀಯಾಂಸಂ
ಪೂರುಂ ತಥೈವಾಹ　　　　॥ ೧೫ ॥

---

ಅಜ್ಜನ ಅನುಗ್ರಹದಿಂದಲೇ ಒಂದು ಸಾವಿರ ವರ್ಷಗಳವರೆಗೆ ನಿನ್ನಲ್ಲಿಟ್ಟಿರುವೆನು. ನಾನು ವಿಷಯಾನುಭವದಲ್ಲಿ ತೃಪ್ತಿಪಡಲಿಲ್ಲ. ನಿನ್ನ ಯೌವನವನ್ನು ಕೊಟ್ಟರೆ ಅದರಿಂದ ನಾನು ವಿಷಯಾನುಭವಗಳನ್ನು ಮಾಡಬೇಕೆಂದು ಬಯಸುತ್ತೇನೆ. ನೀನು ನನ್ನ ಮಾತನ್ನು ತಿರಸ್ಕರಿಸಬಾರದು" ಎಂದು ಹೇಳಲು ಆ ಯದುವು ಮುಪ್ಪನ್ನು ತೆಗೆದುಕೊಳ್ಳಲು ಇಷ್ಟಪಡಲಿಲ್ಲ. ಆಗ ತಂದೆಯು ಅವನಿಗೆ 'ನಿನ್ನ ಮಕ್ಕಳು ರಾಜರಾಗಲು ಯೋಗ್ಯರಲ್ಲದೆ ಹೋಗಲಿ' ಎಂದು ಶಾಪವನ್ನು ಕೊಟ್ಟನು.

೧೩-೧೭. ಆಮೇಲೆ ರಾಜನು ದುರ್ವಸು, ದ್ರುಹ್ಯ, ಅನು ಇವರನ್ನು ಮುಪ್ಪನ್ನು ತೆಗೆದುಕೊಂಡು ಯೌವನವನ್ನು ಕೊಡುವ ವಿಷಯದಲ್ಲಿ ಪ್ರಶ್ನೆ ಮಾಡಿದನು. ಅವರೂ ತಿರಸ್ಕಾರ ಮಾಡಿದುದರಿಂದ ಪ್ರತಿಯೊಬ್ಬರಿಗೂ ಶಾಪವನ್ನು ಕೊಟ್ಟನು ಬಳಿಕ ಶರ್ಮಿಷ್ಠೆಯ ಕಿರಿಯ ಮಗನಾದ ಪೂರುವನ್ನು ಕರೆದು ಕೇಳಿದನು.

ಸ ಚಾಽಪ್ರವಣ ಮತಿಃ ಸ ಬಹುಮಾನಂ ಪಿತರಂ ಪ್ರಣಮ್ಯ
ಮಹಾಪ್ರಸಾದೋಽಯಮಸ್ಮಾಕ ಮಿತ್ಯುದಾರಮಭಿಧಾಯ
ಜರಾಂ ಜಗ್ರಾಹ ॥ ೧೬ ॥

ಸ್ವಕೀಯಂ ಚ ಯೌವನಂ ಸ್ವಪಿತ್ರೇ ದದೌ ॥ ೧೭ ॥

ಸೋಽಪಿ ಪೌರವಂ ಯೌವನಮಾಸಾದ್ಯ ಧರ್ಮಾವಿ
ರೋಧೇನ ಯಥಾಕಾಮಂ ಯಥಾ ಕಾಲೋಪಪನ್ನಂ
ಯಥೋತ್ಸಾಹಂ ವಿಷಯಾಂಶ್ಚಚಾರ ॥ ೧೮ ॥

ಸಮ್ಯಕ್ಚ ಪ್ರಜಾಪಾಲನಮಕರೋತ್ ॥ ೧೯ ॥

ವಿಶ್ವಾಚ್ಯಾ ದೇವಯಾನ್ಯಾ ಚ ಸಹೋಪಭೋಗಂ ಭುಕ್ತ್ವಾ ಕಾಮಾನಾಮಂ
ತಂಪ್ರಾಪ್ಸ್ಯಾಮಿತ್ಯನುದಿನಂ ತನ್ಮನಸ್ಕೋ ಬಭೂವ ॥ ೨೦ ॥

ಅನುದಿನಂ ಚೋಪಭೋಗತಃ ಕಾಮಾನತಿರಮ್ಯಾನ್ ಮೇನೇ ॥ ೨೧ ॥

---

ಬುದ್ಧಿವಂತನಾದ ಅವನು ತಂದೆಗೆ ನಮಸ್ಕರಿಸಿ ಧಾರಾಳವಾಗಿ ಇದು ನನ್ನ ಮೇಲಿನ ಅನುಗ್ರಹವೆಂದು ಹೇಳಿ ತಂದೆಯ ಮುಪ್ಪನ್ನು ತೆಗೆದುಕೊಂಡು ತನ್ನ ಯೌವನವನ್ನು ತಂದೆಗೆ ಕೊಟ್ಟನು.

೧೮–೨೨. ಯಯಾತಿಯು ಪೂರುವಿನ ಯೌವನವನ್ನು ಪಡೆದು ಧರ್ಮಕ್ಕೆ ವಿರೋಧವಿಲ್ಲದಂತೆ ತನ್ನ ಇಷ್ಟದಂತೆ ಕಾಲಕ್ಕೆ ಒದಗಿದ ವಿಷಯ ಸುಖಗಳನ್ನು ಉತ್ಸಾಹದಿಂದ ಅನುಭವಿಸುತಿದ್ದನು. ಮತ್ತು ಚೆನ್ನಾಗಿ ಪ್ರಜೆಗಳನ್ನು ಪಾಲಿಸುತ್ತಿದ್ದನು. ವಿಶ್ವಾಚಿ ಎಂಬ ಅಪ್ಸರ ಸ್ತ್ರೀಯೊಡನೆಯೂ, ದೇವಯಾನೆಯೊಡನೆಯೂ ಕಾಮಭೋಗಗಳನ್ನನುಭವಿಸುತ್ತ ಕಾಮತೃಪ್ತಿಯನ್ನು ಪಡೆಯುವೆನೆಂದು ಪ್ರತಿದಿನವೂ ಅದೇ ಮನಸ್ಸಿನಿಂದ ಕೂಡಿ ಪ್ರತಿದಿನದ ಸುಖಾನುಭವದಿಂದ ಕಾಮೋಪಭೋಗವು ಅತ್ಯಂತ ಮನೋಹರವಾದುದೆಂದು ತಿಳಿದನು.

ತತಶ್ಚೈನಮುಗಾಯತ ॥ ೨೨ ॥

ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ
ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ॥ ೨೩ ॥

ಯತ್ಪೃಥಿವ್ಯಾಂ ವ್ರೀಹಿಯವಂ ಹಿರಣ್ಯಂ ಪಶವಃ ಸ್ತ್ರಿಯಃ ।
ಏಕಸ್ಯಾಪಿ ನ ಪರ್ಯಾಪ್ತಂ ತಸ್ಮಾತ್ತೃಷ್ಣಾಂ ಪರಿತ್ಯಜೇತ್ ॥ ೨೪ ॥

ಯದಾ ನ ಕುರುತೇ ಭಾವಂ ಸರ್ವಭೂತೇಷು ಪಾವಕಂ ।
ಸಮದೃಷ್ಟೇಸ್ತದಾ ಪುಂಸಃ ಸರ್ವಾಸ್ಸುಖಮಯಾ ದಿಶಃ ॥ ೨೫ ॥

ಯಾದುಸ್ತ್ಯಜಾ ದುರ್ಮತಿಭಿರ್ಯಾ ನ ಜೀರ್ಯತಿ ಜೀರ್ಯತಃ
ತಾಂ ತೃಷ್ಣಾಂ ಸಂತ್ಯಜೇತ್ಪ್ರಾಜ್ಞಸ್ಸುಖೇನೈವಾಭಿಪೂರ್ಯತೇ ॥ ೨೬ ॥

---

ಆಮೇಲೆ ಮುಂದಿನ ಅಭಿಪ್ರಾಯಗಳಿಂದ ಕೂಡಿದ ಶ್ಲೋಕಗಳನ್ನು ಗಾನ ಮಾಡು ತ್ತಿದ್ದನು. ಆ ಶ್ಲೋಕಾಭಿಪ್ರಾಯಗಳೇನೆಂದರೆ :—

೨೩-೨೪. ಇಷ್ಟಾರ್ಥಗಳು ಕಾಮೋಪಭೋಗದಿಂದ ಎಂದಿಗೂ ಶಾಂತವಾಗು ವುದಿಲ್ಲ. ಹವಿಸ್ಸನ್ನು ಹಾಕಿದರೆ ಅಗ್ನಿಯು ಹೆಚ್ಚುವಂತೆ ಮತ್ತೆ ಮತ್ತೆ ಹೆಚ್ಚುತ್ತಿರು ವುವು. ಭೂಮಿಯಲ್ಲಿರುವ ಭತ್ತ, ಗೋಧಿ, ಚಿನ್ನ, ಪಶುಗಳು, ಸ್ತ್ರೀಯರು ಇವುಗಳೆ ಷ್ಟಿದ್ದರೂ ಒಬ್ಬನಿಗೇ ಸಾಲದೆ ಹೋಗುವುದು. ಆದುದರಿಂದ ಆಸೆಯನ್ನು ಬಿಡಬೇಕು.

೨೫-೨೬. ಯಾವಾಗ ಸಮಸ್ತ ಪ್ರಾಣಿಗಳಲ್ಲಿಯೂ ರಾಗದ್ವೇಷರೂಪವಾದ ದುಷ್ಟಭಾವಗಳನ್ನು ಮಾಡುವುದಿಲ್ಲವೋ ಆಗ ಸರ್ವಸಮದೃಷ್ಟಿಯುಳ್ಳ ಆ ಮನುಷ್ಯನಿಗೆ ಸಕಲ ದಿಕ್ಕುಗಳೂ ಸುಖಮಯವಾಗಿ ಕಾಣುವುವು. ದುಷ್ಟಬುದ್ಧಿಯುಳ್ಳವರು ಯಾವು ದನ್ನು ಬಿಡಲು ಅಸಾಧ್ಯವೋ ಶರೀರಕ್ಕೆ ಮುಪ್ಪು ಬಂದರೂ ಯಾವುದಕ್ಕೆ ಮುಪ್ಪು ಬರುವುದಿಲ್ಲವೋ ಅಂತಹ ಅತ್ಯಾಸೆಯನ್ನು ಬುದ್ಧಿವಂತನಾದವನು ಬಿಡಬೇಕು. ಆಗ ಅವನು ಸುಖದಿಂದ ಪೂರ್ಣನಾಗುವನು.

ಜೀರ್ಯಂತಿ ಜೀರ್ಯತಃ ಕೇಶಾದಂತಾ ಜೀರ್ಯಂತಿ ಜೀರ್ಯತಃ ।
ಧನಾಶಾ ಜೀವಿತಾಶಾ ಚ ಜೀರ್ಯತೋಽಪಿ ನ ಜೀರ್ಯತಃ ॥೨೭॥

ಪೂರ್ಣಂ ವರ್ಷಸಹಸ್ರಂ ಮೇ ವಿಷಯಾಸಕ್ತಚೇತಸಃ ।
ತಥಾಪ್ಯನುದಿನಂ ತೃಷ್ಣಾ ಮಮ ತೇಷೂಪಜಾಯತೇ ॥ ೨೮ ॥

ತಸ್ಮಾದೇತಾಮಹಂ ತ್ಯಕ್ತ್ವಾ ಬ್ರಹ್ಮಣ್ಯಾಧಾಯ ಮಾನಸಂ
ನಿರ್ದ್ವಂದ್ವೋ ನಿರ್ಮಮೋ ಭೂತ್ವಾ ಚರಿಷ್ಯಾಮಿ ಮೃಗೈಸ್ಸಹ ॥ ೨೯ ॥

॥ ಶ್ರೀ ಪರಾಶರಃ ॥

ಪೂರೋಸ್ಸಕಾಶಾದಾದಾಯ ಜರಾಂ ದತ್ವಾ ಚ ಯೌವನಂ ।
ರಾಜ್ಯೇಽಭಿಷಿಚ್ಯ ಪೂರುಂ ಚ ಪ್ರಯಯೌ ತಪಸೇ ವನಂ ॥ ೩೦ ॥

---

೭೨-೨೯. ಮುಪ್ಪು ಬಂದವನ ಕೂದಲುಗಳು ಉದುರಿಹೋಗುವುವು. ಹಲ್ಲುಗಳು ಬಿದ್ದುಹೋಗುವುವು. ಬದುಕಿರುವ ಆಸೆಯೂ, ಹಣದಾಸೆಯೂ, ಎಷ್ಟು ಮುಪ್ಪಾದರೂ ನಾಶವಾಗುವುದಿಲ್ಲ. ನಾನು ವಿಷಯ ಸುಖಗಳನ್ನನುಭವಿಸುತ್ತ ಸಾವಿರ ವರ್ಷಗಳನ್ನು ಕಳೆದೆನು. ಹಾಗಾದರೂ ಪ್ರತಿದಿನವೂ ಅವುಗಳಲ್ಲಿ ಆಸೆಯು ಹುಟ್ಟುತ್ತಲೇ ಇರುವುದು. ಆದುದರಿಂದ ನಾನು ಈ ಆಸೆಯನ್ನು ಬಿಟ್ಟು ಮನಸ್ಸನ್ನು ಪರಬ್ರಹ್ಮನಲ್ಲಿಟ್ಟು ಸುಖದಿಂದ ದ್ವಂದ್ವಗಳೂ ನನ್ನದೆಂಬ ಅಭಿಮಾನವೂ ಇಲ್ಲದವನಾಗಿ ಕಾಡಿನಲ್ಲಿ ಮೃಗಗಳೊಡನೆ ಸಂಚರಿಸುತ್ತಿರುವೆನು.

೩೦-೩೨. ಯಯಾತಿಯು ಹೀಗೆಂದು ನಿಶ್ಚಯಿಸಿ ಪೂರುವಿನಿಂದ ಮುಪ್ಪನ್ನು ತೆಗೆದುಕೊಂಡು ಯೌವನವನ್ನು ಅವನಿಗೆ ಕೊಟ್ಟು ಅವನಿಗೆ ರಾಜ್ಯಪಟ್ಟಾಭಿಷೇಕವನ್ನು ಮಾಡಿ ತಾನು ತಪಸ್ಸು ಮಾಡುವುದಕ್ಕಾಗಿ ವನಕ್ಕೆ ಪ್ರಯಾಣಮಾಡಿದನು. ತನ್ನ ರಾಜ್ಯದ ಆಗ್ನೇಯದಿಕ್ಕಿಗೆ ದುರ್ವಸುವನ್ನೂ, ಪಶ್ಚಿಮ ದಿಕ್ಕಿಗೆ ದ್ರುಹ್ಯನನ್ನೂ,

ದಿಶಿ ದಕ್ಷಿಣಪೂರ್ವಸ್ಯಾಂ ದುರ್ವಸುಂ ಚ ಸಮಾದಿಶತ್ ।
ಪ್ರತೀಚ್ಯಾಂ ಚ ತಥಾದ್ರುಹ್ಯಂ ದಕ್ಷಿಣಾಯಾಂ ತತೋ ಯದುಂ ॥ ೩೧ ॥

ಉದೀಚ್ಯಾಂ ಚ ತಥೈವಾನುಂ ಕೃತ್ವಾ ಮಂಡಲಿನೋ ನೃಪಾನ್ ।
ಸರ್ವಪೃಥ್ವೀಪತಿಂ ಪೂರುಂ ಸೋಽಭಿಷಿಚ್ಯ ವನಂ ಯಯೌ ॥ ೩೨ ॥

ಇತಿ ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ ದಶಮೋಽಧ್ಯಾಯಃ

---

ದಕ್ಷಿಣದಿಕ್ಕಿಗೆ ಯದುವನ್ನೂ, ಉತ್ತರ ದಿಕ್ಕಿಗೆ ಅನುವನ್ನೂ ಮಂಡಲಿಕ ರಾಜರನ್ನಾಗಿ ಮಾಡಿ ಸಮಸ್ತ ಭೂಮಿಗೂ ಪೂರುವನ್ನೇ ರಾಜನನ್ನಾಗಿ ಮಾಡಿ ಅವನಿಗೆ ಪಟ್ಟಾಭಿಷೇಕವನ್ನು ಮಾಡಿ ತಾನು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ಕಾಡಿಗೆ ಹೋದನು.

ಎಂಬಲ್ಲಿಗೆ ಶ್ರೀ ವಿಷ್ಣುಪುರಾಣದ ಚತುರ್ಥಾಂಶದಲ್ಲಿ

ಹತ್ತನೆಯ ಅಧ್ಯಾಯವು ಮುಗಿದುದು.

---

॥ ಶ್ರೀ ॥

# ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ

## ಏಕಾದಶೋಽಧ್ಯಾಯಃ

---

॥ ಶ್ರೀ ಪರಾಶರಃ ॥

**ಅತಃ ಪರಂ ಯಯಾತೇಃ ಪ್ರಥಮಪುತ್ರಸ್ಯ**
**ಯದೋರ್ವಂಶಮಹಂ ಕಥಯಾಮಿ ॥ ೧ ॥**

**ಯತ್ರಾಶೇಷಲೋಕನಿವಾಸೋ ಮನುಷ್ಯಸಿದ್ಧಗಂಧರ್ವ**
**ಯಕ್ಷರಾಕ್ಷಸಗುಹ್ಯಕ ಕಿಂಪುರುಷಾಪ್ಸರೋರಗ**
**ವಿಹಗದೈತ್ಯದಾನವಾದಿತ್ಯರುದ್ರವಸ್ವಶ್ವಿಮರುದ್ದೇವ**
**ರ್ಷಿಭಿರ್ಮುಮುಕ್ಷುಭಿರ್ಧರ್ಮಾರ್ಥಕಾಮಮೋಕ್ಷಾರ್ಥಿಭಿಶ್ಚ**

---

### ಹನ್ನೊಂದನೆಯ ಅಧ್ಯಾಯವು.

೧–೨. ಸಮಸ್ತ ಲೋಕಗಳಿಗೂ ಆಶ್ರಯನೂ ಮನುಷ್ಯರು, ಸಿದ್ಧರು, ಗಂಧರ್ವರು, ಯಕ್ಷರು, ರಾಕ್ಷಸರು, ಗುಹ್ಯಕರು, ಕಿಂಪುರುಷರು, ಅಪ್ಸರರು, ಉರಗರು, ಪಕ್ಷಿಗಳು, ದೈತ್ಯದಾನವರು, ದ್ವಾದಶಾದಿತ್ಯರು, ಏಕಾದಶರುದ್ರರು, ಅಷ್ಟವಸುಗಳು, ಅಶ್ವಿನೀದೇವತೆಗಳು, ಸಪ್ತಮರುತ್ತುಗಳು, ದೇವತೆಗಳು, ಋಷಿಗಳು, ಮುಮುಕ್ಷುಗಳು ಚತುರ್ವಿಧ ಪುರುಷಾರ್ಥಗಳಲ್ಲಿ ಅಪೇಕ್ಷೆಯುಳ್ಳವರು ಇವರುಗಳಿಂದ ಅವರವರಿಗೆ ಇಷ್ಟವಾದ ಫಲಪ್ರಾಪ್ತಿಗಾಗಿ ಸ್ತೋತ್ರಮಾಡಿಸಿಕೊಳ್ಳುತ್ತಿರುವ ಆದ್ಯಂತಗಳಿಲ್ಲದ ಮಹಾ

ತತ್ತತ್ಫಲಲಾಭಾಯ ಸದಾಭಿಷ್ಟುತೋಽಪರಿಚ್ಛೇದ್ಯ
ಮಾಹಾತ್ಮ್ಯಾಂಶೇನ ಭಗವಾನನಾದಿ ನಿಧನೋ ವಿಷ್ಣುವರತತಾರ ॥ ೨ ॥

ಅತ್ರ ಶ್ಲೋಕಃ ॥ ೩ ॥

ಯದೋರ್ವಂಶಂ ನರಶ್ಶ್ರುತ್ವಾ ಸರ್ವಪಾಪೈಃ ಪ್ರಮುಚ್ಯತೇ ।
ಯತ್ರಾವತೀರ್ಣಂ ಕೃಷ್ಣಾಖ್ಯಂ ಪರಂ ಬ್ರಹ್ಮ ನರಾಕೃತಿ ॥ ೪ ॥

ಸಹಸ್ರಜಿತ್ಕ್ರೋಷ್ಟು ನಳನಹುಷಸಂಜ್ಞಾಶ್ಚತ್ವಾರೋ ಯದು
ಪುತ್ರಾ ಬಭೂವುಃ ॥ ೫ ॥

ಸಹಸ್ರಜಿತ್ಪುತ್ರಶ್ಶತಜಿತ್ ॥ ೬ ॥

ತಸ್ಯ ಹೈಹಯ ಹೇಹಯ ವೇಣುಹಯಾಸ್ತ್ರಯಃ ಪುತ್ರಾ ಬಭೂವುಃ ॥ ೭ ॥

ಹೈಹಯಪುತ್ರೋ ಧರ್ಮಸ್ತಸ್ಯಾಪಿ ಧರ್ಮನೇತ್ರಃ ತತಃ
ಕುಂತಿಃ ಕುಂತೇಸ್ಸಹಜಿತ್ ॥ ೮ ॥

---

ಮಹಿಮನಾದ ವಿಷ್ಣುವು ಅಳತೆಗೆ ಸಿಕ್ಕದ ತನ್ನ ಮಹಿಮೆಯ ಒಂದಂಶದಿಂದ ಯಾವ ವಂಶದಲ್ಲಿ ಅವತಾರ ಮಾಡಿದನೋ ಆ ಯಯಾತಿಯ ಮೊದಲನೆಯ ಮಗನಾದ ಯದುವಂಶವನ್ನು ಇಲ್ಲಿಂದ ಮುಂದೆ ಹೇಳುವೆನು.

೩-೪. ಯಾವ ವಂಶದಲ್ಲಿ ಪರಬ್ರಹ್ಮನಾದ ವಿಷ್ಣುವು ಕೃಷ್ಣನೆಂಬ ಹೆಸರಿನಿಂದ ಮನುಷ್ಯನಾಗಿ ಅವತಾರ ಮಾಡಿದನೋ ಆ ಯದುವಂಶದ ವಿಸ್ತಾರವನ್ನು ಕೇಳಿದ ಮನುಷ್ಯನು ತನ್ನ ಸಮಸ್ತ ಪಾಪಗಳನ್ನೂ ಕಳೆದುಕೊಳ್ಳುವನು.

೫–೯. ಯದುವಿಗೆ ಸಹಸ್ರಜಿತ್, ಕ್ರೋಷ್ಟು, ನಳ, ನಹುಷ ಎಂಬ ನಾಲ್ವರು ಮಕ್ಕಳು ಇದ್ದರು. ಸಹಸ್ರಜಿತ್ತಿಗೆ ಶತಜಿತ್ತೆಂಬ ಮಗನಿದ್ದನು. ಅವನಿಗೆ ಹೈಹಯ, ಹೇಹಯ, ವೇಣುಹಯ ಎಂಬ ಮೂವರು ಮಕ್ಕಳಿದ್ದರು. ಹೈಹಯನಿಗೆ ಧರ್ಮನೂ,

ತತ್ರನಗರೋ ಮಹಿಷ್ಮಾನ್ ಯೋऽಸೌ ಮಾಹೀಷ್ಮತೀಂ
ಪುರೀಂ ನಿರ್ಮಾಪಯಾಮಾಸ ॥ ೯ ॥

ತಸ್ಮಾದ್ಭದ್ರಶ್ರೇಣ್ಯಸ್ತತೋ ದುರ್ದಮಸ್ತಸ್ಮಾದ್ಧನಕಃ ಧನ
ಕಸ್ಯ ಕೃತವೀರ್ಯ ಕೃತಾಗ್ನಿ ಕೃತಧರ್ಮ ಕೃತೌಜಸಶ್ಚತ್ವಾರಃ
ಪುತ್ರಾ ಬಭೂವುಃ ॥ ೧೦ ॥

ಕೃತವೀರ್ಯಾದರ್ಜುನಸ್ಸಪ್ತದ್ವೀಪಾಧಿಪತಿರ್ಬಾಹುಸಹಸ್ರೋ ಜಜ್ಞೇ
ಯೋऽಸೌ ಭಗವದಂಶಮತ್ರಿಕುಲಪ್ರಸೂತಂ ದತ್ತಾತ್ರೇಯಾಖ್ಯ
ಮಾರಾಧ್ಯ ಬಾಹುಸಹಸ್ರಮಧರ್ಮಸೇವಾನಿವಾರಣಂ ಸ್ವಧರ್ಮ
ಸೇವಿತ್ವಂ ರಣೇ ಪೃಥಿವೀಜಯಂ ಧರ್ಮತಶ್ಚಾನುಪಾಲನಮರಾತಿ
ಭ್ಯೋऽಪರಾಜಯಮಖಿಲಜಗತ್ಪ್ರಖ್ಯಾತಪುರುಷಾಚ್ಚ ಮೃತ್ಯುಮಿತ್ಯೇ
ತಾನ್ ವರಾನಭಿಲಷಿತವಾನ್ ಲೇಭೇ ಚ ॥ ೧೧ ॥

---

ದರ್ಮನಿಗೆ ಧರ್ಮನೇತ್ರನೂ, ಧರ್ಮನೇತ್ರನಿಗೆ ಕುಂತಿಯೂ, ಕುಂತಿಗೆ ಸಹಜಿತುವೂ, ಸಹಜಿತ್ತಿಗೆ ಮಹಿಷ್ಮಂತನೂ, ಮಕ್ಕಳಾದರು. ಮಹಿಷ್ಮಂತನು ಮಾಹಿಷ್ಮತಿಯೆಂಬ ಪಟ್ಟಣವನ್ನು ಕಟ್ಟಿಸಿದನು.

೧೦-೧೧. ಮಹಿಷ್ಮಂತನಿಗೆ ಭದ್ರಶ್ರೇಣ್ಯನೂ, ಅವನಿಗೆ ದುರ್ದಮನೂ, ದುರ್ದಮನಿಗೆ ಧನಕನೂ, ಧನಕನಿಗೆ ಕೃತವೀರ್ಯ, ಕೃತಾಗ್ನಿ, ಕೃತಧರ್ಮ, ಕೃತೌಜ ಎಂಬ ನಾಲ್ವರು ಮಕ್ಕಳೂ ಇದ್ದರು. ಕೃತವೀರ್ಯನಿಗೆ ಅರ್ಜುನನೆಂಬ ಸಾವಿರ ತೋಳುಗಳುಳ್ಳ ಮಗನು ಹುಟ್ಟಿ ಅವನು ಸಪ್ತದ್ವೀಪಗಳಿಗೂ ಅಧಿಪತಿಯಾದನು. ಈ ಕಾರ್ತವೀರ್ಯಾರ್ಜುನನು ಭಗವಂತನ ಅಂಶಸಂಭೂತನೂ, ಅತ್ರಿಮುನಿಯ ಪುತ್ರನೂ ಆದ ದತ್ತಾತ್ರೇಯನನ್ನು ಪೂಜಿಸಿ ಸಾವಿರ ತೋಳುಗಳನ್ನೂ, ಅಧರ್ಮ ತ್ಯಾಗವನ್ನೂ ಧರ್ಮಮಾರ್ಗ ಸೇವನೆಯನ್ನೂ ಯುದ್ಧದಲ್ಲಿ ಭೂಮಿಯನ್ನು ಜಯಿಸಿ ಅದನ್ನು ಧರ್ಮದಿಂದ ಪಾಲಿಸುವುದನ್ನೂ, ಶತ್ರುಗಳಿಗೆ ಸೋಲದಶಕ್ತಿಯನ್ನೂ ಸಮಸ್ತ ಜಗತ್ಪ್ರಸಿದ್ಧನಾದ ಪುರುಷನಿಂದ ಮರಣವನ್ನೂ ವರವಾಗಿ ಕೇಳಿಕೊಂಡು ಆ ವರಗಳನ್ನು ಪಡೆದನು.

ತೇನೇಯಮಶೇಷದ್ವೀಪವತೀ ಪೃಥಿವೀ ಸಮ್ಯಕ್ಪರಿಪಾಲಿತಾ ॥ ೧೩ ॥

ದಶಯಜ್ಞ ಸಹಸ್ರಾಣ್ಯಸಾವಯಜತ್ ॥ ೧೪ ॥

ತಸ್ಯ ಚ ಶ್ಲೋಕೋಽದ್ಯಾಪಿ ಗೀಯತೇ ॥ ೧೫ ॥

ನನೂನಂ ಕಾರ್ತವೀರ್ಯಸ್ಯ ಗತಿಂ ಯಾಸ್ಯಂತಿ ಪಾರ್ಥಿವಾಃ ।
ಯಜ್ಞೈರ್ದಾನೈಸ್ತಪೋಭಿರ್ವಾ ಪ್ರಶ್ರಯೇಣ ಶ್ರುತೇನ [redacted] ॥ ೧೬ ॥

ಅನಷ್ಟದ್ರವ್ಯತಾ [redacted] ತಸ್ಯ ರಾಜ್ಯೇಽಭವತ್ ॥ ೧೭ ॥

ಏವಂ ಚ ಪಂಚಾಶೀತಿವರ್ಷಸಹಸ್ರಾಣ್ಯವ್ಯಾಹತಾರೋಗ್ಯಶ್ರೀ
ಬಲಪರಾಕ್ರಮೋ ರಾಜ್ಯಮಕರೋತ್ ॥ ೧೮ ॥

ಮಾಹಿಷ್ಮತ್ಯಾಂ ದಿಗ್ವಿಜಯಾಭ್ಯಾಗತೋ ನರ್ಮದಾಜಲಾವಗಾಹನ
ಕ್ರೀಡಾತಿಪಾನಮದಾಕುಲೇನಾಯತ್ನೇನೈವ ತೇನಾಶೇಷದೇವ

---

೧೩–೧೮. ಆ ಕಾರ್ತವೀರ್ಯಾರ್ಜುನನು ಸಮಸ್ತ ದ್ವೀಪಗಳಿಂದ ಕೂಡಿದ ಈ ಭೂಮಂಡಲವನ್ನು ಚೆನ್ನಾಗಿ ಕಾಪಾಡಿದನು. ಹತ್ತುಸಾವಿರ ಯಜ್ಞಗಳನ್ನು ಮಾಡಿದನು. ಅವನ ವಿಷಯದಲ್ಲಿ ಯಜ್ಞ, ದಾನ, ತಪಸ್ಸು, ವಿನಯ, ಶಾಸ್ತ್ರ, ಜ್ಞಾನ ಇವುಗಳಲ್ಲಿ ಕಾರ್ತವೀರ್ಯನಿಗೆ ಸಮಾನರಾದ ರಾಜರು ಖಂಡಿತವಾಗಿಯೂ ಇಲ್ಲ ಎಂಬ ಅಭಿಪ್ರಾಯವುಳ್ಳ ಶ್ಲೋಕವನ್ನು ಈಗಲೂ ಗಾನಮಾಡುತ್ತಿರುವರು ಅವನ ರಾಜ್ಯದಲ್ಲಿ ಯಾರಿಗೂ ದ್ರವ್ಯನಷ್ಟವಾಗುತ್ತಿರಲಿಲ್ಲ ಹೀಗೆ ಅವನು ಎಂಭತ್ತೈದ ಸಾವಿರ ವರ್ಷಗಳವರೆಗೆ ತಡೆಯಿಲ್ಲದ ಆರೋಗ್ಯ, ಸಂಪತ್ತು ಬಲ ಪರಾಕ್ರಮಗಳುಳ್ಳವನಾಗಿ ರಾಜ್ಯಭಾರ ಮಾಡಿದನು.

೧೯–೨೯. ದೇವತೆಗಳನ್ನೂ, ದೈತ್ಯರನ್ನೂ, ಗಂಧರ್ವರನ್ನೂ ಜಯಿಸಿದ ಮದದಿಂದುಂಟಾದ ಗರ್ವದಿಂದ ದಿಗ್ವಿಜಯಕ್ಕಾಗಿ ಮಾಹಿಷ್ಮತೀ ನಗರಕ್ಕೆ ಬಂದ ರಾವಣನನ್ನು ನರ್ಮದಾನದಿಯಲ್ಲಿ ಜಲಕ್ರೀಡೆಯನ್ನು ಮಾಡುತ್ತಿದ್ದ ಕಾರ್ತವೀರ್ಯಾ

ಪೈತ್ಯಗಂಧರ್ವೇಶಜಯೋದ್ಧೂತಮದಾವಲೇಪೋಽಪಿ ರಾವಣಃ
ಪಶುರಿವ ಬಧ್ವಾ ಸ್ವನಗರೈಕಾಂತೇ ಸ್ಥಾಪಿತಃ ॥ ೧೯ ॥

ಯಶ್ಚ ಪಂಚಾಶೀತಿವರ್ಷ ಸಹಸ್ರೋಪಲಕ್ಷಣಕಾಲಾವಸಾನೇ
ಭಗವನ್ನಾರಾಯಣಾಂಶೇನ ಪರಶುರಾಮೇಣೋಪಸಂಹೃತಃ ॥ ೨೦ ॥

ತಸ್ಯ ಚ ಪುತ್ರಶತಪ್ರಧಾನಾಃ ಪಂಚಪುತ್ರಾ ಬಭೂವುಃ
ಶೂರಶೂರಸೇನವೃಷಸೇನಮಧುಜಯಧ್ವಜಸಂಜ್ಞಾಃ ॥ ೨೧ ॥

ಜಯಧ್ವಜಾತ್ತಾಳಜಂಘಃ ಪುತ್ರೋಽಭವತ್ ॥ ೨೨ ॥

ತಾಳಜಂಘಸ್ಯ ತಾಳಜಂಘಾಖ್ಯಂ ಪುತ್ರಶತಮಾಸೀತ್ ॥ ೨೩ ॥

ಏಷಾಂ ಜ್ಯೇಷ್ಠೋ ವೀತಿಹೋತ್ರಃ ತಥಾನ್ಯೋ ಭರತಃ ॥ ೨೪ ॥

ಭರತಾದ್ವೃಷಃ ॥ ೨೫ ॥

ವೃಷಸ್ಯ ಪುತ್ರೋ ಮಧುರಭವತ್ ॥ ೨೬ ॥

---

ರ್ಜುನನು ಸ್ವಲ್ಪವೂ ಪ್ರಯತ್ನವಿಲ್ಲದೆ ಪಶುವಿನಂತೆ ಹಿಡಿದುಕಟ್ಟಿ ತನ್ನ ಪಟ್ಟಣದಲ್ಲಿ ಯಾರಿಗೂ ಗೋಚರವಾಗದಂತೆ ಇಟ್ಟಿದ್ದನು. ಎಂಭತ್ತೈದು ಸಾವಿರ ವರ್ಷ ರಾಜ್ಯ ಭಾರ ಮಾಡಿದಮೇಲೆ ನಾರಾಯಣಾಂಶದಿಂದ ಅವತಾರಮಾಡಿದ ಪರಶುರಾಮನು ಆ ಕಾರ್ತವೀರ್ಯಾರ್ಜುನನ್ನು ಸಂಹರಿಸಿದನು.

೨೧–೩೦. ಆ ಕಾರ್ತವೀರ್ಯಾರ್ಜುನನಿಗೆ ಹುಟ್ಟಿದ ನೂರು ಜನ ಮಕ್ಕಳಲ್ಲಿ ಶೂರ, ಶೂರಸೇನ, ವೃಷಸೇನ, ಮಧು, ಜಯಧ್ವಜ, ಎಂಬಿವರೇ ಮುಖ್ಯರಾದವರು. ಜಯಧ್ವಜನಿಗೆ ತಾಳಜಂಘನು ಮಗನು. ಇವನಿಗೆ ತಾಳಜಂಘರೆಂಬ ನೂರು ಜನ ಮಕ್ಕಳು. ಅವರಲ್ಲಿ ಹಿರಿಯುವನು ವೀತಿಹೋತ್ರನು. ಮತ್ತೊಬ್ಬನು ಭರತನು.

ತಸ್ಯಾಪಿ ವೃಷ್ಣಿಪ್ರಮುಖಂ ಪುತ್ರಶತಮಾಸೀತ್ ॥ ೨೭ ॥

ಯತೋ ವೃಷ್ಣಿಸಂಜ್ಞಾಮೇತದ್ಗೋತ್ರಮವಾಪ ॥ ೨೮ ॥

ಮಧುಸಂಜ್ಞಾ ಹೇತುಶ್ಚ ಮಧುರಭವತ್ ॥ ೨೯ ॥

ಯಾದವಾಶ್ಚ ಯದುನಾಮೋಪಲಕ್ಷಣಾದಿತಿ ॥ ೩೦ ॥

ಇತಿ ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ ಏಕಾದಶೋಽಧ್ಯಾಯಃ

---

ಭರತನಿಗೆ ವೃಷನೂ, ವೃಷನಿಗೆಮಧುವೂ ಮಕ್ಕಳು. ಮಧುವಿಗೆ ವೃಷ್ಣಿಯೇ ಮುಂತಾದ ನೂರು ಜನ ಮಕ್ಕಳಾದರು ವೃಷ್ಣಿಯ ವಂಶದವರೇ ವೃಷ್ಣಿಗಳು. ಮಧುವಿನ ವಂಶದವರು ಮಧುಗಳು. ಯದುವಿನ ವಂಶದವರು ಯಾದವರು ಎನಿಸಿಕೊಂಡರು.

ಎಂಬಲ್ಲಿಗೆ ಶ್ರೀ ವಿಷ್ಣುಪುರಾಣದ ಚತುರ್ಥಾಂಶದಲ್ಲಿ

ಹನ್ನೊಂದನೆಯ ಅಧ್ಯಾಯವು ಮುಗಿದುದು.

ಶ್ರೀ

# ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ

## ದ್ವಾದಶೋಽಧ್ಯಾಯಃ

॥ ಶ್ರೀ ಪರಾಶರಃ ॥

ಕ್ರೋಷ್ಟೋಸ್ತು ಯದುಪುತ್ರಸ್ಯಾತ್ಮಜೋಧ್ವಜಿನೀವಾನ್ ॥ ೧ ॥

ತತಶ್ಚ ಸ್ವಾತಿಃ ತತೋರುಶಂಕುಃ ರುಶಂಕೋಶ್ಚಿತ್ರರಥಃ ॥ ೨ ॥

ತತ್ತನಯಶ್ಶಶಿಬಿಂದುಃ ಚತುರ್ದಶಮಹಾರತ್ನೇಶಶ್ಚಕ್ರ
ವರ್ತ್ಯಭವತ್ ॥ ೩ ॥

---

### ಹನ್ನೆರಡನೆಯ ಅಧ್ಯಾಯವು

೧–೩. ಯದುವಿನ ಎರಡನೆಯ ಮಗನಾದ ಕ್ರೋಷ್ಟುವಿಗೆ ಧ್ವಜನೀವಂತನೆಂಬ ಮಗನಿದ್ದನು. ಅವನಿಗೆ ಸ್ವಾತಿಯೂ, ಸ್ವಾತಿಗೆ ರುಶಂಕುವೂ ರುಶಂಕುವಿಗೆ ಚಿತ್ರರಥನೂ, ಚಿತ್ರ ರಥನಿಗೆ ಶಶಿಬಿಂದುವೂ ಮಕ್ಕಳಾದರು. ಶಶಿಬಿಂದುವು ಚತುರ್ದಶ ಮಹಾರತ್ನ ಗಳುಳ್ಳವನಾಗಿ ಚಕ್ರವರ್ತಿಯಾಗಿದ್ದನು. (ಚತುರ್ದಶ ರತ್ನಗಳು:— ಚಕ್ರ, ರಥ, ಮಣಿ, ಖಡ್ಗ, ಚರ್ಮ (ಗುರಾಣಿ) ಧ್ವಜ, ನಿಧಿ ಈ ಏಳು ಪ್ರಾಣವಿಲ್ಲದುವು. ಪತ್ನಿ, ಪುರೋಹಿತ, ಸೇನಾಪತಿ, ಸಾರಥಿ, ಕಾಲಾಳು, ಕುದುರೆ, ಆನೆ ಇವುಗಳು ಪ್ರಾಣಸಹಿತ ವಾದುವು. ಈ ಹದಿನಾಲ್ಕು ರತ್ನಗಳು ಚಕ್ರವರ್ತಿಗೆ ಇರಬೇಕಾದುವು)

ತಸ್ಯ ಚ ಶತಸಹಸ್ರಂ ಪತ್ನೀನಾಮಭವತ್ ॥ ೪ ॥

ದಶಲಕ್ಷಸಂಖ್ಯಾಶ್ಚ ಪುತ್ರಾಃ ॥ ೫ ॥

ತೇಷಾಂ [redacted] ಪೃಥುಶ್ರವಾಃ ಪೃಥುಕರ್ಮಾ ಪೃಥುಕೀರ್ತಿಃ ಪೃಥು ಯಶಾಃ
ಪೃಥು ಜಯಃ ಪೃಥು ದಾನಃ ಷಟ್ಪುತ್ರಾಃ ಪ್ರಧಾನಾಃ ॥ ೬ ॥

ಪೃಥುಶ್ರವಸಶ್ಚ ಪುತ್ರಃ ಪೃಥುತಮಃ ॥ ೭ ॥

ತಸ್ಮಾದುಶನಾಃ ಯೋ ವಾಜಿಮೇಧಾನಾಂ ಶತಮಾಜಹಾರ ॥ ೮ ॥

ತಸ್ಯ ಚ ಶಿತಪುರ್ನಾಮಪುತ್ರೋಽಭವತ್ ॥ ೯ ॥

ತಸ್ಯಾಪಿ ರುಕ್ಮಕವಚಃ ತತಃ ಪರಾವೃತ್ ॥ ೧೦ ॥

ತಸ್ಯ ಚ ಪರಾವೃತೋ ರುಕ್ಮೇಷು ಪೃಥುರುಕ್ಮ ಜ್ಯಾಮಘ ಪಲಿತ
ಹರಿತಸಂಜ್ಞಾಸ್ತಸ್ಯ ಪಂಚಾತ್ಮಜಾ ಬಭೂವುಃ ॥ ೧೧ ॥

---

೪-೧೨. ಆ ಶಶಿಬಿಂದುವಿಗೆ ಒಂದು ಲಕ್ಷ ಪತ್ನಿಯರೂ, ಹತ್ತು ಲಕ್ಷಮಂದಿ ಪುತ್ರರೂ ಇದ್ದರು. ಇವರಲ್ಲಿ ಪೃಥುಶ್ರವ, ಪೃಥುಕೀರ್ತಿ, ಪೃಥುಕರ್ಮ, ಪೃಥುಯಶ, ಪೃಥುಜಯ, ಪೃಥುದಾನ ಎಂಬ ಆರುಜನ ಮಕ್ಕಳು ಮುಖ್ಯರಾದವರು. ಪೃಥುಶ್ರವನಿಗೆ ಪೃಥುತಮನೂ, ಅವನಿಗೆ ಉಶನನೂ ಮಕ್ಕಳು. ಉಶನನು ನೂರು ಅಶ್ವಮೇಧಯಾಗ ಗಳನ್ನು ಮಾಡಿದನು. ಅವನಿಗೆ ಶಿತಪುವೂ, ಶಿತಪುವಿಗೆ ರುಕ್ಮಕವಚನೂ, ಅವನಿಗೆ ಪರಾವೃತನೂ, ಪರಾವೃತನಿಗೆ ರುಕ್ಮೇಷು, ಪೃಥುರುಕ್ಮ, ಜ್ಯಾಮಘ, ಪಲಿತ, ಹರಿತ ಎಂಬ ಐದು ಜನ ಮಕ್ಕಳಿದ್ದರು. ಇವರಲ್ಲಿ ಜ್ಯಾಮಘನೆಂಬವನ ಕೀರ್ತಿಯು ಈಗಲೂ ಪ್ರಸಿದ್ಧವಾಗಿರುವುದು.

ತಸ್ಯಾಯಮನುದ್ಯಾಪಿ ಜ್ಯಾಮಘಸ್ಯ ಶ್ಲೋಕೋ ಗೀಯತೇ ॥ ೧೨ ॥

ಭಾರ್ಯಾವಶ್ಯಾಸ್ತು ಯೇ ಕೇಚಿದ್ಭವಿಷ್ಯಂತ್ಯಥವಾ ಮೃತಾಃ ।
ತೇಷಾಂ ತು ಜ್ಯಾಮಘಶ್ಶ್ರೇಷ್ಠಶ್ಶೈಬ್ಯಾಪತಿರಭೂನ್ನೃಪಃ ॥ ೧೩ ॥

ಅಪುತ್ರಾ ತಸ್ಯ ಸಾಪತ್ನೀ ಶೈಬ್ಯಾ ನಾಮ ತಥಾಪ್ಯಸೌ ।
ಅಪತ್ಯಕಾಮೋಽಪಿ ಭಯಾನ್ನಾನ್ಯಾಂ ಭಾರ್ಯಾಮವಿಂದತ ॥ ೧೪ ॥

ಸ ತ್ವೇಕದಾ ಪ್ರಭೂತರಥತುರಗಗಜಸಮ್ಮರ್ದಾತಿದಾರುಣೇ
ಮಹಾಹವೇ ಯುಧ್ಯಮಾನಃ ಸಕಲಮೇವಾರಿಚಕ್ರಮಜಯತ್ ॥ ೧೫ ॥

ತಚ್ಚಾರಿಚಕ್ರಮಪಾಸ್ತಪುತ್ರಕಳತ್ರಬಂಧುಬಲಕೋಶಂ
ಸ್ವಮಧಿಷ್ಠಾನಂ ಪರಿತ್ಯಜ್ಯ ದಿಶಃ ಪ್ರತಿವಿದ್ರುತಂ ॥ ೧೬ ॥

---

೧೩-೧೫. ಪತ್ನಿಯ ವಶರಾದವರಲ್ಲಿ ಯಾರು ಇರುವರೋ ಅಥವಾ ಮರಣ ಹೊಂದಿದರೋ ಅವರಲ್ಲೆಲ್ಲ ಜ್ಯಾಮಘನೆಂಬ ರಾಜನೇ ಶ್ರೇಷ್ಠನು. ಇವನು ಶೈಬ್ಯೆಯ ಗಂಡನು. ಆ ರಾಜನ ಪತ್ನಿಯಾದ ಶೈಬ್ಯೆಗೆ ಮಕ್ಕಳಿರಲಿಲ್ಲ. ರಾಜನು ಮಕ್ಕಳಾಗ ಬೇಕೆಂದು ಇಷ್ಟಪಡುತ್ತಿದ್ದರೂ ಹೆಂಡತಿಯ ಭಯದಿಂದ ಬೇರೆ ಮದುವೆಯನ್ನು ಮಾಡಿಕೊಳ್ಳಲಿಲ್ಲ. ಆ ರಾಜನು ಒಂದಾನೊಂದು ಸಮಯದಲ್ಲಿ ಅನೇಕ ಆನೆ, ಕುದುರೆ, ರಥಗಳಿಂದ ಕೂಡಿದ ಭಯಂಕರವಾದ ಯುದ್ಧರಂಗದಲ್ಲಿ ಯುದ್ಧಮಾಡುತ್ತ ಸಮಸ್ತ ಶತ್ರುಗಳ ಸಮೂಹವನ್ನೂ ಜಯಿಸಿದನು.

೧೬–೧೮. ಆ ಶತ್ರುಗಳು ತಮ್ಮ ಹೆಂಡತಿ, ಮಕ್ಕಳು, ಬಂಧುಗಳು, ಸೇನೆ, ಬಂಡಾರ, ಇವುಗಳನ್ನೆಲ್ಲ ಬಿಟ್ಟು ತಮ್ಮ ಆಶ್ರಯಸ್ಥಾನವನ್ನು ತೊರೆದು ದಿಕ್ಕು ದಿಕ್ಕಿಗೆ ಓಡಿಹೋದರು. ಅವರೆಲ್ಲ ಓಡಿಹೋದ ಮೇಲೆ ಅತ್ಯಂತ ಭಯದಿಂದ

ತಸ್ಮಿಂಶ್ಚ ವಿದ್ರುತೇತಿ ತ್ರಾಸಲೋಲಾಯಿತಲೋಚನಯುಗಳಂ
ತ್ರಾಹಿ ಮಾಂ ತಾತಾಂಬ ಭ್ರಾತರಿತ್ಯಾಕುಲವಿಲಾಪ
ವಿಧುರಂ ರಾಜಕನ್ಯಾರತ್ನಮದ್ರಾಕ್ಷೀತ್ ॥ ೧೭ ॥

ತದ್ದರ್ಶನಾಚ್ಚ ತಸ್ಯಾಮನುರಾಗಾನುಗತಾಂತರಾತ್ಮಾ ಸ
ನೃಪೋಽಚಿಂತಯತ್ ॥ ೧೮ ॥

ಸಾಧ್ವಿದಂ ಮಮಾಪತ್ಯರಹಿತಸ್ಯ ವಂಧ್ಯಾಭರ್ತುಸ್ಸಾಂಪ್ರತಂ
ವಿಧಿನಾಪತ್ಯ ಕಾರಣಂ ಕನ್ಯಾರತ್ನಮುಪಪಾದಿತಂ ॥ ೧೯ ॥

ತದೇತತ್ಸಮುದ್ವಹಾಮೀತಿ ॥ ೨೦ ॥

ಅಥ ವೈನಾಂ ಸ್ಯಂದನಮಾರೋಪ್ಯ ಸ್ವಮಧಿಷ್ಠಾನಂ ನ ಯಾಮಿ ॥ ೨೧ ॥

ತಯೈವ ದೇವ್ಯಾ ಶೈಬ್ಯಯಾಹಮನುಜ್ಞಾತಸ್ಸಮುದ್ವಹಾಮೀತಿ ॥ ೨೨ ॥

ಅಥೈನಾಂ ರಥಮಾರೋಪ್ಯ ಸ್ವನಗರಮುಗಚ್ಛತ್ ॥ ೨೩ ॥

---

ಚಲಿಸುತ್ತಿರುವ ವಿಶಾಲವಾದ ಕಣ್ಣುಗಳುಳ್ಳವಳಾಗಿ "ಅಪ್ಪಾ! ಅಮ್ಮಾ! ಅಣ್ಣಾ! ನನ್ನನ್ನು ಕಾಪಾಡಿ" ಎಂದು ದುಃಖದಿಂದ ಕೂಗಿಕೊಳ್ಳುತ್ತಿದ್ದ ರಾಜಪುತ್ರಿಯನ್ನು ಅವನು ನೋಡಿದನು. ಆ ಕನ್ಯಾರತ್ನವನ್ನು ನೋಡಿದುದರಿಂದ ರಾಜನು ಅವಳಲ್ಲಿ ಪ್ರೀತಿಯುಳ್ಳವನಾಗಿ ತನ್ನ ಮನಸ್ಸಿನಲ್ಲಿ ಆಲೋಚಿಸಿದನು. ಎಂತೆಂದರೆ:—

೧೯-೨೩ "ಒಳ್ಳೆಯದಾಯಿತು. ಮಕ್ಕಳಿಲ್ಲದ ಬಂಜೆಯ ಗಂಡನಾದ ನನಗೆ ನನ್ನ ಅದೃಷ್ಟದಿಂದ ಮಕ್ಕಳಿಗೆ ಕಾರಣವಾದ ಕನ್ಯಾರತ್ನವು ದೊರಕಿರುವುದು. ಇವಳನ್ನು ವಿವಾಹ ಮಾಡಿಕೊಳ್ಳುವೆನು" ಎಂದು ಅವಳನ್ನು ರಥದಲ್ಲಿ ಕುಳ್ಳಿರಿಸಿ ಕೊಂಡು ತನ್ನ ಪಟ್ಟಣಕ್ಕೆ ಹೋದನು.

ವಿಜಯಿನಂ ಚ ರಾಜಾನಂ ಅಶೇಷಪೌರಭೃತ್ಯಪರಿಜನಾಮಾತ್ಯಸಮೇತಾ
ಶೈಬ್ಯಾ ದ್ರಷ್ಟುಮಧಿಷ್ಠಾನದ್ವಾರಮಾಗತಾ ॥ ೨೪ ॥

ಸಾ ಚಾವಲೋಕ್ಯ ರಾಜ್ಞಃ ಸವ್ಯಪಾರ್ಶ್ವವರ್ತಿನೀಂ ಕನ್ಯಾ
ಮೀಷದುದ್ಭೂತಾಮರ್ಷಸ್ಫುರದಧರಪಲ್ಲವಾ ರಾಜಾನಂ ವ್ರೋಚತ್ ॥೨೫॥

ಅತಿ ಚ ಪಲಚಿತ್ತಾತ್ರ ಸ್ಯಂದನೇ ಕೇಯಂಮಾರೋಪಿತೇತಿ ॥ ೨೬ ॥

ಅಸಾವಪ್ಯನಾಲೋಚಿತೋತ್ತರವಚನೋಽತಿಭಯಾತ್ತಾಮಾಹ
ಸ್ನುಷಾಮಮೇಯಮಿತಿ ॥ ೨೭ ॥

ಅಥೈನಂ ಶೈಬ್ಯೋವಾಚ ॥ ೨೮ ॥

ನಾಹಂ ಪ್ರಸೂತಾ ಪುತ್ರೇಣ ನಾನ್ಯಾ ಪತ್ನ್ಯಭವತ್ತವ।
ಸ್ನುಷಾಸಂಬಂಧತಾ ಹ್ಯೇಷಾ ಕತಮೇನ ಸುತೇನ ತೇ ॥ ೨೯ ॥

---

೨೪-೨೬. ಜಯವನ್ನು ಪಡೆದು ಬಂದ ರಾಜನನ್ನು ನೋಡುವುದಕ್ಕಾಗಿ ಸಮಸ್ತ ಪಟ್ಟಣಿಗರೂ, ಸೇವಕರೂ, ಮಂತ್ರಿಗಳೂ ಪರಿಜನರುಗಳೊಡನೆ ರಾಣಿಯಾದ ಶೈಬ್ಯೆಯು ಊರ ಬಾಗಿಲಿಗೆ ಬಂದಳು. ಅವಳು ರಾಜನ ಬಲಭಾಗದಲ್ಲಿ ಕುಳಿತಿರುವ ಕನ್ಯೆಯನ್ನು ನೋಡಿ ಸ್ವಲ್ಪ ಕೋಪವುಳ್ಳವಳಾಗಿ ತುಟಿಯನ್ನು ನಡುಗಿಸುತ್ತಾ ರಾಜನನ್ನು ಕುರಿತು "ಚಪಲಚಿತ್ತನಾದ ರಾಜನೇ! ಈ ರಥದಲ್ಲಿ ಯಾವಳನ್ನು ಕುಳ್ಳಿರಿಸಿರುವೆ? ಎಂದು ಕೇಳಿದನು.

೨೭-೨೯. ರಾಜನು ಅವಳ ಭಯದಿಂದ ಆಲೋಚಿಸದೆ ಉತ್ತರವನ್ನು ಹೇಳುತ್ತ "ಇವಳು ನನ್ನ ಸೊಸೆಯು" ಎಂದು ಹೇಳಿದನು. ಶೈಬ್ಯೆಯು ಈ ಮಾತನ್ನು ಕೇಳಿ "ನನಗೆ ಮಗನಿಲ್ಲ ನಿನಗೆ ಮತ್ತೊಬ್ಬ ಹೆಂಡತಿಯಿಲ್ಲ ನಿನ್ನ ಯಾವ ಮಗನಿಗೆ ಇವಳು ಹೆಂಡತಿಯಾಗಿ ಸೊಸೆಯಾಗಿರುವಳು?" ಎಂದು ಪ್ರಶ್ನೆಮಾಡಿದಳು. ರಾಜನು

ಸುರಾಸುರಗಂಧರ್ವಯಕ್ಷರಾಕ್ಷಸಾದಿಭಿರಪ್ಯಖಿಲೈರ್ಭವಾನ್ನ
ಜೇತುಂ ಶಕ್ಯಃ ಕಿಮುತಾವನಿಗೋಚರೈರಲ್ಪವೀರ್ಯೈರ್ನ
ರೈರ್ನರಾವಯವ ಭೂತೈಶ್ಚ ತಿರ್ಯಗ್ಯೋನ್ಯನುಸೃತಿಭಿಃ ಕಿಂ
ಪುನರಸ್ಮದ್ವಿಧೈಃ ಅವಶ್ಯಂ ಭಗವತಾಸ್ಮತ್ಸ್ವಾಮಿನಾ ರಾಮೇಣೇವ
ನಾರಾಯಣಸ್ಯ ಸಕಲಜಗತ್ಪರಾಯಣಸ್ಯಾಂಶೇನ ಭಗವತಾ
ಭವಿತವ್ಯಮಿತ್ಯುಕ್ತಸ್ತಸ್ಮೈ ಭಗವಾನಖಿಲಾವನೀ
ಭಾರಾವತರಣಾರ್ಥಮವತರಣಮಾಚಚಕ್ಷೇ ॥ ೫೩ ॥

ಪ್ರೀತ್ಯಭಿವ್ಯಂಜಿತಕರತಲಸ್ಪರ್ಶನೇನ ಚೈನಮುಪಗತ
ಯುದ್ಧಖೇದಂ ಚಕಾರ ॥ ೫೪ ॥

ಸ ಚ ಪ್ರಣಿಪತ್ಯ ಪುನರಪ್ಯೇನಂ ಪ್ರಸಾದ್ಯ ಜಾಂಬವತೀಂ
ನಾಮ ಕನ್ಯಾಂ ಗೃಹಾಗತಾಯಾರ್ಘ್ಯಭೂತಾಂ
ಗ್ರಾಹಯಾಮಾಸ ॥ ೫೫ ॥

---

೫೩–೫೬. "ಸುರರು, ಅಸುರರು, ಗಂಧರ್ವರು, ಯಕ್ಷ, ರಾಕ್ಷಸಾದಿಗಳೂ ನಿನ್ನನ್ನು ಜಯಿಸಲಾರರು. ಹೀಗಿರುವಲ್ಲಿ ಭೂಮಿಯಲ್ಲಿರುವ ಬಲಹೀನರಾದ ಮನುಷ್ಯರು ಮನುಷ್ಯರೂಪದ ತಿರ್ಯಗ್ಯೋನಿಗಳಂತಿರುವ ನಮ್ಮಂಥವರು ಇವರ ವಿಷಯವನ್ನು ಹೇಳುವುದೇನು? ನೀನು ನಮ್ಮ ಸ್ವಾಮಿಯಾದ ರಾಮನಂತೆ ಸಮಸ್ತ ಜನರನ್ನೂ ಕಾಪಾಡುವ ನಾರಾಯಣನ ಅಂಶದಿಂದ ಅವತಾರ ಮಾಡಿರಬೇಕು." ಎಂದು ಹೇಳುತ್ತಲು ಕೃಷ್ಣನು ಅವನಿಗೆ ಭೂಮಿಯ ಭಾರವನ್ನು ನಾಶಮಾಡುವುಕ್ಕಾಗಿ ತಾನು ಅವತಾರ ಮಾಡಿರುವೆನೆಂದು ಹೇಳಿದನು. ಮತ್ತು ಪ್ರೀತಿಯಿಂದ ಅವನ ಮೈಯ್ಯನ್ನು ತನ್ನ ಕೈಯಿಂದ ಸವರಿ ಯುದ್ಧದಿಂದುಂಟಾದ ಆಯಾಸವನ್ನು ಹೋಗಲಾಡಿಸಿದನು. ಜಾಂಬವನು ಪುನಃ ಕೃಷ್ಣನಿಗೆ ನಮಸ್ಕರಿಸಿ ಬೇಡಿಕೊಂಡು ಅತಿಥಿ

ತಸ್ಯ ಚ ವಿದರ್ಭ ಇತಿ ಪಿತಾ ನಾಮ ಚಕ್ರೇ ॥ ೩೫ ॥

ಸ ಚ ತಾಂ ಸ್ನುಷಾಮುಪಯೇಮೇ ॥ ೩೬ ॥

ತಸ್ಯಾಂ ಚಾಸೌ ಕ್ರಥಕೈಶಿಕಸಂಜ್ಞಾವಾ ಪುತ್ರಾವಜನಯತ್ ॥ ೩೭ ॥

ಪುನಶ್ಚ ತೃತೀಯಂ ರೋಮಪಾದಸಂಜ್ಞಂ ಪುತ್ರಮಜೀಜನತ್ ।
ಯೋನಾರದಾದವಾಪ್ತಜ್ಞಾನವಾನ್ ಭವಿಷ್ಯತೀತಿ ॥ ೩೮ ॥

ರೋಮಪಾದಾದ್ಬಭ್ರುಃ ಬಭ್ರೋರ್ಧೃತಿಃ ಧೃತೇಃ ಕೈಶಿಕಃ
ಕೈಶಿಕಸ್ಯಾಪಿ ಚೇದಿಃ ಪುತ್ರೋಽಭವತ್ ಯಸ್ಯ ಸಂತತೌ
ಚೈದ್ಯಾ ಭೂಪಾಲಾಃ ॥ ೩೯ ॥

ಕ್ರಥಸ್ಯ ಸ್ನುಷಾಪುತ್ರಸ್ಯ ಕುಂತಿರಭವತ್ ॥ ೪೦ ॥

---

ಅಸ್ತು ಎಂದು ತನ್ನ ಒಪ್ಪಿಗೆಯನ್ನು ಕೊಡುತ್ತಿರುವುದು. ಕಾಲಬಲದಿಂದ ಆ ಶುಭಾಶುಭ ವಾಕ್ಯಗಳು ಹಾಗೆಯೇ ಫಲವನ್ನು ಕೊಡುವುವು) ಕೆಲವು ಕಾಲದ ಮೇಲೆ ಪುತ್ರನು ಹುಟ್ಟಿದನು ಅವನಿಗೆ ವಿದರ್ಭನೆಂದು ನಾಮಕರಣ ಮಾಡಿದರು. ಅವನು ಆ ಸೊಸೆಯೆಂದು ಹೇಳಿದ ಕನ್ಯೆಯನ್ನು ಮದುವೆಯಾದನು.

೩೭-೩೯. ಸೊಸೆಯಲ್ಲಿ ವಿದರ್ಭನಿಗೆ ಕ್ರಥಕೈಶಿಕ, ಎಂಬಿಬ್ಬರು ಮಕ್ಕಳು ಹುಟ್ಟಿದರು. ಬಳಿಕ ರೋಮಪಾದನೆಂಬ ಮಗನು ಹುಟ್ಟಿದನು. ಆ ರೋಮಪಾದನು ನಾರದನಿಂದ ಜ್ಞಾನೋಪದೇಶವನ್ನು ಪಡೆದು ಜ್ಞಾನಿಯಾದನು. ರೋಮಪಾದನಿಗೆ ಬಭ್ರುವೂ, ಬಭ್ರುವಿಗೆ ಧೃತಿಯೂ, ಧೃತಿಗೆ ಕೈಶಿಕನೂ, ಕೈಶಿಕನಿಗೆ ಚೇದಿಯೂ ಮಕ್ಕಳಾದರು. ಈ ಚೇದಿಯ ಸಂತತಿಯವರೇ ಚೈದ್ಯರಾಜರೆನಿಸಿಕೊಂಡರು.

೪೦-೪೩. ಸೊಸೆಯ ಮಗನಾದ ಕ್ರಥನಿಗೆ ಕುಂತಿಯೂ, ಕುಂತಿಗೆ ಧೃಷ್ಟಿಯೂ, ಧೃಷ್ಟಿಗೆ ನಿಧೃತಿಯೂ, ನಿಧೃತಿಗೆ ದಶಾರ್ಹನೂ, ಅವನಿಗೆ ವ್ಯೋಮನೂ,

ಕುಂತೇರ್ಧೃಷ್ಟಿಃ ಧೃಷ್ಟೇರ್ನಿರ್ಧೃತಿಃ ನಿರ್ಧೃತೇರ್ದಶಾರ್ಹಸ್ತತಶ್ಚ
ವ್ಯೋಮಃ ತಸ್ಯಾಪಿ ಜೀಮೂತಃ ತತಶ್ಚ ವಿಕೃತಿಃ ತತಶ್ಚ
ಭೀಮರಥಃ ತಸ್ಮಾನ್ನವರಥಃ ತಸ್ಯಾಪಿ ದಶರಥಃ ತತಶ್ಚ
ಶಕುನಿಃ ತತ್ತನಯಃ ಕರಂಭಿಃ ಕರಂಭೇರ್ದೇವರಾತೋಽಭವತ್ ॥ ೪೧ ॥

ತಸ್ಮಾದ್ದೇವಕ್ಷತ್ರಃ ತಸ್ಯಾಪಿ ಮಧುಃ ಮಧೋಃ ಕುರುವಂಶಃ
ಕುರುವಂಶಾದನುಃ ಅನೋಃ ಪುರುಹೋತ್ರಃ ಪೃಥಿವೀಪತಿರಭವತ್ ॥ ೪೨ ॥

ತತಶ್ಚಾಂಶುಸ್ತಸ್ಮಾಚ್ಚ ಸತ್ವತಃ ॥ ೪೩ ॥

ಸ್ವತತಾದೇತೇ ಸಾತ್ವತಾಃ ॥ ೪೪ ॥

ಇತ್ಯೇತಾಂ ಜ್ಯಾಮಘಸ್ಯ ಸಂತತಿಂ ಸಮ್ಯಕ್ ಶ್ರದ್ಧಾಸಮನ್ವಿತಃ
ಶ್ರುತ್ವಾ ಪುಮಾನ್ ಮೈತ್ರೇಯ ಸ್ವಪಾಪೈಃ ಪ್ರಮುಚ್ಯತೇ ॥ ೪೫ ॥

ಇತಿ ಶ್ರೀ ವಿಷ್ಣು ಪುರಾಣೇ ಚತುರ್ಥಾಂಶೇ ದ್ವಾದಶೋಽಧ್ಯಾಯಃ

---

ವ್ಯೋಮನಿಗೆ ಜೀಮೂತನೂ, ಜೀಮೂತನಿಗೆ ವಿಕೃತಿಯೂ, ವಿಕೃತಿಗೆ ಭೀಮರಥನೂ, ಅವನಿಗೆ ನವರಥನೂ, ನವರಥನಿಗೆ ದಶರಥನೂ, ದಶರಥನಿಗೆ ಶಕುನಿಯೂ, ಶಕುನಿಗೆ ಕರಂಭಿಯೂ, ಕರಂಭಿಗೆ ದೇವರಾತನೂ, ದೇವರಾತನಿಗೆ ದೇವಕ್ಷತ್ರನೂ, ಅವನಿಗೆ ಮಧುವೂ, ಮಧುವಿಗೆ ಕುರುವಂಶನೂ, ಕುರುವಂಶನಿಗೆ ಅನುವೂ, ಅನುವಿಗೆ ಪುರುಹೋತ್ರನೂ ಮಕ್ಕಳಾಗಿ, ರಾಜರಾಗಿದ್ದರು.

೪೩–೪೫. ಪುರುಹೋತ್ರನ ಮಗನೇ ಸತ್ವತನು, ಇವನಿಂದಲೇ ಸಾತ್ವತರೆಂಬ ಯಾದವರಾದರು. ಮೈತ್ರೇಯನೇ! ಈ ಜ್ಯಾಮಘನ ಸಂತತಿಯನ್ನು ಭಕ್ತಿಯಿಂದ ಕೇಳಿದ ಮನುಷ್ಯನ ಪಾಪಗಳೆಲ್ಲ ನಾಶವಾಗುವುವು.

ಎಂಬಲ್ಲಿಗೆ ಶ್ರೀ ವಿಷ್ಣು ಪುರಾಣದ ಚತುರ್ಥಾಂಶದಲ್ಲಿ

ಹನ್ನೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

# ಶ್ರೀ ವಿಷ್ಣು ಪುರಾಣೇ ಚತುರ್ಥಾಂಶೇ

## ತ್ರಯೋದಶೋಽಧ್ಯಾಯಃ

---

॥ ಶ್ರೀ ಪರಾಶರಃ ॥

ಭಜನಭಜಮಾನದಿವ್ಯಾಂಧಕ ದೇವಾಪೃಥಮಹಾ ಭೋಜವೃಷ್ಣಿ
ಸಂಜ್ಞಾಸ್ಸತ್ವತಸ್ಯ ಪುತ್ರಾ ಬಭೂವುಃ ॥ ೧ ॥

ಭಜಮಾನಸ್ಯ ನಿಮಿಕೃಕಣವೃಷ್ಣಯಸ್ತಥಾನ್ಯೇ ತದ್ವೈಮಾತ್ರಾಃ
ಶತಜಿತ್ಸಹಸ್ರಜಿದಯುತಜಿತ್ಸಂಜ್ಞಾಸ್ತ್ರಯಃ ॥ ೨ ॥

ದೇವಾಪೃಥಸ್ಯಾಪಿ ಬಭ್ರುಃ ಪುತ್ರೋಽಭವತ್ ॥ ೩ ॥

ತಯೋಶ್ಚಾಯಂ ಶ್ಲೋಕೋ ಗೀಯತೇ ॥ ೪ ॥

---

### ಹದಿಮೂರನೆಯ ಅಧ್ಯಾಯವು.

೧–೪. ಸತ್ವತನಿಗೆ ಭಜನ, ಭಜಮಾನ, ದಿವ್ಯ, ಅಂಧಕ, ದೇವಾಪೃಥ, ಮಹಾಭೋಜ, ವೃಷ್ಣಿಯೆಂಬ ಏಳು ಜನ ಮಕ್ಕಳಾದರು. ಭಜಮಾನನಿಗೆ ನಿಮಿ, ಕೃಕಣ, ವೃಷ್ಣಿ ಎಂಬ ಮೂವರೂ ಈ ಮೂವರ ಸವತಿ ತಾಯ ಮಕ್ಕಳಾದ ಶತಜಿತ್, ಸಹಸ್ರಜಿತ್, ಅಯುತಜಿತ್ ಎಂಬ ಮೂವರೂ ಮಕ್ಕಳಿದ್ದರು. ದೇವಾಪೃಥನಿಗೆ ಬಭ್ರುವೆಂಬ ಮಗನಿದ್ದನು. ಬಭ್ರುವಿನ ವಿಷಯದಲ್ಲಿ ಲೋಕೋಕ್ತಿಯೊಂದಿರುವುದು. ಅದೇನೆಂದರೆ :—

ಯಥೈವ ಶೃಣುಮೋ ದೂರಾತ್ಸಂಪಶ್ಯಾಮಸ್ತಥಾಂತಿಕಾತ್ ।
ಬಭ್ರುಶ್ಶ್ರೇಷ್ಠೋ ಮನುಷ್ಯಾಣಾಂ ದೇವೈರ್ದೇವಾವೃಧಸ್ಸಮಃ ॥ ೫ ॥

ಪುರುಷಾಃ ಷಟ್ಚ ಷಷ್ಟಿಶ್ಚ ಸಹಸ್ರಾಣಿ ತಥಾಷ್ಟಯೇ ।
ತೇಽಮೃತತ್ವಮನುಪ್ರಾಪ್ತಾ ಬಭ್ರೋರ್ದೇವಾವೃಧಾದಪಿ ॥ ೬ ॥

ಮಹಾಭೋಜಸ್ತ್ವತಿಧರ್ಮಾತ್ಮಾ ತಸ್ಯಾನ್ವಯೇ ಭೋಜಾಃ
ಮೃತ್ತಿಕಾವರಪುರನಿವಾಸಿನೋ ಮಾರ್ತಿಕಾವರಾ ಬಭೂವುಃ ॥ ೭ ॥

ವೃಷ್ಣೇಸ್ಸುಮಿತ್ರೋ ಯುಧಾಜಿಚ್ಚ ಪುತ್ರಾವಭೂತಾಂ ॥ ೮ ॥

ತತಶ್ಚಾನಮಿತ್ರಃ ತಥಾನಮಿತ್ರಾನ್ನಿಘ್ನಃ ॥ ೯ ॥

ನಿಘ್ನಸ್ಯ ಪ್ರಸೇನಸತ್ರಾಜಿತೌ ॥ ೧೦ ॥

---

೫–೬. ದೂರದಲ್ಲಿರುವ ವಸ್ತುಗಳು ಹೇಗಿರುವುದೆಂದು ನಾವು ಕೇಳುತ್ತೇವೋ ಅದು ಹತ್ತಿರದಲ್ಲಿದ್ದರೂ ಹಾಗೆಯೇ ಗೋಚರವಾಗುವುದು. ಇದರಂತೆ ಬಭ್ರುವು ಮನುಷ್ಯಶ್ರೇಷ್ಠನೆಂದೂ ದೇವಾವೃಧನು ದೇವತೆಗಳಿಗೆ ಸಮನಾದವನೆಂದೂ ಪ್ರಸಿದ್ಧಿಯಿರುವುದು. (ಇದು ನಿಜವೆಂದು ಅಭಿಪ್ರಾಯವು) ದೇವಾವೃಧ ಮತ್ತು ಬಭ್ರುಗಳು ಉಪದೇಶಿಸಿದ ಮಾರ್ಗದಿಂದ ಅವರ ಶಿಷ್ಯರಾದ ಅರವತ್ತಾರು ಸಾವಿರ ಜನರು ಮೋಕ್ಷವನ್ನು ಹೊಂದಿದರು.

೭–೧೦ ಮಹಾಭೋಜನು ಅತ್ಯಂತ ಧರ್ಮಿಷ್ಠನು. ಅವನ ವಂಶದ ಭೋಜರು ರಾಜರಾಗಿ ಮೃತ್ತಿಕಾವರವೆಂಬ ಪಟ್ಟಣದಲ್ಲಿ ವಾಸಮಾಡುತ್ತ ಮಾರ್ತಿಕಾವರರೆನಿಸಿದರು. ವೃಷ್ಣಿಗೆ ಸುಮಿತ್ರ, ಯುಧಾಜಿತ್ ಎಂಬಿಬ್ಬರು ಮಕ್ಕಳು, ಆಮೇಲೆ ಅನಮಿತ್ರನೂ, ಅನಮಿತ್ರನಿಗೆ ನಿಘ್ನನೂ, ನಿಘ್ನನಿಗೆ ಪ್ರಸೇನ, ಸತ್ರಾಜಿತರೂ ಮಕ್ಕಳಾದರು.

ತಸ್ಯ ತು ಸತ್ರಾಜಿತೋ ಭಗವಾನಾದಿತ್ಯಃ ಸಖಾ ಭವತ್ ॥ ೧೧ ॥

ಏಕದಾ ತ್ವಂಭೋನಿಧಿತೀರಸಂಶ್ರಯಸ್ಸೂರ್ಯಂ ಸತ್ರಾಜಿತ್ತುಷ್ಟಾವ ।
ತನ್ಮನಸ್ಕತಯಾ ಭಾಸ್ವಾನಭಿಷ್ಟೂಯಮಾನೋಽಗ್ರತಸ್ತಸ್ಥೌ ॥ ೧೨ ॥

ತತಸ್ತ್ವಸ್ಪಷ್ಟಮೂರ್ತಿಧರಂ ಚೈನಮಾಲೋಕ್ಯ ಸತ್ರಾಜಿತ್ಸೂ
ರ್ಯಮಾಹ ॥ ೧೩ ॥

ಯಥೈವ ವ್ಯೋಮ್ನಿ ವಹ್ನಿಪಿಂಡೋಪಮಂ ತ್ವಾಮಹಮಪಶ್ಯಂ ।
ತಥೈವಾದ್ಯಾಗ್ರತೋ ಗತಮಪ್ಯತ್ರ ಭಗವತಾ ಕಿಂಚಿನ್ನ
ಪ್ರಸಾದಕೃತಂ ವಿಶೇಷಮುಪಲಕ್ಷಯಾಮೀತ್ಯೇವ ಮುಕ್ತೇ
ಭಗವತಾ ಸೂರ್ಯೇಣ ನಿಜಕಂಠಾದುನ್ಮುಚ್ಯಸ್ಯಮಂತಕಂ
ನಾಮ ಮಹಾಮಣಿವರಮವತಾರ್ಯೈಕಾಂತೇ ನ್ಯಸ್ತಂ ॥ ೧೪ ॥

---

೧೧–೧೨. ಆ ಸತ್ರಾಜಿತನಿಗೆ ಮಹಾಮಹಿಮನಾದ ಸೂರ್ಯನು ಸ್ನೇಹಿತನಾಗಿದ್ದನು. ಒಂದು ದಿನ ಸತ್ರಾಜಿತನು ಸಮುದ್ರ ತೀರದಲ್ಲಿ ನಿಂತು ಸೂರ್ಯನನ್ನು ಸ್ತೋತ್ರಮಾಡಿದನು. ಏಕಾಗ್ರಚಿತ್ತದಿಂದ ಸತ್ರಾಜಿತನು ಮಾಡಿದ ಸ್ತೋತ್ರವನ್ನು ಕೇಳಿ ಸೂರ್ಯನು ಅವನಿಗೆ ಪ್ರತ್ಯಕ್ಷನಾದನು.

೧೩–೧೪. ಅಸ್ಪಷ್ಟಮೂರ್ತಿಯಾದ ಸೂರ್ಯನನ್ನು ನೋಡಿ ಸತ್ರಾಜಿತನು 'ಆಕಾಶದಲ್ಲಿ ಬೆಂಕಿಯ ಉಂಡೆಗೆ ಸಮಾನನಾದ ನಿನ್ನನ್ನು ಹೇಗೆ ನೋಡಿದೆನೋ ಹಾಗೆ ಈ ದಿನ ಎದುರಿಗೆ ಬಂದ ನಿನ್ನಲ್ಲಿ ಅನುಗ್ರಹರೂಪವಾದ ಯಾವ ವಿಶೇಷವನ್ನೂ ನೋಡಲಿಲ್ಲ' ಎಂದು ಹೇಳುತ್ತಲು ಸೂರ್ಯನು ತನ್ನ ಕುತ್ತಿಗೆಯಲ್ಲಿದ್ದ ಸ್ಯಮಂತಕವೆಂಬ ಮಹಾರತ್ನವನ್ನು ತೆಗೆದು ಮರೆಮಾಡಿದನು.

ತತಸ್ತಮಾತಾಮ್ರೋಜ್ಜ್ವಲಂ ಹ್ರಸ್ವವಪುಷಮೀಷದಾಪಿಂಗ
ಳನಯನಮಾದಿತ್ಯಮದ್ರಾಕ್ಷೀತ್ ॥ ೧೫ ॥

ಕೃತಪ್ರಣಿಪಾತಸ್ತವಾದಿಕಂ ಚ ಸತ್ರಾಜಿತಮಾಹ
ಭಗವಾನಾದಿತ್ಯಸ್ಸಹಸ್ರದೀಧಿತಿಃ ವರಮಸ್ಮತ್ತೋಽಭಿಮತಂ
ವೃಣೀಷ್ವೇತಿ ॥ ೧೬ ॥

ಸ ಚ ತದೇವ ಮಣಿರತ್ನಮಯಾಚತ ॥ ೧೭ ॥
ಸ ಚಾಪಿ ತಸ್ಮೈ ತದ್ದತ್ವಾ ದೀಧಿತಿಪತಿರ್ವಿಯತಿಸ್ವ
ಧಿಷ್ಣ್ಯಮಾರುರೋಹ ॥ ೧೮ ॥

ಸತ್ರಾಜಿತೋಽಪ್ಯಮಲಮಣಿರತ್ನಸನಾಥಕಂಠತಯಾ
ಸೂರ್ಯ ಇವ ತೇಜೋಭಿರಶೇಷದಿಗಂತರಾಣ್ಯುದ್ಭಾಸಯನ್
ದ್ವಾರಕಾಂ ವಿವೇಶ ॥ ೧೯ ॥

---

೧೫-೧೮. ಆಮೇಲೆ ಸತ್ರಾಜಿತನು ಕೆಂಪು ಬಣ್ಣದಿಂದ ಪ್ರಕಾಶಿಸುವ ಕುಳ್ಳಾದ ಶರೀರವೂ, ಸ್ವಲ್ಪ ಕೆಂಪಾದ ಕಣ್ಣುಗಳೂ, ಉಳ್ಳ ಸೂರ್ಯನನ್ನು ನೋಡಿದನು. ಮಹಾಮಹಿಮನೂ, ಸಾವಿರ ಕಿರಣಗಳುಳ್ಳವನೂ ಆದ ಸೂರ್ಯನು ನಮಸ್ಕಾರವನ್ನು ಮಾಡಿ ಸ್ತೋತ್ರಮಾಡಿದ ಸತ್ರಾಜಿತನನ್ನು ಕುರಿತು ಬೇಕಾದ ವರವನ್ನು ಕೇಳೆಂದನು. ಅವನು ಅದೇ ಸ್ಯಮಂತಕ ರತ್ನವನ್ನು ಕೇಳಿದನು. ಸಹಸ್ರ ಕಿರಣಾಧಿಪತಿಯಾದ ಸೂರ್ಯನು ಅವನಿಗೆ ಆ ರತ್ನವನ್ನು ಕೊಟ್ಟು ತನ್ನ ಸ್ಥಾನವನ್ನು ಸೇರಿದನು.

೧೯–೨೪. ಸತ್ರಾಜಿತನು ಆ ನಿರ್ಮಲವಾದ ರತ್ನವನ್ನು ತನ್ನ ಕುತ್ತಿಗೆಯಲ್ಲಿ ಧರಿಸಿಕೊಂಡು ಅದರ ತೇಜಸ್ಸಿನಿಂದ ಸೂರ್ಯನಂತೆ ಸಕಲ ದಿಕ್ಕುಗಳನ್ನೂ ಪ್ರಕಾಶಗೊಳಿಸುತ್ತಾ ದ್ವಾರಕಾ ಪಟ್ಟಣವನ್ನು ಪ್ರವೇಶಿಸಿದನು ದ್ವಾರಕೆಯಲ್ಲಿ ವಾಸಮಾಡುವ

ದ್ವಾರಕಾವಾಸೀ ಜನಸ್ತು ತಮಾಯಾಂತಮವೇಕ್ಷ್ಯ
ಭಗವಂತಮಾದಿಪುರುಷಂ ಪುರುಷೋತ್ತಮಮವನಿ
ಭಾರಾವತರಣಾಯಾಂಶೇನ ಮಾನುಷರೂಪಧಾರಿಣಂ ಪ್ರಣಿಪತ್ಯಾಹ ॥ ೨೦ ॥
ಭಗವನ್ ಭವಂತಂ ದ್ರಷ್ಟುಂ ನೂನಮಯಮಾದಿತ್ಯ
ಆಯಾತೀತ್ಯುಕ್ತೋ ಭಗವಾನುವಾಚ ॥ ೨೧ ॥

ಭಗವಾನ್ ನಾಯಮಾದಿತ್ಯಃ ಸತ್ರಾಜಿತೋ ಯಮಾದಿತ್ಯ
ದತ್ತಂ ಸ್ಯಮಂತಕಾಖ್ಯಂ ಮಹಾಮಣಿ ರತ್ನಂ
ಬಿಭ್ರದತ್ರೋಪಯಾತಿ ॥ ೨೨ ॥

ತದೇನಂ ವಿಸ್ರಬ್ಧಾಃ ಪಶ್ಯತೇತ್ಯುಕ್ತಾಸ್ತೇ ತಥೈವ ದದೃಶುಃ ॥ ೨೩ ॥

ಸ ಚ ತಂ ಸ್ಯಮಂತಕ ಮಣಿಮಾತ್ಮನಿವೇಶನೇ ಚಕ್ರೇ ॥ ೨೪ ॥

ಪ್ರತಿದಿನಂ ತನ್ಮಣಿರತ್ನಮಷ್ಟೌಕನಕಭಾರಾನ್ ಸ್ರವತಿ ॥ ೨೫ ॥

---

ಜನರು ಬರುತ್ತಿರುವ ಅವನನ್ನು ನೋಡಿ ಆದಿಪುರುಷನೂ, ಮಹಾಮಹಿಮನೂ, ಪುರುಷಶ್ರೇಷ್ಠನೂ ಭೂಮಿಯ ಭಾರವನ್ನು ನಾಶಮಾಡುವುದಕ್ಕಾಗಿ ಒಂದಂಶದಿಂದ ಅವತಾರ ಮಾಡಿದವನೂ, ಮನುಷ್ಯರೂಪದಲ್ಲಿರುವವನೂ ಆದ ಕೃಷ್ಣನಿಗೆ ನಮಸ್ಕಾರ ಮಾಡಿ ಭಗವಂತನೇ ನಿನ್ನನ್ನು ನೋಡುವುದಕ್ಕಾಗಿ ಸೂರ್ಯನೇ ಬರುತ್ತಿರುವನು. ಎಂದು ಹೇಳಿದರು. ಕೃಷ್ಣನು ಅವರನ್ನು ಕುರಿತು 'ಅವನು ಸೂರ್ಯನಲ್ಲ. ಸತ್ರಾಜಿತನು. ಸೂರ್ಯನು ಕೊಟ್ಟ ಸ್ಯಮಂತಕವೆಂಬ ರತ್ನವನ್ನು ಕುತ್ತಿಗೆಯಲ್ಲಿ ಧರಿಸಿ ಬರುತ್ತಿರುವನು. ಭಯಪಡದೆ ನನ್ನ ಮಾತನ್ನು ನಂಬಿ ನೋಡಿರಿ.' ಎಂದು ಹೇಳುತ್ತಲು ಅವರು ಹಾಗೆಯೇ ನೋಡಿದರು. ಆ ಸತ್ರಾಜಿತನು ಸ್ಯಮಂತಕಮಣಿಯನ್ನು ತನ್ನ ಮನೆಯಲ್ಲಿ ಇಟ್ಟುಕೊಂಡನು.

೨೫–೨೬. ಆ ಸ್ಯಮಂತಕಮಣಿಯು ಪ್ರತಿದಿನವೂ ಎಂಟು ಭಾರ ತೂಕದ ಚಿನ್ನವನ್ನು ಕೊಡುತ್ತಿದ್ದಿತು. (ಐದು ಗುಲಗಂಜಿಯ ತೂಕಕ್ಕೆ ಒಂದು ಮಾಷ. ಹದಿನಾರು ಮಾಷಕ್ಕೆ ಒಂದು ಕರ್ಷ. ಆರು ಕರ್ಷಗಳಿಗೊಂದು ಪಲ. ನೂರು ಪಲ

ತತ್ಪ್ರಭಾವಾಚ್ಚ ಸಕಲಸ್ಯೈವ ರಾಷ್ಟ್ರಸ್ಯೋಪಸರ್ಗಾನಾ
ವೃಷ್ಟಿವ್ಯಾಳಾಗ್ನಿ ತೋಯದುರ್ಭಿಕ್ಷಾದಿಭಯಂ ನ ಭವತಿ ॥ ೨೬ ॥
ಅಚ್ಯುತೋಽಪಿ ತದ್ದಿವ್ಯಂ ರತ್ನಮುಗ್ರಸೇನಸ್ಯ ಭೂಪತೇರ್ಯೋ
ಗ್ಯಮೇತದಿತಿ ಲಿಪ್ಸಾಂ ಚಕ್ರೇ ॥ ೨೭ ॥
ಗೋತ್ರಭೇದಭಯಾಚ್ಛಕ್ತೋಽಪಿ ನ ಜಹಾರ ॥ ೨೮ ॥
ಸತ್ರಾಜಿದಪ್ಯಚ್ಯುತೋ ಮಾಮೇತದ್ಯಾಚಯಿಷ್ಯತೀತ್ಯ
ವಗಮ್ಯ ರತ್ನಲೋಭಾತ್ ಭ್ರಾತ್ರೇ ಪ್ರಸೇನಾಯ ತದ್ರತ್ನಮದಾತ್ ॥ ೨೯ ॥
ತಚ್ಚ ಶುಚಿನಾ ಧ್ರಿಯಮಾಣಮಶೇಷಮೇವ ಸುವರ್ಣಸ್ರವಾದಿಕಂ
ಗುಣಜಾತಮುತ್ಪಾದಯತಿ ಅನ್ಯಥಾ ಧಾರಯಂತಮೇವ
ಹಂತೀತಿ ಅಜಾನನ್ನಸಾವಪಿ ಪ್ರಸೇನಸ್ತೇನ ಕಂಠಸಕ್ತೇನ
ಸ್ಯಮಂತಕೇನಾಶ್ವಮಾರುಹ್ಯಾಟವ್ಯಾಂ ಮೃಗಯಾ ಮಗಚ್ಛತ್ ॥ ೩೦ ॥

---

ಗಳಿಗೆ ಒಂದು ತುಲಾ. ಇಪ್ಪತ್ತು ತುಲಾಗಳಿಗೆ ಒಂದು ಭಾರ) ಅದರ ಮಹಿಮೆಯಿಂದ ಸಮಸ್ತ ದೇಶಕ್ಕೂ ಅನಾವೃಷ್ಟಿ, ಸಾಂಕ್ರಾಮಿಕ ರೋಗಗಳು, ಕ್ರೂರಮೃಗಗಳು, ಸರ್ಪ ಗಳು, ಕಳ್ಳರು, ಕ್ಷಾಮ ಮುಂತಾದ ತೊಂದರೆಗಳಿರುತ್ತಿರಲಿಲ್ಲ.

೨೭–೨೯. ಕೃಷ್ಣನು ಆ ರತ್ನವು ದೊರೆಯಾದ ಉಗ್ರಸೇನನಲ್ಲಿರುವುದಕ್ಕೆ ಯೋಗ್ಯವಾದುದೆಂದು ಅದನ್ನಪೇಕ್ಷಿಸಿದನು. ಆದರೆ ಒಂದೇ ಗೋತ್ರದ ಜ್ಞಾನಿಗಳಲ್ಲಿ ವಿರೋಧವು ಬರುವುದೆಂಬ ಭಯದಿಂದ ಅದನ್ನು ತೆಗೆದುಕೊಳ್ಳಲು ಶಕ್ತನಾಗಿದ್ದರೂ ತೆಗೆದುಕೊಳ್ಳಲಿಲ್ಲ. ಸತ್ರಾಜಿತನು ಕೃಷ್ಣನು ಈ ರತ್ನವನ್ನು ಕೇಳುವನೆಂದು ತಿಳಿದು ಅದರ ಮೇಲಿನ ಆಸೆಯಿಂದ ತನ್ನ ತಮ್ಮನಾದ ಪ್ರಸೇನನಿಗೆ ಆ ರತ್ನವನ್ನು ಕೊಟ್ಟನು.

೩೦-೩೪. ಆ ರತ್ನವನ್ನು ಪರಿಶುದ್ಧನಾದವನು ಧರಿಸಿದ್ದರೆ ಚಿನ್ನವನ್ನು ಸ್ರವಿ ಸುವುದೇ ಮುಂತಾದ ಗುಣಗಳು ಅದರಲ್ಲಿ ಉಂಟಾಗುವುವು. ಇಲ್ಲದಿದ್ದರೆ ಅದನ್ನು ಧರಿಸಿರುವವರನ್ನೇ ಕೊಲ್ಲುವುದು. ಇದನ್ನು ತಿಳಿಯದೆ ಪ್ರಸೇನನು ಆ ರತ್ನವನ್ನು

ತತ್ರ ಚ ಸಿಂಹಾದ್ವಧಮವಾಪ ॥ ೩೧ ॥

ಸಾಶ್ವಂ ಚ ತಂ ನಿಹತ್ಯ ಸಿಂಹೋಪ್ಯನುಲಮಣಿರತ್ನ
ಮಾಸ್ಯಾಗ್ರೇಣಾದಾಯ ಗಂತುಮಭ್ಯುದ್ಯತಃ ಋಕ್ಷಾಧಿಪತಿನಾ
ಜಾಂಬವತಾ ದೃಷ್ಟೋ ಘಾತಿತಶ್ಚ ॥ ೩೨ ॥

ಜಾಂಬವಾನಪ್ಯಮಲಮಣಿರತ್ನಮಾದಾಯ ಸ್ವಬಿಲಂ ಪ್ರವಿವೇಶ ॥ ೩೩ ॥

ಸುಕುಮಾರಸಂಜ್ಞಾಯ ಬಾಲಕಾಯ ಚ ಕ್ರೀಡನಕಮಕರೋತ್ ॥ ೩೪ ॥

ಅನಾಗಚ್ಛತಿ ತಸ್ಮಿನ್ ಪ್ರಸೇನೇ ಕೃಷ್ಣೋ ಮಣಿರತ್ನಮಭಿಲಷಿತವಾನ್ ।
ಸ ಚ ಪ್ರಾಪ್ತವಾನ್ ನೂನಮೇತದಸ್ಯ ಕರ್ಮೇತಿ ಅಖಿಲ ಏವ
ಯದುಲೋಕಃ ಪರಸ್ಪರಂ ಕರ್ಣಾಕರ್ಣ್ಯಕಥಯತ್ ॥ ೩೫ ॥

---

ಕುತ್ತಿಗೆಯಲ್ಲಿ ಧರಿಸಿ ಕುದುರೆಯ ಮೇಲೆ ಕುಳಿತು ಕಾಡಿಗೆ ಬೇಟೆಗೆ ಹೋದನು. ಅಲ್ಲಿ ಸಿಂಹದಿಂದ ಮರಣವನ್ನು ಹೊಂದಿದನು. ಸಿಂಹವು ಕುದುರೆಯೊಡನೆ ಅವನನ್ನು ಕೊಂದು ಪರಿಶುದ್ಧವಾದ ರತ್ನಮಾಲೆಯನ್ನು ಬಾಯಿಯಲ್ಲಿ ಕಚ್ಚಿಕೊಂಡು ಹೋಗುತ್ತಿರುವಾಗ ಕರಡಿಗಳಿಗೆ ಅಧಿಪತಿಯಾದ ಜಾಂಬವನು ಅದನ್ನು ನೋಡಿ ಸಿಂಹವನ್ನು ಕೊಂದನು. ಜಾಂಬವಂತನು ಆ ರತ್ನವನ್ನು ತೆಗೆದುಕೊಂಡು ತನ್ನ ಬಿಲವನ್ನು ಪ್ರವೇಶಿಸಿದನು. ಆ ರತ್ನವನ್ನು ಸುಕುಮಾರನೆಂಬ ಬಾಲಕನಿಗೆ ಆಟದ ವಸ್ತುವಾಗಿ ಕೊಟ್ಟನು.

೩೫-೩೭ ಬೇಟೆಗೆ ಹೋದ ಪ್ರಸೇನನು ಬರದೆಹೋಗುತ್ತಲು ಕೃಷ್ಣನು ಸ್ಯಮಂತಕಮಣಿಯನ್ನು ಕೇಳಿದನು. ಪ್ರಸೇನನನ್ನು ಕೊಂದು ರತ್ನವನ್ನು ಅವನೇ ತೆಗೆದುಕೊಂಡಿರುವನೆಂದು ಜನರೆಲ್ಲರೂ ಒಬ್ಬರೊಡನೊಬ್ಬರು ಮಾತನಾಡಿಕೊಳ್ಳುತ್ತಿದ್ದರು. ಈ ಲೋಕಾಪವಾದವನ್ನು ತಿಳಿದು ಭಗವಂತನಾದ ಕೃಷ್ಣನು ಸಮಸ್ತ ಯಾದವ

ವಿದಿತಲೋಕಾಪವಾದವೃತ್ತಾಂತಶ್ಚ ಭಗವಾನ್ಸರ್ವಯದು
ಸೈನ್ಯಪರಿವಾರವೃತಃ ಪ್ರಸೇನಾಶ್ವಪದವೀಮನುಸಸಾರ ॥ ೩೬ ॥

ದದರ್ಶ ಚಾಶ್ವಸಮೇತಂ ಪ್ರಸೇನಂ ಸಿಂಹೇನ ವಿನಿಹತಂ ॥ ೩೭ ॥

ಅಖಿಲಜನಮಧ್ಯೇ ಸಿಂಹಪದದರ್ಶನಕೃತಪರಿಶುದ್ಧಿಃ ಸಿಂಹಪದಮನುಸಸಾರ

ಋಕ್ಷಪತಿನಿಹತಂ ಚ ಸಿಂಹಮಪ್ಯಲ್ಪೇ ಭೂಮಿಭಾಗೇ
ದೃಷ್ಟ್ವಾ ತತಶ್ಚ ತದ್ರತ್ನಗೌರವಾದೃಕ್ಷಸ್ಯಾಪಿ ಪದಾನ್ಯನುಯಯೌ ॥ ೩೯ ॥

ಗಿರಿತಟೇ ಚ ಸಕಲಮೇವ ತದ್ಯದುಸೈನ್ಯಮವಸ್ಥಾಪ್ಯ
ತತ್ಪದಾನುಸಾರೀ ಋಕ್ಷಬಿಲಂ ಪ್ರವಿವೇಶ ॥ ೪೦ ॥

ಅತಃ ಪ್ರವಿಷ್ಟಶ್ಚ ಧಾತ್ರ್ಯಾಃ ಸುಕುಮಾರಕಮುಲ್ಲಾ
ಲಯಂತ್ಯಾಃ ವಾಣೀಂ ಶುಶ್ರಾವ ॥ ೪೧ ॥

---

ಸೈನ್ಯವನ್ನೂ, ಪರಿಜನರನ್ನೂ ಕರೆದುಕೊಂಡು ಪ್ರಸೇನನು ಹೋದ ದಾರಿಯಲ್ಲಿ ಕುದುರೆಯ ಹೆಜ್ಜೆಯ ಗುರುತನ್ನು ಅನುಸರಿಸಿ ಹೋದನು ಅಲ್ಲಿ ಪ್ರಸೇನನು ಸಿಂಹದಿಂದ ಸತ್ತುದನ್ನು ಕಂಡನು. ಎಲ್ಲರ ನಡುವೆ ಸಿಂಹದ ಹೆಜ್ಜೆಯ ಗುರುತನ್ನು ಹಿಡಿದು ಅದರ ದಾರಿಯನ್ನನುಸರಿಸಿದನು. ಸ್ವಲ್ಪ ದೂರದಲ್ಲಿಯೇ ಕರಡಿಗಳ ಅಧಿಪತಿಯಾದ ಜಾಂಬವನಿಂದ ಸತ್ತ ಸಿಂಹವನ್ನು ಕಂಡು ರತ್ನಕ್ಕಾಗಿ ಕರಡಿಯ ಹೆಜ್ಜೆಯ ಗುರುತಿನಿಂದ ದಾರಿಯನ್ನು ಹಿಡಿದು ಹೋದನು.

೪೦-೪೬. ಬೆಟ್ಟದ ತಪ್ಪಲಿನಲ್ಲಿ ಸಮಸ್ತ ಯಾದವ ಸೈನ್ಯವನ್ನೂ ನಿಲ್ಲಿಸಿ ಕರಡಿಯ ಹೆಜ್ಜೆಯ ಗುರುತಿನಿಂದ ಅವರ ಬಿಲವನ್ನು ಹೊಕ್ಕನು. ಒಳಕ್ಕೆ ಪ್ರವೇಶಿಸಿ ದಾದಿಯು ಸುಕುಮಾರನನ್ನು ತೊಟ್ಟಿಲಿನಲ್ಲಿ ಮಲಗಿಸಿ ತೂಗುತ್ತಾ ಹೇಳುತ್ತಿರುವ

ಸಿಂಹಃ ಪ್ರಸೇನಮವಧೀತ್ಸಿಂಹೋ ಜಾಂಬವತಾ ಹತಃ ।
ಸುಕುಮಾರಕ ಮಾರೋದೀಸ್ತವ ಹ್ಯೇಷ ಸ್ಯಮಂತಕಃ ॥ ೪೨ ॥

ಇತ್ಯಾಕರ್ಣ್ಯೋಪಲಬ್ಧಸ್ಯಮಂತಕೋಽಂತಃ ಪ್ರವಿಷ್ಟಃ
ಕುಮಾರಕ್ರೀಡನಕೀಕೃತಂ ಚ ಧಾತ್ರ್ಯಾ ಹಸ್ತೇ ತೇಜೋ
ಭಿರ್ಜಾಜ್ವಲ್ಯಮಾನಂ ಸ್ಯಮಂತಕಂ ದದರ್ಶ ॥ ೪೩ ॥

ತಂಚಸ್ಯಮಂತಕಾಭಿಲಷಿತಚಕ್ಷುಷಮ ಪೂರ್ವಪುರುಷಮಾಗತಂ
ಸಮವೇಕ್ಷ್ಯಧಾತ್ರಿತ್ರಾಹಿತ್ರಾಹೀತಿವ್ಯಾಜಹಾರ ॥ ೪೪ ॥

ತದಾರ್ತರವಶ್ರವಣಾನಂತರಂ ಚಾಮರ್ಷಪೂರ್ಣಹೃದಯಃ
ಸ ಜಾಂಬವಾನಾಜಗಾಮ ॥ ೪೫ ॥

ತಯೋಶ್ಚ ಪರಸ್ಪರಮುದ್ಧತಾಮರ್ಷಯೋರ್ಯುದ್ಧ
ಮೇಕವಿಂಶತಿದಿನಾನ್ಯಭವತ್ ॥ ೪೬ ॥

ತೇ [illegible] ಯದುಸೈನಿಕಾಸ್ತತ್ರ ಸಪ್ತಾಷ್ಟದಿನಾನಿ ತನ್ನಿಷ್ಕ್ರಾಂತಿ
ಮುದೀಕ್ಷಮಾಣಾಸ್ತಸ್ಥುಃ ॥ ೪೭ ॥

---

ಮಾತನ್ನು ಕೇಳಿದನು. "ಸಿಂಹವು ಪ್ರಸೇನನನ್ನು ಕೊಂದಿತು. ಆ ಸಿಂಹವು ಜಾಂಬವಂತನಿಂದ ಸತ್ತಿತು. ಸುಕುಮಾರನೇ ಅಳಬೇಡ. ಈ ಸ್ಯಮಂತಕ ರತ್ನವು ನಿನ್ನದೇ ಆಗಿರುವುದು." ಎಂದು ಹೇಳಿದ ಮಾತನ್ನು ಕೇಳಿ, ಸ್ಯಮಂತಕ ಮಣಿಯು ಸಿಕ್ಕಿತೆಂದು ಒಳಕ್ಕೆ ಪ್ರವೇಶಿಸಿ ಆಟದವಸ್ತುವಾಗಿ ದಾದಿಯ ಕೈಯಲ್ಲಿ ಹಿಡಿದಿದ್ದ ಪ್ರಕಾಶವಾದ ತೇಜಸ್ಸಿನಿಂದ ಬೆಳಗುತ್ತಿರುವ ಸ್ಯಮಂತಕ ರತ್ನವನ್ನು ಕಂಡನು. ಸ್ಯಮಂತಕ ರತ್ನವನ್ನೇ ನೋಡುತ್ತಿರುವ ಅಪೂರ್ವ ಪುರುಷನನ್ನು ನೋಡಿ ದಾದಿಯು ಕಾಪಾಡು! ಕಾಪಾಡು! ಎಂದು ಕೂಗಿಕೊಂಡಳು. ಆ ಆರ್ತಧ್ವನಿಯನ್ನು ಕೇಳಿ ಕೋಪದಿಂದ ಕೂಡಿದ ಮನಸ್ಸುಳ್ಳವನಾದ ಜಾಂಬವನು ಬಂದನು. ಹೆಚ್ಚು ರೋಷದಿಂದ ಕೂಡಿದ ಅವರಿಬ್ಬರಿಗೂ ಇಪ್ಪತ್ತೊಂದು ದಿನಗಳವರೆಗೆ ಯುದ್ಧವಾಯಿತು.

೪೭-೪೯. ಆ ಯದುಸೈನಿಕರು ಅಲ್ಲಿ ಏಳೆಂಟು ದಿನಗಳವರೆಗೆ ಕೃಷ್ಣನು ಬಿಲದಿಂದ ಹೊರಕ್ಕೆ ಬರುವುದನ್ನೇ ನಿರೀಕ್ಷಿಸುತ್ತಿದ್ದರು. ಅವನು ಬಾರದೆ ಇದ್ದುದರಿಂದ

ಅನಿಷ್ಕ್ರಮಣೇ ಚ ಮಧುರಿಪುರಸಾವವಶ್ಯಮತ್ರ ಬಿಲೇಽತ್ಯಂತಂ
ನಾಶಮವಾಪ್ತೋ ಭವಿಷ್ಯತ್ಯನ್ಯಥಾ ತಸ್ಯ ಜೀವತಃ
ಕಥಮೇತಾವಂತಿ ದಿನಾನಿ ಶತ್ರುಜಯೇ ವ್ಯಾಕ್ಷೇಪೋ ಭವಿಷ್ಯತೀತಿ
ಕೃತಾಧ್ಯವಸಾಯಾಃ ದ್ವಾರಕಾಮಾಗಮ್ಯ ಹತಃ ಕೃಷ್ಣ
ಇತಿ ಕಥಯಾಮಾಸುಃ ॥ ೪೮ ॥

ತದ್ಬಾಂಧವಾಶ್ಚ ತತ್ಕಾಲೋಚಿತಮಖಿಲಂ ಉತ್ತರಕ್ರಿಯಾಕಲಾಪಂ
ಚಕ್ರುಃ ॥ ೪೯ ॥

ತತಶ್ಚಾಸ್ಯ ಯುದ್ಧ್ಯಮಾನಸ್ಯಾತಿ ಶ್ರದ್ಧಾದತ್ತವಿಶಿಷ್ಟೋಪಪಾತ್ರ
ಯುಕ್ತಾನ್ನತೋಯಾದಿನಾ ಶ್ರೀಕೃಷ್ಣಸ್ಯ ಬಲಪ್ರಾಣಪುಷ್ಟಿರಭೂತ್ ॥೫೦॥

ಇತರಸ್ಯಾನುದಿನಮತಿಗುರುಪುರುಷಭೇದ್ಯಮಾನಸ್ಯ
ಅತಿನಿಷ್ಠುರಪ್ರಹಾರಪಾತಪೀಡಿತಾಖಿಲಾವಯವಸ್ಯ
ನಿರಾಹಾರತಯಾ ಬಲಹಾನಿರಭೂತ್ ॥ ೫೧ ॥
ನಿರ್ಜಿತಶ್ಚ ಭಗವತಾ ಜಾಂಬವಾನ್ ಪ್ರಣಿಪತ್ಯಾಜಹಾರ ॥ ೫೨ ॥

---

ಈ ಬಿಲದೊಳಗೆ ಅವನು ಸತ್ತುಹೋಗಿರಬೇಕು. ಅವನು ಬದುಕಿದ್ದರೆ ಶತ್ರುವನ್ನು ಜಯಿಸುವುದಕ್ಕೆ ಇಷ್ಟುದಿನಗಳೇತಕ್ಕೆ ಬೇಕಾಗುತ್ತಿದ್ದಿತು ? ಎಂದು ನಿಶ್ಚಯಿಸಿ ಅವರೆಲ್ಲರೂ ದ್ವಾರಕೆಗೆ ಬಂದು ಕೃಷ್ಣನು ಸತ್ತನೆಂದು ಹೇಳಿದರು. ಅವನ ಬಂಧುಗಳು ಕಾಲೋಚಿತವಾದ ಉತ್ತರಕ್ರಿಯೆಗಳನ್ನು ಮಾಡಿದರು.

೫೦-೫೨. ಬಿಲದಲ್ಲಿ ಕೃಷ್ಣನು ಯುದ್ಧಮಾಡುತ್ತಿದ್ದರೆ ಬಂಧುಗಳು ಶ್ರಾದ್ಧದಲ್ಲಿ ಕೊಟ್ಟ ಅನ್ನ ನೀರಿನಿಂದ ಶ್ರೀಕೃಷ್ಣನ ಬಲವೂ ಪ್ರಾಣಶಕ್ತಿಯೂ ಹೆಚ್ಚಿತು. ಜಾಂಬವನಿಗೆ ಪ್ರತಿದಿನವೂ ಆಹಾರವಿಲ್ಲದೆ ತನಗಿಂತ ಬಲವಾದ ಪುರುಷನ ಏಟಿನಿಂದ ಎಲ್ಲ ಅವಯವಗಳಲ್ಲಿಯೂ ನೋವುಂಟಾಗಿ ಬಲಹಾನಿಯಾಯಿತು. ಜಾಂಬವನು ಕೃಷ್ಣನಿಗೆ ಸೋತು ನಮಸ್ಕರಿಸಿ ಹೇಳಿದನು

ಸುರಾಸುರಗಂಧರ್ವಯಕ್ಷರಾಕ್ಷಸಾದಿಭಿರಪ್ಯಖಿಲೈರ್ಭವಾನ್ನ
ಜೇತುಂ ಶಕ್ಯಃ ಕಿಮುತಾವನಿಗೋಚರೈರಲ್ಪವೀರ್ಯೈರ್ನ
ರೈರ್ನರಾವಯವ ಭೂತೈಶ್ಚ ತಿರ್ಯಗ್ಯೋನ್ಯನುಸೃತಿಭಿಃ ಕಿಂ
ಪುನರಸ್ಮದ್ವಿಧೈಃ ಅವಶ್ಯಂ ಭಗವತಾಸ್ಮತ್ಸ್ವಾಮಿನಾ ರಾಮೇಣೇವ
ನಾರಾಯಣಸ್ಯ ಸಕಲಜಗತ್ಪರಾಯಣಸ್ಯಾಂಶೇನ ಭಗವತಾ
ಭವಿತವ್ಯಮಿತ್ಯುಕ್ತಸ್ತಸ್ಮೈ ಭಗವಾನಖಿಲಾವನೀ
ಭಾರಾವತರಣಾರ್ಥಮವತರಣಮಾಚಚಕ್ಷೇ ॥ ೫೩ ॥

ಪ್ರೀತ್ಯಾಭಿವ್ಯಂಜಿತಕರತಲಸ್ಪರ್ಶನೇನ ಚೈನಮುಪಗತ
ಯುದ್ಧಖೇದಂ ಚಕಾರ ॥ ೫೪ ॥

ಸ ಚ ಪ್ರಣಿಪತ್ಯಪುನರಪ್ಯೇನಂ ಪ್ರಸಾದ್ಯ ಜಾಂಬವತೀಂ
ನಾಮಕನ್ಯಾಂ ಗೃಹಾಗತಾಯಾರ್ಘ್ಯಭೂತಾಂ
ಗ್ರಾಹಯಾಮಾಸ ॥ ೫೫ ॥

---

೫೩–೫೬. "ಸುರರು, ಅಸುರರು, ಗಂಧರ್ವರು, ಯಕ್ಷ, ರಾಕ್ಷಸಾದಿಗಳೂ ನಿನ್ನನ್ನು ಜಯಿಸಲಾರರು. ಹೀಗಿರುವಲ್ಲಿ ಭೂಮಿಯಲ್ಲಿರುವ ಬಲಹೀನರಾದ ಮನುಷ್ಯರು ಮನುಷ್ಯರೂಪದ ತಿರ್ಯಗ್ಯೋನಿಗಳಂತಿರುವ ನಮ್ಮಂಥವರು ಇವರ ವಿಷಯವನ್ನು ಹೇಳುವುದೇನು ? ನೀನು ನಮ್ಮ ಸ್ವಾಮಿಯಾದ ರಾಮನಂತೆ ಸಮಸ್ತ ಜನರನ್ನೂ ಕಾಪಾಡುವ ನಾರಾಯಣನ ಅಂಶದಿಂದ ಅವತಾರ ಮಾಡಿರಬೇಕು." ಎಂದು ಹೇಳುತ್ತಲು ಕೃಷ್ಣನು ಅವನಿಗೆ ಭೂಮಿಯ ಭಾರವನ್ನು ನಾಶಮಾಡುವುಕ್ಕಾಗಿ ತಾನು ಅವತಾರ ಮಾಡಿರುವೆನೆಂದು ಹೇಳಿದನು. ಮತ್ತು ಪ್ರೀತಿಯಿಂದ ಅವನ ಮೈಯ್ಯನ್ನು ತನ್ನ ಕೈಯಿಂದ ಸವರಿ ಯುದ್ಧದಿಂದುಂಟಾದ ಆಯಾಸವನ್ನು ಹೋಗಲಾಡಿಸಿದನು. ಜಾಂಬವನು ಪುನಃ ಕೃಷ್ಣನಿಗೆ ನಮಸ್ಕರಿಸಿ ಬೇಡಿಕೊಂಡು ಅತಿಥಿ

ಸ್ಯಮಂತಕಮಣಿರತ್ನಮಪಿ ಪ್ರಣಿಪತ್ಯ ತಸ್ಮೈ ಪ್ರದದೌ ॥ ೫೬ ॥

ಅಚ್ಯುತೋಽಪ್ಯತಿಪ್ರಣತಾತ್ತಸ್ಮಾದಗ್ರಾಹ್ಯಮಪಿ ತನ್ಮಣಿರತ್ನ
ಮಾತ್ಮಸಂಶೋಧನಾಯ ಜಗ್ರಾಹ ॥ ೫೭ ॥

ಸಹ ಜಾಂಬವತ್ಯಾ ಸ ದ್ವಾರಕಾಮಾಜಗಾಮ ॥ ೫೮ ॥

ಭಗವದಾಗಮನೋದ್ಭೂತಹರ್ಷೋತ್ಕರ್ಷಸ್ಯ ದ್ವಾರಕಾವಾಸಿ
ಜನಸ್ಯ ಕೃಷ್ಣಾವಲೋಕನಾತ್ಕ್ಷಣಮೇವಾತಿ
ಪರಿಣತವಯಸೋಽಪಿ ನವಯೌವನಮಿವಾಭವತ್ ॥ ೫೯ ॥

ದಿಷ್ಟ್ಯಾ ದಿಷ್ಟ್ಯೇತಿ ಸಕಲಯಾದವಾಸ್ಸ್ತ್ರಿಯಶ್ಚ ಸಭಾ
ಜಯಾಮಾಸುಃ ॥ ೬೦ ॥

ಭಗವಾನಪಿ ಯಥಾನುಭೂತಮಶೇಷಂ ಯಾದವಸಮಾಜೇ
ಯಥಾವದಾಚಚಕ್ಷೇ ॥ ೬೧ ॥

---

ಸತ್ಕಾರಕ್ಕಾಗಿ ಜಾಂಬವತಿ ಎಂಬ ಕ ಯನ್ನು ಅವನಿಗೆ ಕೊಟ್ಟನು. ಜತೆಯಲ್ಲಿ ಬಲುವಳಿಯಾಗಿ ಸ್ಯಮಂತಕ ಮಣಿಯನ್ನೂ ಅವನಿಗೆ ಕೊಟ್ಟನು.

೫೭–೬೪. ಕೃಷ್ಣನು ನಮಸ್ಕಾರ ಮಾಡಿದ ಜಾಂಬವನಿಂದ ರತ್ನವು ಗ್ರಹಿಸ ತಕ್ಕುದಲ್ಲವಾದರೂ ತನ್ನ ಮೇಲಿನ ಅಪವಾದವನ್ನು ಕಳೆದುಕೊಳ್ಳುವುದಕ್ಕಾಗಿ ಆ ರತ್ನವನ್ನು ತೆಗೆದುಕೊಂಡು ಜಾಂಬವತಿಯೊಡನೆ ದ್ವಾರಕೆಗೆ ಬಂದನು. ಭಗವಂತನು ಬಂದನೆಂಬುದನ್ನು ಕೇಳಿದ ದ್ವಾರಕೆಯ ಜನರು ಸಂತೋಷದಿಂದ ಕೃಷ್ಣನ ದರ್ಶನ ವನ್ನು ಮಾಡಿದರು. ಅವನ ದರ್ಶನದಿಂದ ಅತ್ಯಂತ ವೃದ್ಧರೂ ಯೌವನವಂತರಾದರು. ಯಾದವರೆಲ್ಲರೂ ತಮ್ಮ ಸ್ತ್ರೀಯರೊಡನೆ ತಮ್ಮ ಪೂರ್ವ ಪುಣ್ಯದಿಂದ ಮಂಗಳವಾಯಿ ತೆಂದು ಕೃಷ್ಣನನ್ನು ಪೂಜಿಸಿದರು. ಕೃಷ್ಣನೂ ನಡೆದ ಸಂಗತಿಯೆಲ್ಲವನ್ನೂ ಯಾದವರ ಗುಂಪಿನಲ್ಲಿ ವಿಸ್ತಾರವಾಗಿ ಹೇಳಿದನು. ಸ್ಯಮಂತಕ ರತ್ನವನ್ನು ಸತ್ರಾಜಿತನಿಗೆ

ಸ್ಯಮಂತಕಂ ಚ ಸತ್ರಾಜಿತಾಯ ದತ್ವಾ ಮಿಥ್ಯಾ
ಭಿಶಸ್ತಿಪರಿಶುದ್ಧಿಮವಾಪ ॥ ೬೨ ॥

ಜಾಂಬವತೀಂ ಚಾಂತಃ ಪುರೇ ನಿವೇಶಯಾಮಾಸ ॥ ೬೩ ॥

ಸತ್ರಾಜಿತೋಽಪಿ ಮಯಾಸ್ಯಾಭೂತಮಲಿನಮಾರೋಪಿತಮಿತಿ
ಜಾತಸಂತ್ರಾಸಾತ್ ಸ್ವಸುತಾಂ ಸತ್ಯಭಾಮಾಂ ಭಗವತೇ
ಭಾರ್ಯಾರ್ಥಂ ದದೌ ॥ ೬೪ ॥

ತಾಂ ಚಾಕ್ರೂರಕೃತವರ್ಮಶತಧನ್ವಪ್ರಮುಖಾ ಯಾದವಾಃ
ಪ್ರಾಗ್ವರಯಾಂ ಬಭೂವುಃ ॥ ೬೫ ॥

ತತಸ್ತತ್ಪ್ರದಾನಾದವಜ್ಞಾತಮೇವಾತ್ಮಾನಂ ಮನ್ಯಮಾನಾಃ ಸತ್ರಾಜಿತೇ
ವೈರಾನುಬಂಧಂ ಚಕ್ರುಃ ॥ ೬೬ ॥

ಅಕ್ರೂರಕೃತವರ್ಮಪ್ರಮುಖಾಶ್ಚ ಶತಧನ್ವಾನಮೂಚುಃ ॥ ೬೭ ॥

---

ಕೊಟ್ಟು ತನ್ನ ಮೇಲಿನ ಅಪವಾದವನ್ನು ಕಳೆದುಕೊಂಡನು. ಜಾಂಬವತಿಯನ್ನು ತನ್ನ ರಾಣಿವಾಸದಲ್ಲಿರಿಸಿದನು. ಸತ್ರಾಜಿತನೂ ತಾನು ಕೃಷ್ಣನ ಮೇಲೆ ಅಪವಾದ ವನ್ನು ಹೊರಿಸಿದೆನೆಂದು ಭಯದಿಂದ ತನ್ನ ಮಗಳಾದ ಸತ್ಯಭಾಮೆಯನ್ನು ಕೃಷ್ಣನಿಗೆ ವಿವಾಹಮಾಡಿಕೊಟ್ಟನು.

೬೫–೬೬. ಅಕ್ರೂರ, ಕೃತವರ್ಮ, ಶತಧನ್ವ ಮುಂತಾದ ಯಾದವರು ಸತ್ಯಭಾಮೆಯನ್ನು ತಮ್ಮಲ್ಲೊಬ್ಬರಿಗೆ ಕೊಡಬೇಕೆಂದು ಸತ್ರಾಜಿತನನ್ನು ಕೇಳಿದ್ದರು. ಅವಳನ್ನು ಕೃಷ್ಣನಿಗೆ ಕೊಟ್ಟುದರಿಂದ ಸತ್ರಾಜಿತನು ತಮ್ಮನ್ನು ತಿರಸ್ಕರಿಸಿದನೆಂದು ತಿಳಿದು ಅವರು ಅವನಲ್ಲಿ ವೈರವನ್ನು ಬಳೆಸಿದರು.

೬೭–೭೧. ಅಕ್ರೂರ, ಕೃತವರ್ಮ ಮುಂತಾದ ಯಾದವರು ಶತಧನ್ವನನ್ನು ಕುರಿತು " ಈ ಸತ್ರಾಜಿತನು ಅತ್ಯಂತ ದುಷ್ಟನು. ನಾವೂ ನೀನೂ ಕೇಳಿಕೊಂಡರೂ

ಅಯಮತೀವ ದುರಾತ್ಮಾ ಸತ್ರಾಜಿತಃ ಯೋಽಸ್ಮಾಭಿರ್ಭವತಾ
ಚ ಪ್ರಾರ್ಥಿತೋಽಪ್ಯಾತ್ಮಜಾಮಸ್ಮಾನ್ ಭವಂತಂ ಚಾವಿಗಣ
ಯ್ಯ ಕೃಷ್ಣಾಯ ದತ್ತವಾನ್ ॥ ೬೮ ॥

ತದಲಮನೇನ ಜೀವತಾ ಘಾತಯಿತ್ವೈನಂ ತನ್ಮಹಾರತ್ನಂ
ಸ್ಯಮಂತಕಾಖ್ಯಂ ತ್ವಯಾ ಕಿಂ ನ ಗೃಹ್ಯತೇ ವಯಮಭ್ಯುಪಪತ್ಸ್ಯಾಮೋ
ಯದ್ಯಚ್ಯುತಸ್ತವೋಪರಿ ವೈರಾನು ಬಂಧಂ ಕರಿಷ್ಯತೀತ್ಯೇವ
ಮುಕ್ತಸ್ತಥೇತ್ಯಸಾವಪ್ಯಾಹ ॥ ೬೯ ॥

ಜತುಗೃಹದಗ್ಧಾನಾಂ ಪಾಂಡುತನಯಾನಾಂ ವಿದಿತಪರಮಾರ್ಥೋಽಪಿ
ಭಗವಾನ್ ದುರ್ಯೋಧನಪ್ರಂ ತ್ನಶೈಥಿಲ್ಯ ಕರಣಾರ್ಥಂ
ಪಾರ್ಥಾನುಕೂಲ್ಯಕರಣಾಯ ವಾರಣಾವ ತಂ ಗತಃ ॥ ೭೦ ॥

ಗತೇ ಚ ತಸ್ಮಿನ್ ಸುಪ್ತಮೇವ ಸತ್ರಾಜಿತಂ ಶತಧನ್ವಾ
ಜಘಾನ ಮಣಿರತ್ನಂ ಚಾದದಾತ್ ॥ ೭೧ ॥

---

ತನ್ನ ಮಗಳನ್ನು ಕೊಡದೆ ನಮ್ಮನ್ನೂ ನಿನ್ನನ್ನೂ ತಿರಸ್ಕರಿಸಿ ಕೃಷ್ಣನಿಗೆ ಕೊಟ್ಟು ಬಿಟ್ಟನು. ಇವನು ಬದುಕಿರಬಾರದು. ಇವನನ್ನು ಕೊಂದು ಆ ಸ್ಯಮಂತಕವೆಂಬ ರತ್ನವನ್ನು ನೀನೇಕೆ ತೆಗೆದುಕೊಳ್ಳಬಾರದು. ಕೃಷ್ಣನು ನಿನ್ನನ್ನು ದ್ವೇಷಿಸಿದರೆ ನಾವು ನಿನಗೆ ಸಹಾಯಕರಾಗಿರುವೆವು" ಎಂದು ಹೇಳುತ್ತಲು ಶತಧನ್ವನು ಹಾಗೆಯೇ ಆಗಲೆಂದು ಒಪ್ಪಿದನು. ಅರಗಿನ ಮನೆಯಲ್ಲಿ ಸುಟ್ಟುಹೋದ ಪಾಂಡವರ ವಿಷಯ ದಲ್ಲಿ ಭಗವಂತನಾದ ಕೃಷ್ಣನು ನಿಜವನ್ನು ತಿಳಿದಿದ್ದರೂ ದುರ್ಯೋದನನ, ಪಾಂಡವರ ನಾಶಪ್ರಯತ್ನವನ್ನು ದುರ್ಬಲಮಾಡುವುದಕ್ಕೂ ಕುಂತಿಯಮಕ್ಕಳಿಗೆ ಅನುಕೂಲ ಮಾಡುವುದಕ್ಕೂ ವಾರಣಾವತಕ್ಕೆ ಹೋಗಿದ್ದನು. ಆ ಸಮಯದಲ್ಲಿ ಮಲಗಿ ನಿದ್ರಿಸು ತ್ತಿದ್ದ ಸತ್ರಾಜಿತನನ್ನು ಶತಧನ್ವನು ಕೊಂದು ಸ್ಯಮಂತಕರತ್ನವನ್ನು ತೆಗೆದು ಕೊಂಡನು.

ಪಿತೃವಧಾಮರ್ಷಪೂರ್ಣಾ ಚ ಸತ್ಯಭಾಮಾ ಶೀಘ್ರಂ
ಸ್ಯಂದನಮಾರೂಢಾ ವಾರಣಾವತಂ ಗತ್ವಾ ಭಗವತೇಽಹಂ
ಪ್ರತಿಪಾದಿತೇತ್ಯಕ್ಷಾಂತಿಮತಾ ಶತಧನ್ವನಾಸ್ಮತ್ಪಿತಾ ವ್ಯಾಪಾದಿತಃ
ತಚ್ಚ ಸ್ಯಮಂತಕಮಣಿರತ್ನಮಪಹೃತಂ ಯಸ್ಯಾವ
ಭಾಸನೇನಾಪಹೃತತಿಮಿರಂ ತ್ರೈಲೋಕ್ಯಂ ಭವಿಷ್ಯತಿ ॥ ೭೨ ॥

ತದಿಯಂ ತ್ವದೀಯಾಪಹಾಸನಾ ತದಾಲೋಚ್ಯ ಯದತ್ರ ಯುಕ್ತಂ
ತತ್ಕ್ರಿಯತಾಮಿತಿ ಕೃಷ್ಣಮಾಹ ॥ ೭೩ ॥

ತಯಾ ಚೈವಮುಕ್ತಃ ಪರಿತುಷ್ಟಾಂತಃಕರಣೋಽಪಿ ಕೃಷ್ಣಃ
ಸತ್ಯಭಾಮಾಮಮರ್ಷತಾಮ್ರನಯನಃ ಪ್ರಾಹ ॥ ೭೪ ॥

ಸತ್ಯೇ ಸತ್ಯಂ ಮಮೈವೈಷಾಪಹಸನಾ ನಾಹಮೇತಾಂ
ತಸ್ಯ ದುರಾತ್ಮನಃ ಸಹಿಷ್ಯೇ ॥ ೭೫ ॥

---

೭೨-೭೬. ತಂದೆಯನ್ನು ಕೊಂದುದರಿಂದ ರೋಷವು ಹೆಚ್ಚಿದ ಸತ್ಯಭಾಮೆಯು ಬೇಗ ರಥವನ್ನೇರಿ ವಾರಣಾವತಕ್ಕೆ ಹೋಗಿ ಕೃಷ್ಣನನ್ನು ಕುರಿತು "ನನ್ನನ್ನು ನಿನಗೆ ಕೊಟ್ಟುದರಿಂದ ಅಸಹನೆಯಿಂದ ಕೂಡಿದ ಶತಧನ್ವನು ನನ್ನ ತಂದೆಯನ್ನು ಕೊಂದನು. ಮತ್ತು ಮೂರು ಲೋಕವನ್ನೂ ತನ್ನ ಕಾಂತಿಯಿಂದ ಮುಚ್ಚುವ ಸ್ಯಮಂತಕ ಮಹಾರತ್ನವನ್ನು ತೆಗೆದುಕೊಂಡು ಹೋದನು. ಇದು ನಿನ್ನನ್ನು ಹಾಸ್ಯಮಾಡಿದಂತಾಗಿರುವುದು. ಈ ವಿಷಯದಲ್ಲಿ ತಕ್ಕ ಆಲೋಚನೆಯನ್ನು ಮಾಡಿ ಯುಕ್ತವಾದುದನ್ನು ಮಾಡಬೇಕು" ಎಂದು ಹೇಳಿದಳು. ಈ ಮಾತನ್ನು ಕೇಳಿ ಕೃಷ್ಣನು ತನ್ನ ಆಜ್ಞೆಯನ್ನು ಮೀರಿದ ಪುತ್ರರಿಲ್ಲದ ಸತ್ರಾಜಿತನು ಸತ್ತುದಕ್ಕೆ ಮನಸ್ಸಿನಲ್ಲಿ ಸಂತೋಷವಿದ್ದರೂ ಕೋಪದಿಂದ ಕಣ್ಣುಗಳನ್ನು ಕೆಂಪಾಗಿ ಮಾಡಿಕೊಂಡು ಸತ್ಯಭಾಮೆಯನ್ನು ಕುರಿತು " ಸತ್ಯೇ! ನೀನು ಹೇಳಿದುದು ನಿಜವಾದುದು. ಇದು ನನಗೆ ಅಪಮಾನ ಮಾಡಿದಂತೆಯೇ ಸರಿ. ಆ ದುರಾತ್ಮನು ಮಾಡಿದ ಕೆಲಸವನ್ನು ನಾನು ಸಹಿಸುವು

ನಹ್ಯನುಲ್ಲಂಘ್ಯ ವರಪಾದಪಂ ತತ್ಕೃತನೀಡಾಶ್ರಯಿಣೋ
ವಿಹಂಗಮಾವಧ್ಯಂತೇ ತದಲಮಮುನಾಸ್ಮತ್ಪುರತಃ
ಶೋಕಪ್ರೇರಿತವಾಕ್ಯಪರಿಕರೇಣೇತ್ಯುಕ್ತ್ವಾ ದ್ವಾರಕಾಮಭ್ಯೇತ್ಯ
ಏಕಾಂತೇ ಬಲದೇವಂ ವಾಸುದೇವಃ ಪ್ರಾಹ ॥ ೭೬ ॥

ಮೃಗಯಾಗತಂ ಪ್ರಸೇನಮಟವ್ಯಾಂ ಮೃಗಪತಿರ್ಜಘಾನ ॥ ೭೭ ॥

ಸತ್ರಾಜಿತೋಽಪ್ಯಧುನಾ ಶತಧನ್ವನಾ ನಿಧನಂ ಪ್ರಾಪಿತಃ ॥ ೭೮ ॥

ತದುಭಯವಿನಾಶಾತ್ತನ್ಮಣಿರತ್ನಮಾವಾಭ್ಯಾಂ
ಸಾಮಾನ್ಯಂ ಭವಿಷ್ಯತಿ ॥ ೭೯ ॥

ತದುತ್ತಿಷ್ಠ । ಆರುಹ್ಯತಾಂ ರಥಃ । ಶತಧನ್ವನಿಧನಾಯೋದ್ಯಮಂ
ಕುರ್ವಿತ್ಯಭಿಹಿತಸ್ತಥೇತಿ ಸಮನ್ವಿಚ್ಛಿತವಾನ್ ॥ ೮೦ ॥

---

ದಿಲ್ಲ. ದೊಡ್ಡ ಮರವನ್ನು ಏರದೆಯೇ ಅದರಲ್ಲಿಯೇ ಗೂಡು ಕಟ್ಟಿಕೊಂಡು ವಾಸವಾಗಿರುವ ಹಕ್ಕಿಗಳನ್ನು ನಾಶಮಾಡಲಾಗುವುದಿಲ್ಲ. (ದ್ವಾರಕೆಗೆ ಹೋಗದೆ ದುಷ್ಟರನ್ನು ಶಿಕ್ಷಿಸಲಾಗುವುದಿಲ್ಲ. ಎಂದು ಭಾವವು) ನನ್ನೆದುರಿಗೆ ದುಃಖವನ್ನು ಹೆಚ್ಚಿಸುವ ಮಾತುಗಳನ್ನು ಸಾಕುಮಾಡು" ಎಂದು ಹೇಳಿ ದ್ವಾರಕೆಗೆ ಬಂದು ಕೃಷ್ಣನು ಬಲದೇವನೊಡನೆ ಗುಟ್ಟಾಗಿ ಮಾತನಾಡಿದನು. ಏನೆಂದರೆ:—

೭೭-೮೦. "ಬೇಟೆಗೆ ಹೋದ ಪ್ರಸೇನನನ್ನು ಕಾಡಿನಲ್ಲಿ ಸಿಂಹವು ಕೊಂದು ಹಾಕಿತು. ಈಗ ಸತ್ರಾಜಿತನನ್ನು ಶತಧನ್ವನು ಕೊಂದುಹಾಕಿದನು. ಅವರಿಬ್ಬರೂ ಸತ್ತುದರಿಂದ ಸ್ಯಮಂತಕ ರತ್ನವು ನಮ್ಮಿಬ್ಬರಿಗೂ ಸಮಾನವಾದುದಾಗಿರುವುದು. ಆದುದರಿಂದ ನೀನು ಎದ್ದು ರಥವನ್ನೇರು, ಶತಧನ್ವನನ್ನು ಕೊಲ್ಲುವ ಪ್ರಯತ್ನವನು ಮಾಡು" ಎಂದು ಹೇಳುತ್ತಲು ಅವನು ಹಾಗೆಯೇ ಆಗಲೆಂದು ಒಪ್ಪಿಕೊಂಡನು.

ಕೃಷ್ಣೋದ್ಯಮೌ ಚ ತಾವುಭಾವುಪಲಭ್ಯ ಶತಧನ್ವಾ
ಕೃತವರ್ಮಾಣಮುಪೇತ್ಯ ಪಾರ್ಷ್ಣಿಪೂರಣಕರ್ಮನಿಮಿತ್ತಂ
ಅಚೋದಯತ್ ॥ ೮೧ ॥

ಆಹ ಚೈನಂ ಕೃತವರ್ಮಾ ॥ ೮೨ ॥

ನಾಹಂ ಬಲದೇವವಾಸುದೇವಾಭ್ಯಾಂ ಸಹ ವಿರೋಧಾ
ಯಾಲಮಿತ್ಯುಕ್ತಶ್ಚಾಕ್ರೂರಮಚೋದಯತ್ ॥ ೮೩ ॥

ಅಸಾವಪ್ಯಾಹ ॥ ೮೪ ॥

ನಹಿ ಕಶ್ಚಿದ್ಭಗವತಾ ಪಾದಪ್ರಹಾರಪರಿಕಂಪಿತ ಜಗತ್ತ್ರಯೇಣ
ಸುರರಿಪುವನಿತಾವೈಧವ್ಯ ಕಾರಿಣಾ ಪ್ರಬಲರಿಪುಚಕ್ರಾಪ್ರತಿಹತಚಕ್ರೇಣ
ಚಕ್ರಿಣಾ ಮದಮುದಿತ ನಯನಾವಲೋಕನಾರಿಬಲನಿಶಾತನೇನಾತಿ
ಗುರುವೈರಿವಾರಣಾಪಕರ್ಷಣಾವಿಷ್ಕೃತಮಹಿಮೋರುಸೀರೇಣ

---

೮೧-೮೩. ಕೃಷ್ಣ ಬಲರಾಮರಿಬ್ಬರೂ ತನ್ನನ್ನು ಕೊಲ್ಲುವ ಪ್ರಯತ್ನದಲ್ಲಿದ್ದಾರೆಂದು ತಿಳಿದು ಶತಧನ್ವನು ಕೃತವರ್ಮನ ಸಮೀಪಕ್ಕೆ ಹೋಗಿ ತನಗೆ ಸಹಾಯ ಮಾಡಬೇಕೆಂದು ಕೇಳಿಕೊಂಡನು. ಕೃತವರ್ಮನು "ನಾನು ಬಲದೇವ ವಾಸುದೇವರೊಡನೆ ವಿರೋಧವನ್ನು ಮಾಡಿಕೊಳ್ಳುವುದಿಲ್ಲ" ಎಂದ ಮಾತನ್ನು ಕೇಳಿ ಅಕ್ರೂರನ ಸಮೀಪಕ್ಕೆ ಹೋಗಿ ಕೇಳಿಕೊಂಡನು.

೮೪-೮೬. ಅಕ್ರೂರನು "ಕಾಲಿನಿಂದ ಒದೆದು ಮೂರು ಲೋಕವನ್ನೂ ನಡುಗಿಸುವ ಶಕ್ತಿಯುಳ್ಳ, ದೇವಶತ್ರುಗಳ ಸ್ತ್ರೀಯರಿಗೆ ವೈಧವ್ಯವನ್ನುಂಟುಮಾಡುವ ಪ್ರಬಲವಾದ ಶತ್ರುಸೇನೆಯಲ್ಲಿ ತಡೆಯಿಲ್ಲದ ಚಕ್ರಾಯುಧವುಳ್ಳ ಕೃಷ್ಣನೊಡನೆಯೂ, ಮದದಿಂದ ಕೂಡಿ ಕಣ್ಣಿನ ನೋಟದಿಂದಲೇ ಶತ್ರುಸೇನೆಯನ್ನು ನಾಶಮಾಡುವ ಬಲವಾದ ಶತ್ರುಗಳೆಂಬ ಆನೆಗಳನ್ನು ಎಳೆದು ತರುವುದರಿಂದ ಪ್ರಕಟಪಡಿಸಿದ ಮಹಿಮೆಯುಳ್ಳ ನೇಗಿಲನ್ನೇ ಆಯುಧವಾಗಿ ಪಡೆದ ಬಲರಾಮನೊಡನೆಯೂ ಯುದ್ಧಮಾಡಲು

ಸೀರಿಣಾ ಚ ಸಹ ಸಕಲಜಗದ್ವಂದ್ಯಾನಾಮಮರವರಾ
ಣಾಮಪಿ ಯೋದ್ಧುಂ ಸಮರ್ಥಃ ॥ ೮೫ ॥

ಕಿಮುತಾಹಂ ತದನ್ಯಶ್ಶರಣಮಭಿಲಷ್ಯತಾಮಿತ್ಯುಕ್ತಶ್ಶತಧನುರಾಹ ॥ ೮೬ ॥

ಯದ್ಯಸ್ಮತ್ಪರಿತ್ರಾಣಾಸಮರ್ಥಂ ಭವಾನಾತ್ಮಾನಮವಗಚ್ಛತಿ
ತದಯಮಸ್ಮತ್ತಸ್ತಾವನ್ಮಣಿಃ ಸಂಗೃಹ್ಯ ರಕ್ಷ್ಯತಾಮಿತಿ ॥ ೮೭ ॥

ಏವಮುಕ್ತಃ ಸೋಽಪ್ಯಾಹ ॥ ೮೮ ॥

ಯದ್ಯಂತ್ಯಾಯಾಮಪ್ಯವಸ್ಥಾಯಾಂ ನ ಕಸ್ಮೈಚಿದ್ಭವಾನ್
ಕಥಯಿಷ್ಯತಿ ತದಹಮೇತಂ ಗ್ರಹೀಷ್ಯಾಮೀತಿ ॥ ೮೯ ॥

ತಥೇತ್ಯುಕ್ತೇ ಚಾಕ್ರೂರಸ್ತನ್ಮಣಿರತ್ನಂ ಜಗ್ರಾಹ ॥ ೯೦ ॥

---

ಸಕಲ ಜಗತ್ತಿಗೂ ಪೂಜ್ಯರಾದ ದೇವಶ್ರೇಷ್ಠರಲ್ಲಿಯೂ ಶಕ್ತರಾದವರಾರೂ ಇರುವುದಿಲ್ಲ ಎಂದ ಮೇಲೆ ನನ್ನ ವಿಚಾರವನ್ನು ಹೇಳುವುದೇನು ? ನೀನು ಮತ್ತಾರನ್ನಾದರೂ ಶರಣು ಹೊಂದು ” ಎಂದು ಹೇಳುತ್ತಲು, ಶತಧನ್ವನು ಹೇಳಿದನು:—

೮೭–೯೦. “ಅಕ್ರೂರನೇ! ನನ್ನನ್ನು ರಕ್ಷಿಸಲು ನಿನಗೆ ಶಕ್ತಿಯಿಲ್ಲದಿದ್ದರೆ ನನ್ನಲ್ಲಿರುವ ಸ್ಯಮಂತಕ ರತ್ನವನ್ನು ತೆಗೆದುಕೊಂಡು ಅದನ್ನು ರಕ್ಷಿಸಿಕೊಂಡಿರು ” ಎಂದನು. ಶತಧನ್ವನ ಈ ಮಾತನ್ನು ಕೇಳಿ ಅಕ್ರೂರನು “ ನೀನು ಮರಣಾವಸ್ಥೆಯಲ್ಲಿಯೂ ಇದನ್ನು ಯಾರಿಗೂ ಹೇಳದಿದ್ದರೆ ನಾನು ಆ ರತ್ನವನ್ನು ತೆಗೆದುಕೊಳ್ಳುವೆನು ” ಎಂದನು. ಹಾಗೆಯೇ ಆಗಲೆಂದು ಹೇಳಿದ ಮೇಲೆ ಅಕ್ರೂರನು ಆ ರತ್ನವನ್ನು ತೆಗೆದುಕೊಂಡನು.

ಶತಧನುರಪ್ಯತುಲವೇಗಾಂ ಶತಯೋಜನವಾಹಿನೀಂ
ಬಡಬಾಮಾರುಹ್ಯಾ ಪಕ್ರಾಂತಃ ॥ ೯೧ ॥

ಸೈನ್ಯಸುಗ್ರೀವ ಮೇಘಪುಷ್ಪ ವಲಾಹಕಾಶ್ವಚತುಷ್ಟಯ
ಯುಕ್ತರಥಸ್ಥಿತೌ ಬಲದೇವವಾಸುದೇವೌ ತಮನುಪ್ರಯಾತೌ ॥ ೯೨ ॥

ಸಾ ಚ ಬಡಬಾ ಶತಯೋಜನಪ್ರಮಾಣಮಾರ್ಗಮತೀತಾ
ಪುನರಪಿ ವಾಹ್ಯಮಾನಾ ಮಿಥಿಲಾವನೋದ್ದೇಶೇ ಪ್ರಾಣಾನುತ್ಸಸರ್ಜ ॥೯೩॥

ಶತಧನುರಪಿ ತಾಂ ಪರಿತ್ಯಜ್ಯ ಪದಾತಿರೇವಾದ್ರವತ್ ॥ ೯೪ ॥

ಕೃಷ್ಣೋಽಪಿ ಬಲಭದ್ರಮಾಹ ॥ ೯೫ ॥

ತಾವದತ್ರ ಸ್ಯಂದನೇ ಭಗವತಾ ಸ್ಥೇಯಮಹಮೇನಮ
ಧಮಾಚಾರಂ ಪದಾತಿರೇವ ಪದಾತಿಮನುಗಮ್ಯ ಯಾವತ್
ಘಾತಯಾಮಿ ಅತ್ರ [illegible] ಭೂಭಾಗೇ ದೃಷ್ಟದೋಷಾಸ್ಸಭಯಾ
ಅತೋ ನೈತೇ ಅಶ್ವಾ ಭವತೇಮಂ ಭೂಮಿಭಾಗ
ಮುಲ್ಲಂಘನೇಯಾಃ ॥ ೯೬ ॥

---

೯೧-೯೪. ಬಳಿಕ ಶತಧನ್ವನು ದಿನಕ್ಕೆ ನೂರು ಯೋಜನವನ್ನು ವೇಗವಾಗಿ ನಡೆಯುವ ಕುದುರೆಯ ಮೇಲೆ ಕುಳಿತು ಹೋರಟನು. ಸೈನ್ಯ, ಸುಗ್ರೀವ, ಮೇಘ ಪುಷ್ಪ, ವಲಾಹಕ ಎಂಬ ನಾಲ್ಕು ಕುದುರೆಗಳನ್ನು ಕಟ್ಟಿದ ರಥದಲ್ಲಿ ಕೃಷ್ಣ-ಬಲರಾಮರು ಕುಳಿತು ಅವನ ಹಿಂದೆ ಹೋದರು. [illegible] ಕುದುರೆಯು ನೂರು ಯೋಜನ ದೂರವನ್ನು ನಡೆದಮೇಲೆಯೂ, ಮತ್ತೆಯೂ ಪ್ರಯಾಣಮಾಡುತ್ತ ಮಿಥಿಲಾಪಟ್ಟಣದ ವನದ ಸಮೀಪದಲ್ಲಿ ಪ್ರಾಣಬಿಟ್ಟಿತು. ಶತಧನ್ವನು ಕುದುರೆಯನ್ನು ಬಿಟ್ಟು ಕಾಲಿನಿಂದಲೇ ಓಡುತ್ತಿದ್ದನು.

೯೫-೧೦೦. ಆಗ ಕೃಷ್ಣನು ಬಲಭದ್ರನನ್ನು ಕುರಿತು "ನೀನು ಈ ರಥ ದಲ್ಲಿಯೇ ಇರು. ನಾನು ಓಡಿಹೋಗುತ್ತಿರುವ ಈ ದುಷ್ಟನನ್ನು ಕಾಲಿನಿಂದಲೇ ನಡೆದು ಹೋಗಿ ಕೊಲ್ಲುವೆನು. ಈ ಭೂಮಿಯಲ್ಲಿ ಏನೋ ದೋಷವಿರುವುದೆಂದು ತಿಳಿದು ಈ

ತಥೇತ್ಯುಕ್ತ್ವಾ ಬಲದೇವೋ ರಥ ಏವ ತಸ್ಥೌ ॥ ೯೭ ॥
ಕೃಷ್ಣೋಽಪಿ ದ್ವಿಕ್ರೋಶಮಾತ್ರಂ ಭೂಮಿಭಾಗಮನುಸೃತ್ಯ
ದೂರಸ್ಥಿತಸ್ಯೈವ ಚಕ್ರಂ ಕ್ಷಿಪ್ತ್ವಾ ಶತಧನುಷಶ್ಶಿರಶ್ಚಿಚ್ಛೇದ ॥ ೯೮ ॥

ತಚ್ಛರೀರಾಂಬರಾದಿಷು ಚ ಬಹುಪ್ರಕಾರಮನ್ವಿಚ್ಛನ್ನಪಿ
ಸ್ಯಮಂತಕಮಣಿಂ ನಾವಾಪ ಯದಾ ತದೋಪಗಮ್ಯ
ಬಲಭದ್ರಮಾಹ ॥ ೯೯ ॥

ವೃಥೈವಾಸ್ಮಾಭಿಃ ಶತಧನುರ್ಘಾತಿತಃ । ನ ಪ್ರಾಪ್ತಮಖಿಲಜಗತ್ಸಾರಭೂತಂ
ತನ್ಮಹಾರತ್ನಂ ಸ್ಯಮಂತಕಾಖ್ಯಮಿತ್ಯಾಕರ್ಣ್ಯ ಉದ್ಭೂತಕೋಪೋ
ಬಲದೇವೋ ವಾಸುದೇವಮಾಹ ॥ ೧೦೦ ॥

ಧಿಕ್ತ್ವಾಂ ಯಸ್ತ್ವಮೇವಮರ್ಥಲಿಪ್ಸುಃ ಏತಚ್ಚ ತೇ ಭ್ರಾತೃತ್ವಾನ್ಮಯಾ
ಕ್ಷಾಂತಂ ತದಯಂ ಪಂಥಾಸ್ಸ್ವೇಚ್ಛಯಾ ಗಮ್ಯತಾಂ ನ ಮೇ

---

ಕುದುರೆಗಳು ಭಯಪಡುತ್ತವೆ. ಈ ಭೂಮಿಯನ್ನು ದಾಟಿ ಬರಬೇಡ." ಎಂದು ಹೇಳಿದನು. ಬಲದೇವನು ಹಾಗೆಯೇ ಆಗಲೆಂದು ರಥದಲ್ಲಿಯೇ ಇದ್ದನು. ಕೃಷ್ಣನು ಎರಡು ಹರಿದಾರಿಯವರೆಗೆ ಶತಧನ್ವನ ಹಿಂದೆ ಓಡಿ ದೂರದಲ್ಲಿದ್ದರೂ ಅವನ ಮೇಲೆ ಚಕ್ರಾಯುಧವನ್ನು ಪ್ರಯೋಗಿಸಿ ಅವನ ತಲೆಯನ್ನು ಕತ್ತರಿಸಿದನು. ಬಳಿಕ ಅವನ ಶರೀರವನ್ನೂ ಬಟ್ಟೆಗಳನ್ನೂ ಅನೇಕ ಬಗೆಯಲ್ಲಿ ಹುಡುಕಿದರೂ ಸ್ಯಮಂತಕ ರತ್ನವು ಸಿಕ್ಕಲಿಲ್ಲ. ಆಗ ಕೃಷ್ಣನು ಬಲರಾಮನ ಸಮೀಪಕ್ಕೆ ಬಂದು ಶತಧನ್ವನನ್ನು ನಾವು ವ್ಯರ್ಥವಾಗಿ ಕೊಂದೆವು. ಸಕಲ ಜಗತ್ತಿಗೂ ಸಾರಭೂತವಾದ ಸ್ಯಮಂತಕ ಮಹಾ ರತ್ನವು ಸಿಕ್ಕಲಿಲ್ಲ" ಎಂದನು.

೧೦೧-೧೦೪. ಈ ಮಾತನ್ನು ಕೇಳಿ ಬಲದೇವನು ಕೋಪದಿಂದ ವಾಸುದೇವನನ್ನು ಕುರಿತು ಈ ರೀತಿಯಲ್ಲಿ ಹಣದಾಸೆಯುಳ್ಳ ನಿನ್ನನ್ನು ನಿಂದಿಸಬೇಕು. ತಮ್ಮ

ದ್ವಾರಕಯಾ ■ ತ್ವಯಾ ■ ಚಾಶೇಷಬಂಧುಭಿಃ
ಕಾರ್ಯಮಲಮಲಮೇಭಿರ್ಮಮಾಗ್ರತೋಽಳೀಕಶಪಥೈರಿತ್ಯಾಕ್ಷಿಪ್ಯ
ತತ್ಕಥಾಂ ಕಥಂಚಿತ್ ಪ್ರಸಾದ್ಯಮಾನೋಽಪಿ ನ ತಸ್ಥೌ ॥ ೧೦೧ ॥

ಸ ವಿದೇಹಪುರೀಂ ಪ್ರವಿವೇಶ ॥ ೧೦೨ ॥

ಜನಕರಾಜಶ್ಚಾರ್ಘ್ಯಪೂರ್ವಕಮೇನಂ ಗೃಹಂ ಪ್ರವೇಶಯಾಮಾಸ ॥೧೦೩॥

ಸ ತತ್ರೈವ ಚ ತಸ್ಥೌ ॥ ೧೦೪ ॥

ವಾಸುದೇವೋಽಪಿ ದ್ವಾರಕಾಮಾಜಗಾಮ ॥ ೧೦೫ ॥

ಯಾವಚ್ಚ ಜನಕರಾಜಗೃಹೇ ಬಲಭದ್ರೋಽವತಸ್ಥೇ
ತಾವದ್ಧಾರ್ತರಾಷ್ಟ್ರೋ ದುರ್ಯೋಧನಸ್ತತ್ಸಕಾಶಾದ್ಗದಾ
ಶಿಕ್ಷಾಮಶಿಕ್ಷಯತ್ ॥ ೧೦೬ ॥

---

ನೆಂದು ನಾನು ನಿನ್ನನ್ನು ಕ್ಷಮಿಸಿದೆನು. ನಿನ್ನ ದಾರಿಯಲ್ಲಿ ನೀನು ಹೋಗು, ನನಗೆ ದ್ವಾರಕೆಯಿಂದಲಾಗಲಿ, ನಿನ್ನಿಂದಾಗಲಿ, ಬಂಧುಜನರಿಂದಲಾಗಲಿ, ಯಾವ ಪ್ರಯೋಜನವೂ ಇಲ್ಲ. ನನ್ನೆದುರಿಗೆ ನೀನು ಹೇಳುವ ಸುಳ್ಳಾದ ಪ್ರತಿಜ್ಞೆಯು ಸಾಕು" ಎಂದು ಅವನು ಹೇಳುವ ಮಾತುಗಳನ್ನು ತಿರಸ್ಕರಿಸಿ ಕೃಷ್ಣನು ಎಷ್ಟು ಹೇಳಿದರೂ ಕೇಳದೆ ವಿದೇಹ ರಾಜನ ಪಟ್ಟಣಕ್ಕೆ ಹೋದನು. ಜನಕರಾಜನು ಅವನಿಗೆ ಅರ್ಘ್ಯಾದಿ ಸತ್ಕಾರಗಳನ್ನು ಮಾಡಿ ತನ್ನ ಮನೆಗೆ ಕರೆದುಕೊಂಡು ಹೋದನು. ಅವನು ಅಲ್ಲಿಯೇ ಇದ್ದನು.

೧೦೫-೧೦೬. ವಾಸುದೇವನಾದರೋ ದ್ವಾರಕೆಗೆ ಬಂದು ಸೇರಿದನು. ಬಲಭದ್ರನು ಎಷ್ಟು ಕಾಲದವರೆಗೆ ಜನಕರಾಜನ ಮನೆಯಲ್ಲಿದ್ದನೋ ಅಲ್ಲಿಯವರೆಗೆ ಧೃತರಾಷ್ಟ್ರನ ಮಗನಾದ ದುರ್ಯೋಧನನು ಅವನಿಂದ ಗದಾಯುದ್ಧವನ್ನು ಅಭ್ಯಾಸ ಮಾಡಿದನು. ಮೂರು ವರ್ಷದ ಮೇಲೆ ಬಭ್ರು, ಉಗ್ರಸೇನ ಮುಂತಾದಯಾದವರು

ವರ್ಷತ್ರಯಾಂತೇ ಚ ಬಭ್ರೂಗ್ರಸೇನಪ್ರಭೃತಿಭಿರ್ಯಾದವೈರ್ನ
ತದ್ರತ್ನಂ ಕೃಷ್ಣೇನಾಪಹೃತಮಿತಿ ಕೃತಾವಗತಿಭಿರ್ವಿದೇಹನಗರೀಂ
ಗತ್ವಾ ಬಲದೇವಃ ಸಂಪ್ರತ್ಯಾಯ್ಯ ದ್ವಾರಕಾಮಾನೀತಃ ॥ ೧೦೭ ॥

ಅಕ್ರೂರೋಽಪ್ಯುತ್ತಮಮಣಿಸಮುದ್ಭೂತಸುವರ್ಣೇನ ಭಗವದ್ಧ್ಯಾ
ನಪರೋಽನವರತಂ ಯಜ್ಞಾನಿಯಾಜ ॥ ೧೦೮ ॥

ಸವನಗತೌ ಹಿ ಕ್ಷತ್ರಿಯವೈಶ್ಯೌ ನಿಘ್ನನ್ ಬ್ರಹ್ಮಹಾ ಭವ
ತೀತ್ಯೇವಂ ಪ್ರಕಾರಂ ದೀಕ್ಷಾಕವಚಂ ಪ್ರವಿಷ್ಟ ಏವ ತಸ್ಥೌ ॥ ೧೦೯ ॥

ದ್ವಿಷಷ್ಟಿವರ್ಷಾಣ್ಯೇವಂ ತನ್ಮಣಿಪ್ರಭಾವಾತ್ತತ್ರೋಪಸರ್ಗದುರ್ಭಿ
ಕ್ಷಮಾರಿಕಾಮರಣಾದಿಕಂ ನಾಭೂತ್ ॥ ೧೧೦ ॥

ಅಥಾಕ್ರೂರಪಕ್ಷೀಯೈರ್ಭೋಜೈಶ್ಶತ್ರುಘ್ನೇ ಸತ್ವತಸ್ಯ ಪ್ರಪೌತ್ರೇ
ವ್ಯಾಪಾದಿತೇ ಭೋಜೈಸ್ಸಹಾಕ್ರೂರೋ ದ್ವಾರಕಾಮಪಹಾಯಾ
ಪಕ್ರಾಂತಃ ॥ ೧೧೧ ।

---

ಸ್ಯಮಂತಕ ರತ್ನವನ್ನು ಕೃಷ್ಣನು ಅಪಹರಿಸಲಿಲ್ಲವೆಂದು ತಿಳಿದು ವಿದೇಹರಾಜನ ಪಟ್ಟಣಕ್ಕೆ ಹೋಗಿ ಬಲದೇವನಿಗೆ ನಂಬಿಕೆಯನ್ನುಂಟುಮಾಡಿ ಅವನನ್ನು ದ್ವಾರಕೆಗೆ ಕರೆದುಕೊಂಡು ಬಂದರು.

೧೦೮-೧೧೦. ಅಕ್ರೂರನು ಆ ಸ್ಯಮಂತಕ ಮಣಿಯಿಂದ ಹುಟ್ಟಿದ ಚಿನ್ನದಿಂದ ಭಗವಂತನನ್ನು ಧ್ಯಾನಿಸುತ್ತ ಯಾವಾಗಲೂ ಯಜ್ಞಗಳನ್ನು ಮಾಡುತ್ತಿದ್ದನು ಯಜ್ಞದೀಕ್ಷೆಯಲ್ಲಿರುವ ಕ್ಷತ್ರಿಯ, ವೈಶ್ಯರನ್ನು ಕೊಂದರೆ ಬ್ರಹ್ಮಹತ್ಯಾದೋಷವು ಬರುವುದೆಂಬ ಶಾಸ್ತ್ರವನ್ನನುಸರಿಸಿ ಅಕ್ರೂರನು ದೀಕ್ಷಾಕವಚದಲ್ಲಿ ಪ್ರವೇಶಿಸಿದ್ದನು. ಅರವತ್ತೆರಡು ವರ್ಷಗಳವರೆಗೆ ಆ ರತ್ನದ ಮಹಿಮೆಯಿಂದ ಆ ಪ್ರದೇಶದಲ್ಲಿ ಕ್ಷಾಮ, ರೋಗ, ಅನಾವೃಷ್ಟಿ ಮುಂತಾದ ಬಾಧೆಗಳಾಗಲಿ, ಮರಣಗಳಾಗಲಿ ಇರಲಿಲ್ಲ.

೧೧೧-೧೧೨. ಅಕ್ರೂರನ ಪಕ್ಷದವರಾದ ಭೋಜರು ಸತ್ವತನ ಮೊಮ್ಮಗನಾದ ಶತ್ರುಘ್ನನೆಂಬವನನ್ನು ಕೊಲ್ಲಲು ಅಕ್ರೂರನು ಭೋಜರೊಡನೆ ದ್ವಾರಕೆಯನ್ನು ಬಿಟ್ಟು

ತದಪಕ್ರಾಂತಿದಿನಾದಾರಭ್ಯ ತತ್ರೋಪಸರ್ಗದುರ್ಭಿಕ್ಷ
ವ್ಯಾಳಾನಾವೃಷ್ಟಿಮಾರಿಕಾದ್ಯುಪದ್ರವಾ ಬಭೂವುಃ ॥ ೧೧೨ ॥

ಅಥ ಯಾದವಾ ಬಲಭದ್ರೋಗ್ರಸೇನಸಮವೇತಾ ಮಂತ್ರ
ಮಮಂತ್ರಯನ್ ॥ ೧೧೩ ॥

ಭಗವಾನುರಗಾರಿಕೇತನಃ ಕಿಮಿದಮೇಕದೈವ
ಪ್ರಚುರೋಪದ್ರವಾಗಮನಮೇತದಾಲೋಚ್ಯತಾಮಿತ್ಯುಕ್ತೇಂಧಕನಾಮಾ
ಯದುವೃದ್ಧಃ ಪ್ರಾಹ ॥ ೧೧೪ ॥

ಅಸ್ಯಾಕ್ರೂರಸ್ಯ ಪಿತಾಶ್ವಫಲ್ಗೋ ಯತ್ರಯತ್ರಾಭೂತ್ತ
ತ್ರತತ್ರ ದುರ್ಭಿಕ್ಷಮಾರಿಕಾನಾವೃಷ್ಟ್ಯಾದಿಕಂ ನಾಭೂತ್ ॥ ೧೧೫ ॥

ಕಾಶೀರಾಜಸ್ಯ ವಿಷಯೇ ತ್ವನಾವೃಷ್ಟ್ಯಾಂ ಚಶ್ವಫಲ್ಗೋನಿತಃ
ತತಸ್ತತ್ಕ್ಷಣಾದೇವದೇವೋ ವವರ್ಷ ॥ ೧೧೬ ॥

---

ಹೊರಟುಹೋದನು. ಅವನು ಹೊರಟು ಹೋದಂದಿನಿಂದ ದ್ವಾರಕೆಯಲ್ಲಿ ಕ್ಷಾಮ, ಅನಾವೃಷ್ಟಿ, ರೋಗ ಮುಂತಾದ ಬಾಧೆಗಳುಂಟಾದುವು ಆ ಮೇಲೆ ಯಾದವರು ಬಲಭದ್ರ ಮತ್ತು ಉಗ್ರಸೇನರೊಡನೆ ಸೇರಿ ಮಂತ್ರಾಲೋಚನೆಯನ್ನು ಮಾಡಿದರು. ಭಗವಂತನೂ ಗರುಡಧ್ವಜನೂ ಆದ ಕೃಷ್ಣನು ಒಂದೇ ಕಾಲದಲ್ಲಿ ಎಲ್ಲಾ ಉಪದ್ರವ ಗಳೂ ಬರಲು ಕಾರಣವೇನೆಂಬುದನ್ನು ಆಲೋಚಿಸಬೇಕೆಂದು ಕೇಳುತ್ತಲು ಅಂಧಕ ನೆಂಬ ಯದುವೃದ್ಧನು ಕಥೆಯನ್ನು ಹೇಳಲು ಪ್ರಾರಂಭಿಸಿದನು. ಅಕ್ರೂರನ ತಂದೆ ಯಾದ ಶ್ವಫಲ್ಗನೆಂಬುವನು ಎಲ್ಲೆಲ್ಲಿ ಇರುವನೋ ಅಲ್ಲಲ್ಲಿ ದುರ್ಭಿಕ್ಷ, ರೋಗ, ಅನಾ ವೃಷ್ಟಿ ಮುಂತಾದುವು ಇರುವುದಿಲ್ಲ. ಕಾಶೀರಾಜನ ದೇಶದಲ್ಲಿ ಅನಾವೃಷ್ಟಿಯುಂಟಾ ಯಿತು. ಆಗ ಶ್ವಫಲ್ಗನನ್ನು ಅಲ್ಲಿಗೆ ಕರೆದುಕೊಂಡು ಹೋದರು. ಆ ಕ್ಷಣದಲ್ಲಿಯೇ ಇಂದ್ರನು ಅಲ್ಲಿ ಮಳೆಯನ್ನು ಸುರಿಸಿದನು.

ಕಾಶೀರಾಜಪತ್ನ್ಯಾಶ್ಚ ಗರ್ಭೇ ಕನ್ಯಾರತ್ನಂ ಪೂರ್ವಮಾಸೀತ್ ॥ ೧೧೭ ॥

ಸಾ ಚ ಕನ್ಯಾಪೂರ್ಣೇಽಪಿ ಪ್ರಸೂತಿಕಾಲೇನೈವ ನಿಶ್ಚಕ್ರಾಮ ॥ ೧೧೮ ॥

ಏವಂ ಚ ತಸ್ಯ ಗರ್ಭಸ್ಯ ದ್ವಾದಶವರ್ಷಾಣ್ಯನಿಷ್ಕ್ರಾಮತೋ
ಯಯುಃ ॥ ೧೧೯ ॥

ಕಾಶೀರಾಜಶ್ಚ ತಾಮಾತ್ಮಜಾಂ ಗರ್ಭಸ್ಥಾಮಾಹ ॥ ೧೨೦ ॥

ಪುತ್ರಿ ಕಸ್ಮಾನ್ನ ಜಾಯಸೇ ನಿಷ್ಕ್ರಮ್ಯತಾಮಾಸ್ಯಂ ತೇ
ದ್ರಷ್ಟುಮಿಚ್ಛಾಮಿ ಏತಾಂ ಚ ಮಾತರಂ ಕಿಮಿತಿ ಚಿರಂ
ಕ್ಲೇಶಯಿಷ್ಯಸೀತ್ಯುಕ್ತಾ ಗರ್ಭಸ್ಥೈವ ವ್ಯಾಜಹಾರ ॥ ೧೨೧ ॥

ತಾತಯದ್ಯೇಕೈಕಾಂಗಾಂ ದಿನೇ ದಿನೇ ಬ್ರಾಹ್ಮಣಾಯ
ಪ್ರಯಚ್ಛಸಿ ತದಹಮನ್ಯೈಸ್ತ್ರಿಭಿರ್ವರ್ಷೈರಸ್ಮಾದ್ಗ
ರ್ಭಾತ್ತತೋಽವಶ್ಯಂ ನಿಷ್ಕ್ರಮಿಷ್ಯಾಮೀತ್ಯೇತದ್ವಚನ
ಮಾಕರ್ಣ್ಯ ರಾಜಾ ದಿನೇ ದಿನೇ ಬ್ರಾಹ್ಮಣಾಯ ಗಾಂಪ್ರಾದಾತ್ ॥ ೧೨೨ ॥

---

೧೧೭–೧೨೫. ಇದಕ್ಕೆ ಹಿಂದೆಯೇ ಕಾಶೀರಾಜನ ಪತ್ನಿಯ ಗರ್ಭದಲ್ಲಿ ಕನ್ಯಾರತ್ನವಿದ್ದಿತು. ಪ್ರಸವಕಾಲವು ಸಮೀಪಿಸಿದರೂ ಆ ಕನ್ಯೆಯು ಗರ್ಭದಿಂದ ಹೊರಗೆ ಬರಲಿಲ್ಲ. ಹೀಗೆ ಆ ಗರ್ಭಕ್ಕೆ ಹನ್ನೆರಡು ವರ್ಷಗಳು ಕಳೆದುವು. ಕಾಶೀರಾಜನು ಗರ್ಭದಲ್ಲಿರುವ ಮಗಳನ್ನು ಕುರಿತು, "ಮಗಳೇ! ಯಾತಕ್ಕೆ ಹುಟ್ಟದಿರುವೆ? ಗರ್ಭದಿಂದ ಹೊರಕ್ಕೆ ಬಾ! ನಿನ್ನ ಮುಖವನ್ನು ನೋಡಬೇಕೆಂದು ಬಯಸುವೆನು. ನಿನ್ನ ತಾಯನ್ನು ಯಾವ ಕಾರಣದಿಂದ ಕ್ಲೇಶಪಡಿಸುತ್ತಿರುವೆ?" ಎಂದು ಕೇಳಿದನು. ಆ ಕನ್ಯೆಯು ಗರ್ಭದಲ್ಲಿದ್ದುಕೊಂಡೇ ತಂದೆಯನ್ನು ಕುರಿತು, "ತಂದೆಯೇ! ಪ್ರತಿದಿನವೂ ಬ್ರಾಹ್ಮಣನಿಗೆ ಒಂದು ಗೋದಾನವನ್ನು ಮಾಡುತ್ತಿದ್ದರೆ ಇಂದಿಗೆ ಮೂರು ವರ್ಷಕ್ಕೆ ಈ ಗರ್ಭದಿಂದ ನಾನು ಹೊರಗೆ ಬರುವೆನು," ಎಂದು ಹೇಳಿದಳು. ರಾಜನು ಈ ಮಾತನ್ನು ಕೇಳಿ ಪ್ರತಿದಿನವೂ ಒಬ್ಬ ಬ್ರಾಹ್ಮಣನಿಗೆ ಒಂದು ಗೋವನ್ನು ದಾನಮಾಡು

ಸಾಪಿ ತಾವತಾ ಕಾಲೇನ ಜಾತಾ ॥ ೧೨೩ ॥

ತತಸ್ತಸ್ಯಾಃ ಪಿತಾ ಗಾಂದಿನೀತಿ ನಾಮ ಚ ಕಾರ ॥ ೧೨೪ ॥

ತಾಂ ಚ ಗಾಂದಿನೀಂ ಕನ್ಯಾಂ ಶ್ವಫಲ್ಕಾಯೋಪ ಕಾರಿಣೇ
ಗೃಹಮಾಗತಾಯಾರ್ಘ್ಯಭೂತಾಂ ಪ್ರಾದಾತ್ ॥ ೧೨೫ ॥

ತಸ್ಯಾಮಯಮಕ್ರೂರಃ ಶ್ವಫಲ್ಕಾಜ್ಜಜ್ಞೇ ॥ ೧೨೬ ॥

ತಸ್ಯೈವಂ ಗುಣಮಿಥುನಾದುತ್ಪತ್ತಿಃ ॥ ೧೨೭ ॥

ತತ್ಕಥಮಸ್ಮಿನ್ನಪಕ್ರಾಂತೇ ಅತ್ರ ದುರ್ಭಿಕ್ಷಮಾರಿಕಾದ್ಯು
ಪದ್ರವಾ ನ ಭವಿಷ್ಯಂತಿ ॥ ೧೨೮ ॥

ತದಯಮತ್ರಾನೀಯತಾಂ ಅಲಮತಿಗುಣವತ್ಯಪರಾಧಾ
ನ್ವೇಷಣೇನೇತಿ ಯದುವೃದ್ಧಸ್ಯಾಂಧಕಸ್ಯೈತದ್ವಚನಮಾ

---

ತ್ತಿದ್ದನು. ಮೂರು ವರ್ಷದ ಮೇಲೆ ಆ ಕನ್ಯೆಯು ಹುಟ್ಟಿದಳು. ಆ ಕನ್ಯೆಗೆ ಅವಳ ತಂದೆಯು ಗಾಂದಿನಿ ಎಂದು ನಾಮಕರಣ ಮಾಡಿದನು. ಆ ಗಾಂದಿನಿಯನ್ನು ರಾಜನು ತನ್ನ ಮನೆಗೆ ಬಂದು ಉಪಕಾರಮಾಡಿದ ಶ್ವಫಲ್ಕನಿಗೆ ದಾನಮಾಡಿದನು.

೧೨೬-೧೩೦. ಆ ಶ್ವಫಲ್ಕನಿಗೆ ಗಾಂದಿನಿಯಲ್ಲಿ ಈ ಅಕ್ರೂರನು ಹುಟ್ಟಿದನು. ಅಕ್ರೂರನಿಗೆ ಈ ಮಹಿಮೆಯು ಅವನ ತಂದೆ ತಾಯಿಗಳಿಂದ ಬಂದುದು. ಇಂತಹ ಅಕ್ರೂರನು ದ್ವಾರಕೆಯನ್ನು ಬಿಟ್ಟು ಹೋದಮೇಲೆ ಇಲ್ಲಿ ಕ್ಷಾಮಡಾಮರಾದಿ ಉಪದ್ರವಗಳು ಏಕೆ ಹುಟ್ಟದಿದ್ದಾವು ? ಆದ್ದರಿಂದ ಅವನನ್ನು ಇಲ್ಲಿಗೆ ಕರೆದುಕೊಂಡು ಬನ್ನಿರಿ. ವಿಶೇಷ ಗುಣವಂತನಲ್ಲಿ ತಪ್ಪುಗಳನ್ನೆಣಿಸಬಾರದು. ಎಂದು ಹೇಳಿದ ಯದುವೃದ್ಧನಾದ ಅಂಧಕನ ಮಾತನ್ನು ಕೇಳಿ, ಕೃಷ್ಣ, ಉಗ್ರಸೇನ, ಬಲಭದ್ರ ಮುಂತಾದ ಯದುಗಳು ಅಕ್ರೂರನ ಅಪರಾಧವನ್ನು ಕ್ಷಮಿಸಿ ಅವನಿಗೆ ಅಭಯವನ್ನು ಕೊಟ್ಟು

ಕೆಚ್ಚಿರ್ ಕೇಶವೋಗ್ರಸೇನ ಬಲಭದ್ರ ಪುರೋಗಮೈರ್ಯದುಭಿಃ
ಕೃತಾಪರಾಧ ತಿತಿಕ್ಷುಭಿರಭಯಂ ದತ್ವಾಶ್ವಫಲ್ಗ ಪುತ್ರಃ
ಸ್ವಪುರಮಾನೀತಃ ॥ ೧೨೯ ॥

ತತ್ರ ಚಾಗತಮಾತ್ರ ಏವ ತಸ್ಯ ಸ್ಯಮಂತಕಮಣೇಃ
ಪ್ರಭಾವಾದನಾವೃಷ್ಟಿಮಾರಿಕಾದುರ್ಭಿಕ್ಷವ್ಯಾಳಾದ್ಯುಪದ್ರವೋಪಶಮಾ
ಬಭೂವುಃ ॥ ೧೩೦ ॥

ಕೃಷ್ಣಶ್ಚಿಂತಯಾಮಾಸ ॥ ೧೩೧ ॥

ಸ್ವಲ್ಪಮೇತತ್ಕಾರಣಂ ಯದಯಂ ಗಾಂದಿನ್ಯಾಂ ಶ್ವಫಲ್ಗೇನಾಕ್ರೂರೋ
ಜನಿತಃ ॥ ೧೩೨ ॥

ಸುಮಹಾಂಶ್ಚಾಯಮನಾವೃಷ್ಟಿದುರ್ಭಿಕ್ಷಮಾರಿಕಾದ್ಯುಪದ್ರವ
ಪ್ರತಿಷೇಧಕಾರೀ ಪ್ರಭಾವಃ ॥ ೧೩೩ ॥

ತನ್ನೂನಮಸ್ಯ ಸಕಾಶೇಸ ಮಹಾಮಣಿಃ ಸ್ಯಮಂತಕಾಖ್ಯಸ್ತಿಷ್ಠತಿ ॥ ೧೩೪ ॥

ತಸ್ಯ ಹ್ಯೇವಂ ವಿಧಾಃ ಪ್ರಭಾವಾಃ ಶ್ರೂಯಂತೇ ॥ ೧೩೫ ॥

---

ದ್ವಾರಕೆಗೆ ಕರೆದುಕೊಂಡು ಬಂದರು. ಅವನು ಅಲ್ಲಿಗೆ ಬಂದ ಕ್ಷಣದಲ್ಲಿಯೇ ಆ ಸ್ಯಮಂತಕ ಮಣಿಯ ಪ್ರಭಾವದಿಂದ ಅನಾವೃಷ್ಟಿ, ಕ್ಷಾಮ, ರೋಗ ಸರ್ಪಾದಿಗಳ ಭಯವೂ ಬಾಧೆಗಳೂ ಶಾಂತವಾದುವು.

೧೩೧-೧೩೬. ಈ ಸಂದರ್ಭದಲ್ಲಿ ಕೃಷ್ಣನು ಯೋಚಿಸಿದನು. (ಇಲ್ಲಿ ವಿಶೇಷವೇನೆಂದರೆ — ಸರ್ವಜ್ಞನಾದ ಕೃಷ್ಣನಿಗೆ ಅಕ್ರೂರನಲ್ಲಿ ರತ್ನವಿರುವುದು ತಿಳಿದೇ ಇದ್ದಿತು. ಕ್ಷಾಮಡಾಮರಾದಿಗಳೂ ನಿಜವಾದುವಲ್ಲ. ತಪಸ್ವಿಗಳೇ ಮುಂತಾದ ಮಹಾ ಮಹಿಮರಿರುವ ಸ್ಥಳದಲ್ಲಿ ಯಾವ ಅರಿಷ್ಟಗಳೂ ಉಂಟಾಗುವುದಿಲ್ಲ. ಸರ್ವ

ಅಯಮಪಿ ಚ ಯಜ್ಞಾದಸಂತರಮನ್ಯತ್ಕ್ರತ್ವಂತರಂ
ತಸ್ಮಾನಂತರಮನ್ಯದ್ಯಜ್ಞಾಂ ತರಂಚಾಜಸ್ರಮವಿಚ್ಛಿನ್ನಂ ಯಜತೀತಿ ॥೧೩೬॥

ಅನಲ್ಪೋಪಾದಾನಂ ಚಾಸ್ಯಾಸಂಶಯಮತ್ರಾಸೌ ಮಣಿವರಸ್ತಿ
ಷ್ಠತೀತಿ ಕೃತಾಧ್ಯವಸಾಯೋನ್ಯತ್ಪ್ರಯೋಜನಮುದ್ದಿಶ್ಯ ಸಕಲ
ಯಾದವಸಮಾಜಮಾತ್ಮಗೃಹ ಏವಾಚೀಕರತ್ ॥ ೧೩೭ ॥

ತತ್ರ ಚೋಪವಿಷ್ಟೇಷ್ವಖಿಲೇಷು ಯದುಷುಪೂರ್ವಂ ಪ್ರಯೋಜನ
ಮುಪನ್ಯಸ್ಯ ಪರ್ಯವಸಿತೇ ತಸ್ಮಿನ್ ಪ್ರಸಂಗಾಂತರಪರಿಹಾಸ
ಕಥಾಮಕ್ರೂರೇಣ ಸಹ ಕೃತ್ವಾ ಜನಾರ್ದನಸ್ತಮಕ್ರೂರಮಾಹ ॥ ೧೩೮ ॥

---

ಪ್ರಕಾರದಿಂದಲೂ ಇತರರಿಗೆ ನಂಬಿಕೆಯನ್ನುಂಟುಮಾಡಿ ಅಪವಾದವನ್ನೂ ಪರಿಹರಿಸಿ ಕೊಳ್ಳಬೇಕೆಂದು ಲೋಕಕ್ಕೆ ತಿಳಿಸುವುದೇ ಕೃಷ್ಣನ ವ್ಯವಹಾರಾನುಸರಣೆಯೆಂದು ತಿಳಿಯಬೇಕು.) ಶ್ವಫಲ್ಗನಿಂದ ಗಾಂದಿನಿಯಲ್ಲಿ ಹುಟ್ಟಿದ ಅಕ್ರೂರನ ಅಲ್ಪವಾದ ಮಹಿಮೆಯಿಂದ ಮಹತ್ತರವಾದ ದುರ್ಭಿಕ್ಷ, ಕ್ಷಾಮ, ಮಾರಿಕಾದ್ಯುಪದ್ರವಗಳು ನಿಲ್ಲಲಾರವು ಇವನ ಬಳಿಯಲ್ಲಿ ಸ್ಯಮಂತಕ ಮಹಾರತ್ನವು ಇರುವುದು ಖಂಡಿತವಾದುದು. ಅದಕ್ಕೆ ಈ ಮಹಿಮೆಗಳಿರುವುವು. ಅಲ್ಲದೆ ಈ ಅಕ್ರೂರನು ಒಂದು ಯಜ್ಞವಾದ ಮೇಲೆ ಮತ್ತೊಂದು ಯಜ್ಞವನ್ನು ಪ್ರಾರಂಭಿಸುತ್ತ ಅನೇಕ ಯಜ್ಞಗಳನ್ನು ಮಾಡುತ್ತಿರುವನು.

೧೩೭-೧೩೮. ಈ ಯಜ್ಞಗಳಿಗೆ ಕಾರಣವಾದ ನಿಧಿಯಂತಿರುವ ರತ್ನವು ಇವನಲ್ಲಿರುವುದೆಂಬ ವಿಷಯದಲ್ಲಿ ಸಂದೇಹವಿಲ್ಲವೆಂದು ಕೃಷ್ಣನು ನಿಶ್ಚಯಿಸಿ ವಿವಾಹವೇ ಮುಂತಾದ ಬೇರೆ ಪ್ರಯೋಜನವನ್ನು ಉದ್ದೇಶಿಸಿ ಸಕಲ ಯಾದವರನ್ನೂ ತನ್ನ ಮನೆಯಲ್ಲಿ ಸೇರಿಸಿದನು. ಅವರೆಲ್ಲರೂ ಬಂದು ಕುಳಿತಮೇಲೆ ಯಾವ ಪ್ರಯೋಜನ

ದಾನಪತೇ ಜಾನೀಮ ಏವ ವಯಂ ಯಥಾ ಶತಧನ್ವನಾ
ತದಿದಮಖಿಲಂ ಜಗತ್ಸಾರಭೂತಂ ಸ್ಯಮಂತಕಂ ರತ್ನಂ ಭವತಃ
ಸಮರ್ಪಿತಂ ತದಶೇಷರಾಷ್ಟ್ರೋಪಕಾರಕಂ ಭವತ್ಸಕಾಶೇ ತಿಷ್ಠತಿ
ತಿಷ್ಠತು ಸರ್ವ ಏವ ವಯಂ ತತ್ಪ್ರಭಾವಫಲಭುಜಃ
ಕಿಂ ತ್ವೇಷ ಬಲಭದ್ರೋಽಸ್ಮಾನಾಶಂಕಿತವಾನ್ ತದಸ್ಮತ್ಪ್ರೀತಯೇ
ದರ್ಶಯಸ್ವೇತ್ಯಭಿಧಾಯ ಜೋಷಂ ಸ್ಥಿತೇ ಭಗವತಿ
ವಾಸುದೇವೇ ಸರತ್ನಸ್ಸೋಽಚಿಂತಯತ್ || ೧೩೯ ||

ಕಿಮತ್ರಾನುಷ್ಠೇಯಮನ್ಯಥಾ ಚೇದ್ಬ್ರವೀಮ್ಯಹಂ ತತ್ಕೇವಲಾಂಬ
ರತಿರೋಧಾನಮನ್ವಿಷ್ಯಂತೋ ರತ್ನಮೇತದ್ರಕ್ಷ್ಯಂತಿ
ಅತಿವಿರೋಧೋ ನ ಕ್ಷಮ ಇತಿ ಸಂಚಿಂತ್ಯ ತಮಖಿಲಜಗತ್ಕಾರಣ
ಭೂತಂ ನಾರಾಯಣಮಾಹಾಕ್ರೂರಃ || ೧೪೦ ||

---

ಕ್ಕಾಗಿ ಅವರನ್ನೆಲ್ಲಾ ಕರೆಸಿದನೋ ಆ ವಿಷಯವನ್ನು ಮೊದಲು ಮಾತನಾಡಿ ಅದು ಮುಗಿದಮೇಲೆ ಅಕ್ರೂರನೊಡನೆ ಹಾಸ್ಯಕರವಾದ ಮಾತುಗಳನ್ನಾಡುತ್ತ ಕೃಷ್ಣನು ಅವನನ್ನು ಕುರಿತು "ದಾನಿಗಳಲ್ಲಿ ಶ್ರೇಷ್ಠನಾದ ಅಕ್ರೂರನೇ! ಶತಧನ್ವನು ಕಲ ಜಗತ್ತಿನಲ್ಲಿಯೂ ಸಾರವಾದ ಸ್ಯಮಂತಕ ರತ್ನವನ್ನು ನಿನಗೆ ಕೊಟ್ಟನೆಂದು ನಾವು ತಿಳಿದೇ ಇರುವೆವು. ಸಕಲ ರಾಷ್ಟ್ರಗಳಿಗೂ ಉಪಕಾರಕವಾದ ಅದು ನಿನ್ನಲ್ಲಿರುವುದು. ಇರಲಿ, ನಾವೆಲ್ಲರೂ ಅದರ ಮಹಿಮೆಯ ಫಲವನ್ನು ಅನುಭವಿಸುತ್ತಿರುವೆವು. ಆದರೆ ಈ ಬಲಭದ್ರನು ನನ್ನಲ್ಲಿ ಸಂದೇಹಪಟ್ಟಿರುವನು. ಆದುದರಿಂದ ನಮ್ಮಲ್ಲಿ ಪ್ರೀತಿಯುಂಟಾಗುವುದಕ್ಕಾಗಿ ಅದನ್ನು ತೋರಿಸಿಬಿಡು" ಎಂದು ಹೇಳಿ ಸುಮ್ಮನಾಗುತ್ತಲು ರತ್ನವನ್ನಿಟ್ಟುಕೊಂಡಿದ್ದ ಅಕ್ರೂರನು ತನ್ನಲ್ಲಿ ಯೋಚಿಸಿದನು.

೧೪೦-೧೪೫. "ನಾನು ಈಗೇನು ಮಾಡಬೇಕು? ಬೇರೆ ವಿಧವಾಗಿ ಮಾತನಾಡಿದರೆ ನನ್ನ ವಸ್ತ್ರಾದಿಗಳನ್ನು ಹುಡುಕಿ ಆ ರತ್ನವನ್ನು ನೋಡುವರು. ವಿಶೇಷವಾದ ವೈರವನ್ನು ಕಟ್ಟಿಕೊಳ್ಳಬಾರದು" ಎಂದು ನಿಶ್ಚಯಿಸಿ ಸಮಸ್ತ ಜಗತ್ತಿಗೂ

ಭಗವನ್ಮಮೇತತ್ಸ್ಯಮಂತಕರತ್ನಂ ಶತಧನುಷಾ ಸಮರ್ಪಿತಂ
ಅಪಗತೇ ಚ ತಸ್ಮಿನ್ ಅದ್ಯ ಶ್ವಃ ಪರಶ್ವೋವಾ
ಭಗವಾನ್ಯಾಚಯಿಷ್ಯತೀತಿ ಕೃತಮತಿರತಿಕೃಚ್ಛ್ರೇಣೈತಾವಂತಂ
ಕಾಲಮಧಾರಯಂ ॥ ೧೪೧ ॥

ತಸ್ಯ ಚ ಧಾರಣಕ್ಲೇಶೇನಾಹಮಶೇಷೋಪಭೋಗೇಷ್ವಸಂಗಿ
ಮಾನಸೋ ವೇದ್ಮಿ ಸ್ವಸುಖಕಲಾಮಪಿ ॥ ೧೪೨ ॥

ಏತಾವನ್ಮಾತ್ರಮಪ್ಯಶೇಷರಾಷ್ಟ್ರೋಪಕಾರಿ ಧಾರಯಿತುಂ ನ
ಶಕ್ನೋತೀತಿ ಭವಾನ್ಮನ್ಯತ ಇತ್ಯಾತ್ಮನಾ ನ ಚೋದಿತವಾನ್ ॥ ೧೪೩ ॥

ತದಿದಂ ಸ್ಯಮಂತಕರತ್ನಂ ಗೃಹ್ಯತಾಮಿಚ್ಛಯಾ
ಯಸ್ಯಾಭಿಮತಂ ತಸ್ಯ ಸಮರ್ಪ್ಯತಾಂ ॥ ೧೪೪ ॥

ತತಃ ಸ್ವೋದರವಸ್ತ್ರನಿಗೋಪಿತಮತಿಲಘುಕನಕಸಮುದ್ಗ
ಕಗತಂ ಪ್ರಕಟೀಕೃತವಾನ್ ॥ ೧೪೫ ॥

---

ಕಾರಣನಾದ ನಾರಾಯಣನನ್ನು ಕುರಿತು “ ಮಹಾಮಹಿಮನೇ! ಈ ಸ್ಯಮಂತಕ ರತ್ನವನ್ನು ಶತಧನ್ವನು ನನಗೆ ಕೊಟ್ಟನು ಅವನು ಹೋದಮೇಲೆ ಈ ದಿನವೋ, ನಾಳೆಯೋ ನಾಡಿದ್ದೋ ಮಹಾಮಹಿಮನಾದ ನೀನು ಕೇಳುವೆಯೆಂದು ಇಲ್ಲಿಯವರೆಗೂ ಆ ರತ್ನವನ್ನು ಬಹು ಕಷ್ಟದಿಂದ ಧರಿಸಿದ್ದೆನು. ಅದನ್ನು ಧರಿಸಿದ್ದುದರಿಂದ ನಾನು ಯಾವ ಸುಖಗಳಲ್ಲಿಯೂ ಮನಸ್ಸುಮಾಡದೆ ಸುಖಲೇಶವನ್ನೂ ಅನುಭವಿಸದಿರುವೆನು. ಅಲ್ಪವಾದ ಕಾರ್ಯವಾದರೂ ಸಕಲ ರಾಷ್ಟ್ರಕ್ಕೂ ಉಪಕಾರಕವಾದ ಈ ರತ್ನವನ್ನು ಧರಿಸಲು ಶಕ್ತನಾಗಲಿಲ್ಲವೆಂದು ನೀನು ತಿಳಿಯುವೆಯೆಂದು ಭಯದಿಂದ ನೀನೇ ಇದನ್ನು ಧರಿಸೆಂದು ನಾನು ನಿನಗೆ ಹೇಳಲಿಲ್ಲ. ಈ ಸ್ಯಮಂತಕ ರತ್ನವನ್ನು ತೆಗೆದುಕೋ, ನಿನ್ನ ಇಷ್ಟದಂತೆ ಯಾರಿಗೆಬೇಕಾದರೂ ಕೊಡು ” ಎಂದು ಹೇಳಿ ತಾನು ಉಟ್ಟಿದ್ದ ವಸ್ತ್ರದಲ್ಲಿ ಮರೆಮಾಡಿದ್ದ ಸಣ್ಣ ಚಿನ್ನದ ಸಂಪುಟದಲ್ಲಿದ್ದ ರತ್ನವನ್ನು ತೋರಿಸಿದನು.

ತತಶ್ಚ ನಿಷ್ಕ್ರಾಮ್ಯ ಸ್ಯಮಂತಕಮಣಿಂ ತಸ್ಮಿನ್ ಯದು
ಕುಲಸಮಾಜೇ ಮುಮೋಚ ॥ ೧೪೬ ॥

ಮುಕ್ತಮಾತ್ರೇಚ ತಸ್ಮಿನ್ ಅತಿಕಾಂತ್ಯಾ ತದಖಿಲ
ಮಾಸ್ಥಾನಮುದ್ಯೋತಿತಂ ॥ ೧೪೭ ॥

ಅಥಾಹಾಕ್ರೂರಃ ಸ ಏಷ ಮಣಿಃ ಶತಧನ್ವನಾಸ್ಮಾಕಂ
ಸಮರ್ಪಿತಃ ಯಸ್ಯಾಯಂ ಸ ಏನಂ ಗೃಹ್ಣಾತ್ವಿತಿ ॥ ೧೪೮ ॥

ತಮಾಲೋಕ್ಯ ಸರ್ವಯಾದವಾನಾಂ ಸಾಧುಸಾಧ್ವಿತಿ
ವಿಸ್ಮಿತಮನಸಾಂ ವಾಚೋಽಶ್ರೂಯಂತ ॥ ೧೪೯ ॥

ತಮಾಲೋಕ್ಯಾತೀವ ಬಲಭದ್ರೋ ಮಮಾಯಮಚ್ಯುತೇ ನೈವ
ಸಾಮಾನ್ಯಸ್ಸಮನ್ವಿಚ್ಛಿತ ಇತಿ ಕೃತಸ್ಪೃಹೋಽಭೂತ್ ॥ ೧೫೦ ॥

ಮಮೈವಾಯಂ ಪಿತೃಧನ ಇತ್ಯತೀವ ಸತ್ಯಭಾಮಾಪಿ
ಸ್ಪೃಹಯಾಂಚಕಾರ ॥ ೧೫೧ ॥

---

೧೪೬-೧೫೧. ಬಳಿಕ ಸ್ಯಮಂತಕ ರತ್ನವನ್ನು ಆ ಸಂಪುಟದಿಂದ ತೆಗೆದು ಯದುಗಳ ಗುಂಪಿನಲ್ಲಿ ಬಿಚ್ಚಿ ತೋರಿಸಿದನು. ಆ ಕ್ಷಣವೇ ಅದರ ಕಾಂತಿಯಿಂದ ಸಭೆಯಲ್ಲಿ ಬೆಳಕಾಯಿತು. ಅಕ್ರೂರನು "ಶತಧನ್ವನು ಈ ರತ್ನವನ್ನು ನನಗೆ ಕೊಟ್ಟನು. ಇದು ಯಾರದೋ ಅವರು ಇದನ್ನು ತೆಗೆದುಕೊಳ್ಳಬಹುದು" ಎಂದನು. ಇದನ್ನು ಕಂಡು ಸಕಲಯಾದವರೂ ಆಶ್ಚರ್ಯದಿಂದ ಅಕ್ರೂರನನ್ನು ಹೊಗಳಿದರು. ಬಲಭದ್ರನು ರತ್ನವನ್ನು ನೋಡಿ ಕೃಷ್ಣನು ನನಗೂ ನಿನಗೂ ಈ ರತ್ನವು ಸಮಾನ ವಾದುದೆಂದು ಹೇಳಿದನೆಂದು ತಿಳಿದು ತಾನು ಅದನ್ನು ಅಪೇಕ್ಷಿಸಿದನು. ತಂದೆಯ ಧನ ವಾದುದರಿಂದ ಇದು ನನ್ನದೇ ಎಂದು ಸತ್ಯಭಾಮೆಯು ಅದನ್ನು ವಿಶೇಷವಾಗಿ ಪ್ರೀತಿಸಿದಳು.

ಬಲಸತ್ಯಾವಲೋಕನಾತ್ಕೃಷ್ಣೋऽಪ್ಯಾತ್ಮಾನಂ ಗೋಚಕ್ರಾಂತ
ರಾವಸ್ಥಿತಮಿವ ಮೇನೇ ॥ ೧೫೨ ॥

ಸಕಲಯಾದವಸಮಕ್ಷಂ ಚಾಕ್ರೂರವಾಹ ॥ ೧೫೩ ॥

ಏತದ್ಧಿ ಮಣಿರತ್ನಮಾತ್ಮಸಂಶೋಧನಾಯ ಏತೇಷಾಂ
ಯದೂನಾಂ ಮಯಾ ದರ್ಶಿತಂ ಏತಚ್ಚ ಮಮ ಬಲಭದ್ರಸ್ಯ
ಸಾಮಾನ್ಯಂ ಪಿತೃಧನಂ ಚೈತತ್ಸತ್ಯಭಾಮಾಯಾ ನಾನ್ಯಸ್ಯೈತತ್ ॥ ೧೫೪ ॥

ಏತಚ್ಚ ಸರ್ವಕಾಲಂ ಶುಚಿನಾ ಬ್ರಹ್ಮಚರ್ಯಾದಿಗುಣವತಾ
ಧ್ರಿಯಮಾಣಮಶೇಷರಾಷ್ಟ್ರಸ್ಯೋಪಕಾರಕಂ ಅಶುಚಿನಾ
ಧ್ರಿಯಮಾಣಮಾಧಾರಮೇವ ಹಂತಿ ॥ ೧೫೫ ॥

ಅತೋऽಹಮಸ್ಯ ಷೋಡಶಸ್ತ್ರೀಸಹಸ್ರಪರಿಗ್ರಹಾದಸಮರ್ಥೋ
ಧಾರಣೇ ಕಥಮೇತತ್ಸತ್ಯಭಾಮಾ ಸ್ವೀಕರೋತಿ ॥ ೧೫೬ ॥

---

೧೫೨–೧೫೫. ಬಲರಾಮ ಸತ್ಯಭಾಮೆಯರಿಬ್ಬರೂ ರತ್ನವನ್ನು ನೋಡುತ್ತಿರಲು ಕೃಷ್ಣನು ಗಾಡಿಯು ಹೋಗುತ್ತಿರುವಾಗ ಚಕ್ರಕ್ಕೂ ಎತ್ತಿಗೂ ನಡುವೆ ಸಿಕ್ಕಿಕೊಂಡ ಪ್ರಾಣಿಯಂತೆ ಕ್ಲೇಶಕ್ಕೆ ಗುರಿಯಾದನು. ಮತ್ತು ಸಕಲ ಯಾದವರೆದುರಿಗೆ ಅಕ್ರೂರ ನನ್ನು ಕುರಿತು " ನನ್ನ ಮೇಲಿನ ಅಪವಾದವನ್ನು ಕಳೆದುಕೊಳ್ಳುವುದಕ್ಕಾಗಿ ಈ ರತ್ನ ವನ್ನು ಈ ಯಾದವರಿಗೆ ತೋರಿಸಿದೆನು. ಇದು ನನಗೂ ಬಲಭದ್ರನಿಗೂ ಸಮಾನಾಧಿ ಕಾರವುಳ್ಳದು. ಪಿತೃಧನವಾದುದರಿಂದ ಸತ್ಯಭಾಮೆಗೆ ಸೇರಬೇಕಾದುದು ಮತ್ತಾರದೂ ಅಲ್ಲ. ಇದನ್ನು ಪರಿಶುದ್ಧನೂ ಬ್ರಹ್ಮಚರ್ಯಾದಿ ಗುಣಗಳಿಂದ ಕೂಡಿದವನೂ ಧರಿ ಸಿದರೆ ಸಮಸ್ತ ರಾಷ್ಟ್ರಕ್ಕೂ ಉಪಕಾರಕವಾಗುವುದು, ಅಶುಚಿಯಾದವನು ಧರಿಸಿದರೆ ಅವನನ್ನೇ ನಾಶಮಾಡುವುದು.

೧೫೬–೧೬೦. ಆದುದರಿಂದ ನಾನು ಹದಿನಾರು ಸಾವಿರ ಪತ್ನಿಯರುಳ್ಳವನಾದು ದರಿಂದ ಇದನ್ನು ಧರಿಸಲು ಶಕ್ತಿಯುಳ್ಳವನಾಗದಿರುವಾಗ ಸತ್ಯಭಾಮೆಯು ಇದನ್ನು

ಆರ್ಯಬಲಭದ್ರೇಣಾಪಿ ಮದಿರಾಪಾನಾದ್ಯಶೇಷೋಪಭೋಗ
ಪರಿತ್ಯಾಗಃ ಕಾರ್ಯಃ　　　　॥ ೧೫೭ ॥

ತದಲಂ ಯದುಲೋಕೋಽಯಂ ಬಲಭದ್ರಃ ಅಹಂ ಚ ಸತ್ಯಾ
ಚ ತ್ವಾಂ ದಾನಪತೇ ಪ್ರಾರ್ಥಯಾಮಃ　　　　॥ ೧೫೮ ॥

ತದ್ಭವಾನೇವ ಧಾರಯಿತುಂ ಸಮರ್ಥಃ　　　　॥ ೧೫೯ ॥

ತ್ವದ್ಧೃತಂ ಚಾಸ್ಯ ರಾಷ್ಟ್ರಸ್ಯೋಪಕಾರಕಂ ತದ್ಭವಾನ
ಶೇಷರಾಷ್ಟ್ರನಿಮಿತ್ತಮೇತತ್ಪೂರ್ವವದ್ಧಾರಯತ್ವನ್ಯನ್ನ
ವಕ್ತವ್ಯಮಿತ್ಯುಕ್ತೋ ದಾನಪತಿಸ್ತಥೇತ್ಯಾಹ ಜಗ್ರಾಹ
ಚ ತನ್ಮಹಾರತ್ನಂ　　　　॥ ೧೬೦ ॥

ತತಃ ಪ್ರಭೃತ್ಯಕ್ರೂರಃ ಪ್ರಕಟೇನೈವ ತೇನಾತಿ
ಜಾಜ್ವಲ್ಯಮಾನೇನಾತ್ಮಕಂಠಾವಸಕ್ತೇನಾದಿತ್ಯ ಇವಾಂಶು
ಮಾಲೀ ಚ ಚಾರ　　　　॥ ೧೬೧ ॥

---

ಹೇಗೆ ಧರಿಸಿರುವಳು ? ಪೂಜ್ಯನಾದ ಬಲಭದ್ರನು ಇದನ್ನು ಧರಿಸಬೇಕಾದರೆ ಮದ್ಯ ಪಾನವೇ ಮುಂತಾದ ವಿಷಯ ಸುಖಗಳನ್ನು ಅವನು ಬಿಡಬೇಕಾಗುವುದು. ಆದುದರಿಂದ ಇದು ನಮ್ಮಲ್ಲಿ ಯಾರಿಗೂ ಬೇಡ. ಬಲಭದ್ರನೂ, ನಾನೂ, ಸತ್ಯಭಾಮೆಯೂ ಈ ರತ್ನವನ್ನು ನಿನಗೇ ಕೊಟ್ಟು ನಿನ್ನನ್ನು ಪ್ರಾರ್ಥಿಸುತ್ತೇವೆ ಇದನ್ನು ಧರಿಸಲು ನೀನೇ ಸಮರ್ಥನು. ನೀನು ಧರಿಸಿದರೆ ಇದು ಈ ರಾಷ್ಟ್ರಕ್ಕೇ ಉಪಕಾರಕವಾಗಿರುವುದು. ರಾಷ್ಟ್ರಕ್ಶ್ಯೋಸ್ಕರವಾಗಿ ಹಿಂದಿನಂತೆ ನೀನು ಇದನ್ನು ಧರಿಸಬೇಕು. ಇದಕ್ಕೆ ಪ್ರತಿಯಾದ ಮಾತನ್ನಾಡಬಾರದು " ಎಂದು ಹೇಳಿದ ಮೇಲೆ ಅಕ್ರೂರನು ಹಾಗೆಯೇ ಆಗಲೆಂದು ಆ ಮಹಾರತ್ನವನ್ನು ತೆಗೆದುಕೊಂಡನು.

೧೬೧-೧೬೨. ಅಲ್ಲಿಂದ ಮುಂದೆ ಅಕ್ರೂರನು ಪ್ರಕಾಶವಾದ ಆ ರತ್ನವನ್ನು ಎಲ್ಲರೂ ನೋಡುವಂತೆ ತನ್ನ ಕುತ್ತಿಗೆಯಲ್ಲಿ ಧರಿಸಿ ಸೂರ್ಯನಂತೆ ಪ್ರಕಾಶಿಸುತ್ತಿ

ಇತ್ಯೇತದ್ಭಗವತೋ ಮಿಥ್ಯಾಭಿಶಸ್ತಿಕ್ಷಾಳನಂ ಯಃ ಸ್ಮರತಿ
ನ ತಸ್ಯ ಕದಾಚಿದಲ್ಪಾಪಿ ಮಿಥ್ಯಾಭಿಶಸ್ತಿರ್ಭವತಿ
ಅವ್ಯಾಹತಾಖಿಲೇಂದ್ರಿಯಶ್ಚಾಖಿಲಪಾಪಮೋಕ್ಷಮವಾಪ್ನೋತಿ ॥ ೧೬೨ ॥

ಇತಿ ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ ತ್ರಯೋದಶೋಽಧ್ಯಾಯಃ

---

ದ್ದನು. ಭಗವಂತನಾದ ಕೃಷ್ಣನು ಅಪವಾದವನ್ನು ಕಳೆದುಕೊಂಡ ಈ ಉಪಾಖ್ಯಾನವನ್ನು ಯಾರು ಸ್ಮರಿಸುತ್ತಾರೆಯೋ ಅವರಿಗೆ ಸ್ವಲ್ಪವಾದರೂ ಅಪವಾದ ಉಂಟಾಗುವುದಿಲ್ಲ. ಮತ್ತು ಅವರು ಸಮಸ್ತ ಪಾಪಗಳನ್ನೂ ಕಳೆದುಕೊಳ್ಳುವರು.

ಎಂಬಲ್ಲಿಗೆ ಶ್ರೀ ವಿಷ್ಣುಪುರಾಣದ ಚತುರ್ಥಾಂಶದಲ್ಲಿ
ಹದಿಮೂರನೆಯ ಅಧ್ಯಾಯವು ಮುಗಿದುದು

---

॥ ಶ್ರೀ ॥

# ಶ್ರೀ ವಿಷ್ಣು ಪುರಾಣೇ ಚತುರ್ಥಾಂಶೇ

---

## ಚತುರ್ದಶೋಽಧ್ಯಾಯಃ

॥ ಶ್ರೀ ಪರಾಶರಃ ॥

ಅನಮಿತ್ರಸ್ಯ ಪುತ್ರಶ್ಶಿನಿರ್ನಾಮಾಭವತ್ ॥ ೧ ॥

ತಸ್ಯಾಪಿ ಸತ್ಯಕಃ ಸತ್ಯಕಾತ್ಸಾತ್ಯಕಿಃ ಯುಯುಧಾನಾ ಪರ ನಾಮಾ ॥ ೨ ॥

ತಸ್ಮಾದಪಿಸ ಂಜಯಃ ತತ್ಪುತ್ರಶ್ಚ ಕುಣಿಃ ಕುಣೇರ್ಯುಗಂ ಧರಃ ॥ ೩ ॥

ಇತ್ಯೇತೇ ಶೈನೇಯಾಃ ॥ ೪ ॥

ಅನಮಿತ್ರಸ್ಯೈವಾನ್ವಯೇ ವೃಷ್ಣಿಃ ತಸ್ಮಾಚ್ಛ್ವಫಲ್ಕಃ
ತತ್ಪ್ರಭಾವಃ ಕಥಿತ ಏವ ॥ ೫ ॥

---

## ಹದಿನಾಲ್ಕನೆಯ ಅಧ್ಯಾಯವು

೧-೪. ಅನಮಿತ್ರನಿಗೆ ಶಿನಿಯೆಂಬ ಮತ್ತೊಬ್ಬ ಮಗನಿದ್ದನು. ಅವನಿಗೆ ಸತ್ಯಕನೂ, ಸತ್ಯಕನಿಗೆ ಸಾತ್ಯಕಿಯೂ (ಇವನಿಗೆ ಯುಯುಧಾನನೆಂದು ಮತ್ತೊಂದು ಹೆಸರು.) ಸಾತ್ಯಕಿಗೆ ಸಂಜಯನೂ, ಸಂಜಯನಿಗೆ ಕುಣಿಯು, ಕುಣಿಗೆ ಯುಗಂಧರನೂ ಮಕ್ಕಳಾದರು. ಇವರೆಲ್ಲರೂ ಶೈನೇಯರು

೫-೧೧. ಅನಮಿತ್ರನ ವಂಶದಲ್ಲಿಯೇ ವೃಷ್ಣಿಯು ಹುಟ್ಟಿದನು. ಇವನ ಮಗನೇ ಶ್ವಫಲ್ಕನು. ಈ ಶ್ವಫಲ್ಕನ ಮಹಿಮೆಯನ್ನು ಹಿಂದಿನ ಅಧ್ಯಾಯದಲ್ಲಿ ಹೇಳಿದೆ.

ಶ್ವಫಲ್ಕಸ್ಯಾನ್ಯಃ ಕನೀಯಾನ್ ಚಿತ್ರಕೋ ನಾಮ ಭ್ರಾತಾ ॥ ೬ ॥

ಶ್ವಫಲ್ಕಾದಕ್ರೂರೋ ಗಾಂದಿನ್ಯಾಮಭವತ್ ॥ ೭ ॥

ತಥೋಪಮದ್ಗುಃ ॥ ೮ ॥

ಉಪಮದ್ಗೋಃ ಮೃದಾ ಮೃದವಿಶ್ವಾರಿಮೇಜಯಗಿರಿಕ್ಷತ್ರೋಪ
ಕ್ಷತ್ರಶತ್ರುಘ್ನಾರಿಮರ್ದನ ಧರ್ಮದೃಕ್ ದೃಷ್ಟಧರ್ಮಗಂಧಮೋಜ
ವಾಹಪ್ರತಿವಾಹಾಖ್ಯಾಃ ಪುತ್ರಾಃ ಸುತಾರಾಖ್ಯಾಕನ್ಯಾಚ ॥ ೯ ॥

ದೇವವಾನುಪದೇವಶ್ಚಾ ಕ್ರೂರಪುತ್ರೌ ॥ ೧೦ ॥

ಪೃಥು ವಿಪೃಥುಪ್ರಮುಖಾಶ್ಚಿತ್ರಕಸ್ಯ ಪುತ್ರಾ ಬಹವೋಬಭೂವುಃ ॥ ೧೧ ॥

ಕುಕುರಭಜಮಾನಶುಚಿಕಂಬಳಬರ್ಹಿಷಾಖ್ಯಾಸ್ತಥಾಂಧಕಸ್ಯ
ಚತ್ವಾರಃ ಪುತ್ರಾಃ ॥ ೧೨ ॥

ಕುಕುರಾದ್ಧೃಷ್ಟಃ ತಸ್ಮಾಚ್ಚ ಕಪೋತರೋಮಾ ತತಶ್ಚ ವಿಲೋಮಾ
ತಸ್ಮಾದಪಿ ತುಂಬುರುಸಖೋ ಭವದನುಸಂಜ್ಞಶ್ಚ ॥ ೧೩ ॥

---

ಶ್ವಫಲ್ಕನ ತಮ್ಮ ಚಿತ್ರಕನೆಂಬುವನೊಬ್ಬನಿದ್ದನು. ಶ್ವಫಲ್ಕನಿಗೆ ಗಾಂದಿನಿಯಲ್ಲಿ ಅಕ್ರೂರನೂ, ಉಪಮದ್ಗುವೂ ಹುಟ್ಟಿದರು. ಉಪಮದ್ಗುವಿಗೆ ಮೃದಾಮೃದ, ವಿಶ್ವಾರಿ, ಮೇಜಯ, ಗಿರಿಕ್ಷತ್ರ, ಉಪಕ್ಷತ್ರ, ಶತ್ರುಘ್ನ, ಅರಿಮರ್ದನ, ಧರ್ಮದೃಕ್, ದೃಷ್ಟಧರ್ಮ, ಗಂಧಮೋಜವಾಹ; ಪ್ರತಿವಾಹ ಎಂಬ ಪುತ್ರರೂ; ಸುತಾರ ಎಂಬ ಕನ್ಯೆಯೂ ಹುಟ್ಟಿದರು. ಅಕ್ರೂರನಿಗೆ ದೇವವಾನ್, ಉಪದೇವ ಎಂಬಿಬ್ಬರು ಮಕ್ಕಳು, ಚಿತ್ರಕನಿಗೆ ಪೃಥು, ವಿಪೃಥು ಮುಂತಾದ ಅನೇಕ ಮಕ್ಕಳಿದ್ದರು.

೧೨-೧೫. ಸತ್ವತನ ಮಗನಾದ ಅಂಧಕನಿಗೆ ಕುಕುರ, ಭಜಮಾನ, ಶುಚಿ, ಕಂಬಳಬರ್ಹಿಷ ಎಂಬ ನಾಲ್ವರು ಮಕ್ಕಳು. ಕುಕುರನಿಗೆ ಧೃಷ್ಟನೂ, ಧೃಷ್ಟನಿಗೆ

ಅನೋರಾನಕದುಂದುಭಿಃ ತತಶ್ಚಾಭಿಜಿತ್ ಅಭಿಜಿತಃ ಪುನರ್ವಸುಃ ॥ ೧೪ ॥

ತಸ್ಮಾಪ್ಯಾಹುಕಃ ಪುತ್ರಃ ಆಹುಕೀ ಚ ಕನ್ಯಾ ॥ ೧೫ ॥

ಆಹುಕಸ್ಯ ದೇವಕೋಗ್ರಸೇನೌ ದ್ವೌ ಪುತ್ರೌ ॥ ೧೬ ॥

ದೇವವಾನುಪದೇವಸ್ಸಹದೇವೋ ದೇವರಕ್ಷಿತಾ ಚ ದೇವಕಸ್ಯ
ಚತ್ವಾರಃ ಪುತ್ರಾಃ ॥ ೧೭ ॥

ತೇಷಾಂ ವೃಕದೇವೋಪದೇವಾ ದೇವರಕ್ಷಿತಾ ಶ್ರೀದೇವಾ
ಶಾಂತಿದೇವಾ ಸಹದೇವಾ ದೇವಕೀ ಚ ಸಪ್ತ ಭಗಿನ್ಯಃ ॥ ೧೮ ॥

ತಾಶ್ಚ ಸರ್ವಾ ವಸುದೇವ ಉಪಯೇಮೇ ॥ ೧೯ ॥

ಉಗ್ರಸೇನಸ್ಯಾಪಿ ಕಂಸನ್ಯಗ್ರೋಧಸುನಾಮಾನಕಾಹ್ವ
ಶಂಕುಸುಭೂಮಿರಾಷ್ಟ್ರಪಾಲಯುದ್ಧತುಷ್ಟಿಸುತುಷ್ಟಿಮುಸ್ಸಂಜ್ಞಾಃ
ಪುತ್ರಾ ಬಭೂವುಃ ॥ ೨೦ ॥

---

ಕಪೋತರೋಮನೂ, ಅವನಿಗೆ ವಿಲೋಮನೂ, ವಿಲೋಮನಿಗೆ ತುಂಬುರುವಿನ ಸ್ನೇಹಿತನಾದ ಅನುವೂ, ಅನುವಿಗೆ ಆನಕದುಂದುಭಿಯೂ, ಅವನಿಗೆ ಅಭಿಜಿತುವೂ, ಅಭಿಜಿತುವಿಗೆ ಪುನರ್ವಸುವೂ, ಪುನರ್ವಸುವಿಗೆ ಆಹುಕನೆಂಬ ಪುತ್ರನೂ, ಆಹುಕಿ ಯೆಂಬ ಕನ್ಯೆಯೂ ಹುಟ್ಟಿದರು.

೧೬-೨೦. ಆಹುಕನಿಗೆ ದೇವಕ, ಉಗ್ರಸೇನರೆಂಬಿಬ್ಬರು ಮಕ್ಕಳು. ದೇವಕನಿಗೆ ದೇವವಾನ್ ಉಪದೇವ ಸಹದೇವ, ದೇವರಕ್ಷಿತ, ಎಂಬ ನಾಲ್ವರು ಮಕ್ಕಳು. ಇವರಿಗೆ ವೃಕದೇವಾ, ಉಪದೇವಾ, ದೇವರಕ್ಷಿತಾ, ಶ್ರೀದೇವಾ, ಶಾಂತಿದೇವಾ, ಸಹದೇವಾ, ದೇವಕೀ ಎಂದು ಏಳು ಜನ ಸಹೋದರಿಯರು. ಇವರೆಲ್ಲರನ್ನೂ ವಸುದೇವನು ವಿವಾಹ ಮಾಡಿಕೊಂಡನು. ಉಗ್ರಸೇನನಿಗೆ ಕಂಸ, ನ್ಯಗ್ರೋಧ, ಸುನಾಮ, ಅನಕ, ಶಂಕು, ಸುಭೂಮಿ, ರಾಷ್ಟ್ರಪಾಲ, ಯುದ್ಧತುಷ್ಟಿ, ಸುತುಷ್ಟಿ ಮುತ್ ಎಂಬ ಮಕ್ಕಳಿದ್ದರು.

ಕಂಸಾ ಕಂಸವತೀ ಸುತನೂ ರಾಷ್ಟ್ರಪಾಲಿಕಾಹ್ವಾಶ್ಚೋಗ್ರ
ಸೇನಸ್ಯ ತನೂಜಾಃ ಕನ್ಯಾಃ ॥ ೨೧ ॥

ಭಜಮಾನಾಚ್ಚ ವಿದೂರಥಃ ಪುತ್ರೋಽಭವತ್ ॥ ೨೨ ॥

ವಿದೂರಥಾಚ್ಛೂರಃ ಶೂರಾಚ್ಛಮೀ ಶಮಿನಃ ಪ್ರತಿಕ್ಷತ್ರಃ
ತಸ್ಮಾತ್ಸ್ವಯಂ ಭೋಜಃ ತತಶ್ಚ ಹೃದಿಕಃ ॥ ೨೩ ॥

ತಸ್ಯಾಪಿ ಕೃತವರ್ಮಶತಧನು ದೇವಾರ್ಹ ದೇವಗರ್ಭಾದ್ಯಾಃ
ಪುತ್ರಾ ಬಭೂವುಃ ॥ ೨೪ ॥

ದೇವಗರ್ಭಸ್ಯಾಪಿ ಶೂರಃ ॥ ೨೫ ॥

ಶೂರಸ್ಯಾಪಿ ಮಾರಿಷಾ ನಾಮ ಪತ್ನ್ಯಭವತ್ ॥ ೨೬ ॥

ತಸ್ಯಾಂಚಾಸೌ ದಶಪುತ್ರಾನಜಯತ್ ವಸುದೇವಪೂರ್ವಾನ್ ॥ ೨೭ ॥

---

೨೧–೨೪. ಕಂಸಾ ಕಂಸವತೀ, ಸುತನೂ, ರಾಷ್ಟ್ರಪಾಲಿಕಾ ಎಂಬವರು ಉಗ್ರಸೇನನ ಹೆಣ್ಣು ಮಕ್ಕಳು. ಭಜಮಾನನಿಗೆ ವಿದೂರಥನೂ, ವಿದೂರಥನಿಗೆ ಶೂರನೂ, ಶೂರನಿಗೆ ಶಮಿಯೂ, ಶಮಿಗೆ ಪ್ರತಿಕ್ಷತ್ರನೂ, ಪ್ರತಿಕ್ಷತ್ರನಿಗೆ ಸ್ವಯಂ ಭೋಜನೂ, ಅವನಿಗೆ ಹೃದಿಕನೂ, ಹೃದಿಕನಿಗೆ ಕೃತವರ್ಮ, ಶತಧನು, ದೇವಾರ್ಹ, ದೇವಗರ್ಭನೇ ಮೊದಲಾದ ಮಕ್ಕಳಿದ್ದರು.

೨೫–೩೦. ದೇವಗರ್ಭನಿಗೆ ಶೂರನು ಮಗನು. ಮಾರಿಷಾ ಎಂಬವಳು ಶೂರನ ಹೆಂಡತಿಯು. ಇವಳಲ್ಲಿ ಶೂರನು ವಸುದೇವನೇ ಮುಂತಾದ ಹತ್ತು ಜನ ಮಕ್ಕಳನ್ನು ಪಡೆದನು. ವಸುದೇವನು ಹುಟ್ಟಿದ ಕ್ಷಣದಲ್ಲಿಯೇ ದೇವದುಂದುಭಿಗಳು ನುಡಿದವು ... ದೇವವಾಳನೆಂಬ ಶೂರನ ಮನೆಯಲ್ಲಿ ಭಗವಂತನು ತನ್ನ ಅಂಶದಿಂದ ಅವತಾರ ಮಾಡುವನೆಂದು

ವಸುದೇವಸ್ಯ ಜಾತಮಾತ್ರಸ್ಯೈವ ತದ್ಗೃಹೇ
ಭಗವದಂಶಾವತಾರಮವ್ಯಾಹತದೃಷ್ಟ್ಯಾ ಪಶ್ಯದ್ಭಿರ್ದೇವೈರ್ದಿವ್ಯಾ
ನಕದುಂದುಭಯೋ ವಾದಿತಾಃ ೨೮ ॥

ತತಶ್ಚಾಸಾವಾನಕದುಂದುಭಿಸಂಜ್ಞಾಮವಾಪ ॥ ೨೯ ॥

ತಸ್ಯ ಚ ದೇವಭಾಗದೇವಶ್ರವಾಷ್ಟಕಕಕುಚ್ಚಕ್ರವತ್ಸಧಾರಕ
ಸೃಂಜಯ ಶ್ಯಾಮಶಮಿಕಗಂಡೂಷಸಂಜ್ಞಾ ನವಭ್ರಾತರೋಽಭವನ್ ॥೩೦॥

ಪೃಥಾಶ್ರುತದೇವಾಶ್ರುತಕೀರ್ತಿಃ ಶ್ರುತಶ್ರವಾ ರಾಜಾಧಿದೇವೀ ಚ
ವಸುದೇವಾದೀನಾಂ ಪಂಚಭಗಿನ್ಯೋಽಭವನ್ ॥ ೩೧ ॥

ಶೂರಸ್ಯ ಕುಂತಿರ್ನಾಮ ಸಖಾಭವತ್ ॥ ೩೨ ॥

ತಸ್ಮೈ ಚಾಪುತ್ರಾಯ ಪೃಥಾಮಾತ್ಮಜಾಂ ವಿಧಿನಾ
ಶೂರೋ ದತ್ತವಾನ್ ॥ ೩೩ ॥

ತಾಂ ಚ ಪಾಂಡುರುವಾಹ ॥ ೩೪ ॥

---

ತಿಳಿದಿದ್ದ ದೇವತೆಗಳು ಸ್ವರ್ಗಲೋಕದಲ್ಲಿ ಆನಕ, ದುಂದುಭಿ ಎಂಬ ತಮಟೆ ಮತ್ತು ನಗಾರಿಯ ಧ್ವನಿಯನ್ನು ಮಾಡಿದರು. ಆದುದರಿಂದ ವಸುದೇವನಿಗೆ ಆನಕದುಂದುಭಿಯೆಂಬ ಹೆಸರು ಬಂದಿತು. ಆ ವಸುದೇವನಿಗೆ ದೇವಭಾಗ, ದೇವಶ್ರವ, ಅಷ್ಟಕ ಕಕುಚ್ಚಕ್ರ, ವತ್ಸಧಾರಕ, ಸೃಂಜಯ, ಶ್ಯಾಮ, ಶಮಿಕ, ಗಂಡೂಷ ಎಂಬ ಒಂಭತ್ತು ಜನ ಸಹೋದರರಿದ್ದರು.

೩೧-೩೪. ಪೃಥಾ, ಶ್ರುತದೇವಾ, ಶ್ರುತಕೀರ್ತಿ, ಶ್ರುತಶ್ರವಾ, ರಾಜಾಧಿದೇವಿ ಎಂಬ ಐವರು ವಸುದೇವಾದಿಗಳ ಸಹೋದರಿಯರು. ಶೂರನಿಗೆ ಕುಂತಿಯೆಂಬೊಬ್ಬ ಸ್ನೇಹಿತನಿದ್ದನು. ಅವನಿಗೆ ಮಕ್ಕಳಿರಲಿಲ್ಲ. ಶೂರನು ತನ್ನ ಮಗಳಾದ ಪೃಥೆಯನ್ನು ವಿಧಿಗನುಸಾರವಾಗಿ ಅವನಿಗೆ ಮಗಳಾಗಿ ಕೊಟ್ಟನು. ಆ ಪೃಥೆಯನ್ನು ಪಾಂಡು ರಾಜನು ವಿವಾಹ ಮಾಡಿಕೊಂಡನು. ಅವಳಲ್ಲಿ ಧರ್ಮ, ವಾಯು, ದೇವೇಂದ್ರರು

ತಸ್ಯಾಂ ಚ ಧರ್ಮಾನಿಲೇಂದ್ರೈರ್ಯುಧಿಷ್ಠಿರಭೀಮಸೇನಾರ್ಜುನಾಖ್ಯಾಸ್ತ್ರಯಃ ಪುತ್ರಾಃ ಸಮುತ್ಪಾದಿತಾಃ ॥ ೩೫ ॥

ಪೂರ್ವಮೇವಾನೂಢಾಯಾಶ್ಚ ಭಗವತಾ ಭಾಸ್ವತಾ ಕಾನೀನಃ ಕರ್ಣೋ ನಾಮ ಪುತ್ರೋಽಜನ್ಯತ ॥ ೩೬ ॥

ತಸ್ಯಾಶ್ಚ ಸಪತ್ನೀ ಮಾದ್ರೀ ನಾಮಾಭೂತ್ ॥ ೩೭ ॥

ತಸ್ಯಾಂ ಚ ನಾಸತ್ಯದಸ್ರಾಭ್ಯಾಂ ನಕುಲಸಹದೇವೌ ಪಾಂಡೋಃ ಪುತ್ರೌ ಜನಿತೌ ॥ ೩೮ ॥

ಶ್ರುತದೇವಾಂ ತು ವೃದ್ಧಧರ್ಮಾ ನಾಮ ಕಾರೂಶ ಉಪಯೇಮೇ ॥ ೩೯ ॥

ತಸ್ಯಾಂ [redacted] ದಂತವಕ್ರೋ ನಾಮ ಮಹಾಸುರೋ ಜಜ್ಞೇ ॥ ೪೦ ॥

ಶ್ರುತಕೀರ್ತಿಮಪಿ ಕೇಕಯರಾಜಾ ಉಪಯೇಮೇ ॥ ೪೧ ॥

ತಸ್ಯಾಂ ಸಂತರ್ದನಾದಯಃ ಕೈಕೇಯಾಃ ಪಂಚಪುತ್ರಾ ಬಭೂವುಃ ॥ ೪೨ ॥

---

ಕ್ರಮವಾಗಿ ಯುಧಿಷ್ಠಿರ, ಭೀಮಸೇನ, ಅರ್ಜುನರೆಂಬ ಮೂವರು ಮಕ್ಕಳನ್ನು ಹುಟ್ಟಿಸಿದರು. [redacted] ಪೃಥೆಯಲ್ಲಿ ವಿವಾಹವಾಗುವುದಕ್ಕಿಂತ ಮುಂಚಿತವಾಗಿಯೇ ಸೂರ್ಯನು ಕರ್ಣನೆಂಬ ಪುತ್ರನನ್ನು ಹುಟ್ಟಿಸಿದ್ದನು. ಇವಳ ಸವತಿಯು ಮಾದ್ರಿಯೆಂಬವಳಿದ್ದಳು. ಅವಳಲ್ಲಿ ನಾಸತ್ಯ, ದಸ್ರ ಎಂಬ ಅಶ್ವಿನೀ ದೇವತೆಗಳು ನಕುಲ, ಸಹದೇವರೆಂಬ ಮಕ್ಕಳನ್ನು ಪಾಂಡುರಾಜನಿಗಾಗಿ ಹುಟ್ಟಿಸಿದರು.

೩೯–೪೨. ಶ್ರುತದೇವಾ ಎಂಬವಳನ್ನು ವೃದ್ಧಧರ್ಮನೆಂಬ ಕಾರೂಶ ದೇಶಾಧಿಪತಿಯು ಮದುವೆಯಾದನು. ಅವಳಲ್ಲಿ ದಂತವಕ್ರನೆಂಬ ಮಹಾರಾಕ್ಷಸನು ಜನಿಸಿದನು. ಶ್ರುತಕೀರ್ತಿಯನ್ನು ಕೇಕಯರಾಜನು ಮದುವೆಯಾದನು. ಅವಳಲ್ಲಿ ಸಂತರ್ದನನೇ ಮುಂತಾದ ಕೈಕೇಯರೆಂಬ ಐವರು ಮಕ್ಕಳು ಹುಟ್ಟಿದರು.

ರಾಜಾಧಿದೇವ್ಯಾಮಾವಂತ್ಯೌ ವಿಂದಾನುವಿಂದೌ ಜಜ್ಞಾತೇ ॥ ೪೩ ॥

ಶೃತಶ್ರವಸಮಪಿ ಚೇದಿರಾಜೋ ದಮಘೋಷನಾಮೋಪಯೇಮೇ ॥ ೪೪ ॥

ತಸ್ಯಾಂ ಚ ಶಿಶುಪಾಲಮುತ್ಪಾದಯಾಮಾಸ ॥ ೪೫ ॥

ಸ ವಾ ಪೂರ್ವಮಪ್ಯುದಾರವಿಕ್ರಮೋ ದೈತ್ಯಾನಾಮಾದಿಪುರುಷೋ ಹಿರಣ್ಯಕಶಿಪುರಭವತ್ ॥ ೪೬ ॥

ಯಶ್ಚ ಭಗವತಾ ಸಕಲಲೋಕಗುರುಣಾ ನಾರಸಿಂಹೇನ ಘಾತಿತಃ ॥ ೪೭ ॥

ಪುನರಪ್ಯಕ್ಷಯವೀರ್ಯಶೌರ್ಯ ಸಂಪತ್ಪರಾಕ್ರಮಗುಣಸ್ಸಮಾಕ್ರಾಂತ ಸಕಲತ್ರೈಲೋಕ್ಯೇಶ್ವರಪ್ರಭಾವೋ ದಶಾನನೋ ನಾಮಾಭೂತ್ ॥ ೪೮ ॥

ಬಹುಕಾಲೋಪಭುಕ್ತಭಗವತ್ಸಕಾಶಾವಾಪ್ತ ಶರೀರಪಾತೋದ್ಭವಪುಣ್ಯಫಲೋಭಗವತಾರಾಘವರೂಪಿಣಾಸೋಽಪಿ ನಿಧನ ಮುಪಪಾದಿತಃ ॥ ೪೯ ॥

---

೪೩-೪೫. ರಾಜಾಧಿ ದೇವಿಯಲ್ಲಿ ಅವಂತೀ ರಾಜಪುತ್ರರಾದ ವಿಂದಾನುವಿಂದರು ಹುಟ್ಟಿದರು. ಶೃತಶ್ರವಾ ಎಂಬವಳನ್ನು ಚೇದಿದೇಶದ ರಾಜನಾದ ದಮಘೋಷನೆಂಬವನು ಮದುವೆಯಾದನು. ಅವಳಲ್ಲಿ ಶಿಶುಪಾಲನು ಹುಟ್ಟಿದನು.

೪೬-೫೦. ಆ ಶಿಶುಪಾಲನು ಹಿಂದಿನ ಜನ್ಮದಲ್ಲಿ ಮಹಾಪರಾಕ್ರಮಿಯೂ ದೈತ್ಯನಿಗೆ ಆದಿಪುರುಷನೂ ಆದ ಹಿರಣ್ಯಕಶಿಪುವಾಗಿದ್ದನು. ಅವನನ್ನು ಸಮಸ್ತ ಲೋಕಾಧಿಪತಿಯೂ ಮಹಾಮಹಿಮನೂ ಆದ ವಿಷ್ಣುವು ನರಸಿಂಹಾವತಾರವನ್ನು ಮಾಡಿ ಕೊಂದು ಹಾಕಿದನು ಪುನಃ ಅವನು ಮಹಾಬಲ ಪರಾಕ್ರಮ

ಪುನಶ್ಚೇದಿರಾಜಸ್ಯ ದನುಘೋಷಸ್ಯಾತ್ಮಜ
ಶಿಶುಪಾಲನಾಮಾಭವತ್ ॥ ೫೦ ॥

ಶಿಶುಪಾಲತ್ವೇಪಿ ಭಗವತೋ ಭೂಭಾರಾವತರಣಾಯಾ ।
ವತೀರ್ಣಾಂಶಸ್ಯ ಪುಂಡರೀಕನಯನಾಖ್ಯಸ್ಯೋಪರಿ
ದ್ವೇಷಾನುಬಂಧಮತಿತರಾಂ ಚಕಾರ ॥ ೫೧ ॥

ಭಗವತಾ ನಿಧನಮುಪಾನೀತಃ ತತ್ರೈವ ಪರಮಾತ್ಮಭೂತೇ
ಮನಸ ಏಕಾಗ್ರತಯಾ ಸಾಯುಜ್ಯಮವಾಪ ॥ ೫೨॥

ಭಗವಾನ್ಯದಿ ಪ್ರಸನ್ನೋ ಯಥಾಭಿಲಷಿತಂ ದದಾತಿ

---

ಸಂಪತ್ಸಮೃದ್ಧಿಯುಳ್ಳವನೂ, ಮೂರು ಲೋಕವನ್ನೂ ಜಯಿಸಿದವನೂ ಆದ ರಾವಣನೆಂಬ ದಶಮುಖನಾಗಿ ಹುಟ್ಟಿದ್ದನು. ಅವನು ಭಗವಂತನ ಅವತಾರವಾದ ನರಸಿಂಹನಿಂದ ಮರಣವನ್ನು ಹೊಂದಿದ ಪುಣ್ಯಫಲವನ್ನು ಬಹಳ ಕಾಲದವರೆಗೆ ಅನುಭವಿಸಿ ಮತ್ತೆ ರಾಮಾವತಾರಮಾಡಿದ ಭಗವಂತನಿಂದ ಮರಣವನ್ನು ಹೊಂದಿದನು. ಪುನಃ ಚೇದಿರಾಜನಾದ ದಮಘೋಷನ ಮಗನಾಗಿ ಶಿಶುಪಾಲನೆಂಬ ಹೆಸರನ್ನು ಪಡೆದನು.

೫೧-೫೨. ಶಿಶುಪಾಲನು ಭೂಮಿಯ ಭಾರವನ್ನು ನಾಶಮಾಡುವುದಕ್ಕಾಗಿ ಅವತಾರಮಾಡಿದ ಕಮಲನಯನನೂ, ವಾಸುದೇವನೂ ಆದ ಶ್ರೀ ಕೃಷ್ಣನಮೇಲೆ ವಿಶೇಷವಾಗಿ ದ್ವೇಷವನ್ನು ಮಾಡುತ್ತಿದ್ದನು. ಆ ದ್ವೇಷರೂಪವಾದ ಏಕಾಗ್ರತೆಯಿಂದಲೇ ಮರಣವನ್ನು ಹೊಂದಿ ಸಾಯುಜ್ಯಪದವಿಯನ್ನು ಪಡೆದನು.

**ತಥಾ ಅಪ್ರಸನ್ನೋಽಪಿ ನಿಘ್ನನ್ ದಿವ್ಯಮನುಪಮಂ**
**ಸ್ಥಾನಂ ಪ್ರಯಚ್ಛತಿ** ॥ ೫೨ ॥

**ಇತಿ ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ ಚತುರ್ದಶೋಽಧ್ಯಾಯಃ**

---

೫೧. ಭಗವಂತನು ಪ್ರಸನ್ನನಾದರೆ ಭಕ್ತರ ಇಷ್ಟಾರ್ಥಗಳನ್ನೆಲ್ಲ ಕೊಡುವನು. ಪ್ರಸನ್ನನಾಗದಿದ್ದರೂ ದ್ವೇಷಮಾಡುತ್ತಿರುವವನನ್ನು ಕೊಂದು ದಿವ್ಯವಾದ ಅಸಮಾನವಾದ ಸಾಯುಜ್ಯಪದವಿಯನ್ನು ಕೊಡುವನು.

ಎಂಬಲ್ಲಿಗೆ ಶ್ರೀ ವಿಷ್ಣುಪುರಾಣದ ಚತುರ್ಥಾಂಶದಲ್ಲಿ

ಹದಿನಾಲ್ಕನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

# ಶ್ರೀ ವಿಷ್ಣು ಪುರಾಣೇ ಚತುರ್ಥಾಂಶೇ

## ಪಂಚದಶೋಽಧ್ಯಾಯಃ

॥ ಮೈತ್ರೇಯಃ ॥

ಹಿರಣ್ಯಕಶಿಪುತ್ವೇ ಚ ರಾವಣತ್ವೇ ಚ ವಿಷ್ಣುನಾ
ಅವಾಪ ನಿಹತೋ ಭೋಗಾನಪ್ರಾಪ್ಯಾನಮರೈರಪಿ ॥ ೧ ॥

ನ ಲಯಂ ತತ್ರ ತೇನೈವ ನಿಹತಸ್ಸಕಥಂ ಪುನಃ
ಸಂಪ್ರಾಪ್ತೇ ಶಿಶುಪಾಲತ್ವೇ ಸಾಯುಜ್ಯಂ ಶಾಶ್ವತೇ ಹರೌ ॥ ೨ ॥

ಏತದಿಚ್ಛಾಮ್ಯಹಂ ಶ್ರೋತುಂ ಸರ್ವಧರ್ಮಭೃತಾಂ ವರ ।
ಕೌತೂಹಲಪರೇಣೈತತ್ಪೃಷ್ಟೋ ಮೇ ವಕ್ತುಮರ್ಹಸಿ ॥ ೩ ॥

---

### ಹದಿನೈದನೆಯ ಅಧ್ಯಾಯವು

೧-೩. ಮೈತ್ರೇಯನು, "ಪರಾಶರರೇ, ಹಿರಣ್ಯಕಶಿಪುವೂ, ರಾವಣನೂ ವಿಷ್ಣುವಿನ ಅಂಶಾವತಾರವಾದ ನೃಸಿಂಹರಾಮರಿಂದ ಮರಣ ಹೊಂದಿದರೂ ದೇವತೆಗಳಿಗೂ ಪಡೆಯಲಸಾಧ್ಯವಾದ ಸುಖಾನುಭವಗಳನ್ನು ಪಡೆದರು. ಆ ದೇವನಲ್ಲಿ ಲಯವನ್ನು ಹೊಂದಲಿಲ್ಲ. ಶಿಶುಪಾಲನಾದಾಗ ಹರಿಯ ಅಂಶಾವತಾರನಾದ ಕೃಷ್ಣನಿಂದ ಮರಣವನ್ನು ಹೊಂದಿ ಶಾಶ್ವತವಾದ ಸಾಯುಜ್ಯ ಮುಕ್ತಿಯನ್ನು ಹೇಗೆ ಪಡೆದನು? ಈ ವಿಷಯವನ್ನು ತಿಳಿಯಬೇಕೆಂದು ನನಗೆ ಕುತೂಹಲವಿರುವುದರಿಂದ ಪ್ರಶ್ನೆ ಮಾಡಿರುವೆನು. ಸಮಸ್ತ ಧರ್ಮವನ್ನೂ ತಿಳಿದ ನೀವು ನನಗೆ ತಿಳಿಯಹೇಳಬೇಕು" ಎಂದು ಪ್ರಶ್ನೆಮಾಡಿದನು.

॥ ಶ್ರೀ ಪರಾಶರಃ ॥

ದೈತ್ಯೇಶ್ವರಸ್ಯ ವಧಾಯಾಖಿಲಲೋಕೋತ್ಪತ್ತಿಸ್ಥಿತಿವಿನಾಶಕಾರಿಣಾ
ಪೂರ್ವಂ ತನುಗ್ರಹಣಂ ಕುರ್ವತಾ ನೃಸಿಂಹ ರೂಪಮಾವಿಷ್ಕೃತಂ ॥ ೪ ॥

ತತ್ರ ಚ ಹಿರಣ್ಯಕಶಿಪೋರ್ವಿಷ್ಣುರಯಮಿತ್ಯೇತನ್ನ ಮನಸ್ಯಭೂತ್ ॥ ೫ ॥

ನಿರತಿಶಯಪುಣ್ಯಸಮುದ್ಭೂತಮೇತತ್ಸತ್ತ್ವಜಾತಮಿತಿ ॥ ೬ ॥

ರಜೋದ್ರೇಕಪ್ರೇರಿತೈಕಾಗ್ರಮತಿಸ್ತದ್ಭಾವನಾಯೋಗಾತ್
ತತೋವಾಪ್ತ ವಧಹೇತುಕೀಂ ನಿರತಿಶಯಾಮೇವಾಖಿಲತ್ರೈಲೋಕ್ಯಾಧಿ
ಕ್ಯಕಾರಿಣೀಂ ದಶಾನನತ್ವೇ ಭೋಗಸಂಪದಮವಾಪ ॥ ೭ ॥

ನ ತು ಸ ತಸ್ಮಿನ್ನನಾದಿನಿಧನೇ ಪರಬ್ರಹ್ಮಭೂತೇ ಭಗವತ್ಯನಾಲಂ
ಬಿನಿಕೃತೇ ಮನಸಸ್ತಲ್ಲಯಮವಾಪ ॥ ೮ ॥

ಏವಂ ದಶಾನನತ್ವೇಪ್ಯನಂಗ ಪರಾಧೀನತಯಾ ಜಾನಕೀಸಮಾಸಕ್ತ
ಚೇತಸಾ ಭಗವತಾ ದಾಶರಥಿರೂಪಧಾರಿಣಾ ಹತಸ್ಯ ತದ್ರೂಪ

---

೪–೮. ಪರಾಶರರು ಹೇಳುವರು: — ದೈತ್ಯೇಶ್ವರನಾದ ಹಿರಣ್ಯಕಶಿಪುವನ್ನು ಕೊಲ್ಲಬೇಕೆಂದು ಸಮಸ್ತ ಲೋಕವನ್ನೂ ಸೃಷ್ಟಿಸಿ ಪಾಲಿಸಿ ನಾಶಮಾಡುವ ಮಹಾ ವಿಷ್ಣುವು ಹಿಂದೆ ಯಾರಿಗೂ ತಿಳಿಯದ ಶರೀರವನ್ನು ಗ್ರಹಿಸಿ ನೃಸಿಂಹಾವತಾರವನ್ನು ಮಾಡಿದನು. ಆ ಸಂದರ್ಭದಲ್ಲಿ ಹಿರಣ್ಯಕಶಿಪುವಿಗೆ ಇವನು ವಿಷ್ಣುವೆಂಬುದು ಮನಸ್ಸಿನಲ್ಲಿ ಉಂಟಾಗಲಿಲ್ಲ. ಅಸಮಾನವಾದ ಯಾವುದೋ ಪುಣ್ಯವಿಶೇಷದಿಂದ ಈ ಪ್ರಾಣಿಯು ಹುಟ್ಟಿರಬೇಕೆಂದು ತಿಳಿಕೊಂಡನು. ರಜೋಗುಣಾಧಿಕ್ಯದಿಂದ ಅವನ ಮನಸ್ಸಿನಲ್ಲಿ ಏಕಾಗ್ರತೆಯುಂಟಾಗಲಿಲ್ಲ. ಆದುದರಿಂದ ವಿಷ್ಣುವಿನಿಂದಲೇ ಮರಣಹೊಂದಿದುದಕ್ಕೆ ಫಲವಾದ ಅಸಮಾನವೂ ಮೂರು ಲೋಕದಲ್ಲಿಯೂ ಅತ್ಯಧಿಕವೂ ಆದ ಸುಖ ಸಂಪತ್ತನ್ನು ದಶಾನನನಾದಾಗ ಅನುಭವಿಸಿದನು. ಆದ್ಯಂತಗಳಿಲ್ಲದ ಪರಬ್ರಹ್ಮ

ದರ್ಶನಮೇವಾಸೀತ್ ನಾಯಮಚ್ಯುತ ಇತ್ಯಾಸಕ್ತಿರ್ವಿಪದ್ಯ
ತೋಂ ತಃಕರಣೇ ಮಾನುಷಬುದ್ಧಿರೇವ ಕೇವಲಮಸ್ಯಾಭೂತ್ ॥ ೯ ॥

ಪುನರಪ್ಯಚ್ಯುತವಿನಿಪಾತಮಾತ್ರಫಲಮಖಿಲಭೂಮಂಡಲಶ್ಲಾಘ್ಯ
ಚೇದಿರಾಜಕುಲೇ ಜನ್ಮ ಅವ್ಯಾಹತೈಶ್ವರ್ಯಂ ಶಿಶುಪಾಲತ್ವೇಪ್ಯವಾಪ॥೧೦॥

ತತ್ರ ತ್ವಖಿಲಾನಾಮೇವ ಸ ಭಗವನ್ನಾಮ್ನಾಂ ತ್ವಂ ಕಾರ
ಕಾರಣಮಭವತ್ ॥ ೧೧ ॥

ತತಶ್ಚ ತತ್ಕಾಲಕೃತಾನಾಂ ತೇಷಾಮಶೇಷಾಣಾಮೇವಾಚ್ಯುತ
ನಾಮ್ನಾಮನವರತಮನೇಕಜನ್ಮಸು ವರ್ಧಿತವಿದ್ವೇಷಾನು ಬಂಧಿಚಿತ್ತೋ
ವಿನಿಂದನಸಂತರ್ಜನಾದಿಷೂಚ್ಚಾರಣಮಕರೋತ್ ॥ ೧೨ ॥

---

ಸ್ವರೂಪನಾದ ಭಗವಂತನಲ್ಲಿ ಮನಸ್ಸನ್ನಿಡದೆ ಇದ್ದುದರಿಂದ ಸಾಯುಜ್ಯ ಪದವಿಯನ್ನು ಪಡೆಯಲಿಲ್ಲ.

೯-೧೦. ಹೀಗಿಯೇ ರಾವಣನಾದಾಗ ಕಾಮವಶನಾಗಿ ಸೀತೆಯಲ್ಲಾಸಕ್ತವಾದ ಮನಸ್ಸುಳ್ಳವನಾಗಿ ರಾಮಾವತಾರ ಮಾಡಿದ ವಿಷ್ಣುವಿನಿಂದ ಮರಣ ಹೊಂದಿದರೂ ಸಾಯುತ್ತಿರುವ ಅವನ ಮನಸ್ಸಿನಲ್ಲಿ ರಾಮನು ಮನುಷ್ಯನೆಂಬ ಬುದ್ಧಿಯುಂಟಾಗುತ್ತಿದ್ದಿತೇ ಹೊರತು ಇವನು ವಿಷ್ಣುವೆಂಬ ಬುದ್ಧಿಯುಂಟಾಗಲಿಲ್ಲ. ಈ ಕಾರಣದಿಂದ ವಿಷ್ಣುವಿನಿಂದ ಮರಣಹೊಂದಿದುದಕ್ಕೆ ಫಲವಾದ ಸಮಸ್ತ ಭೂಮಂಡಲದಲ್ಲಿ ಶ್ಲಾಘ್ಯವಾದ ಚೇದಿರಾಜನ ವಂಶದಲ್ಲಿ ಹುಟ್ಟನ್ನೂ ವಿಶೇಷವಾದ ಸಂಪತ್ತನ್ನೂ ಶಿಶುಪಾಲನಾದಾಗ ಪಡೆದನು.

೧೧-೧೨. ಶಿಶುಪಾಲನ ಜನ್ಮದಲ್ಲಿ ಭಗವಂತನ ನಾಮಗಳು ಅವನು ಮಾಡುವ ನಿಂದೆಗೆ ಕಾರಣಗಳಾದುವು. ಶಿಶುಪಾಲನು ತನ್ನ ಹಿಂದಿನ ಜನ್ಮಗಳಲ್ಲಿ ಉಂಟಾಗಿದ್ದ ದ್ವೇಷದಿಂದ ಕೂಡಿದ ಮನಸ್ಸುಳ್ಳವನಾಗಿ, ಆ ಕಾಲದಲ್ಲಿದ್ದ ಕೃಷ್ಣನ ಹೆಸರುಗಳಿಗೆಲ್ಲಾ ನಿಂದೆಯ ಅರ್ಥವನ್ನೇ ಹೇಳುತ್ತಾ ಅವನ ನಾಮಗಳನ್ನು ಸದಾ

ತಚ್ಚ ರೂಪಮುತ್ಫುಲ್ಲಪದ್ಮದಳಾಮಲಾಕ್ಷಿಮತ್ಯುಜ್ಜ್ವಲಪೀತ
ವಸ್ತ್ರಧಾರ್ಯಮಲಕಿರೀಟಕೇಯೂರಹಾರಕಟಕಾದಿಶೋಭಿತ
ಮುದಾರಚತುರ್ಬಾಹುಶಂಖಚಕ್ರಗದಾಧರಮತಿಪ್ರರೂಢವೈರಾನು
ಭಾವಾದಟನಭೋಜನಸ್ನಾನಾಸನಶಯನಾದಿಷ್ವಶೇಷಾವ
ಸ್ಥಾಂತರೇಷು ನಾನ್ಯತ್ರೋಪಯಯಾವಸ್ಯಾತ್ಮ ಚೇತಸಃ ॥ ೧೩ ॥

ತತಸ್ತಮೇವಾಕ್ರೋಶೇಷೂಚ್ಚಾರಯಂಸ್ತಮೇವ ಹೃದಯೇನ
ಧಾರಯನ್ನಾತ್ಮವಧಾಯ ಯಾವದ್ಭಗವದಸ್ತ್ರಚಕ್ರಾಂಶು
ಮಾಲೋಜ್ಜ್ವಲಮಕ್ಷಯತೇಜಸ್ಸ್ವರೂಪಂ ಬ್ರಹ್ಮಭೂತಂ
ಅಪಗತದ್ವೇಷಾದಿದೋಷಂ ಭಗವಂತಮದ್ರಾಕ್ಷೀತ್ ॥ ೧೪ ॥

---

ಉಚ್ಚರಿಸುತ್ತಿದ್ದನು. ತನ್ನ ಮನಸ್ಸಿನಲ್ಲಿ ಉಂಟಾದ ಕೃಷ್ಣನ ಮೇಲಿನ ಹೆಚ್ಚಾದ ದ್ವೇಷದಿಂದ ಅರಳಿದ ಕಮಲದ ದಳದಂತೆ ವಿಶಾಲವಾದ ಕಣ್ಣುಗಳೂ, ಪ್ರಕಾಶವಾದ ಪೀತಾಂಬರವೂ ಕಿರೀಟ ಕೇಯೂರ ಹಾರ ಮುಂತಾದ ಆಭರಣಗಳೂ ಶಂಖ, ಚಕ್ರ, ಗದಾ ಖಡ್ಗಗಳನ್ನು ಧರಿಸಿದ ನಾಲ್ಕು ತೋಳುಗಳೂ ಉಳ್ಳ ಕೃಷ್ಣನ ರೂಪವು ತಿರುಗಾಡುವ ಸ್ನಾನ ಭೋಜನ ಮುಂತಾದುವನ್ನು ಮಾಡುವ ಕುಳಿತಿರುವ ಮಲಗಿರುವುದೇ ಮುಂತಾದ ಎಲ್ಲ ಅವಸ್ಥೆಗಳಲ್ಲಿಯೂ ಅವನ ಮನಸ್ಸನ್ನು ಬಿಟ್ಟು ಬೇರೆ ಕಡೆಗೆ ಹೋಗಲಿಲ್ಲ.

೧೪-೧೭. ತರುವಾಯ ಅವನು ಕೋಪದಿಂದ ಆಕ್ಷೇಪಕರವಾದ ಮಾತುಗಳಲ್ಲಿ ಅವನ ನಾಮಗಳನ್ನು ಹೇಳುತ್ತ ಮನಸ್ಸಿನಲ್ಲಿ ಅವನನ್ನೇ ಚಿಂತಿಸುತ್ತಾ ಭಗವಂತನ ಅಸ್ತ್ರರೂಪವಾದ ಚಕ್ರದ ಕಿರಣ ಸಮೂಹದಿಂದ ಹೆಚ್ಚು ಪ್ರಕಾಶವೂ ಬೆಳಕಿನ ರೂಪವೂ ಪರಬ್ರಹ್ಮಸ್ವರೂಪವೂ ರಾಗದ್ವೇಷಾದಿ ದೋಷಗಳಿಲ್ಲದುದೂ ಆದ ಭಗವಂತನ ಸ್ವರೂಪವನ್ನು ನೋಡಿದನು. ಆ ಕಾಲಕ್ಕೆ ಸರಿಯಾಗಿ ಭಗವಂತನ ಚಕ್ರವು ಅವನನ್ನು ಸಂಹರಿಸಿತು. ಶಿಶುಪಾಲನು ಭಗವಂತನನ್ನು ಸ್ಮರಣೆಮಾಡು

ತಾವಚ್ಚ ಭಗವಚ್ಚಕ್ರೇಣಾಸು ವ್ಯಾಪಾದಿತಃ ಶಶ್ ಸ್ಮರಣದ
ಗ್ಧಾಖಿಲಾಘಸಂಚಯೋ ಭಗವತಾಂತಮುಪನೀತಃ ತಸ್ಮಿನ್ನೇವ
ಲಯಮುಪಯಯೌ ॥ ೧೫ ॥

ಏತತ್ತ್ವಾಖಿಲಂ ಮಯಾಭಿಹಿತಂ ॥ ೧೬ ॥

ಅಯಂ ಹಿ ಭಗವಾನ್ ಕೀರ್ತಿತಶ್ಚ ಸಂಸ್ಮೃತಶ್ಚ ದ್ವೇಷಾನು
ಬಂಧೇನಾಪಿ ಅಖಿಲಸುರಾಸುರಾದಿದುರ್ಲಭಂ ಫಲಂ ಪ್ರಯಚ್ಛತಿ
ಕಿಮುತ ಸಮ್ಯಗ್ಭಕ್ತಿಮತಾಮಿತಿ ॥ ೧೭ ॥

ವಸುದೇವಸ್ಯ ತ್ವಾನಕದುಂದುಭೇಃ ಪೌರವೀರೋಹಿಣೀ
ಮದಿರಾ ಭದ್ರಾ ದೇವಕೀಪ್ರಮುಖಾ ಬಹ್ವ್ಯಃ ಪತ್ನ್ಯೋಽಭವನ್ ॥ ೧೮ ॥

ಬಲಭದ್ರಶಠಸಾರಣದುರ್ಮದಾದೀನ್ ಪುತ್ರಾನ್ ರೋಹಿಣ್ಯಾಮಾನ
ಕದುಂದುಭಿರುತ್ಪಾದಯಾಮಾಸ ॥ ೧೯ ॥

---

ತ್ತಿದ್ದುದರಿಂದ ಅವನ ಸಮಸ್ತ ಪಾಪಗಳೂ ನಾಶವಾದುವು. ಈ ಕಾರಣದಿಂದ ಭಗವಂತನೇ ಅವನನ್ನು ಸಂಹರಿಸಲು ಅವನಲ್ಲಿಯೇ (ಲಯವನ್ನು ಹೊಂದಿದನು) ಲೀನನಾದನು. ಎಂಬೀ ವಿಷಯವನ್ನು ನಿನಗೆ ಹೇಳಿರುವೆನು. ದ್ವೇಷದಿಂದಲಾದರೂ ಭಗವಂತನ ನಾಮಗಳನ್ನುಚ್ಚರಿಸಿದ ಅವನನ್ನು ಸ್ಮರಣೆಮಾಡಿದರೂ ಸಮಸ್ತ ಸುರಾಸುರರಿಗೂ ದೊರಕದಿರುವ ಫಲವನ್ನು ಕೊಡುವನು" ಎಂದ ಮೇಲೆ ಅವನಲ್ಲಿಯೇ ಉತ್ತಮವಾದ ಭಕ್ತಿಯುಳ್ಳವರ ವಿಷಯದಲ್ಲಿ ಹೇಳಬೇಕಾಗುವುದೇ ನಿರುವುದು ?

೧೮-೩೫. ಆನಕದುಂದುಭಿಯೆಂಬ ಹೆಸರುಳ್ಳ ವಸುದೇವನಿಗೆ ಪೌರವಿ, ರೋಹಿಣಿ, ಮದಿರಾ, ಭದ್ರಾ, ದೇವಕೀ ಮುಂತಾದ ಅನೇಕ ಜನ ಪತ್ನಿಯರಿದ್ದರು. ಅವನು ರೋಹಿಣಿಯಲ್ಲಿ ಬಲಭದ್ರ, ಶಠ, ಸಾರಣ, ದುರ್ಮದ ಮುಂತಾದ ಮಕ್ಕಳನ್ನು

ಬಲದೇವೋಽಪಿ ರೇವತ್ಯಾಂ ವಿಶಠೋಲ್ಮುಕೌ ಪುತ್ರಾವಜನಯತ್ ॥ ೨೦ ॥

ಸಾರ್ಷ್ಟಿರ್ಮಾರ್ಷ್ಟಿಶಿಶುಸತ್ಯಸತ್ಯಧೃತಿಪ್ರಮುಖಾಸ್ಸಾರಣಾತ್ಮಜಾಃ ॥ ೨೧ ॥

ಭದ್ರಾಶ್ವ ಭದ್ರಬಾಹುದುರ್ದಮಭೂತಾದ್ಯಾಃ ರೋಹಿಣ್ಯಾಃ
ಕುಲಜಾಃ ॥ ೨೨ ॥

ನಂದೋಪನಂದಕೃತಕಾದ್ಯಾ ಮದಿರಾಯಾಸ್ತನಯಾಃ ॥ ೨೩ ॥

ಭದ್ರಾಯಾಶ್ಚೋಪನಿಧಿಗದಾದ್ಯಾಃ ॥ ೨೪ ॥

ವೈಶಾಲ್ಯಾಂ ಚ ಕೌಶಿಕಮೇಕಮೇವಾಜನಯತ್ ॥ ೨೫ ॥

ಆನಕದುಂದುಭೇರ್ದೇವಕ್ಯಾಮಪಿ ಕೀರ್ತಿಮತ್ಸುಷೇಣೋದಾಯುಧ
ಭದ್ರಸೇನ ಋಜುದಾಸಭದ್ರದೇವಾಖ್ಯಾಃ ಷಟ್ಪುತ್ರಾ ಜಜ್ಞಿರೇ ॥ ೨೬ ॥

ತಾಂಶ್ಚ ಸರ್ವಾನೇವ ಕಂಸೋ ಘಾತಿತವಾನ್ ॥ ೨೭ ॥

---

ಹುಟ್ಟಿಸಿದನು. ಬಲದೇವನಿಗೆ ರೇವತಿಯಲ್ಲಿ ವಿಶಠ, ಉಲ್ಮುಕ ಎಂಬಿಬ್ಬರು ಮಕ್ಕಳು ಹುಟ್ಟಿದರು. ಸಾರ್ಷ್ಟಿ, ಮಾರ್ಷ್ಟಿ, ಶಿಶು, ಸತ್ಯ, ಸತ್ಯಧೃತಿ ಮುಂತಾದವರು ಸಾರಣನ ಮಕ್ಕಳು. ಭದ್ರಾಶ್ವ, ಭದ್ರಬಾಹು, ದುರ್ದಮ, ಭೂತ ಮುಂತಾದವರು ರೋಹಿಣಿಯ ವಂಶದವರು. ನಂದ, ಉಪನಂದ, ಕೃತಕ ಮುಂತಾದವರು ಮದಿರೆಯ ಮಕ್ಕಳು. ಉಪನಿಧಿ, ಗದ ಮುಂತಾದವರು ಭದ್ರೆಯ ಮಕ್ಕಳು. ವೈಶಾಲಿಗೆ ಕೌಶಿಕನೊಬ್ಬನೇ ಮಗನು.

೨೬–೨೭. ವಸುದೇವನಿಂದ ದೇವಕಿಯಲ್ಲಿ ಕೀರ್ತಿಮಂತ, ಸುಷೇಣ, ಉದಾಯು, ಭದ್ರಸೇನ, ಋಜುದಾಸ, ಭದ್ರದೇವ ಎಂಬ ಆರು ಜನ ಮಕ್ಕಳು ಹುಟ್ಟಿದರು. ಅವರನ್ನೆಲ್ಲ ಕಂಸನು ಕೊಂದುಹಾಕಿದನು. ಈ ಮೇಲೆ ಏಳನೆಯ ಗರ್ಭವನ್ನು ಅರ್ಧರಾತ್ರಿಯ ಸಮಯದಲ್ಲಿ ವಿಷ್ಣುವು ಕಳುಹಿಸಿದ ಯೋಗನಿದ್ರಾ

ಅನಂತರಂ ಚ ಸಪ್ತಮಂ ಗರ್ಭಮರ್ಧರಾತ್ರೇ ಭಗವತ್ಪ್ರಹಿತಾ
ಯೋಗನಿದ್ರಾ ರೋಹಿಣ್ಯಾ ಜಠರಮಾಕೃಷ್ಯನೀತವತೀ ॥ ೨೮ ॥

ಕರ್ಷಣಾಚ್ಚಾಸಾವಪಿ ಸಂಕರ್ಷಣಾಖ್ಯಾಮಗಮತ್ ॥ ೨೯ ॥

ತತಶ್ಚ ಸಕಲಜಗನ್ಮಹಾತರುಮೂಲಭೂತೋ ಭೂತಭವಿಷ್ಯ
ದಾದಿಸಕಲಸುರಾಸುರಮುನಿಜನಮನಸಾಪ್ಯಗೋಚರೋಬ್ಜ
ಭವಪ್ರಮುಖೈರನಲಮುಖೈಃ ಪ್ರಣಮ್ಯಾವನಿಭಾರ ಹರಣಾಯ
ಪ್ರಸಾದಿತೋ ಭಗವಾನನಾದಿಮಧ್ಯ ನಿಧನೋ ದೇವಕೀಗರ್ಭ
ಮವತತಾರ ವಾಸುದೇವಃ ॥ ೩೦ ॥

ತತ್ಪ್ರಸಾದವಿವರ್ಧಮಾನೋರುಮಹಿಮಾ ಚ ಯೋಗನಿದ್ರಾ
ನಂದಗೋಪಪತ್ನ್ಯಾ ಯಶೋದಾಯಾ ಗರ್ಭಮಧಿಷ್ಠಿತವತೀ ॥ ೩೧ ॥

---

ದೇವಿಯು ಆಕರ್ಷಣೆ ಮಾಡಿ ರೋಹಿಣಿಯ ಗರ್ಭಕ್ಕೆ ಸೇರಿಸಿದಳು. ಗರ್ಭವನ್ನಾ ಕರ್ಷಣೆ ಮಾಡಿದುದರಿಂದ ಸಂಕರ್ಷಣನೆಂದು ಬಲದೇವನಿಗೆ ಹೆಸರು ಬಂದಿತು.

೩೦-೩೨. ಆ ಮೇಲೆ ಸಕಲ ಜಗತ್ತೆಂಬ ದೊಡ್ಡ ವೃಕ್ಷಕ್ಕೆ ಬೇರಿನಂತಿರುವ ಈಗ ಇರುವ ಹಿಂದೆ ಇದ್ದ ಮತ್ತು ಮುಂದೆ ಹುಟ್ಟುವ ಸಮಸ್ತ ಸುರಾಸುರರ ಮತ್ತು ಮುನಿಗಳ ಮನಸ್ಸಿಗೂ ಅಗೋಚರವಾದ ಬ್ರಹ್ಮನೇ ಮುಂತಾದ ಅಗ್ನಿಮುಖರಾದ ದೇವತೆಗಳು ನಮಸ್ಕರಿಸಿ ಕೇಳಿಕೊಂಡುದರಿಂದ ಭೂಮಿಯ ಭಾರವನ್ನು ನಾಶಮಾಡು ವೆನೆಂದು ಅವರಿಗೆ ವರವನ್ನು ಕೊಟ್ಟ ಆದಿ ಮಧ್ಯಾಂತ ರಹಿತನಾದ ಮಹಾಮಹಿಮ ನಾದ ವಾಸುದೇವನು ದೇವಕಿಯ ಗರ್ಭದಲ್ಲಿ ಅವತಾರಮಾಡಿದನು. ಅವನ ಅನು ಗ್ರಹದಿಂದ ಹೆಚ್ಚುತ್ತಿರುವ ಮಹಾಮಹಿಮೆಯುಳ್ಳ ಸಕಲ ಜಗತ್ತನ್ನೂ ಮೋಹಗೊಳಿ ಸುವ ಸರ್ವ ಪೂಜ್ಯಳಾದ ಯೋಗನಿದ್ರಾದೇವಿಯು ನಂದಗೋಪನ ಪತ್ನಿಯಾದ ಯಶೋದೆಯ ಗರ್ಭದಲ್ಲಿದ್ದಳು. ಕಮಲನಯನನಾದ ವಾಸುದೇವನು ಹುಟ್ಟುವಾಗ

ಸುಪ್ರಸನ್ನಾದಿತ್ಯ ಚಂದ್ರಾದಿಗ್ರಹಮವ್ಯಾಳಾದಿಭಯಂ ಸ್ವಸ್ಥಮಾನಸ
ಮಖಿಲಮೇವೈತಜ್ಜಗದಪಾಸ್ತಾಧರ್ಮಮಭವತ್ ತಸ್ಮಿಂಶ್ಚ
ಪುಂಡರೀಕನಯನೇ ಜಾಯಮಾನೇ ॥ ೩೨ ॥

ಜಾತೇನ ಚ ತೇನಾಖಿಲಮೇವೈತತ್ ಸನ್ಮಾರ್ಗವರ್ತಿ
ಜಗದಕ್ರಿಯತ ॥ ೩೩ ॥

ಭಗವತೋಽಪ್ಯತ್ರ ಮರ್ತ್ಯಲೋಕೇಽವತೀರ್ಣಸ್ಯ ಷೋಡ
ಶಸಹಸ್ರಾಣ್ಯೇಕೋತ್ತರಶತಾಧಿಕಾನಿ ಭಾರ್ಯಾಣಾಮಭವನ್ ॥ ೩೪ ॥

ತಾಸಾಂ ಚ ರುಕ್ಮಿಣೀ ಸತ್ಯಭಾಮಾ ಜಾಂಬವತೀ ಚಾರುಹಾಸಿನೀ
ಪ್ರಮುಖಾಹ್ಯಷ್ಟೌ ಪತ್ನ್ಯಃ ಪ್ರಧಾನಾ ಬಭೂವುಃ ॥ ೩೫ ॥

ತಾಸು ಚಾಷ್ಟಾವಯುತಾನಿಲಕ್ಷಂ ಚ ಪುತ್ರಾಣಾಂ
ಭಗವಾನಖಿಲಮೂರ್ತಿರನಾದಿಮಾನಜನಯತ್ ॥ ೩೬ ॥

---

ಈ ಜಗತ್ತಿನಲ್ಲಿ ಸೂರ್ಯ ಚಂದ್ರಾದಿ ಗ್ರಹಗಳು ಪರಿಶುದ್ಧಿಯಾದ ಕಾಂತಿಯನ್ನು ಕೊಡುತ್ತಿದ್ದುವು ಸರ್ಪಾದಿ ದುಷ್ಟ ಜಂತುಗಳ ಭಯವಿರಲಿಲ್ಲ. ಜನರೆಲ್ಲರೂ ಶಾಂತಚಿತ್ತರಾಗಿ ಅಧರ್ಮರಹಿತರಾಗಿದ್ದರು

೩೩-೩೬. ವಿಷ್ಣುವು ಕೃಷ್ಣಾವತಾರವನ್ನು ಮಾಡಿ ಈ ಸಮಸ್ತ ಜಗತ್ತೂ ಸನ್ಮಾರ್ಗದಲ್ಲಿ ನಡೆಯುವಂತೆ ಮಾಡಿದನು. ಭೂಮಿಯಲ್ಲಿ ಅವತಾರ ಮಾಡಿದ ಆ ದೇವನಿಗೆ ಹದಿನಾರು ಸಾವಿರದ ನೂರೊಂದು ಜನ ಪತ್ನಿಯರಿದ್ದರು. ಅವರಲ್ಲಿ ರುಕ್ಮಿಣಿ, ಸತ್ಯಭಾಮೆ, ಜಾಂಬವತಿ, ಚಾರುಹಾಸಿನಿ ಮುಂತಾದ ಎಂಟು ಜನಪತ್ನಿಯರು ಮುಖ್ಯರಾಗಿದ್ದರು: ಅನಾದಿಯಾದವನೂ, ಸಕಲ ಜಗದ್ರೂಪನೂ ಆದ ಆ ದೇವನು ಆ ಸ್ತ್ರೀಯರಲ್ಲಿ ಒಂದು ಲಕ್ಷದ ಎಂಬತ್ತು ಸಾವಿರ ಮಕ್ಕಳನ್ನು ಹುಟ್ಟಿಸಿ

ತೇಷಾಂ ಚ ಪ್ರದ್ಯುಮ್ನ ಚಾರುಧೇಷ್ಣ ಸಾಂಬಾದಯಸ್ತ್ರ
ಯೋದಶಪ್ರಧಾನಾಃ ॥ ೩೭ ॥

ಪ್ರದ್ಯುಮ್ನೋಽಪಿ ರುಕ್ಮಿಣಸ್ತನಯಾಂ ರುಕ್ಮವತೀಂ
ನಾಮೋಪಯೇಮೇ ॥ ೩೮ ॥

ತಸ್ಯಾಮನಿರುದ್ಧೋ ಜಜ್ಞೇ ॥ ೩೯ ॥

ಅನಿರುದ್ಧೋಽಪಿ ರುಕ್ಮಿಣ ಏವ ಪೌತ್ರೀಂ ಸುಭದ್ರಾಂ
ನಾಮೋಯೇಮೇ ॥ ೪೦ ॥

ತಸ್ಯಾಮಸ್ಯವಜ್ರೋ ಜಜ್ಞೇ ॥ ೪೧ ॥

ವಜ್ರಸ್ಯ ಪ್ರತಿಬಾಹುಃ ತಸ್ಯಾಪಿ ಸುಚಾರುಃ ॥ ೪೨ ॥

ಏವಮನೇಕಶತಸಹಸ್ರಪುರುಷಸಂಖ್ಯಸ್ಯ ಯದುಕುಲಸ್ಯ
ಪುತ್ರಸಂಖ್ಯಾ ವರ್ಷಶತೈರಪಿ ವಕ್ತುಂ ನ ಶಕ್ಯತೇ ॥ ೪೩ ॥

ಯತೋಹಿ ಶ್ಲೋಕಾವಿಮೌ ಅತ್ರ ಚರಿತಾರ್ಥೌ ॥ ೪೪ ॥

---

ದನು. ಅವರಲ್ಲಿ ಪ್ರದ್ಯುಮ್ನ, ಚಾರುದೇಷ್ಣ, ಸಾಂಬ ಮುಂತಾದ ಹದಿಮೂರು ಜನರು ಮುಖ್ಯರಾದವರು. ಪ್ರದ್ಯುಮ್ನನು ರುಕ್ಮಿಯ ಮಗಳಾದ ರುಕ್ಮವತಿಯನ್ನು ಮದುವೆಯಾದನು. ಅವಳಲ್ಲಿ ಅನಿರುದ್ಧನು ಹುಟ್ಟಿದನು.

೪೦-೪೪. ಅನಿರುದ್ಧನು ರುಕ್ಮಿಯ ಮೊಮ್ಮಗಳಾದ ಸುಭದ್ರೆಯನ್ನು ಮದುವೆಯಾದನು. ಅವಳಲ್ಲಿ ವಜ್ರನು ಹುಟ್ಟಿದನು. ವಜ್ರನಿಗೆ ಪ್ರತಿಬಾಹುವೂ, ಪ್ರತಿಬಾಹುವಿಗೆ ಚಾರುವೂ ಹುಟ್ಟಿದರು. ಹೀಗೆಯೇ ನೂರು ಸಾವಿರ ಪುರುಷರುಳ್ಳ ಯದುಕುಲದವರ ಮಕ್ಕಳ ಸಂಖ್ಯೆಯನ್ನು ನೂರು ವರ್ಷ ಹೇಳಿದರೂ ಮುಗಿಯುವುದಿಲ್ಲ. ಮುಂದಿನ ಶ್ಲೋಕಾಭಿಪ್ರಾಯದಿಂದ ಅದನ್ನು ಹೇಳಿ ಮುಗಿಸುವೆನು.

ತಿಸ್ರಃ ಕೋಟ್ಯಸ್ಸಹಸ್ರಾಣಾಮಷ್ಟಾಶೀತಿಶತಾನಿ ಚ
ಕುಮಾರಾಣಾಂಗೃಹಾಚಾರ್ಯಾಶ್ಚಾಪಯೋಗೇಷು ಯೇರತಾಃ ॥ ೪೫ ॥

ಸಂಖ್ಯಾನಂ ಯಾದವಾನಾಂ ಕಃ ಕರಿಷ್ಯತಿ ಮಹಾತ್ಮನಾಂ ।
ಯತ್ರಾಯುತಾನಾಮಯುತಲಕ್ಷೇಣಾಸ್ತೇಸದಾಹುಕಃ ॥ ೪೬ ॥

ದೇವಾಸುರೇ ಹತಾ ಯೇ ತು ದೈತೇಯಾಸ್ಸುಮಹಾಬಲಾಃ ।
ಉತ್ಪನ್ನಾಸ್ತೇ ಮನುಷ್ಯೇಷು ಜನೋಪದ್ರವಕಾರಿಣಃ ॥ ೪೭ ॥

ತೇಷಾಮುತ್ಸಾದನಾರ್ಥಾಯ ಭುವಿ ದೇವಾ ಯದೋಃ ಕುಲೇ ।
ಅವತೀರ್ಣಾಃ ಕುಲಶತಂ ಯತ್ರೈಕಾಭ್ಯಧಿಕಂ ದ್ವಿಜ ॥ ೪೮ ॥

ವಿಷ್ಣುಸ್ತೇಷಾಂ ಪ್ರಮಾಣೇ ಚ ಪ್ರಭುತ್ವೇ ಚ ವ್ಯವಸ್ಥಿತಃ
ನಿದೇಶಸ್ಥಾಯಿನಸ್ತಸ್ಯ ವವೃಧುಸ್ಸರ್ವಯಾದವಾಃ ॥ ೪೯ ॥

---

೪೫–೫೦. ಯದುವಂಶದಲ್ಲಿ ಹುಟ್ಟಿದ ಮಕ್ಕಳಿಗೆ ಧನುರ್ವಿದ್ಯೆಯನ್ನು ಹೇಳಿಕೊಡುವ ಗುರುಗಳು ಮೂರು ಕೋಟಿ ಎಂಬತ್ತೆಂಟು ಸಾವಿರದ ನೂರು ಜನರಿದ್ದರು. ಒಬ್ಬೊಬ್ಬನಲ್ಲಿಯೂ ಅನೇಕ ಶಿಷ್ಯರು ವಿದ್ಯಾಭ್ಯಾಸ ಮಾಡುತ್ತಿದ್ದುದರಿಂದ ಯಾದವರ ಸಂಖ್ಯೆಯನ್ನು ಯಾರು ಎಣಿಸುವುದಕ್ಕಾದೀತು? ಯದುರಾಜನಾದ ಆಹುಕನಿಗೆ ಹತ್ತು ಸಾವಿರ ಸಂಖ್ಯೆಯ ಹತ್ತು ಲಕ್ಷ ಗುಂಪುಗಳ ಯಾದವರು ಸಹಾಯಕರಾಗಿದ್ದರು. ದೇವಾಸುರ ಯುದ್ಧದಲ್ಲಿ ಸತ್ತ ರಾಕ್ಷಸರು ಭೂಮಿಯಲ್ಲಿ ಮನುಷ್ಯರಾಗಿ ಹುಟ್ಟಿ ಜನರಿಗೆ ತೊಂದರೆಯನ್ನು ಕೊಡುತ್ತಿದ್ದರು. ಅವರನ್ನು ನಾಶಮಾಡುವುದಕ್ಕಾಗಿ ದೇವತೆಗಳು ಯದುಗಳ ನೂರೊಂದು ವಂಶದಲ್ಲಿ ಅವತಾರ ಮಾಡಿದರು. ಅವರಿಗೆಲ್ಲ ಕೃಷ್ಣನೇ ರಕ್ಷಕನಾಗಿಯೂ, ಅಪ್ಪಣೆ ಮಾಡತಕ್ಕವನಾಗಿಯೂ, ಮಾಡಬೇಕಾದ ಕಾರ್ಯವನ್ನು ಗೊತ್ತುಮಾಡತಕ್ಕವನಾಗಿಯೂ ಇದ್ದುದರಿಂದ ಸಮಸ್ತ ಯಾದ

ಇತಿ ಪ್ರಸೂತಿಂ ವೃಷ್ಣೀನಾಂ ಯಶ್ಶೃಣೋತಿ ನರಸ್ಸದಾ ।
ಸ ಸರ್ವೈಃ ಪಾತಕೈರ್ಮುಕ್ತೋ ವಿಷ್ಣುಲೋಕಂ ಪ್ರಪದ್ಯತೇ ॥ ೫೦ ॥

ಇತಿ ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ ಪಂಚದಶೋಽಧ್ಯಾಯಃ

---

ವರೂ ಧನ, ಪುತ್ರಾದಿಗಳಿಂದ ಅಭಿವೃದ್ಧಿಯನ್ನು ಹೊಂದಿದರು. ಈ ವೃಷ್ಣಿಗಳ ವಂಶ ವಿಸ್ತಾರವನ್ನು ಕೇಳಿದ ಮನುಜನು ಸಕಲ ಪಾಪಗಳನ್ನೂ ಕಳೆದುಕೊಂಡು ವಿಷ್ಣುಲೋಕಕ್ಕೆ ಹೋಗುವನು.

ಎಂಬಲ್ಲಿಗೆ ಶ್ರೀ ವಿಷ್ಣು ಪುರಾಣದ ಚತುರ್ಥಾಂಶದಲ್ಲಿ
ಹದಿನೈದನೆಯ ಅಧ್ಯಾಯವು ಮುಗಿದುದು.

---

॥ ಶ್ರೀ ॥

# ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ

## ಷೋಡಶೋಽಧ್ಯಾಯಃ

---

॥ ಶ್ರೀ ಪರಾಶರಃ ॥

ಇತ್ಯೇಷ ಸಮಾಸತಸ್ತೇ ಯದೋರ್ವಂಶಃ ಕಥಿತಃ ॥ ೧ ॥

ಅಥ ದುರ್ವಸೋರ್ವಂಶಮವಧಾರಯ ॥ ೨ ॥

ದುರ್ವಸೋರ್ವಹ್ನಿರಾತ್ಮಜಃ ವಹ್ನೇರ್ಭಾರ್ಗಃ ಭಾರ್ಗಾದ್ಭಾನುಃ

ತತಶ್ಚ ತ್ರಯೀಸಾನುಃ ತಸ್ಮಾಚ್ಚ ಕರಂದಮಃ

ತಸ್ಯಾಪಿ ಮರುತ್ತಃ ॥ ೩ ॥

ಸೋಽನಪತ್ಯೋಽಭವತ್ ॥ ೪ ॥

---

### ಹದಿನಾರನೆಯ ಅಧ್ಯಾಯವು

೧-೬. ಮೈತ್ರೇಯನೇ! ಯದುವಂಶವನ್ನು ವಿವರಿಸಿದೆನು. ದುರ್ವಸುವಿನ ವಂಶವನ್ನು ಹೇಳುವೆನು ಕೇಳು:—ದುರ್ವಸುವಿಗೆ ವಹ್ನಿಯೂ, ವಹ್ನಿಗೆ ಭಾರ್ಗನೂ, ಭಾರ್ಗನಿಗೆ ಭಾನುವೂ, ಭಾನುವಿಗೆ ತ್ರಯೀಸಾನುವೂ, ತ್ರಯೀಸಾನುವಿಗೆ ಕರಂದಮನೂ, ಕರಂದಮನಿಗೆ ಮರುತ್ತನೂ ಮಕ್ಕಳಾದರು. ಮರುತ್ತನಿಗೆ ಮಕ್ಕಳಾಗಲಿಲ್ಲ. ಆದುದರಿಂದ ಪೂರುವಿನ ವಂಶದ ದುಷ್ಯಂತನನ್ನೇ ಮಗನನ್ನಾಗಿ ಮಾಡಿ

ತತಶ್ಚ ಪೌರವಂ ದುಷ್ಯಂತಂ ಪುತ್ರಮಕಲ್ಪಯತ್ ॥ ೫ ॥

ಏವಂ ಯಯಾತಿಶಾಪಾತ್ತದ್ವಂಶಃ ಪೌರವಮೇವವಂಶಂ
ಸಮಾಶ್ರಿತವಾನ್ ॥ ೬ ॥

ಇತಿ ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ ಷೋಡಶೋಽಧ್ಯಾಯಃ

---

ಕೊಂಡನು. ಹೀಗೆ ಯಯಾತಿಯ ಶಾಪದಿಂದ ದುರ್ವಸುವಿನ ವಂಶವು ಪೌರವ ವಂಶವನ್ನೇ ಆಶ್ರಯಿಸಿತು.

ಎಂಬಲ್ಲಿಗೆ ಶ್ರೀ ವಿಷ್ಣುಪುರಾಣದ ಚತುರ್ಥಾಂಶದಲ್ಲಿ
ಹದಿನಾರನೆಯ ಅಧ್ಯಾಯವು ಮುಗಿದುದು.

---

ಶ್ರೀ

# ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ

## ಸಪ್ತದಶೋಽಧ್ಯಾಯಃ

---

॥ ಶ್ರೀ ಪರಾಶರಃ ॥

ದ್ರುಹ್ಯೋಸ್ತು ತನಯೋ ಬಭ್ರುಃ ॥ ೧ ॥

ಬಭ್ರೋಸ್ಸೇತುಃ ॥ ೨ ॥

ಸೇತುಪುತ್ರ ಆರಬ್ಧ ನಾಮಾ ॥ ೩ ॥

ಆರಬ್ಧಸ್ಯಾತ್ಮಜೋ ಗಾಂಧಾರಃ ಗಾಂಧಾರಸ್ಯ ಘರ್ಮಃ
ಘರ್ಮಾತ್ ಘೃತಃ ಘೃತಾದ್ದುರ್ದಮಃ ತತಃ ಪ್ರಚೇತಾಃ ॥ ೪ ॥

---

## ಹದಿನೇಳನೆಯ ಅಧ್ಯಾಯವು

೧–೪. ದ್ರುಹ್ಯುವಿಗೆ ಬಭ್ರುವು ಮಗನು. ಬಭ್ರುವಿಗೆ ಸೇತುವೂ, ಸೇತುವಿಗೆ ಆರಬ್ಧನೂ, ಆರಬ್ಧನಿಗೆ ಗಾಂಧಾರನೂ, ಗಾಂಧಾರನಿಗೆ ಘರ್ಮನೂ, ಘರ್ಮನಿಗೆ ಘೃತನೂ, ಘೃತನಿಗೆ ದುರ್ದಮನೂ, ದುರ್ದಮನಿಗೆ ಪ್ರಚೇತನೂ ಮಕ್ಕಳಾದರು.

**ಪ್ರಚೇತಸಃ ಪುತ್ರಶ್ಶತಧರ್ಮಾ ಬಹುಲಾನಾಂ ಮ್ಲೇಚ್ಛಾ**
**ಮುದೀಚ್ಯಾನಾಮಾಧಿಪತ್ಯಮಕರೋತ್ ॥ ೫ ॥**

**ಇತಿ ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ ಸಪ್ತದಶೋಽಧ್ಯಾಯಃ**

---

ಪ್ರಚೇತನ ಮಗನಾದ ಶತಧರ್ಮನು ಉತ್ತರ ದಿಕ್ಕಿನ ದೇಶದಲ್ಲಿದ್ದ ಮ್ಲೇಚ್ಛರಿಗೆ ರಾಜನಾಗಿದ್ದನು.

ಎಂಬಲ್ಲಿಗೆ ಶ್ರೀ ವಿಷ್ಣುಪುರಾಣದ ಚತುರ್ಥಾಂಶದಲ್ಲಿ
ಹದಿನೇಳನೆಯ ಅಧ್ಯಾಯವು ಮುಗಿದುದು

---

॥ ಶ್ರೀ ॥

# ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ

## ಅಷ್ಟಾದಶೋಽಧ್ಯಾಯಃ

॥ ಶ್ರೀ ಪರಾಶರಃ ॥

ಯಯಾತೇಶ್ಚತುರ್ಥಪುತ್ರಸ್ಯಾನೋಸ್ಸಭಾನಲಚಕ್ಷುಃ ಪರಮೇಷು
ಸಂಜ್ಞಾಸ್ತ್ರಯಃ ಪುತ್ರಾಃ ಬಭೂವುಃ ॥ ೧ ॥

ಸಭಾನಲಪುತ್ರಃ ಕಾಲಾನಲಃ ॥ ೨ ॥

ಕಾಲಾನಲಾತ್ಸೃಂಜಯಃ ॥ ೩ ॥

ಸೃಂಜಯಾತ್ಪುರಂಜಯಃ ॥ ೪ ॥

ಪುರಂಜಯಾಜ್ಜನಮೇಜಯಃ ॥ ೫ ॥

ತಸ್ಮಾನ್ಮಹಾಶಾಲಃ ॥ ೬ ॥

ತಸ್ಮಾಚ್ಚ ಮಹಾಮನಾಃ ॥ ೭ ॥

ತಸ್ಮಾದುಶೀನರತಿತಿಕ್ಷೂ ದ್ವೌ ಪುತ್ರಾವುತ್ಪನ್ನೌ ॥ ೮ ॥

---

### ಹದಿನೆಂಟನೆಯ ಅಧ್ಯಾಯವು.

೧-೮. ಯಯಾತಿಯ ನಾಲ್ಕನೆಯ ಮಗನಾದ ಅನುವಿಗೆ ಸಭಾನಲ, ಚಕ್ಷು, ಪರಮೇಷು ಎಂಬ ಮೂವರು ಮಕ್ಕಳಿದ್ದರು. ಸಭಾನಲನಿಗೆ ಕಾಲಾನಲನೂ ಕಾಲಾನಲನಿಗೆ ಸೃಂಜಯನೂ ಸೃಂಜಯನಿಗೆ ಪುರಂಜಯನೂ, ಪುರಂಜಯನಿಗೆ ಜನಮೇಜಯನೂ, ಜನಮೇಜಯನಿಗೆ ಮಹಾಶಾಲನೂ ಮಹಾಶಾಲನಿಗೆ ಮಹಾಮನನೂ, ಮಹಾಮನನಿಗೆ ಉಶೀನರ ತಿತಿಕ್ಷುಗಳೆಂಬಿಬ್ಬರೂ ಮಕ್ಕಳಾದರು.

ಉಶೀನರಸ್ಯಾಪಿ ಶಿಬಿನೃಗನವಕೃಮಿವರ್ಮಾಖ್ಯಾಃ
ಪಂಚ ಪುತ್ರಾಃ ಬಭೂವುಃ ॥ ೯ ॥

ವೃಷದರ್ಭಸುವೀರ ಕೇಕಯುಮುದ್ರಕಾಶ್ಚತ್ವಾರಃ ಶಿಬಿಪುತ್ರಾಃ ॥ ೧೦ ॥

ತಿತಿಕ್ಷೋರಪಿ ರುಶದ್ರಥಃ ಪುತ್ರೋಽಭೂತ್ ॥ ೧೧ ॥

ತಸ್ಯಾಪಿ ಹೇಮಃ ಹೇಮಸ್ಯಾಪಿ ಸುತಪಾಃ ಸುತಪಸಶ್ಚ ಬಲಿಃ ॥ ೧೨ ॥

ಯಸ್ಯ ಕ್ಷೇತ್ರೇ ದೀರ್ಘತಮಸಾಂಗವಂಗ ಕಳಿಂಗ
ಸುಹ್ಮಪೌಂಡ್ರಾಖ್ಯಂ ಬಾಲೇಯಂ ಕ್ಷತ್ರಮಜನ್ಯತ ॥ ೧೩ ॥

ತನ್ನಾಮಸಂತತಿ ಸಂಜ್ಞಾಶ್ಚ ಪಂಚವಿಷಯಾ ಬಭೂವುಃ ॥ ೧೪ ॥

ಅಂಗಾದನಪಾನಸ್ತತೋ ದಿವಿರಥಃ ತಸ್ಮಾದ್ಧರ್ಮರಥಃ ॥ ೧೫ ॥

ತತಶ್ಚಿತ್ರರಥಃ ರೋಮಪಾದಸಂಜ್ಞಃ ॥ ೧೬ ॥

---

೯-೧೪. ಉಶೀನರನಿಗೆ ಶಿಬಿ, ನೃಗ, ನವ, ಕೃಮಿ, ವರ್ಮ ಎಂಬ ಐವರು ಮಕ್ಕಳು. ಶಿಬಿಗೆ ವೃಷದರ್ಭ, ಸುವೀರ, ಕೇಕಯ, ಮುದ್ರಕರೆಂಬ ನಾಲ್ವರು ಮಕ್ಕಳು. ತಿತಿಕ್ಷುವಿಗೆ ರುಶದ್ರಥನು ಮಗನಾದನು. ರುಶದ್ರಥನಿಗೆ ಹೇಮನೂ, ಹೇಮನಿಗೆ ಸುತಪನೂ, ಸುತಪನಿಗೆ ಬಲಿಯೂ ಮಕ್ಕಳು. ಬಲಿಯ ಪತ್ನಿಯಲ್ಲಿ ದೀರ್ಘತಮಸ, ಅಂಗ, ವಂಗ, ಕಳಿಂಗ, ಸುಹ್ಮ, ಪೌಂಡ್ರ ಎಂಬ ಮಕ್ಕಳು ಹುಟ್ಟಿ ಇವರೆಲ್ಲ ಬಾಲೇಯರೆಂಬ ಕ್ಷತ್ರಿಯರಾದರು. ಅವರ ಹೆಸರಿನ ಸಂತತಿಯ ಸಂಜ್ಞೆಯಿಂದ ಐದು ದೇಶಗಳಾದುವು.

೧೫-೨೨. ಅಂಗನ ಮಗನೇ ಅನಪಾಲನು. ಅನಪಾಲನಿಗೆ ದಿವಿರಥನೂ, ದಿವಿರಥನಿಗೆ ಧರ್ಮರಥನೂ, ಧರ್ಮರಥನಿಗೆ ರೋಮಪಾದನೆಂಬ ಹೆಸರುಳ್ಳ ಚಿತ್ರ

**ಯಸ್ಯ ದಶರಥೋ ಮಿತ್ರಂ ಜಜ್ಞೇ** ॥ ೧೭ ॥

**ಯಸ್ಯಾಜಪುತ್ರೋ ದಶರಥಶ್ಶಾಂತಾಂನಾಮ ಕನ್ಯಾಮನಪತ್ಯಸ್ಯ ದುಹಿತೃತ್ವೇ ಯುಯೋಜ** ॥ ೧೮ ॥

**ರೋಮಪಾದಾಚ್ಚತುರಂಗಃ ತಸ್ಮಾತ್ಪೃಥುಲಾಕ್ಷಃ** ॥ ೧೯ ॥

**ತತಶ್ಚಂಪಃ ಯಶ್ಚಂಪಾಂ ನಿವೇಶಯಾಮಾಸ** ॥ ೨೦ ॥

**ಚಂಪಸ್ಯ ಹರ್ಯಂಗೋ ನಾಮಾತ್ಮಜೋಽಭೂತ್** ॥ ೨೧ ॥

**ಹರ್ಯಂಗಾದ್ಭದ್ರರಥಃ ಭದ್ರರಥಾದ್ಬೃಹದ್ರಥಃ ಬೃಹದ್ರಥಾದ್ಬೃಹತ್ಕರ್ಮಾ ಬೃಹತ್ಕರ್ಮಣಶ್ಚ ಬೃಹದ್ಭಾನುಃ ತಸ್ಮಾಚ್ಚ ಬೃಹನ್ಮನಾಃ ಬೃಹನ್ಮನಸೋ ಜಯದ್ರಥಃ** ॥ ೨೨ ॥

**ಜಯದ್ರಥೋ ಬ್ರಹ್ಮಕ್ಷತ್ರಾಂತರಾಳ ಸಂಭೂತ್ಯಾಂ ಪತ್ನ್ಯಾಂ ವಿಜಯಂ ನಾಮ ಪುತ್ರಮಜೀಜನತ್** ॥ ೨೩ ॥

**ವಿಜಯಶ್ಚ ಧೃತಿಂ ಪುತ್ರಮವಾಪ** ॥ ೨೪ ॥

---

ರಥನೂ ಮಕ್ಕಳಾದರು. ಈ ರೋಮಪಾದನಿಗೆ ದಶರಥನು ಸ್ನೇಹಿತನಾಗಿದ್ದನು. ಆ ರೋಮಪಾದನ ಮಗಳಾದ ಶಾಂತಾ ಎಂಬ ಕನ್ಯೆಯನ್ನು ದಶರಥನು ತನಗೆ ಮಕ್ಕಳಿಲ್ಲದುದರಿಂದ ಮಗಳನ್ನಾಗಿ ಗ್ರಹಿಸಿದನು. ರೋಮಪಾದನಿಗೆ ಚತುರಂಗನೂ, ಚತುರಂಗನಿಗೆ ಪೃಥುಲಾಕ್ಷನೂ. ಪೃಥುಲಾಕ್ಷನಿಗೆ ಚಂಪನೂ, (ಚಂಪಾಪುರಿಯನ್ನು ಕಟ್ಟಿಸಿದವನು) ಚಂಪನಿಗೆ ಹರ್ಯಂಗನೂ. ಹರ್ಯಂಗನಿಗೆ ಭದ್ರರಥನೂ, ಭದ್ರರಥನಿಗೆ ಬೃಹದ್ರಥನೂ, ಬೃಹದ್ರಥನಿಗೆ ಬೃಹತ್ಕರ್ಮನೂ, ಬೃಹತ್ಕರ್ಮನಿಗೆ ಬೃಹದ್ಭಾನುವೂ ಅವನಿಗೆ ಬೃಹನ್ಮನನೂ ಬೃಹನ್ಮನನಿಗೆ ಜಯದ್ರಥನೂ ಮಕ್ಕಳಾದರು

೨೩-೨೭. ಜಯದ್ರಥನು ಬ್ರಾಹ್ಮಣ ಮತ್ತು ಕ್ಷತ್ರಿಯ ವರ್ಣಸಂಬಂಧದಿಂದ ಹುಟ್ಟಿದ ಸಂಕರ ಜಾತಿಯ ಕನ್ಯೆಯನ್ನು ವಿವಾಹಮಾಡಿಕೊಂಡನು. ಅವಳಲ್ಲಿ

ತಸ್ಯಾಪಿ ಧೃತವ್ರತಃ ಪುತ್ರೋऽಭೂತ್ ॥ ೨೫ ॥

ಧೃತವ್ರತಾತ್ಸತ್ಯಕರ್ಮಾ ॥ ೨೬ ॥

ಸತ್ಯಕರ್ಮಣಸ್ತ್ವತಿರಥಃ ॥ ೨೭ ॥

ಯೋ ಗಂಗಾ ಗತೋ ಮಂಜೂಷಾಗತಂ ಪೃಥಾಪವಿದ್ಧಂ
ಕರ್ಣಂ ಪುತ್ರಮವಾಪ ॥ ೨೮ ॥

ಕರ್ಣಾದ್ವೃಷಸೇನಃ ಇತ್ಯೇತದಂತಾ ಅಂಗವಂಶ್ಯಾಃ ॥ ೨೯ ॥

ಅತಶ್ಚ ಪೂರುವಂಶಂ ಶ್ರೋತುಮರ್ಹಸಿ ॥ ೩೦ ॥

ಇತಿ ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ ಅಷ್ಟಾದಶೋऽಧ್ಯಾಯಃ

---

ವಿಜಯನೆಂಬ ಮಗನನ್ನು ಪಡೆದನು. ವಿಜಯನಿಗೆ ಧೃತಿಯೂ ಧೃತಿಗೆ ಧೃತವ್ರತನೂ, ಧೃತವ್ರತನಿಗೆ ಸತ್ಯಕರ್ಮನೂ, ಸತ್ಯಕರ್ಮನಿಗೆ ಅತಿರಥನೂ ಮಕ್ಕಳಾದರು.

೨೮-೩೦. ಅತಿರಥನು ಗಂಗಾನದಿಗೆ ಹೋಗಿದ್ದಾಗ ಪೆಟ್ಟಿಗೆಯಲ್ಲಿದ್ದ ಪೃಥೆಯು ತ್ಯಾಗಮಾಡಿದ ಕರ್ಣನನ್ನು ಪುತ್ರನನ್ನಾಗಿ ಪಡೆದನು. ಈ ಅತಿರಥನು ಸಂಕರ ಜಾತಿಯ ವಿಜಯನ ವಂಶದವನಾದುದರಿಂದ ಸೂತನೆನಿಸಿಕೊಂಡನು. ಈ ಕಾರಣ ದಿಂದಲೇ ಕರ್ಣನಿಗೆ ಸೂತಪುತ್ರನೆಂದು ಹೆಸರು ಬಂದಿತು. ಕರ್ಣನ ಮಗನೇ ವೃಷಸೇನನು. ಇಲ್ಲಿಗೆ ಅಂಗವಂಶವು ಕೊನೆಯಾಯಿತು. ಇಲ್ಲಿಂದ ಮುಂದೆ ಪೂರುವಿನ ವಂಶವನ್ನು ಹೇಳುವೆನು ಕೇಳು.

ಎಂಬಲ್ಲಿಗೆ ಶ್ರೀ ವಿಷ್ಣುಪುರಾಣದ ಚತುರ್ಥಾಂಶದಲ್ಲಿ

ಹದಿನೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ

## ಏಕೋನವಿಂಶೋಽಧ್ಯಾಯಃ

॥ ಶ್ರೀ ಪರಾಶರಃ ॥

ಪೂರೋರ್ಜನಮೇಜಯಃ ತಸ್ಯಾಪಿ ಪ್ರಚಿನ್ವಾನ್ ಪ್ರಚಿನ್ವತಃ
ಪ್ರವೀರಃ ಪ್ರವೀರಾನ್ಮನಸ್ಯುಃ ಮನಸ್ಯೋಽಶ್ವಾ ಭಯದಃ ತಸ್ಯಾಪಿ
ಸುದ್ಯುಸ್ಸುದ್ಯೋರ್ಬಹುಗತಃ ತಸ್ಯಾಪಿ ಸಂಯಾತಿಸ್ಸಂಯಾ
ತೇರಹಂಯಾತಿಸ್ತತೋ ರೌದ್ರಾಶ್ವಃ ॥ ೧ ॥

ಋತೇಪುಕಕ್ಷೇಪುಸ್ಥಂಡಿಲೇಪುಕೃತೇಪುಜಲೇಪುಧರ್ಮೇಪುಧೃತೇಪುಸ್ಥಲೇ
ಪುಸನ್ನತೇಪುವನೇಪುನಾಮಾನೋ ರೌದ್ರಾಶ್ವಸ್ಯ
ದಶಪುತ್ರಾ ಬಭೂವುಃ ॥ ೨ ॥

---

### ಹತ್ತೊಂಭತ್ತನೆಯ ಅಧ್ಯಾಯವು

೧–೨. ಪೂರುವಿಗೆ ಜನಮೇಜಯನೂ, ಜನಮೇಜಯನಿಗೆ ಪ್ರಚಿನ್ವಂತನೂ, ಪ್ರಚಿನ್ವಂತನಿಗೆ ಪ್ರವೀರನೂ, ಪ್ರವೀರನಿಗೆ ಮನಸ್ಯುವೂ, ಮನಸ್ಯುವಿಗೆ ಬಹುಗತನೂ, ಬಹುಗತನಿಗೆ ಸಂಯಾತಿಯೂ, ಸಂಯಾತಿಗೆ ಅಹಂಯಾತಿಯೂ, ಅಹಂಯಾತಿಗೆ ರೌದ್ರಾಶ್ವನೂ, ರೌದ್ರಾಶ್ವನಿಗೆ ಋತೇಪು, ಕಕ್ಷೇಪು, ಸ್ಥಂಡಿಲೇಪು, ಕೃತೇಪು, ಜಲೇಪು, ಧರ್ಮೇಪು, ಧೃತೇಪು, ಸ್ಥಲೇಪು, ಸನ್ನತೇಪು, ವನೇಪು ಎಂಬ ಹತ್ತು ಜನ ಮಕ್ಕಳೂ ಇದ್ದರು.

ಋತೇಪೋರಂತಿನಾರಃ ಪುತ್ರೋಽಭೂತ್ ॥ ೩ ॥

ಸುಮತಿಮಪ್ರತಿರಥಂ ಧ್ರುವಂ ಚಾಪ್ಯಂತಿನಾರಃ ಪುತ್ರಾನವಾಪ ॥ ೪ ॥

ಅಪ್ರತಿರಥಸ್ಯ ಕಣ್ವಃ ಪುತ್ರೋಽಭೂತ್ ॥ ೫ ॥

ತಸ್ಯಾಪಿ ಮೇಧಾತಿಥಿಃ ॥ ೬ ॥

ಯತಃ ಕಣ್ವಾಯನಾದ್ದ್ವಿಜಾ ಬಭೂವುಃ ॥ ೭ ॥

ಅಪ್ರತಿರಥಸ್ಯಾಪರಃ ಪುತ್ರೋಽಭೂದೈಲೀನಃ ॥ ೮ ॥

ಐಲೀನಸ್ಯ ದುಷ್ಯಂತಾದ್ಯಾಶ್ಚತ್ವಾರಃ ಪುತ್ರಾ ಬಭೂವುಃ ॥ ೯ ॥

ದುಷ್ಯಂತಾಚ್ಚಕ್ರವರ್ತೀ ಭರತೋಽಭೂತ್ ॥ ೧೦ ॥

ಯನ್ನಾಮಹೇತುರ್ದೇವೈಶ್ಶ್ಲೋಕೋ ಗೀಯತೇ ॥ ೧೧ ॥

ಮಾತಾ ಭಸ್ತ್ರಾ ಪಿತುಃ ಪುತ್ರೋ ಯೇನ ಜಾತಸ್ಸ ಏವ ಸಃ
ಭರಸ್ವ ಪುತ್ರಂ ದುಷ್ಯಂತಮಾವಮಂಸ್ಥಾಶ್ಶಕುಂತಲಾಂ ॥ ೧೨ ॥

---

೩-೧೦. ಋತೇಪುವಿಗೆ ಅಂತಿನಾರನೂ, ಅಂತಿನಾರನಿಗೆ ಸುಮತಿ, ಅಪ್ರತಿರಥ, ಧ್ರುವ, ಎಂಬ ಮೂವರೂ ಮಕ್ಕಳು ಅಪ್ರತಿರಥನಿಗೆ ಕಣ್ವನೂ, ಅವನಿಗೆ ಮೇಧಾತಿಥಿಯೂ ಮಕ್ಕಳು. ಇವರ ವಂಶದವರೇ ಕಣ್ವಾಯನರೆಂಬ ಬ್ರಾಹ್ಮಣರು. ಅಪ್ರತಿರಥನ ಮತ್ತೊಬ್ಬ ಮಗನೇ ಐಲೀನನು, ಐಲೀನನಿಗೆ ದುಷ್ಯಂತನೇ ಮೊದಲಾದ ನಾಲ್ಕು ಜನ ಮಕ್ಕಳಾದರು. ದುಷ್ಯಂತನಿಂದ ಚಕ್ರವರ್ತಿಯಾದ ಭರತನು ಹುಟ್ಟಿದನು.

೧೧-೧೩. ತಾಯಿಯು ಚರ್ಮದ ತಿದಿಯಂತೆ ಗರ್ಭಧಾರಣೆಗೆ ಮಾತ್ರ ಆಶ್ರಯಳಾದವಳು. ತಂದೆಯ ವೀರ್ಯದಿಂದಲೇ ಮಗನು ಹುಟ್ಟುವನು. ಆದುದರಿಂದ ಎಲೈ ದುಷ್ಯಂತನೇ ಪುತ್ರನನ್ನು ಭರಿಸು. ಶಕುಂತಲೆಯನ್ನು ಅಪಮಾನ ಪಡಿಸಬೇಡ. ಎಂಬ ಅಭಿಪ್ರಾಯವುಳ್ಳ ಶ್ಲೋಕವನ್ನು ದೇವತೆಗಳು ಗಾನಮಾಡಿದುದರಿಂದ ಶಕುಂತಲಾ ಪುತ್ರನಿಗೆ ಭರತನೆಂದು ಹೆಸರಾಯಿತು. ಎಲೈ ರಾಜನೇ ಸಂತತಿ ಕರ್ತ

ರೇತೋಧಾಃ ಪುತ್ರೋ ನಯತಿ ನರದೇವಯಮಕ್ಷಯಾತ್
ತ್ವಂಚಾಸ್ಯ ಧಾತಾ ಗರ್ಭಸ್ಯ ಸತ್ಯಮಾಹ ಶಕುಂತಳಾ　　॥ ೧೩ ॥

ಭರತಸ್ಯ ಪತ್ನೀತ್ರಯೇ ನವಪುತ್ರಾ ಬಭೂವುಃ　　॥ ೧೪ ॥

ನೈತೇ ಮಮಾನುರೂಪಾ ಇತ್ಯಭಿಹಿತಾಸ್ತನ್ಮಾತರಃ ಪರಿತ್ಯಾಗ
ಭಯಾತ್ತತ್ಪುತ್ರಾನ್ ಜಘ್ನುಃ　　॥ ೧೫ ॥

ತತೋಽಸ್ಯ ವಿತಥೇ ಪುತ್ರಜನ್ಮನಿ ಪುತ್ರಾರ್ಥಿನೋ ಮರುತ್ಸೋ
ಮಯಾಜಿನೋ ದೀರ್ಘತಮಸಃ ಪಾಷ್ಣ್ಯರ್ಪಾಸ್ತ ಬೃಹಸ್ಪತಿ

---

ನಾದ ಪುತ್ರನು ನರಕದಲ್ಲಿದ್ದ ಪಿತೃಗಳನ್ನು ಉದ್ಧಾರಮಾಡುವನು. ನೀನು ಈ ಗರ್ಭಕ್ಕೆ ಆಧಾನಕರ್ತೃವೆಂದು ಶಕುಂತಳೆಯು ಸತ್ಯವನ್ನು ನುಡಿದಿರುವಳು ಎಂದು ದೇವತೆಗಳು ಭರತನೆಂಬ ಹೆಸರಿಗೆ ಕಾರಣವನ್ನು ಹೇಳಿರುವರು.

೧೪-೧೬. ಭರತನ ಮೂವರು ಹೆಂಡಿರಲ್ಲಿ ಒಂಭತ್ತು ಜನ ಮಕ್ಕಳಾದರು. ಇವರು ನನ್ನ ಅನುರೂಪರಲ್ಲ ಎಂದು ಭರತನು ಹೇಳಿದ್ದರಿಂದ ಈ ಮಕ್ಕಳು ಜೀವಿಸಿದ್ದರೆ ಅಸಮಾನತೆಯಿಂದ ತಮ್ಮಲ್ಲಿ ವ್ಯಭಿಚಾರ ದೋಷವನ್ನೂಹಿಸಿ ತಮ್ಮನ್ನು ರಾಜನು ಪರಿತ್ಯಾಗ ಮಾಡುವನೆಂಬ ಭಯದಿಂದ ಆಸ್ತ್ರೀಯರು ಮಕ್ಕಳನ್ನು ಕೊಂದುಹಾಕಿದರು. ಇದರಿಂದ ಭರತನಿಗೆ ಮಕ್ಕಳಿಲ್ಲದೆ ಹೋಗಲು ಪುತ್ರಾರ್ಥಿಯಾಗಿ ಸೋಮಯಾಗವನ್ನು ಮಾಡಿದ ಭರತನಿಗೆ ದೇವತೆಗಳು ದೀರ್ಘತಮನೆಂಬವನು ಪಾದದ ಹಿಮ್ಮಡಿಯ ಪ್ರಹಾರದಿಂದ ಹೊರಕ್ಕೆ ತಳ್ಳಿದ ಬೃಹಸ್ಪತಿಯ ವೀರ್ಯದಿಂದ ಉಚಥ್ಯನ ಹೆಂಡತಿಯಾದ ಮಮತೆಯಲ್ಲಿ ಹುಟ್ಟಿದ ಭರದ್ವಾಜನೆಂಬ ಪುತ್ರನನ್ನು ಕೊಟ್ಟರು. (ಬೃಹಸ್ಪತಿಯ ಅಣ್ಣನಾದ ಉಚಥ್ಯನಿಗೆ ಮಮತೆಯೆಂಬ ಪತ್ನಿಯಿದ್ದಳು. ಅವಳು ಗರ್ಭಿಣಿಯಾಗಿದ್ದಳು. ಇವಳನ್ನು ಬೃಹಸ್ಪತಿಯು ಕಾಮಿಸಿ ತನ್ನ ವೀರ್ಯವನ್ನು ಗರ್ಭದಲ್ಲಿ ಸೇರಿಸಿದನು. ಅದು ಗರ್ಭವನ್ನು ಸೇರಿದಾಗ ಗರ್ಭದಲ್ಲಿರುವ ಶಿಶುವು ಸ್ಥಾನಸಂಕೋಚದಿಂದ ತನ್ನ ಕಾಲಿನ ಹಿಮ್ಮಡಿಯಿಂದ ಅದನ್ನು ಒದೆಯಲು ಅದು ಹೊರಗೆ ಬಿದ್ದರೂ ಅಮೋಘವೀರ್ಯವಾದುದರಿಂದ ಶಿಶುವಾಯಿತು.

ವೀರ್ಯಾದುಚಥ್ಯಪತ್ನ್ಯಾಂ ಮಮತಾಯಾಂ ಸಮುತ್ಪನ್ನೋ
ಭರದ್ವಾಜಾಖ್ಯಃ ಪುತ್ರೋ ಮರುದ್ಭಿರ್ದತ್ತಃ ॥ ೧೬ ॥

ತಸ್ಯಾಪಿ ನಾಮನಿರ್ವಚನಶ್ಲೋಕಃ ಪಠ್ಯತೇ ॥ ೧೭ ॥

ಮೂಢೇ ಭರದ್ವಾಜಮಿಮಂ ಭರದ್ವಾಜಂ ಬೃಹಸ್ಪತೇ
ಯಾತೌ ಯದುಕ್ತ್ವಾ ಪಿತರೌ ಭರದ್ವಾಜಸ್ತತಸ್ತ್ವಯಮಿತಿ ॥ ೧೮ ॥

ಭರದ್ವಾಜಸ್ಸ ತಸ್ಯ ವಿತಥೇ ಪುತ್ರಜನ್ಮನಿ ಮರುದ್ಭಿರ್ದತ್ತಃ
ತತೋ ವಿತಥಸಂಜ್ಞಾಮವಾಪ ॥ ೧೯ ॥

ವಿತಥಸ್ಯಾಪಿ ಮನ್ಯುಃ ಪುತ್ರೋಽಭವತ್ ॥ ೨೦ ॥

ಬೃಹತ್ಕ್ಷತ್ರಮಹಾವೀರ್ಯ ನಗರಗರ್ಗಾ ಅಭವನ್ಮನ್ಯುಪುತ್ರಾಃ ॥ ೨೧ ॥

---

ಬೃಹಸ್ಪತಿಯು ತಪ್ಪುಮಾಡಿದ ಗರ್ಭದೊಳಗಿರುವ ಶಿಶುವಿಗೆ ಕುರುಡನಾಗೆಂದು ಶಾಪ ವನ್ನು ಕೊಟ್ಟನು. ಇದರಿಂದ ಅವನು ದೀರ್ಘತಮನೆಂಬ ಹೆಸರಿನಿಂದ ಅಂಧನಾಗಿ ಹುಟ್ಟಿದನು.) ಎಂದು ಇತಿಹಾಸವಿರುವುದು.

೧೭–೨೦. ಭರದ್ವಾಜನೆಂಬ ಹೆಸರು ಬರಲು ಕಾರಣವನ್ನು ದೇವತೆಗಳೇ ಹೇಳಿರುವರು. ಏನೆಂದರೆ ದ್ವಾಜನೆಂದರೆ ಇಬ್ಬರಿಂದ ಜನಿಸಿದವನು. ಭರ ಅಂದರೆ ಪೋಷಿಸು ಎಂದರ್ಥವು. ಮೂಢಳಾದ ಸ್ತ್ರೀಯೇ ನೀನು ಇವನನ್ನು ಪೋಷಿಸು ಎಂದು ಬೃಹಸ್ಪತಿಯೂ, ನೀನೇ ಪೋಷಿಸೆಂದು ಮಮತೆಯೂ ಹೇಳಿ ಹೊರಟು ಹೋದುದರಿಂದ ಅವನಿಗೆ ಭರದ್ವಾಜನೆಂಬ ಹೆಸರಾಯಿತು. ಭರತನಿಗೆ ಪುತ್ರೋತ್ಪತ್ತಿಯು (ವ್ಯರ್ಥ) ವಿತಥ ವಾದುದರಿಂದ ದೇವತೆಗಳು ಇವನನ್ನು ಕೊಟ್ಟ ಕಾರಣ ವಿತಥನೆಂಬ ಹೆಸರಾಯಿತು. ವಿತಥನಿಗೆ ಮನ್ಯುವು ಮಗನಾದನು.

೨೧–೨೩. ಮನ್ಯುವಿಗೆ ಬೃಹತ್ಕ್ಷತ್ರ, ಮಹಾವೀರ್ಯ, ನಗರ, ಗರ್ಗ ಎಂಬವರು ಮಕ್ಕಳು. ನಗರನಿಗೆ ಸಂಕೃತಿಯೂ, ಸಂಕೃತಿಗೆ ಗುರುಪ್ರೀತಿ, ರಂತಿದೇವ

ನಗರಸ್ಯ ಸಂಕೃತಿಸ್ಸಂಕೃತೇರ್ಗುರುಪ್ರೀತಿರಂತಿದೇವೌ ॥ ೨೨ ॥

ಗರ್ಗಾಚ್ಛಿನಿಃ ತತಶ್ಚ ಗಾರ್ಗ್ಯಾಃಶೈನ್ಯಾಃ ಕ್ಷತ್ರೋಪೇತಾಃ
ದ್ವಿಜಾತಯೋ ಬಭೂವುಃ ॥ ೨೩ ॥

ಮಹಾವೀರ್ಯಾಚ್ಚ ದುರುಕ್ಷಯೋ ನಾಮ ಪುತ್ರೋಽಭವತ್ ॥ ೨೪ ॥

ತಸ್ಯ ತ್ರಯ್ಯಾರುಣಿಃ ಪುಷ್ಕರಿಣಃ ಕಪಿಶ್ಚ ಪುತ್ರತ್ರಯಮಭೂತ್ ॥ ೨೫ ॥

ತಚ್ಚ ಪುತ್ರತ್ರಿತಯಮಪಿ ಪಶ್ಚಾದ್ವಿಪ್ರತಾಮುಪಜಗಾಮ ॥ ೨೬ ॥

ಬೃಹತ್ಕ್ಷತ್ರಸ್ಯ ಸುಹೋತ್ರಃ ॥ ೨೭ ॥

ಸುಹೋತ್ರಾದ್ಧಸ್ತೀ ಯ ಇದಂ ಹಸ್ತಿನಪುರಂ ಆವಾಸಯಾಮಾಸ ॥ ೨೮ ॥

ಅಜಮೀಢದ್ವಿಜಮೀಢಪುರುಮೀಢಾಸ್ತ್ರಯೋ ಹಸ್ತಿನಸ್ತನಯಾಃ ॥ ೨೯ ॥

ಅಜಮೀಢಾತ್ಕಣ್ವಃ ॥ ೩೦ ॥

---

ಎಂಬಿಬ್ಬರೂ ಮಕ್ಕಳಾದರು. ಗರ್ಗನಿಗೆ ಶಿನಿಯು ಪುತ್ರನು. ಇವರಿಂದುಂಟಾದ ಗಾರ್ಗ್ಯಶೈನ್ಯ ಸಂತತಿಯವರು ಕ್ಷತ್ರಿಯರಾಗಿದ್ದರೂ ಕೆಲವು ಕಾರಣಗಳಿಂದ ಬ್ರಾಹ್ಮಣರೂ ಆದರು.

೨೪–೨೬. ಮಹಾವೀರ್ಯನಿಗೆ ದುರುಕ್ಷಯನೆಂಬ ಮಗನು ಹುಟ್ಟಿದನು. ಅವನಿಗೆ ತ್ರಯ್ಯಾರುಣಿ, ಪುಷ್ಕರಿಣ, ಕಪಿ ಎಂಬ ಮೂವರು ಮಕ್ಕಳು ಈ ಮೂವರೂ ಬ್ರಾಹ್ಮಣರಾದರು.

೨೭–೩೩. ಬೃಹತ್ಕ್ಷತ್ರನಿಗೆ ಸುಹೋತ್ರನೂ, ಸುಹೋತ್ರನಿಗೆ ಹಸ್ತಿಯೂ ಪುತ್ರರು ಈ ಹಸ್ತಿಯೇ ಹಸ್ತಿನಪುರವನ್ನು ಕಟ್ಟಿಸಿ ಅಲ್ಲಿ ವಾಸವಾಗಿದ್ದನು. ಇವನಿಗೆ

ಕಣ್ವಾನ್ಮೇಧಾತಿಥಿಃ ॥ ೩೧ ॥

ಯತಃ ಕಣ್ವಾಯನಾದ್ವಿಜಾಃ ॥ ೩೨ ॥

ಅಜಮೀಢಸ್ಯಾನ್ಯಃ ಪುತ್ರೋ ಬೃಹದಿಷುಃ ॥ ೩೩ ॥

ಬೃಹದಿಷೋರ್ಬೃಹದ್ಧನುರ್ಬೃಹದ್ಧನುಷಶ್ಚ ಬೃಹತ್ಕರ್ಮಾ ತತಶ್ಚ
ಜಯದ್ರಥಃ । ತಸ್ಮಾದಪಿ ವಿಶ್ವಜಿತ್ ॥ ೩೪ ॥

ತತಶ್ಚ ಸೇನಜಿತ್ ॥ ೩೫ ॥

ರುಚಿರಾಶ್ವ ಕಾಶ್ಯದೃಢಹನುವತ್ಸಹನುಸಂಜ್ಞಾಸ್ಸೇನಜಿತಃ ಪುತ್ರಾಃ ॥ ೩೬ ॥

ರುಚಿರಾಶ್ವಪುತ್ರಃ ಪೃಥುಸೇನಃ ಪೃಥುಸೇನಾತ್ಪಾರಃ ॥ ೩೭ ॥

ಪಾರಾನ್ನೀಲಃ ॥ ೩೮ ॥

ತಸ್ಯೈಕಶತಂ ಪುತ್ರಾಣಾಂ ॥ ೩೯ ॥

ತೇಷಾಂ ಪ್ರಧಾನಃ ಕಾಂಪಿಲ್ಯಾಧಿಪತಿಃ ಸಮರಃ ॥ ೪೦ ॥

---

ಅಜಮೀಢ, ದ್ವಿಜಮೀಢ, ಪುರುಮೀಢ, ಎಂಬ ಮೂವರು ಮಕ್ಕಳು ಅಜಮೀಢನಿಗೆ ಕಣ್ವನೂ, ಕಣ್ವನಿಗೆ ಮೇಧಾತಿಥಿಯೂ ಮಕ್ಕಳು. ಇವನ ವಂಶದವರು ಕಣ್ವಾಯನರೆಂದು ಪ್ರಸಿದ್ಧರಾದ ಬ್ರಾಹ್ಮಣವಂಶದವರಾಗಿರುವರು.

೩೩–೪೧. ಅಜಮೀಢನಿಗೆ ಬೃಹದಿಷುವೆಂಬ ಮತ್ತೊಬ್ಬ ಮಗನಿದ್ದನು ಇವನಿಗೆ ಬೃಹದ್ಧನುವೂ, ಬೃಹದ್ಧನುವಿಗೆ ಬೃಹತ್ಕರ್ಮನೂ, ಅವನಿಗೆ ಜಯದ್ರಥನೂ, ಜಯದ್ರಥನಿಗೆ ವಿಶ್ವಜಿತುವೂ, ವಿಶ್ವಜಿತ್ತಿಗೆ ಸೇನಜಿತುವೂ ಮಕ್ಕಳು. ಸೇನಜಿತ್ತಿಗೆ ರುಚಿರಾಶ್ವ ಕಾಶ್ಯ ದೃಢಹನು, ವತ್ಸಹನು ಎಂಬಿವರು ಮಕ್ಕಳು. ರುಚಿರಾಶ್ವನಿಗೆ ಪೃಥುಸೇನನೂ, ಪೃಥುಸೇನನಿಗೆ ಪಾರನೂ, ಪಾರನಿಗೆ ನೀಲನೂ ಮಕ್ಕಳು. ನೀಲನಿಗೆ

ಸಮರಸ್ಯಾಪಿ ಪಾರಸುಪಾರಸದಶ್ವಾಸ್ತ್ರಯಃ ಪುತ್ರಾಃ ॥ ೪೧ ॥

ಸುಪಾರಾತ್ಪೃಥುಃ ಪೃಥೋಸ್ಸುಕೃತೇರ್ವಿಭ್ರಾಜಃ ॥ ೪೨ ॥

ತತಶ್ಚಾಣುಹಃ ॥ ೪೩ ॥

ಯಶ್ಶುಕ್ರದುಹಿತರಂ ಕೀರ್ತಿಂ ನಾಮೋಪಯೇಮೇ ॥ ೪೪ ॥

ಅಣುಹಾದ್ಬ್ರಹ್ಮದತ್ತಃ ॥ ೪೫ ॥

ತತಶ್ಚ ವಿಷ್ವಕ್ಸೇನಸ್ತಸ್ಮಾದುದಕ್ಸೇನಃ ॥ ೪೬ ॥

ಭಲ್ಲಾಭಸ್ತಸ್ಯ ಚಾತ್ಮಜಃ ॥ ೪೭ ॥

ದ್ವಿಜಮೀಢಸ್ಯ ತು ಯವಿನರಸಂಜ್ಞಃ ಪುತ್ರಃ ॥ ೪೮ ॥

---

ನೂರೊಂದು ಜನ ಮಕ್ಕಳಾದರು. ಅವರಲ್ಲಿ ಕಾಂಪಿಲ್ಯದೇಶಾಧಿಪತಿಯಾದ ಸಮರನೆಂಬವನೇ ಮುಖ್ಯನು. ಸಮರನಿಗೆ ಪಾರ, ಸುಪಾರ, ಸದಶ್ವ ಎಂಬ ಮೂವರು ಮಕ್ಕಳು.

೪೨–೪೭. ಸುಪಾರನಿಗೆ ಪೃಥುವೂ, ಪೃಥುವಿನ ಮಗನಾದ ಸುಕೃತಿಗೆ ವಿಭ್ರಾಜನೂ, ವಿಭ್ರಾಜನಿಗೆ ಅಣುಹನೂ ಮಕ್ಕಳು. ಈ ಅಣುಹನು ವ್ಯಾಸಪುತ್ರನಾದ ಶುಕ್ರನ ಮಗಳಾದ ಕೀರ್ತಿಯನ್ನು ಮದುವೆಯಾದನು. (ವ್ಯಾಸನಿಂದ ಅರಣಿಯಲ್ಲಿ ಹುಟ್ಟಿದ ಶುಕ್ರನು ಪಿತೃದೇವತೆಗಳ ಕನ್ಯೆಯಲ್ಲಿ ಕೃಷ್ಣ, ಗೌರ, ಪ್ರಭು, ಶಂಭು, ಭೂರಿ, ಶ್ರುತಂಜಯ, ಕೀರ್ತಿಮತಿ, ಎಂಬ ಮಕ್ಕಳನ್ನು ಪಡೆದನೆಂದು ಹರಿವಂಶದಲ್ಲಿದೆ.) ಅಣುಹನಿಗೆ ಬ್ರಹ್ಮದತ್ತನೂ ಬ್ರಹ್ಮದತ್ತನಿಗೆ ವಿಸ್ವಕ್ಸೇನನೂ, ವಿಷ್ವಕ್ಸೇನನಿಗೆ ಉದಕ್ಸೇನನೂ, ಉದಕ್ಸೇನನಿಗೆ ಭಲ್ಲಾಭನೂ ಮಕ್ಕಳು.

೪೮-೫೫. ದ್ವಿಜಮೀಢನಿಗೆ ಯವೀರನೆಂಬವನೂ, ಯವೀರನಿಗೆ ಧೃತಿಮಂತನೂ, ಧೃತಿಮಂತನಿಗೆ ಸತ್ಯಧೃತಿಯೂ, ಸತ್ಯಧೃತಿಗೆ ದೃಢನೇಮಿಯೂ, ದೃಢ

ತಸ್ಯಾಪಿ ಧೃತಿಮಾನ್ ತಸ್ಮಾಚ್ಚ ಸತ್ಯಧೃತಿಸ್ತತಶ್ಚ ದೃಢನೇಮಿಃ
ತಸ್ಮಾಚ್ಚ ಸುಪಾರ್ಶ್ವಸ್ತತಸ್ಸುಮತಿಸ್ತತಶ್ಚ ಸನ್ನತಿಮಾನ್ ॥ ೪೯ ॥

ಸನ್ನತಿಮತಃ ಕೃತಃ ಪುತ್ರೋಽಭೂತ್ ॥ ೫೦ ॥

ಯಂ ಹಿರಣ್ಯನಾಭೋ ಯೋಗಮಧ್ಯಾಪಯಾಮಾಸ ॥ ೫೧ ॥

ಯಶ್ಚತುರ್ವಿಂಶತಿಪ್ರಾಚ್ಯಸಾಮಗಾನಾಂ ಸಂಹಿತಾಶ್ಚಕಾರ ॥ ೫೨ ॥

ಕೃತಾಚ್ಚೋಗ್ರಾಯುಧಃ ॥ ೫೩ ॥

ಯೇನ ಪ್ರಾಚುರ್ಯೇಣ ನೀಪಕ್ಷಯಃ ಕೃತಃ ॥ ೫೪

ಉಗ್ರಾಯುಧಾತ್ಕ್ಷೇಮ್ಯಃ ಕ್ಷೇಮ್ಯಾತ್ಸುಧೀರಃ ತಸ್ಮಾದ್ರಿಪುಂಜಯಸ್ತ
ಸ್ಮಾಚ್ಚ ಬಹುರಥಃ ಇತ್ಯೇತೇ ಪೌರವಾಃ ॥ ೫೫ ॥

ಅಜಮೀಢಸ್ಯ ನಳಿನೀನಾಮಪತ್ನೀ ತಸ್ಯಾಂ ನೀಲಸಂಜ್ಞಃ
ಪುತ್ರೋಽಭವತ್ ॥ ೫೬ ॥

---

ನೇಮಿಗೆ ಸುಪಾರ್ಶ್ವನೂ, ಸುಪಾರ್ಶ್ವನಿಗೆ ಸುಮತಿಯೂ, ಸುಮತಿಗೆ ಸನ್ನತಿಮಂತನೂ ಸನ್ನತಿಮಂತನಿಗೆ ಕೃತನೂ ಮಕ್ಕಳು. ಕೃತನಿಗೆ ಹಿರಣ್ಯನಾಭನೆಂಬವನು ಯೋಗ ಶಾಸ್ತ್ರವನ್ನು ಹೇಳಿಕೊಟ್ಟನು. ಈ ಹಿರಣ್ಯನಾಭನು ಇಪ್ಪತ್ತನಾಲ್ಕು ಪ್ರಾಚ್ಯಸಾಮಗರ ಸಂಹಿತೆಯನ್ನು ರಚಿಸಿದನು. ಕೃತನಿಗೆ ಉಗ್ರಾಯುಧನು ಮಗನು. ಈ ಉಗ್ರಾಯುಧನು ನೀಪವೆಂಬ ಮರಗಳನ್ನು ವಿಶೇಷವಾಗಿ ನಾಶಮಾಡಿದನು. ಉಗ್ರಾಯುಧನಿಗೆ ಕ್ಷೇಮ್ಯನೂ, ಕ್ಷೇಮ್ಯನಿಗೆ ಸುಧೀರನೂ, ಸುಧೀರನಿಗೆ ರಿಪುಂಜಯನೂ, ರಿಪುಂಜಯನಿಗೆ ಬಹುರಥನೂ ಮಕ್ಕಳು. ಇವರೆಲ್ಲ ಪೂರು ವಂಶದವರಾಗಿ ಪೌರವರೆಂದು ಹೆಸರು ಪಡೆದಿರುವರು.

೫೬–೫೯. ಅಜಮೀಢನಿಗೆ ನಳಿನಿಯೆಂಬ ಹೆಂಡತಿಯಲ್ಲಿ ನೀಲನೆಂಬ ಮಗನು ಹುಟ್ಟಿದನು. ನೀಲನಿಗೆ ಶಾಂತಿಯೂ, ಶಾಂತಿಗೆ ಸುಶಾಂತಿಯೂ, ಸುಶಾಂತಿಗೆ

ತಸ್ಮಾದಪಿ ಶಾಂತಿಶ್ಶಾಂತೇಃ ಸುಶಾಂತಿಸ್ಸುಶಾಂತೇಃ
ಪುರಂಜಯಸ್ತಸ್ಮಾಚ್ಚ ಋಕ್ಷಃ ॥ ೫೭ ॥

ತತಶ್ಚ ಹರ್ಯಶ್ವಃ ॥ ೫೮ ॥

ತಸ್ಮಾನ್ಮುದ್ಗಲಸೃಂಜಯಬೃಹದಿಷುಯವಿನರ ಕಾಂಪಿಲ್ಯ ಸಂಜ್ಞಾಃ
ಪಂಚಾನಾಮೇವ ತೇಷಾಂ ವಿಷಯಾಣಾಂ ರಕ್ಷಣಾಯಾಲಮೇತೇ
ಮತ್ಪುತ್ರಾ ಇತಿ ಪಿತ್ರಾಭಿಹಿತಾಃ ಪಾಂಚಾಲಾಃ ॥ ೫೯ ॥

ಮುದ್ಗಲಾಚ್ಚ ಮೌದ್ಗಲ್ಯಾಃ ಕ್ಷತ್ರೋಪೇತಾ ದ್ವಿಜಾತಯೋ
ಬಭೂವುಃ ॥ ೬೦ ॥

ಮುದ್ಗಲಾದ್ಧರ್ಯಶ್ವಃ ॥ ೬೧ ॥

ಹರ್ಯಶ್ವಾದ್ದಿವೋ ದಾಸೋ ಹಲ್ಯಾ ಚ ಮಿಥುನಮಭೂತ್ ॥ ೬೨ ॥

ಶರದ್ವತಶ್ಚಾ ಹಲ್ಯಾಯಾಂ ಶತಾನಂದೋಽಭವತ್ ॥ ೬೩ ॥

---

ಪುರಂಜಯನೂ, ಪುರಂಜಯನಿಗೆ ಋಕ್ಷನೂ, ಋಕ್ಷನಿಗೆ ಹರ್ಯಶ್ವನೂ, ಮಕ್ಕಳು. ಹರ್ಯಶ್ವನಿಗೆ ಮುದ್ಗಲ, ಸೃಂಜಯ, ಬೃಹದಿಷು, ಯವಿನರ, ಕಾಂಪಿಲ್ಯ ಎಂಬ ಐವರು ಮಕ್ಕಳು. ಅದೇ ಹೆಸರಿನ ದೇಶಗಳಿಗೆ ರಾಜರಾಗಿ ದೇಶವನ್ನು ರಕ್ಷಿಸ ಬೇಕೆಂದು ತಂದೆಯಾದ ಹರ್ಯಶ್ವನು ಹೇಳಿದುದರಿಂದ ಇವರಿಗೆ ಪಾಂಚಾಲರೆಂದು ಹೆಸರಾಯಿತು.

೬೦-೬೫. ಮುದ್ಗಲನಿಂದ ಮೌದ್ಗಲ್ಯಗೋತ್ರದ ಕ್ಷತ್ರಿಯ ಧರ್ಮದಿಂದ ಕೂಡಿದ ಬ್ರಾಹ್ಮಣರುಂಟಾದರು. ಮುದ್ಗಲನಿಗೆ ಹರ್ಯಶ್ವನೂ, ಹರ್ಯಶ್ವನಿಗೆ ದಿವೋದಾಸನೂ ಮತ್ತು ಅಹಲ್ಯೆಯೂ ಮಕ್ಕಳಾದರು. ಶರದ್ವತನೆಂಬ ಗೌತಮನಿಂದ ಅಹಲ್ಯೆಯಲ್ಲಿ ಶತಾನಂದನು ಹುಟ್ಟಿದನು. ಶತಾನಂದನಿಗೆ ಸತ್ಯಧೃತಿಯು ಮಗನು. ಇವನು ಧನುರ್ವೇದವನ್ನು ಸಂಪೂರ್ಣವಾಗಿ ತಿಳಿದಿದ್ದನು. ಸತ್ಯಧೃತಿಯು ಅಪ್ಸರ

ಶತಾನಂದಾತ್ಸತ್ಯಧೃತಿರ್ಧನುರ್ವೇದಾಂತಗೋ ಜಜ್ಞೇ ॥ ೬೪ ॥

ಸತ್ಯಧೃತೇರ್ವರಾಪ್ಸರಸಮೂರ್ವಶೀಂ ದೃಷ್ಟ್ವಾ ರೇತಸ್ಕನ್ನಂ
ಶರಸ್ತಂಬೇ ಪಪಾತ ॥ ೬೫ ॥

ತಚ್ಚ ದ್ವಿಧಾಗತಮಪತ್ಯ ದ್ವಯಂ ಕುಮಾರಃ ಕನ್ಯಾ ಚಾಭವತ್ ॥ ೬೬ ॥

ತೌ ಚ ಮೃಗಯಾಮುಪಯಾತಶ್ಶಂತನುರ್ದೃಷ್ಟ್ವಾ
ಕೃಪಯಾ ಜಗ್ರಾಹ ॥ ೬೭ ॥

ತತಃ ಕುಮಾರಃ ಕೃಪಃ ಕನ್ಯಾ ಚಾಶ್ವತ್ಥಾಮ್ನೋ ಜನನೀ ಕೃಪೀ
ದ್ರೋಣಾಚಾರ್ಯಸ್ಯ ಪತ್ನ್ಯಭವತ್ ॥ ೬೮ ॥

ದಿವೋದಾಸಸ್ಯ ಪುತ್ರೋ ಮಿತ್ರಾಯುಃ ॥ ೬೯ ॥

ಮಿತ್ರಾಯೋಶ್ಚ್ಯವನೋ ನಾಮ ರಾಜಾ ॥ ೭೦ ॥

ಚ್ಯವನಾತ್ಸುದಾಸಸ್ಸುದಾಸಾತ್ಸೌದಾಸ ಸೌದಾಸಾತ್ಸಹದೇವಸ್ತ
ಸ್ಯಾಪಿ ಸೋಮಕಃ ॥ ೭೧ ॥

ಸೋಮಕಾಜ್ಜಂತುಃ ಪುತ್ರಶತಜ್ಯೇಷ್ಠೋಽಭವತ್ ॥ ೭೨ ॥

---

ಸ್ತ್ರೀಯರಲ್ಲಿ ಶ್ರೇಷ್ಠಳಾದ ಊರ್ವಶಿಯನ್ನು ನೋಡಿದುದರಿಂದ ಅವನ ರೇತಸ್ಸು ಸ್ಖಲನವಾಗಿ ಅದು ಜೊಂಡಿನಲ್ಲಿ ಬಿದ್ದಿತು. ಅದು ಎರಡು ಭಾಗವಾಗಿ ಅದರಿಂದ ಒಬ್ಬ ಮಗನೂ ಒಬ್ಬ ಮಗಳೂ ಹುಟ್ಟಿದರು ಆ ಎರಡು ಮಕ್ಕಳನ್ನೂ ಬೇಟೆಗಾಗಿ ಬಂದಿದ್ದ ಶಂತನು ರಾಜನು ನೋಡಿ ಕೃಪೆಯಿಂದ ತೆಗೆದು ಕೊಂಡು ಬಂದು ಸಾಕಿ ಕೃಪ, ಕೃಪಿಯೆಂದು ಹೆಸರಿಟ್ಟನು. ಕೃಪಿಯು ದ್ರೋಣಾಚಾರ್ಯನ ಪತ್ನಿಯಾಗಿ ಅಶ್ವತ್ಥಾಮನಿಗೆ ತಾಯಿಯಾದಳು.

೬೯–೭೨. ದಿವೋದಾಸನಿಗೆ ಮಿತ್ರಾಯುವೂ ಮಿತ್ರಾಯುವಿಗೆ ಚ್ಯವನ ರಾಜನೂ ಚ್ಯವನನಿಗೆ ಸುದಾಸನೂ, ಸುದಾಸನಿಗೆ, ಸೌದಾಸನೂ, ಸೌದಾಸನಿಗೆ

ತೇಷಾಂ ಯವೀಜಯಾನ್ ಪೃಷತಃ ಪೃಷತಾದ್ದ್ರುಪದಸ್ತಸ್ಮಾಚ್ಚ
ಧೃಷ್ಟದ್ಯುಮ್ನಸ್ತತೋ ಧೃಷ್ಟಕೇತುಃ ॥ ೭೩ ॥

ಅಜಮೀಢಸ್ಯಾನ್ಯೋ ಋಕ್ಷ ನಾಮಾ ಪುತ್ರೋಽಭವತ್ ॥ ೭೪ ॥

ತಸ್ಯ ಸಂವರಣಃ ॥ ೭೫ ॥

ಸಂವರಣಾತ್ಕುರುಃ ॥ ೭೬ ॥

ಯ ಇದಂ ಧರ್ಮಕ್ಷೇತ್ರಂ ಕುರುಕ್ಷೇತ್ರಂ ಚಕಾರ ॥ ೭೭ ॥

ಸುಧನುರ್ಜಹ್ನು ಪರಿಕ್ಷಿತ್ಪ್ರಮುಖಾಃ ಕುರೋಃ
ಪುತ್ರಾ ಬಭೂವುಃ ॥ ೭೮ ॥

ಸುಧನುಷಃ ಪುತ್ರಸ್ಸುಹೋತ್ರಸ್ತಸ್ಮಾಚ್ಚ್ಯವನಶ್ಚ್ಯ
ವನಾತ್ಕೃತಕಃ ॥ ೭೯ ॥

ತತಶ್ಚೋಪರಿಚರೋ ವಸುಃ ॥ ೮೦ ॥

---

ಸಹದೇವನೂ ಸಹದೇವನಿಗೆ ಸೋಮಕನೂ, ಸೋಮಕನಿಗೆ ನೂರು ಜನ ಮಕ್ಕಳೂ ಹುಟ್ಟಿದರು. ಆ ನೂರು ಜನರಲ್ಲಿ ಜಂತುವೇ ಹಿರಿಯವನು. ಪೃಷತನೆಂಬವನು ಕಿರಿಯವನು. ಪೃಷತನ ಮಗನೇ ದ್ರುಪದನು. ದ್ರುಪದನಿಗೆ ಧೃಷ್ಟದ್ಯುಮ್ನನೂ ಧೃಷ್ಟದ್ಯುಮ್ನನಿಗೆ ಧೃಷ್ಟ ಕೇತುವೂ ಮಕ್ಕಳು.

೭೪-೮೦. ಅಜಮೀಢನಿಗೆ ಋಕ್ಷನೆಂಬ ಮತ್ತೊಬ್ಬ ಮಗನಿದ್ದನು ಋಕ್ಷನಿಗೆ ಸಂವರಣನೂ, ಸಂವರಣನಿಗೆ ಕುರುವೂ ಮಕ್ಕಳು. ಈ ಕುರುವೇ ಈ ಧರ್ಮಕ್ಷೇತ್ರವನ್ನು ಕುರುಕ್ಷೇತ್ರವಾಗಿ ಮಾಡಿದನು. ಇವನಿಗೆ ಸುಧನು, ಜಹ್ನು, ಪರಿಕ್ಷಿತ ಮುಂತಾದವರು ಮಕ್ಕಳಿದ್ದರು. ಸುಧನುವಿಗೆ ಸುಹೋತ್ರನೂ, ಸುಹೋತ್ರನಿಗೆ ಚ್ಯವನನೂ, ಚ್ಯವನನಿಗೆ ಕೃತಕನೂ, ಕೃತಕನಿಗೆ ಉಪರಿಚರ ವಸುವೂ, ಮಕ್ಕಳು.

ಬೃಹದ್ರಥ ಪ್ರತ್ಯಗ್ರ ಕುಶಾಂಬ ಕುಚೇಲಮಾತ್ಸ್ಯಪ್ರಮುಖಾಃ
ವಸೋಃ ಪುತ್ರಾಸ್ಸಪ್ತಾ ಜಾಯಂತ ॥ ೮೧ ॥

ಬೃಹದ್ರಥಾತ್ಕುಶಾಗ್ರಃ ಕುಶಾಗ್ರಾದ್ವೃಷಭಃ ವೃಷಭಾತ್ಪುಷ್ಪವಾನ್
ತಸ್ಮಾತ್ಸತ್ಯಹಿತಸ್ತಸ್ಮಾತ್ಸುಧನ್ವಾ ತಸ್ಯ ಚ ಜಂತುಃ ॥ ೮೨ ॥

ಬೃಹದ್ರಥಾಚ್ಚಾನ್ಯಶ್ಶಕಲದ್ವಯಜನ್ಮಾ ಜರಯಾ ಸಂಧಿತೋ
ಜರಾಸಂಧ ನಾಮಾ ॥ ೮೩ ॥

ತಸ್ಮಾತ್ಸಹದೇವಸ್ಸಹದೇವಾತ್ಸೋಮಪಸ್ತತಶ್ಚ ಶ್ರುತಿಶ್ರವಾಃ ॥ ೮೪ ॥

ಇತ್ಯೇತೇ ಮಯಾ ಮಾಗಧಾ ಭೂಪಾಲಾಃ ಕಥಿತಾಃ ॥ ೮೫ ॥

ಇತಿ ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ ಏಕೋನವಿಂಶೋಽಧ್ಯಾಯಃ

---

೮೧-೮೨. ಉಪರಿಚರವಸುವಿಗೆ ಬೃಹದ್ರಥ, ಪ್ರತ್ಯಗ್ರ, ಕುಶಾಂಬ, ಕುಚೇಲ ಮಾತ್ಸ್ಯ ಮುಂತಾದ ಏಳು ಜನ ಮಕ್ಕಳು ಹುಟ್ಟಿದರು. ಬೃಹದ್ರಥನಿಗೆ ಕುಶಾಗ್ರನೂ, ಕುಶಾಗ್ರನಿಗೆ ವೃಷಭನೂ ವೃಷಭನಿಗೆ ಪುಷ್ಪವಂತನೂ, ಪುಷ್ಪವಂತನಿಗೆ ಸತ್ಯಹಿತನೂ, ಸತ್ಯಹಿತನಿಗೆ ಸುಧನ್ವನೂ, ಸುಧನ್ವನಿಗೆ ಜಂತುವೂ ಮಕ್ಕಳಾದರು.

೮೩-೮೫. ಬೃಹದ್ರಥನಿಗೆ ಜರೆಯೆಂಬ ರಾಕ್ಷಸಿಯು ಶರೀರದ ಎರಡು ಭಾಗಗಳನ್ನು ಜೋಡಿಸಿದುದರಿಂದ ಜೀವವನ್ನು ಪಡೆದ ಜರಾಸಂಧನೆಂಬವನೂ ಒಬ್ಬ ಮಗನು. ಜರಾಸಂಧನಿಗೆ ಸಹದೇವನೂ, ಸಹದೇವನಿಗೆ ಸೋಮಪನೂ, ಸೋಮಪನಿಗೆ ಶ್ರುತಿಶ್ರವನೂ ಮಕ್ಕಳು. ಇವರೆಲ್ಲ ಮಗಧರಾಜ್ಯದ ರಾಜರಾಗಿದ್ದರು.

ಎಂಬಲ್ಲಿಗೆ ಶ್ರೀ ವಿಷ್ಣುಪುರಾಣದ ಚತುರ್ಥಾಂಶದಲ್ಲಿ

ಹತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ

## ವಿಂಶೋಽಧ್ಯಾಯಃ

ಪರಿಕ್ಷಿತಶ್ಚ ಜನಮೇಜಯಶ್ರುತಸೇನೋಗ್ರಸೇನಭೀಮಸೇನಾ
ಶ್ಚತ್ವಾರಃ ಪುತ್ರಾಃ ॥ ೧ ॥

ಜಹ್ನೋಸ್ತು ಸುರಥೋ ನಾಮಾತ್ಮಜೋ ಬಭೂವ ॥ ೨ ॥

ತಸ್ಯಾಪಿ ವಿಡೂರಥಃ ॥ ೩ ॥

ತಸ್ಮಾತ್ಸಾರ್ವಭೌಮಸ್ಸಾರ್ವಭೌಮಾಜ್ಜಯತ್ಸೇನಸ್ತಸ್ಮಾದಾರಾಧಿತಸ್ತ
ತಶ್ಚಾಯುತಾಯುರಯುತಾಯೋರಕ್ರೋಧನಃ ॥ ೪ ॥

ತಸ್ಮಾದ್ದೇವಾತಿಥಿಃ ॥ ೫ ॥

ತತಶ್ಚ ಋಕ್ಷೋಽನ್ಯೋಽಭವತ್ ॥ ೬ ॥

---

### ಇಪ್ಪತ್ತನೆಯ ಅಧ್ಯಾಯವು

೧–೧೦. ಕುರುಪುತ್ರನಾದ ಪರಿಕ್ಷಿತನಿಗೆ ಜನಮೇಜಯ, ಶ್ರುತಸೇನ, ಉಗ್ರಸೇನ, ಭೀಮಸೇನ, ಎಂಬ ನಾಲ್ವರು ಮಕ್ಕಳಾದರು. ಜಹ್ನುವಿಗೆ ಸುರಥನೂ, ಸುರಥನಿಗೆ ವಿಡೂರಥನೂ, ವಿಡೂರಥನಿಗೆ ಸಾರ್ವಭೌಮನೂ, ಸಾರ್ವಭೌಮನಿಗೆ ಜಯತ್ಸೇನನೂ ಜಯತ್ಸೇನನಿಗೆ ಆರಾಧಿತನೂ, ಆರಾಧಿತನಿಗೆ ಅಯುತಾಯುವೂ, ಅಯುತಾಯುವಿಗೆ ಅಕ್ರೋಧನನೂ, ಅಕ್ರೋಧನನಿಗೆ ದೇವಾತಿಥಿಯೂ, ದೇವಾತಿಥಿಗೆ

ಋಕ್ಷಾದ್ಭೀಮಸೇನಸ್ತತಶ್ಚ ದಿಲೀಪಃ ॥ ೭ ॥

ದಿಲೀಪಾತ್ಪ್ರತೀಪಃ ॥ ೮ ॥

ತಸ್ಯಾಪಿ ದೇವಾಪಿ ಶಂತನು ಬಾಹ್ಲೀಕಸಂಜ್ಞಾಸ್ತ್ರಯಃ
ಪುತ್ರಾ ಬಭೂವುಃ ॥ ೯ ॥

ದೇವಾಪಿರ್ಬಾಲ ಏವಾರಣ್ಯಂ ವಿವೇಶ ॥ ೧೦ ॥

ಶಂತನುಸ್ತು ಮಹೀಪಾಲೋಽಭೂತ್ ॥ ೧೧ ॥

ಅಯಂ ಚ ತಸ್ಯ ಶ್ಲೋಕಃ ಪೃಥಿವ್ಯಾಂ ಗೀಯತೇ ॥ ೧೨ ॥

ಯಂ ಯಂ ಕರಾಭ್ಯಾಂ ಸ್ಪೃಶತಿ ಜೀರ್ಣಂ ಯೌವನಮೇತಿ ಸಃ ।
ಶಾಂತಿಂ ಚಾಪ್ನೋತಿ ಯೇನಾಗ್ರ್ಯಾಂ ಕರ್ಮಣಾ ತೇನ ಶಂತನುಃ ॥ ೧೩ ॥

ತಸ್ಯ ಚ ಶಂತನೋ ರಾಷ್ಟ್ರೇ ದ್ವಾದಶವರ್ಷಾಣಿ ದೇವೋ ನವವರ್ಷ ॥ ೧೪ ॥

---

ಋಕ್ಷನೂ, ಋಕ್ಷನಿಗೆ ಭೀಮಸೇನನೂ ಭೀಮಸೇನನಿಗೆ ದಿಲೀಪನೂ, ದಿಲೀಪನಿಗೆ ಪ್ರತೀಪನೂ, ಪ್ರತೀಪನಿಗೆ ದೇವಾಪಿ, ಶಂತನು, ಬಾಹ್ಲೀಕ ಎಂಬ ಮೂವರೂ ಮಕ್ಕಳಾದರು. ದೇವಾಪಿಯು ಬಾಲ್ಯದಲ್ಲಿಯೇ ತಪಸ್ಸಿಗಾಗಿ ಅರಣ್ಯವನ್ನು ಪ್ರವೇಶಿಸಿದನು.

೧೧-೧೩. ಶಂತನುವು ರಾಜನಾದನು. ಶಂತನುವಿನ ವಿಷಯದಲ್ಲಿ ಭೂಲೋಕದಲ್ಲಿ ಒಂದು ಪ್ರಸಿದ್ಧಿಯಿರುವುದು. ಶಂತನುವು ತನ್ನ ಕೈಯಿಂದ ಯಾವ ಯಾವ ವೃದ್ಧನನ್ನು ಮುಟ್ಟಿದರೂ ಅವನು ಯೌವನವಂತನಾಗಿ ಶಾಂತಿಯನು ಹೊಂದುತ್ತಿದ್ದನು. ಈ ಕಾರ್ಯವನ್ನು ಅವನು ಮಾಡುತ್ತಿದ್ದುದರಿಂದ ಶಂತನುವೆಂದು ಅವನಿಗೆ ಹೆಸರಾಯಿತು. ೧೪ ಶಂತನುವಿನ ರಾಜ್ಯದಲ್ಲಿ ಹನ್ನೆರಡು ವರ್ಷಗಳವರೆಗೆ

ತತಶ್ಚಾಶೇಷರಾಷ್ಟ್ರವಿನಾಶಮವೇಕ್ಷ್ಯ ಸ ರಾಜಾ ಬ್ರಾಹ್ಮಣಾನಪೃಚ್ಛತ್
ತಸ್ಮಾದಸ್ಮಾಕಂ ರಾಷ್ಟ್ರೇ ದೇವೋ ನ ವರ್ಷತಿ ಕೋ ಮಮಾ
ಪರಾಧ ಇತಿ ॥ ೧೫ ॥

ತತಶ್ಚ ತಮೂಚುರ್ಬ್ರಾಹ್ಮಣಾಃ ॥ ೧೬ ॥
ಅಗ್ರಜಸ್ಯ ತೇ ಹೀಯಮವನಿಸ್ತ್ವಯಾ ಸಂಭುಜ್ಯತೇ ಅತಃ

ಪರಿವೇತ್ತಾ ತ್ವಮಿತ್ಯುಕ್ತಸ್ಸರಾಜಾ ಪುನಸ್ತಾನಪೃಚ್ಛತ್ ॥ ೧೭ ॥

ಕಿಂ ಮಯಾತ್ರ ವಿಧೇಯಮಿತಿ ॥ ೧೮ ॥

ತತಸ್ತೇ ಪುನರಪ್ಯೂಚುಃ ॥ ೧೯ ॥
ಯಾವದ್ದೇವಾಪಿಃ ನ ಪತನಾದಿಭಿರ್ದೋಷೈರಭಿಭೂಯತೇ

ತಾವದೇತತ್ತಸ್ಯಾರ್ಹಂ ರಾಜ್ಯಂ ॥ ೨೦ ॥
ತದಲಮೇತೇನ ತಸ್ಮೈ ದೀಯತಾಮಿತ್ಯುಕ್ತೇ ತಸ್ಯ ಮಂತ್ರಿ

---

ಮಳೆ ಬರಲಿಲ್ಲ. ಇದರಿಂದ ರಾಜ್ಯವೆಲ್ಲ ನಾಶವಾಗುವುದೆಂದು ತಿಳಿದು ರಾಜನು ಬ್ರಾಹ್ಮಣರನ್ನು ಕರೆಸಿ ತನ್ನ ಯಾವ ತಪ್ಪಿನಿಂದ ನಮ್ಮ ರಾಜ್ಯದಲ್ಲಿ ಮಳೆಯಾಗದಿರುವುದು? ಎಂದು ಪ್ರಶ್ನೆ ಮಾಡಿದನು.

೧೬—೨೧. ಆಗ ಬ್ರಾಹ್ಮಣರು ಅವನನ್ನು ಕುರಿತು, "ಈ ಭೂಮಿಯು ನಿನ್ನ ಅಣ್ಣನಿಗೆ ಸೇರಿದುದು. ಇದನ್ನು ನೀನು ಅನುಭವಿಸುತ್ತಿರುವೆ. ಇದರಿಂದ ನೀನು ಪರಿವೇತ್ತನೆನಿಸಿಕೊಂಡಿರುವೆ, ಇದೇ ದೋಷವು" ಎಂದರು. ರಾಜನು "ಈ ವಿಷಯದಲ್ಲಿ ನಾನು ಮಾಡಬೇಕಾದುದೇನು?" ಎಂದು ಕೇಳುತ್ತಲು, ಆ ಬ್ರಾಹ್ಮಣರು ಮತ್ತೆ ಆ ರಾಜನನ್ನು ಕುರಿತು, "ದೇವಾಪಿಗೆ ಪತಿತತ್ವಾದಿ ದೋಷಗಳು ಇಲ್ಲದಿರುವವರೆಗೂ ಈ ರಾಜ್ಯವು ಅವನದೇ ಆಗಿರುವುದು. ಆದುದರಿಂದ ಅವನಿಗೇ ಈ ರಾಜ್ಯ

ಪ್ರವರೇಣಾಶ್ಮರಾವಿಣಾ ತತ್ರಾರಣ್ಯೇ ತಪಸ್ವಿನೋ ವೇದವಾದ
ವಿರೋಧವಕ್ತಾರಃ ಪ್ರಯುಕ್ತಾಃ ॥ ೨೧ ॥

ತೈರಸ್ಯಾಪ್ಯತಿಋಜುಮತೇರ್ಮಹೀಪತಿಪುತ್ರಸ್ಯ ಬುದ್ಧಿರ್ವೇದ
ವಾದವಿರೋಧಮಾರ್ಗಾನುಸಾರಿಣ್ಯಕ್ರಿಯತ ॥ ೨೨ ॥

ರಾಜಾ ಚ ಶಂತನುರ್ದ್ವಿಜವಚನೋತ್ಪನ್ನ ಪರಿದೇವನಶೋಕ
ಸ್ತಾನ್ ಬ್ರಾಹ್ಮಣಾನಗ್ರತಃ ಕೃತ್ವಾಗ್ರಜಸ್ಯ ಪ್ರದಾನಾಯಾ
ರಣ್ಯಂ ಜಗಾಮ ॥ ೨೩ ॥

ತದಾಶ್ರಮಮುಪಗತಾಶ್ಚ ತಮವನತಮವನೀಪತಿಪುತ್ರಂ
ದೇವಾಪಿಮುಪತಸ್ಥುಃ ॥ ೨೪ ॥

ತೇ ಬ್ರಾಹ್ಮಣಾವೇದವಾದಾನು ಬಂಧೀನಿ ವಚಾಂಸಿ
ರಾಜ್ಯಮಗ್ರಜೇನ ಕರ್ತವ್ಯಮಿತ್ಯರ್ಥವಂತಿ ತಮೂಚುಃ ॥ ೨೫ ॥

---

ವನ್ನು ಕೊಟ್ಟುಬಿಡು" ಎಂದರು. ಇದನ್ನು ಕೇಳಿ ಮಂತ್ರಿ ಶ್ರೇಷ್ಠನಾದ ಅಶ್ಮರಾವಿ ಎಂಬವನು ಅರಣ್ಯದಲ್ಲಿ ತಪಸ್ಸು ಮಾಡುತ್ತಿರುವ ದೇವಾಪಿಯ ಸಮೀಪಕ್ಕೆ ವೇದ ವಾದಕ್ಕೆ ವಿರೋಧವಾಗಿ ಮಾತನಾಡುವವರನ್ನು ಕಳುಹಿಸಿಕೊಟ್ಟನು.

೨೨-೨೬. ಆ ಜನರು ಸರಳವಾದ ಬುದ್ಧಿಯುಳ್ಳ ರಾಜಪುತ್ರನ ಸಮೀಪಕ್ಕೆ ಹೋಗಿ ಅವನ ಬುದ್ಧಿಯು ವೇದವಿರುದ್ಧವಾದ ಮಾರ್ಗವನ್ನನುಸರಿಸುವಂತೆ ಮಾಡಿದರು. ರಾಜನಾದ ಶಂತನುವು ಬ್ರಾಹ್ಮಣರ ಮಾತಿನಿಂದ ದುಃಖವುಳ್ಳವನಾಗಿ ಅಳುತ್ತಾ ಆ ಬ್ರಾಹ್ಮಣರನ್ನು ಮುಂದಿಟ್ಟುಕೊಂಡು ರಾಜ್ಯವನ್ನು ಅಣ್ಣನಿಗೆ ಕೊಡುವುದಕ್ಕಾಗಿ ಕಾಡಿಗೆ ಹೋದನು. ಬ್ರಾಹ್ಮಣರು ದೇವಾಪಿಯ ಆಶ್ರಮಕ್ಕೆ ಹೋದರು. ನಮಸ್ಕಾರ ಮಾಡಿದ ದೇವಾಪಿಯನ್ನು ಕುರಿತು ಅವರು ವೇದಮಾರ್ಗವನ್ನು ಅನುಸರಿಸಿದ ಮಾತುಗಳಿಂದ ಹಿರಿಯ ಮಗನೇ ದೊರೆಯಾಗಬೇಕೆಂದು ಹೇಳಿದರು.

ಅಸಾವಪಿದೇವಾಪಿರ್ವೇದವಾದವಿರೋಧಯುಕ್ತಿದೂಷಿತಮ
ನೇಕಪ್ರಕಾರಂತಾನಾಹ । ೨೬ ॥

ತತಸ್ತೇ ಬ್ರಾಹ್ಮಣಾಃ ಶಂತನುಮೂಚುಃ ॥ ೨೭ ॥

ಆಗಚ್ಛ ಹೇ ರಾಜನ್ ಅಲಮತ್ರಾತಿ ನಿರ್ಬಂಧೇನ ಪ್ರಶಾಂತ
ಏವಾಸಾವನಾವೃಷ್ಟಿದೋಷಃ ಪತಿತೋ ಯಮನಾದಿ
ಕಾಲಮಭಿಹಿತವೇದವಚನದೂಷಣೋಚ್ಚಾರಣಾತ್ ॥ ೨೮ ॥

ಪತಿತೇ ಚಾಗ್ರಜೇ ನೈವ ತೇ ಪರಿವೇತ್ತೃತ್ವಂ ಭವತೀತ್ಯುಕ್ತಶ್ಶಂತನುಸ್ಸ್ವ
ಪುರಮಾಗಮ್ಯ ರಾಜ್ಯಮಕರೋತ್ ॥ ೨೯ ॥

ವೇದವಾದವಿರೋಧವಚನೋಚ್ಚಾರಣದೂಷಿತೇ ಚ ತಸ್ಮಿನ್ ದೇವಾಪೌ
ತಿಷ್ಠತ್ಯಪಿ ಜ್ಯೇಷ್ಠಭ್ರಾತರ್ಯಖಿಲಸಸ್ಯನಿಷ್ಪತ್ತಯೇ
ವವರ್ಷ ಭಗವಾನ್ಪರ್ಜನ್ಯಃ ॥ ೩೦ ॥

---

ಆ ದೇವಾಪಿಯು ವೇದಕ್ಕೆ ವಿರೋಧವಾದ ಯುಕ್ತಿ ವಾಕ್ಯಗಳಿಂದ ಅನೇಕ ಬಗೆಯಲ್ಲಿ ವಿರೋಧವಾಗಿ ಮಾತನಾಡಿದನು.

೨೭-೩೦. ಆಗ ಆ ಬ್ರಾಹ್ಮಣರು ಶಂತನುವನ್ನು ಕುರಿತು "ಎಲೈ ರಾಜನೇ! ಹೆಚ್ಚಾಗಿ ನಿರ್ಬಂಧವನ್ನು ಮಾಡಬಾರದು. ಬಾ ಹೋಗೋಣ! ಮಳೆ ಬರುವುದಕ್ಕಿದ್ದ ಪ್ರತಿಬಂಧಕ ದೋಷವು ನಿವೃತ್ತಿಯಾಯಿತು. ಅನಾದಿಕಾಲದಿಂದಿರುವ ವೇದ ವಚನವನ್ನು ನಿಂದಿಸಿದುದರಿಂದ ಈ ನಿನ್ನ ಅಣ್ಣನು ಪಾಪಿಯಾದನು. ಅಣ್ಣನು ಪತಿತನಾದರೆ ನಿನಗೆ ಪರಿವೇತ್ತಾದೋಷವಿಲ್ಲ" ಎಂದು ಹೇಳಿದ ಮಾತನ್ನು ಕೇಳಿ ಶಂತನುವು ತನ್ನ ಪಟ್ಟಣಕ್ಕೆ ಬಂದು ರಾಜನಾಗಿದ್ದನು. ಹಿರಿಯನಾದ ದೇವಾಪಿಯು ವೇದಮಾರ್ಗಕ್ಕೆ ವಿರೋಧವಾದ ಮಾತುಗಳನ್ನಾಡಿದ ದೋಷದಿಂದ ತಮ್ಮನಾದ ಶಂತನುವಿಗೆ ಬಂದ ದೋಷವು ನಿವಾರಣೆಯಾದುದರಿಂದ ಸಮಸ್ತ ಸಸ್ಯಗಳೂ ಭೂಮಿಯಲ್ಲಿ ಬೆಳೆವುದಕ್ಕಾಗಿ ಮಳೆಗೆ ಅಧಿಪತಿಯಾದ ಪರ್ಜನ್ಯದೇವನು ಮಳೆಯನ್ನು ಸುರಿಸಿದನು.

ಬಾಹ್ಲೀಕಾತ್ಸೋಮದತ್ತಃ ಪುತ್ರೋಽಭೂತ್ ॥ ೩೧ ॥

ಸೋಮದತ್ತಸ್ಯಾಪಿ ಭೂರಿಭೂರಿಶ್ರವಶಲ್ಯಸಂಜ್ಞಾಸ್ತ್ರಯಃ
ಪುತ್ರಾಃ ಬಭೂವುಃ ॥ ೩೨ ॥

ಶಂತನೋರಪ್ಯಮರನದ್ಯಾಂ ಜಾಹ್ನವ್ಯಾಮುದಾರಕೀರ್ತಿರಶೇಷಶಾಸ್ತ್ರಾರ್ಥ
ವಿದ್ಭೀಷ್ಮಃ ಪುತ್ರೋಽಭೂತ್ ॥ ೩೩ ॥

ಸತ್ಯವತ್ಯಾಂ ಚ ಚಿಂತ್ರಾಂಗದವಿಚಿತ್ರವೀರ್ಯೌ ದ್ವೌ ಪುತ್ರಾವುತ್ಪಾದ
ಯಾಮಾಸ ಶಂತನುಃ ॥ ೩೪ ॥

ಚಿತ್ರಾಂಗದಸ್ತು ಬಾಲ ಏವ ಚಿತ್ರಾಂಗದೇನೈವ ಗಂಧರ್ವೇಣಾಹವೇ
ನಿಹತಃ ॥ ೩೫ ॥

ವಿಚಿತ್ರವೀರ್ಯೋಽಪಿ ಕಾಶೀರಾಜತನಯೇ ಅಂಬಾಂಬಾಲಿಕೇ
ಉಪಯೇಮೇ ॥ ೩೬ ॥

---

೩೧-೩೫. ಬಾಹ್ಲೀಕನಿಗೆ ಸೋಮದತ್ತನೂ, ಸೋಮದತ್ತನಿಗೆ ಭೂರಿ ಭೂರಿಶ್ರವ, ಶಲ್ಯ ಎಂಬ ಮೂವರೂ ಮಕ್ಕಳಾದರು. ಶಂತನುವಿಗೆ ದೇವಗಂಗೆ ಯಾದ ಜಾಹ್ನವಿಯಲ್ಲಿ ವಿಶೇಷ ಕೀರ್ತಿವಂತನೂ, ಸಮಸ್ತ ಶಾಸ್ತ್ರಗಳನ್ನೂ ಬಲ್ಲವನೂ ಆದ ಭೀಷ್ಮನು ಮಗನಾಗಿ ಹುಟ್ಟಿದನು. ಆ ಶಂತನುವು ಸತ್ಯವತಿಯೆಂಬ ಮತ್ತೊಬ್ಬ ಪತ್ನಿಯಲ್ಲಿ ಚಿತ್ರಾಂಗದ, ವಿಚಿತ್ರವೀರ್ಯರೆಂಬ ಇಬ್ಬರು ಮಕ್ಕಳನ್ನು ಹುಟ್ಟಿಸಿದನು. ಚಿತ್ರಾಂಗದನು ಬಾಲ್ಯದಲ್ಲಿಯೇ ಯುದ್ಧದಲ್ಲಿ ಚಿತ್ರಾಂಗದನೆಂಬ ಗಂಧರ್ವನಿಂದ ಸತ್ತುಹೋದನು.

೩೬-೩೯. ವಿಚಿತ್ರವೀರ್ಯನು ಕಾಶೀರಾಜಪುತ್ರಿಯರಾದ ಅಂಬೆ ಮತ್ತು ಅಂಬಾಲಿಕೆಯರನ್ನು ವಿವಾಹಮಾಡಿಕೊಂಡನು. ಅವನು ಆ ಇಬ್ಬರು ಸ್ತ್ರೀಯರಲ್ಲಿ

ತದುಪಭೋಗಾತಿಖೇದಾಚ್ಚ ಯಕ್ಷ್ಮಣಾ ಗೃಹೀತಃ ಸ
ಪಂಚತ್ವಮಗಮತ್ ॥ ೩೭ ॥

ಸತ್ಯವತೀನಿಯೋಗಾಚ್ಚ ಮತ್ಪುತ್ರಃ ಕೃಷ್ಣದ್ವೈಪಾಯನೋ
ಮಾತುರ್ವಚನಮನತಿಕ್ರಮಣೀಯಮಿತಿ ಕೃತ್ವಾ ವಿಚಿತ್ರವೀರ್ಯಕ್ಷೇತ್ರೇ
ಧೃತರಾಷ್ಟ್ರಪಾಂಡೂ ತತ್ಪ್ರಹಿತಭುಜಿಷ್ಯಾಯಾಂ ವಿದುರಂ
ಚೋತ್ಪಾದಯಾಮಾಸ ॥ ೩೮ ॥

ಧೃತರಾಷ್ಟ್ರೋಽಪಿ ಗಾಂಧಾರ್ಯಾಂ ದುರ್ಯೋಧನದುಶ್ಯಾಸನಪ್ರಧಾನಂ
ಪುತ್ರಶತಮುತ್ಪಾದಯಾಮಾಸ ॥ ೩೯ ॥

ಪಾಂಡೋರಪ್ಯರಣ್ಯೇ ಮೃಗಯಾಯಾಮೃಷಿಶಾಪೋಪಹತಪ್ರಜಾ
ಜನನಸಾಮರ್ಥ್ಯಸ್ಯ ಧರ್ಮವಾಯುಶಕ್ರೈರ್ಯುಧಿಷ್ಠಿರಭೀಮಸೇನಾರ್ಜು
ನಾಃ ಕುಂತ್ಯಾಂ ನಕುಲಸಹದೇವೌ ಚ ಅಶ್ವಿಭ್ಯಾಂ ಮಾದ್ರ್ಯಾಂ ಪಂಚ
ಪುತ್ರಾಸ್ಸಮುತ್ಪಾದಿತಾಃ ॥ ೪೦ ॥

---

ರತಿಸುಖವನ್ನನುಭವಿಸಿದ ಆಯಾಸದಿಂದ ಉಂಟಾದ ಕ್ಷಯರೋಗದಿಂದ ಮರಣವನ್ನು ಹೊಂದಿದನು. ಸತ್ಯವತಿಯ ಅಪ್ಪಣೆಯಿಂದ ನನ್ನ ಮಗನಾದ ಕೃಷ್ಣದ್ವೈಪಾಯನನನ್ನು ತಾಯಿಯ ಮಾತನ್ನು ಮೀರಬಾರದೆಂದು ವಿಚಿತ್ರವೀರ್ಯನ ಪತ್ನಿಯರಲ್ಲಿ ಧೃತರಾಷ್ಟ್ರ, ಪಾಂಡುಗಳೆಂಬಿಬ್ಬರನ್ನೂ, ಅವರು ಕಳುಹಿಸಿದ ದಾಸಿಯಲ್ಲಿ ವಿದುರನನ್ನೂ ಹುಟ್ಟಿಸಿದನು.

೩೯-೪೪. ಧೃತರಾಷ್ಟ್ರನು ಗಾಂಧಾರಿಯಲ್ಲಿ ದುರ್ಯೋಧನ, ದುಶ್ಶಾಸನರೇ ಮುಂತಾದ ನೂರು ಜನ ಮಕ್ಕಳನ್ನು ಹುಟ್ಟಿಸಿದನು. ಪಾಂಡುವಿಗೆ ಅರಣ್ಯದಲ್ಲಿ ಬೇಟೆಯಾಡುವಾಗ ಋಷಿಶಾಪದಿಂದ ಪುತ್ರೋತ್ಪತ್ತಿರೂಪವಾದ ಶಕ್ತಿಗೆ ತಡೆಯುಂಟಾಗಲು ಕುಂತಿಯಲ್ಲಿ ಧರ್ಮ, ವಾಯು, ದೇವೇಂದ್ರರಿಂದ ಯುಧಿಷ್ಠಿರ, ಭೀಮಾರ್ಜುನರೂ, ಮಾದ್ರಿಯಲ್ಲಿ ಅಶ್ವಿನೀ ದೇವತೆಗಳಿಂದ ನಕುಲ ಸಹದೇವರೂ ಹುಟ್ಟಿದರು.

ತೇಷಾಂ ಚ ದ್ರೌಪದ್ಯಾಂ ಪಂಚೈವ ಪುತ್ರಾ ಬಭೂವುಃ ॥ ೪೧ ॥

ಯುಧಿಷ್ಠಿರಾತ್ಪ್ರತಿವಿಂಧ್ಯಃ ಭೀಮಸೇನಾಚ್ಛ್ರುತಸೇನಃ ಶ್ರುತಕೀರ್ತಿರರ್ಜು-
ನಾತ್ ಶತಾನೀಕೋ ನಕುಲಾತ್ ಶ್ರುತಕರ್ಮಾ ಸಹದೇವಾತ್ ॥ ೪೨ ॥

ಅನ್ಯೇ ಚ ಪಾಂಡವಾನಾಮಾತ್ಮಜಾಸ್ತದ್ಯಥಾ ॥ ೪೩ ॥

ಯೌಧೇಯೀ ಯುಧಿಷ್ಠಿರಾದ್ದೇವಕಂ ಪುತ್ರಮವಾಪ ॥ ೪೪ ॥

ಹಿಡಿಂಬಾ ಘಟೋತ್ಕಚಂ ಭೀಮಸೇನಾತ್ಪುತ್ರಂ ಲೇಭೇ ॥ ೪೫ ॥

ಕಾಶೀ ಚ ಭೀಮಸೇನಾದೇವ ಸರ್ವಗಂ ಸುತಮವಾಪ ॥ ೪೬ ॥

ಸಹದೇವಾಚ್ಚ ವಿಜಯಾ ಸುಹೋತ್ರಂ ಪುತ್ರಮವಾಪ ॥ ೪೭ ॥

ರೇಣುಮತ್ಯಾಂ ಚ ನಕುಲೋಽಪಿ ನಿರಮಿತ್ರಮಜೀಜನತ್ ॥ ೪೮ ॥

ಅರ್ಜುನಸ್ಯಾಪ್ಯುಲೂಪ್ಯಾಂ ನಾಗಕನ್ಯಾಯಾಮಿರಾವಾನ್ನಾಮ
ಪುತ್ರೋಽಭವತ್ ॥ ೪೯ ॥

---

ಈ ಐವರಿಗೂ ದ್ರೌಪದಿಯಲ್ಲಿ ಐವರೇ ಮಕ್ಕಳಾದರು. ಯುದಿಷ್ಠಿರನಿಗೆ ಪ್ರತಿವಿಂದ್ಯನೂ ಭೀಮನಿಗೆ ಶ್ರುತಸೇನನೂ, ಅರ್ಜುನನಿಗೆ ಶ್ರುತಕೀರ್ತಿಯೂ, ನಕುಲನಿಗೆ ಶತಾನೀಕನೂ ಸಹದೇವನಿಗೆ ಶ್ರುತಕರ್ಮನೂ ಹುಟ್ಟಿದರು. ಇವರಲ್ಲದೆ ಪಾಂಡವರಿಗೆ ಬೇರೆ ಮಕ್ಕಳಿದ್ದರು. ಹೇಗೆಂದರೆ, ಯುಧಿಷ್ಠಿರನಿಗೆ ಯೌಧೇಯಿಯಲ್ಲಿ ದೇವಕನೂ, ಭೀಮಸೇನನಿಗೆ ಹಿಡಿಂಬೆಯಲ್ಲಿ ಘಟೋತ್ಕಚನೂ, ಕಾಶಿಯಲ್ಲಿ ಸರ್ವಗನೂ ಸಹದೇವನಿಗೆ ವಿಜಯೆಯಲ್ಲಿ ಸುಹೋತ್ರನೂ, ನಕುಲನಿಗೆ ರೇಣುಮತಿಯಲ್ಲಿ ನಿರಮಿತ್ರನೂ ಹುಟ್ಟಿದರು.

೪೯-೫೦. ಅರ್ಜುನನಿಗೆ ನಾಗಕನ್ಯೆಯಾದ ಉಲೂಪಿಯಲ್ಲಿ ಇರಾವಂತನೂ, ಮಣಲೂರುಪತಿ ಪುತ್ರಿಯಾದವಳಲ್ಲಿ ಪುತ್ರಿಕಾಧರ್ಮದಿಂದ ಬಭ್ರುವಾಹನನೂ ಹುಟ್ಟಿದರು. (ಮಣಲೂರು ನಗರದ ರಾಜನು ತನಗೆ ಗಂಡುಮಕ್ಕಳಿಲ್ಲದುದರಿಂದ ತನ್ನ

ಮಣಿಲೂರುಪತಿಪುತ್ರ್ಯಾಂ ಪುತ್ರಿಕಾಧರ್ಮೇಣ ಬಭ್ರುವಾಹನಂ
ನಾಮ ಪುತ್ರಮರ್ಜುನೋಽಜನಯತ್ ॥ ೪೦ ॥

ಸುಭದ್ರಾಯಾಂ ಚಾರ್ಭಕತ್ವೇಽಪಿ ಯೋಽಸಾವತಿಬಲಪರಾಕ್ರಮ
ಸ್ಸಮಸ್ತಾರಾತಿರಥಜೇತಾ ಸೋಽಭಿಮನ್ಯುರಜಾಯತ ॥ ೪೧ ॥

ಅಭಿಮನ್ಯೋರುತ್ತರಾಯಾಂ ಪರಿಕ್ಷೀಣೇಷು ಕುರುಷ್ವಶ್ವತ್ಥಾಮ
ಪ್ರಯುಕ್ತಬ್ರಹ್ಮಾಸ್ತ್ರೇಣ ಗರ್ಭ ಏವ ಭಸ್ಮೀಕೃತೋ
ಭಗವತಸ್ಸಕಲಸುರಾಸುರವಂದಿತ ಚರಣಯುಗಳಸ್ಯಾತ್ಮೇಚ್ಛ
ಯಾಕಾರಣಮಾನುಷ ರೂಪಧಾರಿಣೋಽನುಭಾವಾತ್ಪುನ
ರ್ಜೀವಿತಮವಾಪ್ಯ ಪರಿಕ್ಷಿಜ್ಜಜ್ಞೇ ॥ ೪೨ ॥

---

ಮಗಳನ್ನು ಅರ್ಜುನನಿಗೆ ಕೊಟ್ಟು ಅವಳಲ್ಲಿ ಹುಟ್ಟುವ ಮಗನು ತನಗೆ ಮಗನಾಗ ಬೇಕೆಂದು ಕೇಳಿಕೊಂಡನು. ಅದರಂತೆ ಬಭ್ರುವಾಹನನು ರಾಜನ ಮಗನಾದನು. ಇದೇ ಪುತ್ರಿಕಾ ಧರ್ಮವು.)

೪೧-೪೨. ಅರ್ಜುನನಿಗೆ ಸುಭದ್ರೆಯಲ್ಲಿ ಅಭಿಮನ್ಯುವು ಹುಟ್ಟಿದನು. ಇವನು ಬಾಲ್ಯದಲ್ಲಿ ಮಹಾಬಲ ಪರಾಕ್ರಮದಿಂದ ಕೂಡಿ ಸಮಸ್ತ ಶತ್ರುಗಳ ರಥವನ್ನೂ ಜಯಿಸಿದ್ದನು. ಅಭಿಮನ್ಯುವಿನಿಂದ ಉತ್ತರೆಯಗರ್ಭದಲ್ಲಿ ಹುಟ್ಟಿದ ಪರಿಕ್ಷಿತನು ಸಮಸ್ತ ಕುರುಗಳೂ ನಾಶವಾದ ಮೇಲೆ ಅಶ್ವತ್ಥಾಮನು ಪ್ರಯೋಗಿಸಿದ ಬ್ರಹ್ಮಾಸ್ತ್ರದಿಂದ ಸುಟ್ಟುಹೋಗಿರಲು ಸಕಲ ಸುರಾಸುರರೂ ನಮಸ್ಕರಿಸುವ ಪಾದಗಳುಳ್ಳ, ತನ್ನ ಇಚ್ಛೆಯಿಂದ ಮನುಷ್ಯ ರೂಪವನ್ನು ಧರಿಸಿದ ಮಹಾಮಹಿಮನಾದ ಕೃಷ್ಣನ (ಮಹಿಮೆ) ಅನುಗ್ರಹದಿಂದ ಜೀವವನ್ನು ಪಡೆದನು.

**ಯೋಽಯಂ ಸಾಂಪ್ರತಮೇತದ್ಭೂಮಂಡಲಮಖಂಡಿತಾ**
**ಯತಿಧರ್ಮೇಣ ಪಾಲಯತೀತಿ ॥ ೪೩ ॥**

**ಇತಿ ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ ವಿಂಶೋಽಧ್ಯಾಯಃ**

---

೪೩. ಮೈತ್ರೇಯನೇ ! ಪರಿಕ್ಷಿತನೇ ಈಗ ಈ ಭೂ ಮಂಡಲವನ್ನು ಧರ್ಮದಿಂದ ಕಾಪಾಡುತ್ತಿರುವನು. (ಈ ಆಧಾರದ ಮೇಲೆ ಈ ಪುರಾಣವನ್ನು ಪರೀಕ್ಷಿತನ ಸಮಕಾಲದಲ್ಲಿ ಪರಾಶರನು ಮೈತ್ರೇಯನಿಗೆ ಹೇಳಿದನೆಂದು ಊಹಿಸಬಹುದು)

ಎಂಬಲ್ಲಿಗೆ ಶ್ರೀ ವಿಷ್ಣುಪುರಾಣದ ಚತುರ್ಥಾಂಶದಲ್ಲಿ

ಇಪ್ಪತ್ತನೆಯ ಅಧ್ಯಾಯವು ಮುಗಿದುದು

---

॥ ಶ್ರೀಃ ॥

# ಶ್ರೀ ವಿಷ್ಣು ಪುರಾಣೇ ಚತುರ್ಥಾಂಶೇ

## ಏಕವಿಂಶೋಽಧ್ಯಾಯಃ

॥ ಶ್ರೀ ಪರಾಶರಃ ॥

ಅತಃ ಪರಂ ಭವಿಷ್ಯಾನಹಂ ಭೂಪಾಲಾನ್ ಕೀರ್ತಯಿಷ್ಯಾಮಿ ॥ ೧ ॥

ಯೋಽಯಂ ಸಾಂಪ್ರತಮವನೀಪತಿಃ ಪರಿಕ್ಷಿತ್ತಸ್ಯಾಪಿ ಜನಮೇ
ಜಯಶ್ರುತಸೇನೋಗ್ರಸೇನಭೀಮಸೇನಶ್ಚತ್ವಾರಃ ಪುತ್ರಾ ಭವಿಷ್ಯಂತಿ ॥ ೨ ॥

ಜನಮೇಜಯಸ್ಯಾಪಿ ಶತಾನೀಕೋ ಭವಿಷ್ಯತಿ ॥ ೩ ॥

ಯೋಽಸೌ ಯಾಜ್ಞವಲ್ಕ್ಯಾದ್ವೇದ ಮಧೀತ್ಯ ಕೃಪಾದಸ್ತ್ರಾಣ್ಯವಾಪ್ಯ
ವಿಷಮವಿಷಯವಿರಕ್ತಚಿತ್ತವೃತ್ತಿಶ್ಚ ಶೌನಕೋಪದೇಶಾದಾತ್ಮ
ಜ್ಞಾನಪ್ರವೀಣಃ ಪರಂ ನಿರ್ವಾಣಮವಾಪ್ಸ್ಯತಿ ॥ ೪ ॥

---

### ಇಪ್ಪತ್ತೊಂದನೆಯ ಅಧ್ಯಾಯವು

೧-೪. ಇನ್ನು ಮುಂದೆ ಹುಟ್ಟುವ ರಾಜರ ವಿಷಯವನ್ನು ಹೇಳುವೆನು ಕೇಳು. ಈಗ ರಾಜನಾಗಿರುವ ಪರಿಕ್ಷಿತನಿಗೆ ಜನಮೇಜಯ, ಶ್ರುತಸೇನ, ಉಗ್ರಸೇನ, ಭೀಮ ಸೇನರೆಂಬ ನಾಲ್ವರು ಮಕ್ಕಳಾಗುವರು. ಜನಮೇಜಯನಿಗೆ ಶತಾನೀಕನು ಮಗನಾಗುವನು. ಅವನು ಯಾಜ್ಞವಲ್ಕ್ಯ ಮುನಿಯಿಂದ ವೇದಾಭ್ಯಾಸವನ್ನು ಮಾಡಿ ಕೃಪನಿಂದ ಅಸ್ತ್ರವಿದ್ಯೆಯನ್ನು ಕಲಿತು ಕ್ರೂರವಾದ ವಿಷಯಗಳಿಂದ ವೈರಾಗ್ಯವನ್ನು ಹೊಂದಿದ ಮನಸ್ಸುಳ್ಳವನಾಗಿ ಶೌನಕರ ಉಪದೇಶದಿಂದ (ವಿಷ್ಣು ಧರ್ಮೋತ್ತರ ಶ್ರವಣದಿಂದ) ಆತ್ಮಜ್ಞಾನವುಳ್ಳವನಾಗಿ ಪರಮಪದವಿಯಾದ ಮೋಕ್ಷವನ್ನು ಹೊಂದುವನು.

ಶತಾನೀಕಾದಶ್ವಮೇಧದತ್ತೋ ಭವಿತಾ ॥ ೫ ॥

ತಸ್ಮಾದಪ್ಯಧಿಸೀಮಕೃಷ್ಣಃ ॥ ೬ ॥

ಅಧಿಸೀಮಕೃಷ್ಣಾನ್ನಿಚಕ್ನುಃ ॥ ೭ ॥

ಯೋ ಗಂಗಯಾಪಹೃತೇ ಹಸ್ತಿನಪುರೇ ಕೌಶಾಂಬ್ಯಾಂನಿವತ್ಸ್ಯತಿ ॥ ೮ ॥

ತಸ್ಯಾಪ್ಯುಷ್ಣಃ ಪುತ್ರೋ ಭವಿತಾ ॥ ೯ ॥

ಉಷ್ಣಾದ್ವಿಚಿತ್ರರಥಃ ॥ ೧೦ ॥

ತತಶ್ಶುಚಿರಥಃ ॥ ೧೧ ॥

ತಸ್ಮಾದ್ವೃಷ್ಣಿಮಾಂಸ್ತತಸ್ಸುಷೇಣಸ್ತಸ್ಯಾಪಿ ಸುನೀಥಸ್ಸುನೀಥಾ
ನ್ನೃಪಚಕ್ಷುಸ್ತಸ್ಮಾದಪಿ ಸುಖಿಬಲಸ್ತಸ್ಯ ಚ ಪಾರಿಪ್ಲವಸ್ತತಶ್ಚ
ಸುನಯಸ್ತಸ್ಯಾಪಿ ಮೇಧಾವೀ ॥ ೧೨ ॥

ಮೇಧಾವಿನೋ ರಿಪುಂಜಯಸ್ತತೋರ್ವಸ್ತಸ್ಮಾಚ್ಚ
ತಿಗ್ಮಸ್ತಸ್ಮಾದ್ಬೃಹದ್ರಥಃ ಬೃಹದ್ರಥಾದ್ವಸುದಾಸಃ ॥ ೧೩ ॥

ತತೋ ಪರಶ್ಶತಾನೀಕಃ ॥ ೧೪ ॥

---

೫-೮. ಶತಾನೀಕನಿಗೆ ಅಶ್ವಮೇಧದತ್ತನೂ, ಅವನಿಗೆ ಅಧಿಸೀಮ ಕೃಷ್ಣನೂ, ಅಧಿಸೀಮಕೃಷ್ಣನಿಗೆ ನಿಚಕ್ನುವೂ ಮಕ್ಕಳಾಗುವರು. ಈ ನಿಚಕ್ನುವು ಹಸ್ತಿನಪುರವನ್ನು ಶತ್ರುಗಳು ಅಪಹರಿಸಿದುದರಿಂದ ಕೌಶಾಂಬಿಯನ್ನು ರಾಜಧಾನಿಯಾಗಿ ಮಾಡಿಕೊಳ್ಳುವನು.

೯-೧೬. ನಿಚಕ್ನುವಿನಿಂದ ಕ್ರಮವಾಗಿ ವಂಶಕ್ರಮದಲ್ಲಿ ಉಷ್ಣ, ವಿಚಿತ್ರರಥ, ಶುಚಿರಥ, ವೃಷ್ಣಿಮಂತ, ಸುಷೇಣ, ಸುನೀಥ, ನೃಪಚಕ್ಷು, ಸುಖಿಬಲ, ಪಾರಿಪ್ಲವ ಸುನಯ, ಮೇಧಾವಿ, ರಿಪುಂಜಯ, ಉರ್ವ, ತಿಗ್ಮ, ಬೃಹದ್ರಥ, ವಸುದಾಸ,

ತಸ್ಮಾಚ್ಛೋದಯನೋದಯನಾದ್ವಿಹೀನರಸ್ತತಶ್ಚ ದಂಡಪಾಣಿ
ಸ್ತತೋ ನಿಮಿತ್ತಃ ॥ ೧೫ ॥

ತಸ್ಮಾಚ್ಚ ಕ್ಷೇಮಕಃ । ೧೬ ॥

ಅತ್ರಾಯಂ ಶ್ಲೋಕಃ ॥ ೧೭ ॥

ಬ್ರಹ್ಮಕ್ಷತ್ರಸ್ಯ ಯೋ ಯೋನಿರ್ವಂಶೋ ದೇವರ್ಷಿಸತ್ಕೃತಃ ।
ಕ್ಷೇಮಕಂ ಪ್ರಾಪ್ಯ ರಾಜಾನಂ ಸಂಸ್ಥಾನಂ ಪ್ರಾಪ್ಸ್ಯತೇ ಕಲಾವಿತಿ ॥ ೧೮ ॥

ಇತಿ ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ ಏಕವಿಂಶೋಽಧ್ಯಾಯಃ

---

ಮತ್ತೊಬ್ಬ ಶತಾನೀಕ, ಉದಯನ, ವಿಹೀನರ, ದಂಡಪಾಣಿ, ನಿಮಿತ್ತ ಕ್ಷೇಮಕ, ಪರ್ಯಂತವಾಗಿ ವಂಶವು ನಡೆದುಬರುವುದು.

೧೭-೧೮. ಈ ವಿಷಯದಲ್ಲಿ ಪ್ರಸಿದ್ಧವಾದ ಶ್ಲೋಕವನ್ನು ಜ್ಞಾನಿಗಳು ಹೇಳುತ್ತಿರುವರು. ಅದರ ಅಭಿಪ್ರಾಯವೇನೆಂದರೆ:—" ಬ್ರಾಹ್ಮಣ ಕ್ಷತ್ರಿಯ ಧರ್ಮಗಳೆರಡನ್ನೂ ಆಶ್ರಯಿಸಿದ್ದ ದೇವತೆಗಳಿಗೂ, ಋಷಿಗಳಿಗೂ ಪೂಜ್ಯವಾದ ರಾಜವಂಶವು ಕಲಿಯುಗದಲ್ಲಿ ಕ್ಷೇಮಕರಾಜನಲ್ಲಿ ಸಮಾಪ್ತಿಯನ್ನು ಹೊಂದುವುದು.

ಎಂಬಲ್ಲಿಗೆ ಶ್ರೀ ವಿಷ್ಣುಪುರಾಣದ ಚತುರ್ಥಾಂಶದಲ್ಲಿ

ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

# ಶ್ರೀ ವಿಷ್ಣು ಪುರಾಣೇ ಚತುರ್ಥಾಂಶೇ

## ದ್ವಾವಿಂಶೋಽಧ್ಯಾಯಃ

---

॥ ಶ್ರೀ ಪರಾಶರಃ ॥

ಅತಶ್ಚೇಕ್ಷ್ವಾಕವೋ ಭವಿಷ್ಯಾಃ ಪಾರ್ಥಿವಾಃ ಕಥ್ಯಂತೇ ॥ ೧ ॥

ಬೃಹದ್ಬಲಸ್ಯ ಪುತ್ರೋ ಬೃಹತ್ಕ್ಷಣಃ ॥ ೨ ॥

ತಸ್ಮಾದುರುಕ್ಷಯಸ್ತಸ್ಮಾಚ್ಚ ವತ್ಸವ್ಯೂಹಸ್ತತಶ್ಚಪ್ರತಿ ವ್ಯೋಮಸ್ತಸ್ಮಾದಪಿ ದಿವಾಕರಃ ॥ ೩ ॥

ತಸ್ಮಾತ್ಸಹದೇವಸ್ಸಹದೇವಾದ್ಬೃಹದಶ್ವಸ್ತತ್ಸೂನುರ್ಭಾನುರಥಸ್ತಸ್ಯ ಚ ಪ್ರತೀತಾಶ್ವಸ್ತಸ್ಯಾಪಿ ಸುಪ್ರತೀಕಸ್ತತಶ್ಚ ಮರುದೇವಸ್ತತಸ್ಸು ನಕ್ಷತ್ರಸ್ತಸ್ಮಾತ್ಕಿಂನರಃ ॥ ೪ ॥

---

### ಇಪ್ಪತ್ತೆರಡನೆಯ ಅಧ್ಯಾಯವು.

೧—೧೧. ಇನ್ನು ಮುಂದೆ ಇಕ್ಷ್ವಾಕುವಂಶದ ಮುಂದಿನ ರಾಜರನ್ನು ಹೇಳುವೆನು. ಬೃಹದ್ಬಲನಿಗೆ ಬೃಹತ್ಕ್ಷಣನೂ, ಬೃಹತ್ಕ್ಷಣನಿಗೆ ಉರುಕ್ಷಯನೂ, ಉರುಕ್ಷಯನಿಗೆ ವತ್ಸವ್ಯೂಹನೂ, ವತ್ಸವ್ಯೂಹನಿಗೆ ಪ್ರತಿವ್ಯೋಮನೂ, ಪ್ರತಿವ್ಯೋಮನಿಗೆ ದಿವಾಕರನೂ, ದಿವಾಕರನಿಗೆ ಸಹದೇವನೂ, ಸಹದೇವನಿಗೆ ಬೃಹದಶ್ವನೂ, ಬೃಹ

ಕಿಂನರಾದಂತರಿಕ್ಷಸ್ತಸ್ಮಾತ್ಸುಪರ್ಣಸ್ತತಶ್ಚಾಮಿತ್ರಜಿತ್ ॥ ೫ ॥

ತತಶ್ಚ ಬೃಹದ್ಭ್ರಾಜಸ್ತಸ್ಮಾಪಿ ಧರ್ಮೀ ಧರ್ಮಿಣಃ ಕೃತಂಜಯಃ ॥ ೬ ॥

ಕೃತಂಜಯಾದ್ರಣಂಜಯಃ ॥ ೭ ॥

ರಣಂಜಯಾತ್ಸಂಜಯಸ್ತಸ್ಮಾಚ್ಛಾಕ್ಯಶ್ಶಾಕ್ಯಾಚ್ಛುದ್ಧೋದನಸ್ತಸ್ಮಾದ್ರಾಹು
ಳಸ್ತತಃ ಪ್ರಸೇನಜಿತ್ ॥ ೮ ॥

ತತಶ್ಚ ಕ್ಷುದ್ರಕಸ್ತತಶ್ಚ ಕುಂಡಕಸ್ತಸ್ಮಾದಪಿ ಸುರಥಃ ॥ ೯ ॥

ತತ್ಪುತ್ರಶ್ಚ ಸುಮಿತ್ರಃ ॥ ೧೦ ॥

ಇತ್ಯೇತೇ ಚೇಕ್ಷ್ವಾಕವೋ ಬೃಹದ್ಬಲಾನ್ವಯಾಃ ॥ ೧೧ ॥

ಅತ್ರಾನುವಂಶಃ ಶ್ಲೋಕಃ ॥ ೧೨ ॥

---

ದಶ್ವನಿಗೆ ಭಾನುರಥನೂ, ಭಾನುರಥನಿಗೆ ಪ್ರತೀತಾಶ್ವನೂ, ಪ್ರತೀತಾಶ್ವನಿಗೆ ಸುಪ್ರತೀಕನೂ, ಸುಪ್ರತೀಕನಿಗೆ ಮರುದೇವನೂ, ಮರುದೇವನಿಗೆ ಸುನಕ್ಷತ್ರನೂ, ಸುನಕ್ಷತ್ರನಿಗೆ ಕಿನ್ನರನೂ, ಇದೇ ಕ್ರಮವಲ್ಲಿ ಅಂತರಿಕ್ಷ, ಸುಪರ್ಣ, ಅಮಿತ್ರಜಿತ್, ಬೃಹದ್ಭ್ರಾಜ, ಧರ್ಮಿ, ಕೃತಂಜಯ, ರಣಂಜಯ, ಸಂಜಯ, ಶಾಕ್ಯ, ಶುದ್ಧೋದನ, ರಾಹುಳ ಪ್ರಸೇನಜಿತ್, ಕ್ಷುದ್ರಕ, ಕುಂಡಕ, ಸುರಥ, ಸುಮಿತ್ರನ ಪರ್ಯಂತವಾಗಿ ವಂಶವು ನಡೆದುಬರುವುದು.

೧೧-೧೨. ಇವರೆಲ್ಲ ಇಕ್ಷ್ವಾಕುವಂಶದಲ್ಲಿ ಹುಟ್ಟಿದ ಬೃಹದ್ಬಲನೆಂಬ ರಾಜನ ವಂಶದರು. ಈ ವಂಶಕ್ರಮವನ್ನನುಸರಿಸಿದ ಶ್ಲೋಕದ ಅಭಿಪ್ರಾಯವೇನೆಂದರೆ :—

**ಇಕ್ಷ್ವಾಕೂಣಾಮಯಂ ವಂಶಸ್ಸುಮಿತ್ರಾಂತೋ ಭವಿಷ್ಯತಿ**
**ಯತಸ್ತಂ ಪ್ರಾಪ್ಯ ರಾಜಾನಂ ಸಂಸ್ಥಾಂ ಪ್ರಾಪ್ಸ್ಯತಿ ವೈ ಕಲೌ ॥ ೧೩ ॥**

**ಇತಿ ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ ದ್ವಾವಿಂಶೋಽಧ್ಯಾಯಃ**

---

ಇಕ್ಷ್ವಾಕುವಂಶವು ಸುಮಿತ್ರರಾಜನವರೆಗೂ ನಡೆದು ಬರುವುದು. ಕಲಿಯುಗದಲ್ಲಿ ಸುಮಿತ್ರರಾಜನಿಗೇ ಈ ವಂಶವು ನಿಂತುಹೋಗುವುದು.

ಎಂಬಲ್ಲಿಗೆ ಶ್ರೀ ವಿಷ್ಣುಪುರಾಣದ ಚತುರ್ಥಾಂಶದಲ್ಲಿ

ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.

---

ಶ್ರೀ

# ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ

## ತ್ರಯೋವಿಂಶೋಽಧ್ಯಾಯಃ

॥ ಶ್ರೀ ಪರಾಶರಃ ॥

**ಮಾಗಧಾನಾಂ ಬಾರ್ಹದ್ರಥಾನಾಂ ಭಾವಿನಾಮನುಕ್ರಮಂ**

**ಕಥಯಿಷ್ಯಾಮಿ** ॥ ೧ ॥

**ಅತ್ರ ಹಿ ವಂಶೇ ಮಹಾಬಲಪರಾಕ್ರಮಾ ಜರಾಸಂಧ**

**ಪ್ರಧಾನಾ ಬಭೂವುಃ** ॥ ೨ ॥

**ಜರಾಸಂಧಸ್ಯ ಪುತ್ರಸ್ಸಹದೇವಃ** ॥ ೩ ॥

**ಸಹದೇವಾತ್ಸೋಮಾಪಿಸ್ತಸ್ಯಾನುಶ್ರುತಶ್ರವಾಸ್ತಸ್ಯಾಪ್ಯಯುತಾಯುಸ್ತತಶ್ಚ**

**ನಿರಮಿತ್ರಸ್ತತ್ತನಯಸ್ಸುನೇತ್ರಸ್ತಸ್ಮಾದಪಿ ಬೃಹತ್ಕರ್ಮಾ** ॥ ೪ ॥

---

### ಇಪ್ಪತ್ತಮೂರನೆಯ ಅಧ್ಯಾಯವು.

೧—೪. ಇನ್ನು ಮುಂದೆ ಮಗಧದೇಶದ ಬೃಹದ್ರಥರಾಜನ ವಂಶದಲ್ಲಿ ಮುಂದೆ ಬರುವ ರಾಜರನ್ನು ಹೇಳುವೆನು. ಈ ವಂಶದಲ್ಲಿ ಮಹಾಬಲ ಪರಾಕ್ರಮಗಳಿಂದ ಕೂಡಿದ ಜರಾಸಂಧನೇ ಮೊದಲಾದ ರಾಜರಿದ್ದರು. ಜರಾಸಂಧನಿಗೆ ಸಹದೇವನೂ ಸಹದೇವನಿಗೆ ಸೋಮಾಪಿಯೂ, ಸೋಮಾಪಿಗೆ ಅನುಶ್ರುತಶ್ರವನೂ, ಇವನಿಗೆ ಅಯುತಾಯುವೂ, ಅಯುತಾಯುವಿಗೆ ನಿರಮಿತ್ರನೂ, ನಿರಮಿತ್ರನಿಗೆ ಸುನೇತ್ರನೂ, ಸುನೇತ್ರನಿಗೆ ಬೃಹತ್ಕರ್ಮನೂ, ಮಕ್ಕಳಾಗುವರು.

ತತಸ್ಸ ಶ್ಯೇನಜಿತ್ ತತಶ್ಚ ಶ್ರುತಂಜಯಸ್ತತೋ ವಿಪ್ರಸ್ತಸ್ಯ
ಚಪುತ್ರಶ್ಶುಚಿನಾಮಾ ಭವಿಷ್ಯತಿ ॥ ೫ ॥

ತಸ್ಯಾಪಿ ಕ್ಷೇಮ್ಯಸ್ತತಶ್ಚ ಸುವ್ರತಸ್ಸುವ್ರತಾದ್ಧರ್ಮಸ್ತತಸ್ಸುಶ್ರವಾಃ ॥ ೬ ॥

ತತೋ ದೃಢಸೇನಃ ॥ ೭ ॥

ತಸ್ಮಾತ್ಸುಬಲಃ ॥ ೮ ॥

ಸುಬಲಾತ್ಸುನೀತೋ ಭವಿತಾ ॥ ೯ ॥

ತತಸ್ಸತ್ಯಜಿತ್ ॥ ೧೦ ॥

ತಸ್ಮಾದ್ವಿಶ್ವಜಿತ್ ॥ ೧೧ ॥

ತಸ್ಯಾಪಿ ರಿಪುಂಜಯಃ ॥ ೧೨ ॥

ಇತ್ಯೇತೇ ಬಾರ್ಹದ್ರಥಾ ಭೂಪತಯೋ ವರ್ಷಸಹಸ್ರಮೇಕಂ
ಭವಿಷ್ಯಂತಿ ॥ ೧೩ ॥

**ಇತಿ ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ ತ್ರಯೋವಿಂಶೋಽಧ್ಯಾಯಃ**

---

೫–೧೨. ಬೃಹತ್ಕರ್ಮನಿಂದ ಇದೇ ಕ್ರಮದಲ್ಲಿ ಶ್ಯೇನಜಿತ್ತು, ಶ್ರುತಂಜಯ, ವಿಪ್ರ, ಶುಚಿ, ಕ್ಷೇಮ್ಯ, ಸುವ್ರತ, ಧರ್ಮ, ಸುಶ್ರವ, ದೃಢಸೇನ, ಸುಬಲ, ಸುನೀಥ, ಸತ್ಯಜಿತು, ವಿಶ್ವಜಿತು, ಕೊನೆಯವನಾದ ರಿಪುಂಜಯನವರೆಗೆ ಈ ವಂಶವುನಡೆದು ಬರುವುದು.

೧೩. ಇವರೆಲ್ಲರೂ ಬೃಹದ್ರಥನ ವಂಶದ ರಾಜರು. ಒಂದು ಸಾವಿರ ವರ್ಷದ ಪರ್ಯಂತವಾಗಿ ಈ ವಂಶವು ನಡೆದು ಬರುವುದು.

ಎಂಬಲ್ಲಿಗೆ ಶ್ರೀ ವಿಷ್ಣುಪುರಾಣದ ಚತುರ್ಥಾಂಶದಲ್ಲಿ
ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.

ಶ್ರೀಃ

# ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ

## ಚತುರ್ವಿಂಶೋಽಧ್ಯಾಯಃ

॥ ಶ್ರೀ ಪರಾಶರಃ ॥

ಯೋಽಯಂ ರಿಪುಂಜಯೋ ನಾಮ ಬಾರ್ಹದ್ರಥೋಽನ್ತ್ಯಃ ತಸ್ಯಾಮಾತ್ಯಃ ಮುನಿಕೋ (ಶುನಕೋ) ನಾಮ ಭವಿಷ್ಯತಿ ॥ ೧ ॥

ಸ ಚೈನಂ ಸ್ವಾಮಿನಂ ಹತ್ವಾ ಸ್ವಪುತ್ರಂ ಪ್ರದ್ಯೋತನಾಮಾನಮಭಿಷೇಕ್ಷ್ಯತಿ ॥ ೨ ॥

ತಸ್ಯಾಪಿ ಬಲಾಕ ನಾಮಾ ಪುತ್ರೋ ಭವಿತಾ ॥ ೩ ॥

ತತಶ್ಚ ವಿಶಾಖಯೂಪಃ ॥ ೪ ॥

ತತ್ಪುತ್ರೋ ಜನಕಃ ॥ ೫ ॥

ತಸ್ಯ ಚ ನಂದಿವರ್ಧನಃ ॥ ೬ ॥

ತತೋ ನಂದೀ ॥ ೭ ॥

---

### ಇಪ್ಪತ್ತನಾಲ್ಕನೆಯ ಅಧ್ಯಾಯವು.

೧-೮. ಮಗಧರಾಜನಾದ ಬೃಹದ್ರಥನ ವಂಶದಲ್ಲಿ ಕೊನೆಯವನಾದ ರಿಪುಂಜಯನ ಮಂತ್ರಿಯು ಮುನಿಕ (ಶುನಕ) ನೆಂದು ಹೆಸರುಳ್ಳವನಾಗಿ ಪ್ರಸಿದ್ಧಿ ಹೊಂದುವನು. ಅವನು ತನ್ನ ದೊರೆಯಾದ ರಿಪುಂಜಯನನ್ನು ಕೊಂದು ತನ್ನ ಮಗನಾದ ಪ್ರದ್ಯೋತನಿಗೆ ಪಟ್ಟಾಭಿಷೇಕ ಮಾಡುವನು. ಪ್ರದ್ಯೋತನನ ವಂಶದಲ್ಲಿ ಕ್ರಮವಾಗಿ ಬಲಾಕ, (ಪಾಲಕ) ವಿಶಾಖಯೂಪ, ಜನಕ, ನಂದಿವರ್ಧನ, ನಂದಿ ಎಂಬ ಐವರು ಒಂದುನೂರಮೂವತ್ತೆಂಟು ವರ್ಷಗಳವರೆಗೆ ರಾಜರಾಗಿ ಭೂಮಿಯನ್ನು ಅನುಭವಿಸುವರು.

ಇತ್ಯೇತೇಽಷ್ಟತ್ರಿಂಶದುತ್ತರಮಬ್ದಶತಂ ಪಂಚ ಪ್ರದ್ಯೋತಾಃ
ಪೃಥಿವೀಂ ಭೋಕ್ಷ್ಯಂತಿ ॥ ೮ ॥

ತತಶ್ಚ ಶಿಶುನಾಭಃ ॥ ೯ ॥

ತತ್ಪುತ್ರಃ ಕಾಕವರ್ಣೋ ಭವಿತಾ ॥ ೧೦ ॥

ತಸ್ಯ ಚ ಪುತ್ರಃ ಕ್ಷೇಮಧರ್ಮಾ ॥ ೧೧ ॥

ತಸ್ಯಾಪಿ ಕ್ಷತೌಜಾಃ ॥ ೧೨ ॥

ತತ್ಪುತ್ರೋ ವಿಧಿಸಾರಃ ॥ ೧೩ ॥

ತತಶ್ಚಾಜಾತಶತ್ರುಃ ॥ ೧೪ ॥

ತಸ್ಮಾದರ್ಭಕಃ ॥ ೧೫ ॥

ತಸ್ಮಾಚ್ಚೋದಯನಃ ॥ ೧೬ ॥

ತಸ್ಮಾದಪಿ ನಂದಿವರ್ಧನಃ ॥ ೧೭ ॥

ತತೋ ಮಹಾನಂದೀ ॥ ೧೮ ॥

---

೯-೨೦. ಆ ಮೇಲೆ ಶಿಶುನಾಭ(ಗ)ನೂ ಅವನ ವಂಶದಲ್ಲಿ ಕ್ರಮವಾಗಿ ಕಾಕವರ್ಣ, ಕ್ಷೇಮಧರ್ಮ, ಕ್ಷತೌಜ, ವಿಧಿಸಾರ, (ಬಿಂದುಸಾರ) ಅಜಾತಶತ್ರು, ಅರ್ಭಕ, ಉದಯನ, ನಂದಿವರ್ಧನ, ಮಹಾನಂದಿ ಎಂಬ ಹತ್ತು ಜನ ರಾಜರು ಮುನ್ನೂರರವತ್ತೆರಡು ವರ್ಷ ರಾಜರಾಗಿರುವರು. ಮಹಾನಂದಿಯ ಮಗನೂ ಶೂದ್ರಸ್ತ್ರೀಯ ಗರ್ಭದಲ್ಲಿ ಜನಿಸಿದವನೂ ಅತ್ಯಂತ ಲೋಭಿಯೂ, ಮಹಾ

ಇತ್ಯೇತೇ ಶೈಶುನಾಭಾದಶಭೂಪಾಲಾಸ್ತ್ರೀಣಿವರ್ಷಶತಾನಿ
ದ್ವಿಷಷ್ಟ್ಯಧಿಕಾನಿ ಭವಿಷ್ಯಂತಿ ॥ ೧೯ ॥

ಮಹಾನಂದಿನಸ್ತತೋ ಶೂದ್ರಾ ಗರ್ಭೋದ್ಭವೋಽತಿಲುಬ್ಧೋಽತಿ
ಬಲೋಮಹಾಪದ್ಮನಾಮಾನಂದಃ ಪರಶುರಾಮ
ಇವಾಪರೋಽಖಿಲಕ್ಷತ್ರಾಂತಕಾರೀ ಭವಿಷ್ಯತಿ ॥ ೨೦ ॥

ತತಃ ಪ್ರಭೃತಿ ಶೂದ್ರಾ ಭೂಪಾಲಾ ಭವಿಷ್ಯಂತಿ ॥ ೨೧ ॥

ಸ ಚೈಕಚ್ಛತ್ರಾಮನುಲ್ಲಂಘಿತ ಶಾಸನೋ ಮಹಾಪದ್ಮಃ
ಪೃಥಿವೀಂ ಭೋಕ್ಷ್ಯತೇ ॥ ೨೨ ॥

ತಸ್ಯಾಪ್ಯಷ್ಟೌ ಸುತಾಸ್ಸುಮಾಲ್ಯಾದ್ಯಾ ಭವಿತಾರಃ ॥ ೨೩ ॥

ತಸ್ಯ ಮಹಾಪದ್ಮಸ್ಯಾನು ಪೃಥಿವೀಂ ಭೋಕ್ಷ್ಯಂತಿ ॥ ೨೪ ॥

ಮಹಾಪದ್ಮಪುತ್ರಾಶ್ಚೈಕಂ ವರ್ಷಶತಮವನೀಪತಯೋ ಭವಿಷ್ಯಂತಿ ॥೨೫॥

ತತಶ್ಚ ನವ ಚೈತಾನ್ನಂದಾನ್ ಕೌಟಿಲ್ಯೋ ಬ್ರಾಹ್ಮಣಸ್ಸಮು
ದ್ಧರಿಷ್ಯತಿ ॥ ೨೬ ॥

---

ಬಲಶಾಲಿಯೂ ಆದ ಮಹಾಪದ್ಮನಂದನೆಂಬವನು ಎರಡನೆಯ ಪರಶುರಾಮನಂತೆ ಸಮಸ್ತ ಕ್ಷತ್ರಿಯರನ್ನೂ ನಾಶಮಾಡುವನು.

೨೧-೨೯. ಅಲ್ಲಿಂದ ಮುಂದಕ್ಕೆ ಶೂದ್ರರೇ ರಾಜರಾಗುವರು. ಆ ಮಹಾ ಪದ್ಮನು ತನ್ನ ಆಜ್ಞೆಗೆ ತಡೆಯಿಲ್ಲದೆ ಏಕಚ್ಛತ್ರಾಧಿಪತಿಯಾಗಿ ಭೂಮಿಯನ್ನು ಅನುಭವಿಸುವನು. ಅವನಿಗೆ ಸುಮಾಲಿ ಮುಂತಾದ ಎಂಟು ಜನ ಮಕ್ಕಳಾಗುವರು. ಮಹಾಪದ್ಮನೂ ಅವನ ಮಕ್ಕಳೂ ಒಂದುನೂರು ವರ್ಷಗಳವರೆಗೆ ರಾಜರಾಗಿ ಭೂಮಿ ಯನ್ನನುಭವಿಸುವರು. ಈ ಒಂಭತ್ತು ಜನ ನಂದರನ್ನು ಕೌಟಿಲ್ಯ (ಚಾಣಕ್ಯ)

ತೇಷಾಮಭಾವೇ ಮೌರ್ಯಾಃ ಪೃಥಿವೀಂ ಭೋಕ್ಷ್ಯಂತಿ ॥ ೨೭ ॥

ಕೌಟಿಲ್ಯ ಏವ ಚಂದ್ರಗುಪ್ತಮುತ್ಪನ್ನಂ ರಾಜ್ಯೇ ಅಭಿಷೇಕ್ಷ್ಯತಿ ॥ ೨೮ ॥

ತಸ್ಯಾಪಿ ಪುತ್ರೋ ಬಿಂದುಸಾರೋ ಭವಿಷ್ಯತಿ ॥ ೨೯ ॥

ತಸ್ಯಾಪ್ಯಶೋಕವರ್ಧನಸ್ತತಸ್ಸುಯಶಾಸ್ತತಶ್ಚ ದಶರಥಸ್ತ
ತಶ್ಚಸಂಯುತಸ್ತತಶ್ಶಾಲಿಶೂಕಸ್ತಸ್ಮಾತ್ಸೋಮಶರ್ಮಾ ತಸ್ಯಾಪಿ
ಸೋಮಶರ್ಮಣಶ್ಶತಧನ್ವಾ ॥ ೩೦ ॥

ತಸ್ಯಾನು ಬೃಹದ್ರಥನಾಮಾ ಭವಿತಾ ॥ ೩೧ ॥

---

ನೆಂಬ ಬ್ರಾಹ್ಮಣನು ನಾಶಮಾಡುವನು. ಅವರು ನಾಶವಾದಮೇಲೆ ಮೌರ್ಯರು (ನಂದನ ಹೆಂಡತಿಯಾದ ಮುರಾ ಎಂಬವಳಲ್ಲಿ ಹುಟ್ಟಿದವರು) ರಾಜರಾಗುವರು. ಕೌಟಿಲ್ಯನೇ ಮೌರ್ಯವಂಶದ ಚಂದ್ರಗುಪ್ತನನ್ನು ರಾಜನನ್ನಾಗಿ ಮಾಡುವನು. ಇವನ ಮಗನೇ ಬಿಂದುಸಾರನು. ಚಂದ್ರಗುಪ್ತನಾದಮೇಲೆ ಇವನೂ ರಾಜನಾಗುವನು.

೩೦-೩೧. ಬಿಂದುಸಾರನ ಮಗನೇ ಅಶೋಕವರ್ಧನನು. ಇವನ ವಂಶದಲ್ಲಿ ಕ್ರಮವಾಗಿ ಸುಯಶ, ದಶರಥ, ಸಂಯುತ, ಶಾಲಿಶೂಕ, ಸೋಮಶರ್ಮ, ಶತಧನ್ವ, ಬೃಹದ್ರಥ, ಎಂಬವರು ರಾಜರಾಗುವರು. ಚಂದ್ರಗುಪ್ತನಿಂದ ಬೃಹದ್ರಥನವರೆಗೆ ಮೌರ್ಯಸಂತತಿಯ ಹತ್ತು ಜನ ರಾಜರು ಒಂದು ನೂರಮೂವತ್ತೇಳು ವರ್ಷಗಳ ವರೆಗೆ ರಾಜರಾಗಿರುವರು.

ಏವಮೇತೇ ಮೌರ್ಯಾ ದಶಭೂಪತಯೋ ಭವಿಷ್ಯಂತಿ
ಅಬ್ದಶತಂ ಸಪ್ತತ್ರಿಂಶದುತ್ತರಂ । ತೇಷಾಮಂತೇ ಪೃಥಿವೀಂ
ದಶಶುಂಗಾ ಭೋಕ್ಷ್ಯಂತಿ ॥ ೩೨ ॥

ಪುಷ್ಯಮಿತ್ರಸ್ಸೇನಾಪತಿಸ್ಸ್ವಾಮಿನಂ ಹತ್ವಾ ರಾಜ್ಯಂ ಕರಿಷ್ಯತಿ ॥ ೩೩ ॥

ತಸ್ಯಾತ್ಮಜೋಽಗ್ನಿಮಿತ್ರಃ ॥ ೩೪ ॥

ತಸ್ಮಾತ್ಸುಜ್ಯೇಷ್ಠಸ್ತತೋ ವಸುಮಿತ್ರಸ್ತಸ್ಮಾದಪ್ಯುದಂಕಸ್ತತಃ
ಪುಳಿಂದಕಸ್ತತೋ ಘೋಷವಸುಸ್ತಸ್ಮಾದಪಿ ವಜ್ರಮಿತ್ರಸ್ತತೋ
ಭಾಗವತಃ ॥ ೩೫ ॥

ತಸ್ಮಾದ್ದೇವಭೂತಿಃ ॥ ೩೬ ॥

ಇತ್ಯೇತೇಶುಂಗಾ ದ್ವಾದಶೋತ್ತರಂ ವರ್ಷಶತಂ ಪೃಥಿವೀಂ
ಭೋಕ್ಷ್ಯಂತಿ ॥ ೩೭ ॥

ತತಃ ಕಣ್ವಾನೇಷಾ ಭೂರ್ಯಾಸ್ಯತಿ ॥ ೩೮ ॥

---

೩೨–೩೮. ಆ ಮೇಲೆ ಈ ಭೂಮಿಯನ್ನು ಶುಂಗವಂಶದ ಹತ್ತು ಜನ ರಾಜರು ಆಳುವರು. ಸೇನಾಪತಿಯಾದ ಪುಷ್ಯಮಿತ್ರನು ಮೌರ್ಯವಂಶದ ರಾಜನನ್ನು ಕೊಂದು ತಾನೇ ರಾಜನಾಗುವನು. ಇವನ ವಂಶದಲ್ಲಿ ಕ್ರಮವಾಗಿ ಅಗ್ನಿಮಿತ್ರ, ಸುಜ್ಯೇಷ್ಠ, ವಸುಮಿತ್ರ, ಉದಂಕ, ಪುಳಿಂದಕ, ಘೋಷವಸು, ವಜ್ರಮಿತ್ರ, ಭಾಗವತ, ದೇವಭೂತಿ ಎಂಬವನೇ ಕೊನೆಯಾಗಿ ಹತ್ತು ಜನರು ಒಂದು ನೂರ ಹನ್ನೆರಡು ವರ್ಷ ರಾಜರಾಗಿರುವರು. ಆ ಮೇಲೆ ಈ ಭೂಮಿಯು ಕಣ್ವವಂಶಕ್ಕೆ ಸೇರುವುದು.

ದೇವಭೂತಿಂತುಶುಂಗರಾಜಾನಂ ವ್ಯಸನಿನಂ ತಸ್ಯೈವಾಮಾತ್ಯಃ
ಕಣ್ವೋ ವಸುದೇವನಾಮಾ ತಂ ನಿಹತ್ಯ ಸ್ವಯಮವನಿಂ ಭೋಕ್ಷ್ಯತಿ ॥೩೯॥

ತಸ್ಯ ಪುತ್ರೋ ಭೂಮಿತ್ರಸ್ತಸ್ಯಾಪಿ ನಾರಾಯಣಃ ॥ ೪೦ ॥

ನಾರಾಯಣಾತ್ಮಜಸ್ಸುಶರ್ಮಾ ॥ ೪೧ ॥

ಏತೇ ಕಾಣ್ವಾಯನಾಶ್ಚತ್ವಾರಃ ಪಂಚಚತ್ವಾರಿಂಶದ್ವರ್ಷಾಣಿ
ಭೂಪತಯೋ ಭವಿಷ್ಯಂತಿ ॥ ೪೨ ॥

ಸುಶರ್ಮಾಣಂ ತು ಕಾಣ್ವಂ ತದ್ಭೃತ್ಯೋ ಬಲಿಪುಚ್ಛಕನಾಮಾ
ಹತ್ವಾಂಧ್ರಜಾತಿಯೋ ವಸುಧಾಂ ಭೋಕ್ಷ್ಯತಿ ॥ ೪೩ ॥

ತತಶ್ಚ ಕೃಷ್ಣನಾಮಾ ತದ್ಭ್ರಾತಾ ಪೃಥಿವೀಪತಿರ್ಭವಿಷ್ಯತಿ ॥ ೪೪ ॥

ತಸ್ಯಾಪಿ ಪುತ್ರಶ್ಶಾಂತಕರ್ಣಿಸ್ತಸ್ಯಾಪಿ ಪೂರ್ಣೋತ್ಸಂಗಸ್ತತ್ಪುತ್ರ
ಶ್ಶಾತಕರ್ಣಿಸ್ತಸ್ಮಾಚ್ಚ ಲಂಬೋದರಸ್ತಸ್ಮಾಚ್ಚ ಪಿಲಕಸ್ತತೋ
ಮೇಘಸ್ವಾತಿಸ್ತತಃ ಪಟುಮಾನ್ ॥ ೪೫ ॥

---

೩೯–೪೨. ಶುಂಗವಂಶದ ರಾಜನಾದ ದೇವಭೂತಿಯು ದುರ್ಮಾರ್ಗಿಯಾಗುವುದರಿಂದ ಅವನನ್ನು ಅವನ ಮಂತ್ರಿಯಾದ ಕಣ್ವವಂಶದ ವಸುದೇವನೆಂಬವನು ಕೊಂದು ತಾನೇ ರಾಜನಾಗುವನು. ಇವನೂ ವಂಶದಲ್ಲಿ ಇವನೂ ಭೂಮಿತ್ರ, ನಾರಾಯಣ, ಸುಶರ್ಮ ಎಂಬ ನಾಲ್ವರು ನಲವತ್ತೈದು ವರ್ಷ ರಾಜರಾಗಿರುವರು.

೪೩–೫೦. ಕಾಣ್ವವಂಶದ ಸುಶರ್ಮನನ್ನು ಅವನ ಸೇವಕನಾದ ಬಲಿಪುಚ್ಛ (ಶಿಪ್ರಕ) ನೆಂಬವನು ಕೊಂದು ರಾಜನಾಗುವನು. ಇವನು ಆಂಧ್ರ ಜಾತಿಯವನು. ಇವನಾದಮೇಲೆ ಇವನ ಸಹೋದರನಾದ ಕೃಷ್ಣನು ರಾಜನಾಗು

ತತಶ್ಚಾರಿಷ್ಟಕರ್ಮಾ ತತೋ ಹಾಲಾಹಲಃ ॥ ೪೬ ॥

ಹಾಲಾಹಲಾತ್ಪಲಲಕಸ್ತತಃ ಪುಳಿಂದಸೇನಸ್ತತಸ್ಸುಂದರಸ್ತತಶ್ಶಾತ
ಕರ್ಣಿಸ್ತತಶ್ಶಿವಸ್ವಾತಿಸ್ತತಶ್ಚ ಗೋಮತಿಪುತ್ರಸ್ತತ್ಪುತ್ರೋಽಲಿಮಾನ್ ॥ ೪೭ ॥

ತಸ್ಯಾಪಿ ಶಾಂತಕರ್ಣಿಸ್ತತಶ್ಶಿವಶ್ರೀಸ್ತತಶ್ಚ ಶಿವಸ್ಕಂಧಸ್ತಸ್ಮಾದಪಿ
ಯಜ್ಞಶ್ರೀಸ್ತತೋ ದ್ವಿಜಯಜ್ಞಸ್ತಸ್ಮಾಚ್ಚಂದ್ರಶ್ರೀಃ ॥ ೪೮ ॥

ತಸ್ಮಾತ್ಪುಲೋಮಾಪಿಃ ॥ ೪೯ ॥

ಏವಮೇತೇ ತ್ರಿಂಶಚ್ಚತ್ವಾರ್ಯಬ್ದಶತಾನಿ ಷಟ್ಪಂಚಾಶದಧಿಕಾನಿ
ಪೃಥಿವೀಂ ಭೋಕ್ಷ್ಯಂತಿ ॥ ೫೦ ॥

ಆಂಧ್ರಭೃತ್ಯಾಸ್ಸಪ್ತಾಭೀರಪ್ರಭೃತಯಃ ದಶಗರ್ದಭಿನಶ್ಚ
ಭೂಭುಜೋ ಭವಿಷ್ಯಂತಿ ॥ ೫೧ ॥

ತತಷ್ಷೋಡಶಭೂಪತಯೋ ಭವಿತಾರಃ ॥ ೫೨ ॥

---

ವನು. ಇವನ ವಂಶದಲ್ಲಿ ಕ್ರಮವಾಗಿ ಶಾಂತಕರ್ಣಿ, ಪೂರ್ಣೋತ್ಸಂಗ, ಶಾತಕರ್ಣಿ, ಲಂಬೋದರ, ಪಿಲಕ, ಮೇಘಸ್ವಾತಿ, ಪಟುಮಂತ, ಅರಿಷ್ಟಕರ್ಮ, ಹಾಲಾಹಲ, ಪಲಲಕ, ಪುಳಿಂದಸೇನ, ಸುಂದರ ಶಾತಕರ್ಣಿ, ಶಿವಸ್ವಾತಿ, ಗೋಮತಿಪುತ್ರ, ಅಲಿಮಂತ, ಶಾಂತಕರ್ಣಿ, ಶಿವಶ್ರೀ, ಶಿವಸ್ಕಂಧ, ಯಜ್ಞಶ್ರೀ, ದ್ವಿಯಜ್ಞ, ಚಂದ್ರಶ್ರೀ, ಪುಲೋಮಾಪಿ ಎಂಬ ಈ ಮೂವತ್ತು ಜನ ಆಂಧ್ರರಾಜರು ನಾನೂರ ಐವತ್ತಾರು ವರ್ಷದವರೆಗೆ ರಾಜರಾಗಿ ಭೂಮಿಯನ್ನನುಭವಿಸುವರು.

೫೧-೫೪. ಆ ಮೇಲೆ ಗೊಲ್ಲರ ಜಾತಿಗೆ ಸೇರಿದ ಏಳು ಜನರೂ ಗರ್ದಭಿಗಳೆಂಬ ಹತ್ತು ಜನರೂ ರಾಜರಾಗುವರು. ಬಳಿಕ ಹದಿನಾರು ಜನ ರಾಜರಾದ ಮೇಲೆ ಎಂಟು ಜನ ಯವನರೂ ಹದಿನಾಲ್ಕು ಜನ ತುರುಷ್ಕರೂ ಹದಿಮೂರು ಜನ

ತತಶ್ಚಾಷ್ಟೌ ಯವನಾಶ್ಚತುರ್ದಶ ತುರುಷ್ಕಾರಾಮುಂಡಾಶ್ಚ
ತ್ರಯೋದಶ ಏಕಾದಶ ಮೌನಾ ಏತೇ ವೈ ಪೃಥಿವೀಪತಯಃ
ಪೃಥಿವೀಂ ದಶವರ್ಷಶತಾನಿ ನವತ್ಯಧಿಕಾನಿ ಭೋಕ್ಷ್ಯಂತಿ ॥ ೫೩ ॥

ತತಶ್ಚ ಮೌನಾ ಏಕಾದಶಭೂಪತಯೋಽಬ್ದಶತಾನಿ ತ್ರೀಣಿ
ಪೃಥಿವೀಂ ಭೋಕ್ಷ್ಯಂತಿ ॥ ೫೪ ॥

ತೇಷೂತ್ಸನ್ನೇಷು ಪುನಃ ಕೈಂಕಿಲಾಯವನಾ ಭೂಪತಯೋ
ಭವಿಷ್ಯಂತಿ ಅಮೂರ್ಧಾಭಿಷಿಕ್ತಾಃ ॥ ೫೫ ॥

ತೇಷಾಮಪತ್ಯಂ ವಿಂಧ್ಯಶಕ್ತಿಸ್ತತಃ ಪುರಂಜಯಸ್ತಸ್ಮಾದ್ರಾಮ
ಚಂದ್ರಸ್ತಸ್ಮಾದ್ಧರ್ಮವರ್ಮಾ ತತೋ ವಂಗಸ್ತತೋಽಭೂನ್ನಂ
ದನಸ್ತತಸ್ಸುನಂದೀ ತದ್ಭ್ರಾತಾ ನಂದಿಯಶಾಶ್ಶುಕ್ರಃ
ಪ್ರವೀರ ಏತೇ ವರ್ಷಶತಂ ಷಡ್ವರ್ಷಾಣಿ ಭೂಪತಯೋ ಭವಿಷ್ಯಂತಿ ॥ ೫೬ ॥

---

ರಾಮುಂಡರು, ಹನ್ನೊಂದು ಜನ ಮೌನರೂ ರಾಜರಾಗಿರುವರು. ಇವರೆಲ್ಲರೂ ಸಾವಿರದ ತೊಂಭತ್ತು ವರ್ಷಗಳವರೆಗೆ ರಾಜರಾಗಿರುವರು. ಹನ್ನೊಂದುಜನ ಮೌನರು ಮಾತ್ರ ಮೂರು ನೂರು ವರ್ಷಗಳು ರಾಜ್ಯವನ್ನನುಭವಿಸುವರು.

೫೫-೫೬. ಮೌನರು ನಾಶವಾದ ಮೇಲೆ ಕೈಂಕಿಲರೆಂಬ ಯವನರು ರಾಜರಾಗುವರು. ಇವರು ಕ್ಷತ್ರಿಯರಲ್ಲ. ಅವರಲ್ಲಿ ವಿಂಧ್ಯಶಕ್ತಿ, ಪುರಂಜಯ, ರಾಮಚಂದ್ರ, ಧರ್ಮವರ್ಮ, ವಂಗ, ನಂದನ, ಸುನಂದಿ, ನಂದಿಯಶ, ಶುಕ್ರ, ಪ್ರವೀರ ಎಂಬಿವರು ಪ್ರಸಿದ್ಧರು. ಇವರೆಲ್ಲರೂ ಒಂದುನೂರು ಆರುವರ್ಷಗಳವರೆಗೆ ರಾಜರಾಗುವರು.

ತತಸ್ತತ್ಪುತ್ರಾಸ್ತ್ರಯೋದಶೈತೇ ಬಾಹ್ಲೀಕಾಶ್ಚ ತ್ರಯಃ ॥ ೫೭ ॥

ತತಃ ಪುಷ್ಯಮಿತ್ರಾಃ ಪಟುಮಿತ್ರಾಸ್ತ್ರಯೋದಶೈಕೆಲಾಶ್ಚ
ಸಪ್ತಾಂಧ್ರಾಃ ॥ ೫೮ ॥

ತತಶ್ಚ ಕೋಸಲಾಯಾಂ ತು ನವ ಚೈವಭೂಪತಯೋ ಭವಿಷ್ಯಂತಿ ॥ ೫೯ ॥

ನೈಷಧಾಸ್ತು ತ ಏವ ॥ ೬೦ ॥

ಮಗಧಾಯಾಂ ತು ವಿಶ್ವಸ್ಫಟಿಕ ಸಂಜ್ಞೋಽನ್ಯಾನ್ವರ್ಣಾನ್ಕರಿಷ್ಯತಿ ॥ ೬೧ ॥

ಕೈವರ್ತಪಟುಪುಳಿಂದಬ್ರಾಹ್ಮಣಾನ್ ರಾಜ್ಯೇ ಸ್ಥಾಪಯಿಷ್ಯತಿ ॥ ೬೨ ॥

ಉತ್ಸಾದ್ಯಾಖಿಲಕ್ಷತ್ರ ಜಾತಿಂ ನವನಾಗಾಃ ಪದ್ಮವತ್ಯಾಂ ನಾಮ
ಪುರ್ಯಾಮನುಗಂಗಾಪ್ರಯಾಗಂ ಗಯಾದ್ಗುಪ್ತಾಂಶ್ಚ ಮಾಗಧಾ
ಭೋಕ್ಷ್ಯಂತಿ ॥ ೬೩ ॥

---

೫೭-೫೮. ಆ ಮೇಲೆ ಪ್ರವೀರನ ವಂಶದವರು ಹದಿಮೂರು ಜನರೂ ಬಾಹ್ಲೀಕರು ಮೂವರೂ ಪುಷ್ಯಮಿತ್ರ ಪಟುಮಿತ್ರಾದಿಗಳು ಹದಿಮೂರು ಜನರೂ ಖಂಡಮಂಡಲಾಧಿಕಿಗಳಾದ ಏಳು ಜನ ಆಂಧ್ರರೂ ರಾಜರಾಗುವರು.

೫೯-೬೨. ಬಳಿಕ ಕೋಸಲದೇಶದಲ್ಲಿ ಒಂಭತ್ತು ಜನ ರಾಜರಾಗುವರು. ನಿಷಧ ದೇಶದಲ್ಲಿಯೂ ಅಷ್ಟೇ ಜನ ರಾಜರಾಗುವರು. ಮಗಧದೇಶದಲ್ಲಿ ವಿಶ್ವಸ್ಫಟಿಕನೆಂಬ ರಾಜನು ಬೆಸ್ತರು, ಬೇಡರು, ಬ್ರಾಹ್ಮಣರು, ಮುಂತಾದ ಕ್ಷತ್ರಿಯರಲ್ಲದ ಬೇರೆ ವರ್ಣದವರನ್ನು ರಾಜರನ್ನಾಗಿ ಮಾಡುವನು.

೬೩-೬೬. ನವನಾಗರೆಂಬವರು ಕ್ಷತ್ರಿಯರನ್ನೆಲ್ಲ ನಾಶಮಾಡಿ ಪದ್ಮವತೀಯೆಂಬ ಪಟ್ಟಣದಲ್ಲಿದ್ದುಕೊಂಡು ಗಂಗಾನದಿಯ ದಡದಲ್ಲಿ ಪ್ರಯಾಗದವರೆಗೂ ಇರುವ

ಕೋಸಲಾಂಧ್ರಪುಂಡ್ರತಾಮ್ರಲಿಪ್ತಸಮುತಟಪುರೀಂ ಚ
ದೇವರಕ್ಷಿತೋ ರಕ್ಷಿತಾ ॥ ೬೪ ॥

ಕಳಿಂಗಮಾಹಿಷ ಮಹೇಂದ್ರ ಭೌಮಾನ್ ಗುಹಾ ಭೋಕ್ಷ್ಯಂತಿ ॥ ೬೫ ॥

ನೈಷಧನೈಮಿಷಕ ಕಾಲಕೋಶಕಾನ್ ಜನಪದಾನ್
ಮಣಿಧಾನ್ಯಕವಂಶಾ ಭೋಕ್ಷ್ಯಂತಿ ॥ ೬೬ ॥

ತ್ರೈರಾಜ್ಯಮುಷಿಕಜನಪದಾನ್ ಕನಕಾಹ್ವಯೋ ಭೋಕ್ಷ್ಯತಿ ॥ ೬೭ ॥

ಸೌರಾಷ್ಟ್ರಾವಂತಿಶೂದ್ರಾಭೀರಾನ್ ನರ್ಮದಾಮರುಭೂಮಿವಿಷಯಾಂಶ್ಚ
ವ್ರಾತ್ಯದ್ವಿಜಾಭೀರಶೂದ್ರಾದ್ಯಾ ಭೋಕ್ಷ್ಯಂತಿ ॥ ೬೮ ॥

ಸಿಂಧುತಟದಾವಿಕೋರ್ವೀಂ ಚಂದ್ರಭಾಗಾಕಾಶ್ಮೀರ ವಿಷಯಾಂಶ್ಚ
ವ್ರಾತ್ಯಮ್ಲೇಚ್ಛ ಶೂದ್ರಾದಯೋ ಭೋಕ್ಷ್ಯಂತಿ ॥ ೬೯ ॥

---

ದೇಶವನ್ನು ಆಳುವರು. ದೇವರಕ್ಷಿತನೆಂಬುವನು ಕೋಸಲ, ಆಂಧ್ರ, ತಾಮ್ರಲಿಪ್ತಿ, ಸಮತಟ ಎಂಬ ದೇಶ ಮತ್ತು ರಾಜಧಾನಿಗಳನ್ನು ರಕ್ಷಿಸುವನು. ಗುಹರೆಂಬುವರು ಕಳಿಂಗ, ಮಾಹಿಷ, ಮಹೇಂದ್ರ ಎಂಬ ಭೂಭಾಗಗಳನ್ನು ಅನುಭವಿಸುವರು. ಮಣಿಧಾನ್ಯಕವೆಂಬ ವಂಶದವರು ನೈಷಧ, ನೈಮಿಷಕ, ಕಾಲಕೋಶವೆಂಬ ರಾಜ್ಯಗಳನ್ನು ಅನುಭವಿಸುವರು.

೬೭-೭೦. ಕನಕನೆಂಬವನು ತ್ರೈರಾಜ್ಯ ಮುಷಿಕ ಎಂಬ ದೇಶಗಳನ್ನೂ, ಸೌರಾಷ್ಟ್ರ, ಅವಂತಿ, ಶೂದ್ರ, ಆಭೀರ, ನರ್ಮದಾ ಮರುಭೂಮಿ ಪ್ರದೇಶಗಳನ್ನೂ ಜಾತಿಗೆಟ್ಟ ಬ್ರಾಹ್ಮಣರೂ, ಗೊಲ್ಲರೂ, ಶೂದ್ರರೂ ಅನುಭವಿಸುವರು. ಸಿಂಧೂ ಮತ್ತು ದೇವಿಕಾ ಎಂಬ ನದಿಯ ದಡದಲ್ಲಿರುವ ದೇಶಗಳನ್ನೂ, ಚಂದ್ರಭಾಗಾನದಿಯು ಹರಿವ ದೇಶವನ್ನೂ ಕಾಶ್ಮೀರವನ್ನೂ ದುಷ್ಟಮಾರ್ಗವನ್ನಾಶ್ರಯಿಸಿದ ಮ್ಲೇಚ್ಛರೂ, ಶೂದ್ರರೇ

ಏತೇ ಚ ತುಲ್ಯಕಾಲಾಸ್ಸರ್ವೇ ಪೃಥಿವ್ಯಾಂ ಭೂಭುಜೋ
ಭವಿಷ್ಯಂತಿ ॥ ೭೦ ॥

ಅಲ್ಪಪ್ರಸಾದಾ ಬೃಹತ್ಕೋಪಾಸ್ಸಾರ್ವಕಾಲಮನೃತಾ ಧರ್ಮರುಚಯಃ
ಸ್ತ್ರೀಬಾಲಗೋವಧಕರ್ತಾರಃ ಪರಸ್ವಾದಾನರುಚಯೋಽಲ್ಪಸಾರಾಃ
ತಮಿಸ್ರಪ್ರಾಯಾ ಉದಿತಾಸ್ತಮಿತಪ್ರಾಯಾ ಅಲ್ಪಾಯುಷೋ
ಮಹೇಚ್ಛಾಹ್ಯಲ್ಪಧರ್ಮಾ ಲುಬ್ಧಾಶ್ಚ ಭವಿಷ್ಯಂತಿ ॥ ೭೧ ॥

ತೈಶ್ಚ ವಿಮಿಶ್ರಾ ಜನಪದಾಸ್ತಚ್ಛೀಲಾನುವರ್ತಿನೋ
ರಾಜಾಶ್ರಯಶುಷ್ಮಿಣೋ ಮ್ಲೇಚ್ಛಾಚಾರಾಶ್ಚ ವಿಪರ್ಯಯೇಣ
ವರ್ತಮಾನಾಃ ಪ್ರಜಾಃ ಕ್ಷಪಯಿಷ್ಯಂತಿ ॥ ೭೨ ॥

ತತಶ್ಚಾನುದಿನಮಲ್ಪಾಲ್ಪಹ್ರಾಸವ್ಯವಚ್ಛೇದಾದ್ಧರ್ಮಾರ್ಥಯೋ
ರ್ಜಗತಸ್ಸಂಕ್ಷಯೋ ಭವಿಷ್ಯತಿ ॥ ೭೩ ॥

---

ಮೊದಲಾದ ಬೇರೆ ಜಾತಿಯವರೂ ಅನುಭವಿಸುವರು. ಇವರೆಲ್ಲರೂ ಸಮಕಾಲದಲ್ಲಿ ಈ ಭೂಮಿಯಲ್ಲಿ ರಾಜರಾಗಿರುವರು.

೭೧-೭೩. ಆ ರಾಜರೆಲ್ಲರೂ ಅಲ್ಪವಾದ ಶಾಂತಿಯೂ, ಹೆಚ್ಚು ಕೋಪವೂ ಉಳ್ಳವರಾಗಿ ಯಾವಾಗಲೂ ಸುಳ್ಳು ಹೇಳುತ್ತ ಅಧರ್ಮಾಸಕ್ತರಾಗಿ ಸ್ತ್ರೀಯರನ್ನೂ, ಬಾಲಕರನ್ನೂ, ಗೋವುಗಳನ್ನೂ ಕೊಲ್ಲತಕ್ಕವರಾಗಿ ಪರರ ಒಡವೆಗಳಲ್ಲಾಸೆಯುಳ್ಳವರೂ, ಬಲಹೀನರೂ, ಅಜ್ಞಾನಿಗಳೂ, ಅಲ್ಪಾಯುಸ್ಸಿನವರೂ, ಅತ್ಯಾಸೆಯುಳ್ಳವರೂ, ಜಿಪುಣರೂ ಆಗಿರುವರು. ಈ ರಾಜರೊಡನೆ ಇತರ ದೇಶದವರೂ ಸೇರಿ ಅವರ ನಡತೆಯನ್ನೇ ಅನುಸರಿಸುತ್ತ ರಾಜಾಶ್ರಯದಿಂದ ಬಲವುಳ್ಳವರಾಗಿ ಮ್ಲೇಚ್ಛರ ಆಚಾರವನ್ನನುಸರಿಸುತ್ತಾ ಧರ್ಮವಿರುದ್ಧವಾಗಿ ನಡೆದು ಪ್ರಜೆಗಳನ್ನು ನಾಶಮಾಡುವರು. ಇದರಿಂದ ಧರ್ಮವೂ, ಅರ್ಥವೂ ಪ್ರತಿದಿನವೂ ಸ್ವಲ್ಪ ಸ್ವಲ್ಪವಾಗಿ ಕಡಿಮೆಯಾಗುತ್ತ ಬಂದು ಲೋಕಕ್ಕೆ ನಾಶವುಂಟಾಗುವುದು.

ತತಶ್ಚಾರ್ಥ ಏವ ಅಭಿಜನಹೇತುಃ ॥ ೭೪ ॥

ಬಲಮೇವಾಶೇಷಧರ್ಮಹೇತುಃ ॥ ೭೫ ॥

ಅಭಿರುಚಿರೇವ ದಾಂಪತ್ಯಸಂಬಂಧಹೇತುಃ ॥ ೭೬ ॥

ಸ್ತ್ರೀತ್ವಮೇವೋಪಭೋಗಹೇತುಃ ॥ ೭೭ ॥

ಅನೃತಮೇವ ವ್ಯವಹಾರಜಯ ಹೇತುಃ ॥ ೭೮ ॥

ಉನ್ನತಾಂಬುತ್ಯೈವ ಪೃಥಿವೀಹೇತುಃ ॥ ೭೯ ॥

ಬ್ರಹ್ಮಸೂತ್ರಮೇವ ವಿಪ್ರತ್ವಹೇತುಃ ॥ ೮೦ ॥

ರತ್ನತಾಮೂಲಮೇವ ವೃದ್ಧಿಹೇತುಃ ॥ ೮೧ ॥

ಲಿಂಗಧಾರಣಮೇವಾಶ್ರಮಹೇತುಃ ॥ ೮೨ ॥

---

೭೪-೮೨. ಆ ಕಾಲದಲ್ಲಿ ಹಣವೇ ಸತ್ಕುಲಪ್ರಸೂತಿಗೆ ಕಾರಣವು. ಬಲವೇ ಧರ್ಮಕ್ಕೆ ಕಾರಣವು. ಪರಸ್ಪರ ಪ್ರೀತಿಯೇ ದಾಂಪತ್ಯ ಸಂಬಂಧಕ್ಕೆ ಕಾರಣವು. ಸ್ತ್ರೀತ್ವವೇ ಸುಖೋಪಭೋಪಕ್ಕೆ ಕಾರಣವು. ಸುಳ್ಳೇ ವ್ಯವಹಾರ ಜಯಕ್ಕೆ ಕಾರಣವು. ಎತ್ತರವಾದ ಬೆಟ್ಟಗಳಲ್ಲಿ ನೀರಿರುವುದೇ ಭೂಮಿಯಲ್ಲಿ ಬೆಳೆ ಮುಂತಾದುವುಗಳಿಗೆ ಕಾರಣವು. ಯಜ್ಞೋಪವೀತವೇ ಬ್ರಾಹ್ಮಣತ್ವಕ್ಕೆ ಕಾರಣವು. ರತ್ನಾದಿಗಳನ್ನು ಸಂಗ್ರಹಿಸುವುದೇ ಮನುಷ್ಯನ ಅಭಿವೃದ್ಧಿಗೆ ಕಾರಣವು. ಚಿಹ್ನೆಯನ್ನು ಧರಿಸುವುದೇ ಸನ್ಯಾಸಾದ್ಯಾಶ್ರಮ ಕಾರಣವು.

**ಅನ್ಯಾಯ ಏವ ವೃತ್ತಿಹೇತುಃ** ॥ ೮೩ ॥

**ದೌರ್ಬಲ್ಯಮೇವಾವೃತ್ತಿಹೇತುಃ** ॥ ೮೪ ॥

**ಅಭಯಪ್ರಗಲ್ಭೋಚ್ಚಾರಣಮೇವ ಪಾಂಡಿತ್ಯ ಹೇತುಃ** ॥ ೮೫ ॥

**ಅನಾಢ್ಯತೈವ ಸಾಧುತ್ವಹೇತುಃ** ॥ ೮೬ ॥

**ಸ್ನಾನಮೇವ ಪ್ರಸಾದನಹೇತುಃ** ॥ ೮೭ ॥

**ದಾನಮೇವ ಧರ್ಮಹೇತುಃ** ॥ ೮೮ ॥

**ಸ್ವೀಕರಣಮೇವ ವಿವಾಹ ಹೇತುಃ** ॥ ೮೯ ॥

**ಸದ್ವೇಷಧಾರ್ಯೇವ ಪಾತ್ರಂ** ॥ ೯೦ ॥

**ದೂರಾಯತನೋದಕಮೇವ ತೀರ್ಥಹೇತುಃ** ॥ ೯೧ ॥

**ಕಪಟವೇಷಧಾರಣಮೇವ ಮಹತ್ವಹೇತುಃ** ॥ ೯೨ ॥

---

೮೩–೯೦. ಅನ್ಯಾಯ ಮಾಡುವುದೇ ಜೀವನಕ್ಕೆ ಕಾರಣವು. ಬಲಹೀನತೆಯೇ ಜೀವನಾರ್ಥವಾದ ಉದ್ಯೋಗವನ್ನು ಹಿಡಿಯದಿರಲು ಕಾರಣವು. ಅಭಯಪ್ರದಾನರೂಪವಾದ ವಿಶೇಷವಾದ ಮಾತುಗಳನ್ನಾಡುವುದೇ ಪಾಂಡಿತ್ಯಕ್ಕೆ ಕಾರಣವು. ದಾರಿದ್ರ್ಯವೇ ಸಾಧುತ್ವಕ್ಕೆ ಕಾರಣವು. ಸ್ನಾನಮಾಡುವುದೇ ಅಲಂಕಾರ ಕಾರಣವು. ದಾನಮಾಡುವುದೇ ಧರ್ಮಕಾರಣವು. ಧನಾದಿಗಳನ್ನು ಸ್ವೀಕರಿಸುವುದೇ ವಿವಾಹ ಕಾರಣವು. ಸಜ್ಜನರ ವೇಷವನ್ನು ಧರಿಸಿದವನೇ ದಾನಪಾತ್ರನು.

೯೧–೯೨. ಕ್ಷೇತ್ರಗಳು ಮನೆಗೆ ದೂರದಲ್ಲಿರುವುದರಿಂದ ಮನೆಯಲ್ಲಿರುವ ನೀರೇ ತೀರ್ಥಗಳು. ಮೋಸದ ವೇಷಗಳನ್ನು ಧರಿಸುವುದೇ ದೊಡ್ಡತನಕ್ಕೆ ಕಾರಣವು.

ಇತ್ಯೇವಮನೇಕದೋಷೋತ್ತರೇತು ಭೂಮಂಡಲೇ ಸರ್ವವರ್ಣೇ
ಷ್ವೇವ ಯೋ ಯೋ ಬಲವಾನ್ ಸ ಸ ಭೂಪತಿರ್ಭವಿಷ್ಯತಿ ॥ ೯೩ ॥

ಏವಂ ಚಾತಿಲುಬ್ಧಕರಹಾರಾಸಹಾಶ್ಶೈಲಾನಾಮಂತರದ್ರೋಣೀಃ
ಪ್ರಜಾಸ್ಸಂಶ್ರಯಿಷ್ಯಂತಿ ॥ ೯೪ ॥

ಮಧುಶಾಕಮೂಲಫಲ ಪತ್ರಪುಷ್ಪಾದ್ಯಾಹಾರಾಶ್ಚ ಭವಿಷ್ಯಂತಿ ॥ ೯೫ ॥

ತರುವಲ್ಕಲಪರ್ಣಚೀರಪ್ರಾವರಣಾಶ್ಚಾತಿಬಹುಪ್ರಜಾಶ್ಶೀತವಾತಾತ
ಪವರ್ಷಸಹಾಶ್ಚ ಭವಿಷ್ಯಂತಿ ॥ ೯೬ ॥

ನ ಚ ಕಶ್ಚಿತ್ತ್ರಯೋವಿಂಶತಿವರ್ಷಾಣಿ ಜೀವಿಷ್ಯತಿ ಅನವರತಂ
ಚಾತ್ರ ಕಲಿಯುಗೇ ಕ್ಷಯಮಾಯಾತ್ಯಖಿಲ ಏವೈಷ ಜನಃ ॥ ೯೭ ॥

---

ಈ ರೀತಿಯಲ್ಲಿ ಭೂಮಂಡಲವು ಅನೇಕ ದೋಷಗಳಿಂದ ಕೂಡಿರಲಾಗಿ ಸಮಸ್ತ ವರ್ಣಗಳಲ್ಲಿಯೂ ಯಾರು ಯಾರು ಬಲಶಾಲಿಗಳೋ ಅವರವರು ರಾಜರಾಗುವರು. ಲೋಭಿಗಳಾದ ರಾಜರಿಗೆ ಪ್ರಜೆಗಳು ಕಂದಾಯ ಮುಂತಾದುವನ್ನು ಕೊಡಲಾರದೆ ಎರಡು ಬೆಟ್ಟಗಳ ನಡುವೆ ಇರುವ ಕಣಿವೆಗಳನ್ನು ಆಶ್ರಯಿಸುವರು. ಮತ್ತು ಅವರು ಜೇನು, ಸೊಪ್ಪು, ಗೆಡ್ಡೆ, ಗೆಣಸುಗಳನ್ನು ಆಹಾರಮಾಡುತ್ತ ಮರದ ಸೊಪ್ಪುಗಳು ನಾರು ಮುಂತಾದುವುಗಳನ್ನು ಬಟ್ಟೆಗೆ ಪ್ರತಿಯಾಗಿ, ಧರಿಸಿ ಚಳಿ, ಗಾಳಿ, ಮಳೆಗಳನ್ನು ಸಹಿಸುತ್ತ ಬಹು ಕಷ್ಟವನ್ನನುಭವಿಸುತ್ತಿರುವರು. ಕಲಿಯುಗವು ಕಳೆಯುತ್ತ ಬರುತ್ತಿರಲು ಯಾವ ಮನುಷ್ಯನೂ ಇಪ್ಪತ್ತುಮೂರು ವರ್ಷ ವಯಸ್ಸಿಗಿಂತ ಹೆಚ್ಚಾಗಿ ಜೀವಿಸಿರುವುದಿಲ್ಲ.

ಶ್ರೌತಸ್ಮಾರ್ತೇ ಚ ಧರ್ಮೇ ವಿಪ್ಲವಮತ್ಯಂತಮುಪಗತೇ ಕ್ಷೀಣಪ್ರಾಯೇ ಚ ಕಲಿಯುಗೇ ಅಶೇಷಜಗತ್ಸ್ರಷ್ಟುಶ್ಚರಾಚರಗುರೋ ರಾದಿಮಧ್ಯಾಂತರಹಿತಸ್ಯ ಬ್ರಹ್ಮಮಯಸ್ಯಾತ್ಮರೂಪಿಣೋ ಭಗವತೋ ವಾಸುದೇವಸ್ಯಾಂಶಶ್ಶಂಬಳ ಗ್ರಾಮಪ್ರಧಾನಬ್ರಾಹ್ಮಣಸ್ಯ ವಿಷ್ಣುಯಶಸೋ ಗೃಹೇಽಷ್ಟಗುಣರ್ಧಿಸಮನ್ವಿತಃ ಕಲ್ಕಿರೂಪೀ ಜಗತ್ಯತ್ರಾವತೀರ್ಯ ಸಕಲಮ್ಲೇಚ್ಛದಸ್ಯುದುಷ್ಟಾಚರಣಚೇತಸಾಮಶೇಷಾಣಾಮಪರಿಚ್ಛಿನ್ನಶಕ್ತಿಮಾಹಾತ್ಮ್ಯಃ ಕ್ಷಯಂ ಕರಿಷ್ಯತಿ ಸ್ವಧರ್ಮೇಷು ಚಾಖಿಲಮೇವ ಸಂಸ್ಥಾಪಯಿಷ್ಯತಿ ॥ ೯೮ ॥

ಅನಂತರಂ ಚಾಶೇಷಕಲೇರವಸಾನೇ ನಿಶಾವಸಾನೇ ವಿಬುದ್ಧಾನಾಮಿವ ತೇಷಾಮೇವ ಜನಪದಾನಾಮಮಲಸ್ಫಟಿಕದಳಶುದ್ಧಾ ಮತಯೋ ಭವಿಷ್ಯಂತಿ ॥ ೯೯ ॥

---

೯೮-೧೦೧. ಶ್ರುತಿ ಸ್ಮೃತಿಗಳಲ್ಲಿ ವಿಧಿಸಿದ ಧರ್ಮಗಳು ವಿಶೇಷವಾಗಿ ಕ್ಷಯ ಹೊಂದುತ್ತಿರಲು ಕಲಿಯುಗವು ಕಳೆದು ಹೋಗಲಾಗಿ ಸಮಸ್ತ ಚರಾಚರ ಪ್ರಪಂಚಕ್ಕೆ ಸ್ವಾಮಿಯೂ ಆದಿ ಮಧ್ಯಾಂತ ರಹಿತನೂ, ಪರಬ್ರಹ್ಮಸ್ವರೂಪನೂ, ಸರ್ವಾತ್ಮನೂ ಆದ ವಾಸುದೇವನು ತನ್ನ ಅಂಶದಿಂದ ಶಂಬಳವೆಂಬ ಗ್ರಾಮದಲ್ಲಿ ವಾಸವಾಗಿರುವ ಬ್ರಾಹ್ಮಣರಲ್ಲಿ ಮುಖ್ಯನಾದ ವಿಷ್ಣುಯಶನೆಂಬವನ ಮನೆಯಲ್ಲಿ ಕಲ್ಕಿ ರೂಪದಿಂದ ಅಣಿಮಾದಿ ಅಷ್ಟಸಿದ್ಧಿಗಳುಳ್ಳವನಾಗಿ ಅವತಾರ ಮಾಡಿ ತನ್ನ ಅಪಾರವಾದ ಶಕ್ತಿಯ ಮಹಿಮೆಯಿಂದ ಸಕಲ ಮ್ಲೇಚ್ಛರನ್ನೂ ದುರಾಚಾರಿಗಳನ್ನೂ ಕಳ್ಳರನ್ನೂ ನಾಶ ಮಾಡುವನು. ಮಿಕ್ಕ ಸಮಸ್ತ ಜನರೂ ಅವರವರ ವರ್ಣಧರ್ಮದಲ್ಲಿ ನಡೆವಂತೆ ಮಾಡುವನು. ಆ ಮೇಲೆ ಸಂಪೂರ್ಣವಾಗಿ ಕಲಿಯುಗವು ಕಳೆದಮೇಲೆ ರಾತ್ರಿ ಕಳೆದ

ತೇಷಾಂ ಚ ಬೀಜಭೂತಾನಾಮಶೇಷ ಮನುಷ್ಯಾಣಾಂ ಪರಿಣತಾನಾಮಪಿ
ತತ್ಕಾಲಕೃತಾಪತ್ಯಪ್ರಸೂತಿರ್ಭವಿಷ್ಯತಿ ॥ ೧೦೦ ॥

ತಾನಿ ಚ ತದಪತ್ಯಾನಿ ಕೃತಯುಗಾನುಸಾರೀಣ್ಯೇವ ಭವಿಷ್ಯಂತಿ ॥ ೧೦೧ ॥

ಅತ್ರೋಚ್ಯತೇ :—

ಯಥಾ ಚಂದ್ರಶ್ಚ ಸೂರ್ಯಶ್ಚ ತಥಾ ತಿಷ್ಯೋ ಬೃಹಸ್ಪತಿಃ ।
ಏಕರಾಶೌ ಸಮೇಷ್ಯಂತಿ ತದಾ ಭವತಿ ವೈಕೃತಂ ॥ ೧೦೨ ॥

ಅತೀತಾ ವರ್ತಮಾನಾಶ್ಚ ತಥೈವಾನಾಗತಾಶ್ಚ ಯೇ
ಏತೇವಂಶೇಷು ಭೂಪಾಲಾಃ ಕಥಿತಾ ಮುನಿಸತ್ತಮ ॥ ೧೦೩ ॥

ಯಾವತ್ಪರಿಕ್ಷಿತೋ ಜನ್ಮ ಯಾವನ್ನಂದಾಭಿಷೇಚನಂ
ಏತದ್ವರ್ಷಸಹಸ್ರಂ ತು ಜ್ಞೇಯಂ ಪಂಚಾಶದುತ್ತರಂ ॥ ೧೦೪ ॥

---

ಮೇಲೆ ನಿದ್ರೆಯಿಂದೆಚ್ಚರಗೊಂಡ ಪ್ರಾಣಿಗಳಂತೆ ಆ ದೇಶದಲ್ಲಿದ್ದ ಜನರಿಗೆ ಶುದ್ಧವಾದ ಬುದ್ಧಿಗಳುಂಟಾಗುವುವು. ಮುಂದಿನ ಯುಗದ ಪ್ರಜೆಗಳ ಅಭಿವೃದ್ಧಿಗಾಗಿ ಬೀಜ ರೂಪದಿಂದ ಇರುವ ಆ ಜನರಿಗೆ ವಯಸ್ಸು ಕಳೆದಿದ್ದರೂ ಆ ಕಾಲದಲ್ಲಿ ಮಕ್ಕಳಾಗು ವರು. ಆ ಮಕ್ಕಳೆಲ್ಲರೂ ಕೃತಯುಗದ ಧರ್ಮವನ್ನೇ ಅನುಸರಿಸುವರು.

೧೦೨. ಚಂದ್ರನೂ ಸೂರ್ಯನೂ ಬೃಹಸ್ಪತಿಯೂ ಪುಷ್ಯನಕ್ಷತ್ರದಲ್ಲಿ ಒಂದೇ ರಾಶಿಯಲ್ಲಿ ಸೇರಿದಾಗ ಕೃತಯುಗವು ಪ್ರಾರಂಭವಾಗುವುದು. (ಹನ್ನೆರಡು ವರ್ಷ ಕ್ಕೊಂದು ಬಾರಿ ಈ ಗ್ರಹಗಳು ಪುಷ್ಯನಕ್ಷತ್ರದಲ್ಲಿ ಸೇರುವುದಾದರೂ ಏಕಕಾಲದಲ್ಲಿ ರಾಶಿಪ್ರವೇಶವಾದರೆ ಕೃತಯುಗ ಪ್ರಾರಂಭವೆಂದು ತಿಳಿಯಬೇಕು.)

೧೦೩–೧೦೪. ಮುನಿಶ್ರೇಷ್ಠನಾದ ಮೈತ್ರೇಯನೇ ! ಕಳೆದು ಹೋದ, ಈಗ ಇರುವ ಮುಂದೆ ಬರುವ ರಾಜವಂಶಗಳೆಲ್ಲವನ್ನೂ ನಿನಗೆ ಹೇಳಿರುವೆನು. ಪರಿಕ್ಷಿತನ್ನು ಹುಟ್ಟಿ ನಂದನೆಂಬ ರಾಜನಿಗೆ ಪಟ್ಟಾಭಿಷೇಕವಾಗುವವರೆಗೆ ಒಂದು ಸಾವಿರದ ಐವತ್ತು ವರ್ಷಗಳು ಕಳೆದು ಹೋಗುವುದು ಅಲ್ಲಿಯವರೆಗೆ ಶುದ್ಧ ಕ್ಷತ್ರಿಯ ವಂಶದವರೇ ರಾಜರಾಗಿರುವರು.

ಸಪ್ತರ್ಷೀಣಾಂ ತು ಯೌ ಪೂರ್ವೌ ದೃಶ್ಯೇತೇ ಹ್ಯುದಿತೌದಿವಿ ।
ತಯೋಸ್ತು ಮಧ್ಯೇ ನಕ್ಷತ್ರಂ ದೃಶ್ಯತೇ ಯತ್ಸಮಂ ನಿಶಿ　　॥ ೧೦೫ ॥

ತೇನ ಸಪ್ತರ್ಷಯೋ ಯುಕ್ತಾಸ್ತಿಷ್ಠಂತ್ಯಬ್ದಶತಂ ನೃಣಾಂ ।
ತೇ ತು ಪಾರಿಕ್ಷಿತೇ ಕಾಲೇ ಮಘಾಸ್ವಾಸನ್ ದ್ವಿಜೋತ್ತಮ　　॥ ೧೦೬ ॥

ತದಾ ಪ್ರವೃತ್ತಶ್ಚ ಕಲಿಃ ದ್ವಾದಶಾಬ್ದಶತಾತ್ಮಕಃ　　॥ ೧೦೭ ॥

---

೧೦೫-೧೦೭ ಅಂತರಿಕ್ಷದಲ್ಲಿ ಸಪ್ತರ್ಷಿಮಂಡಲದಲ್ಲಿ ಏಳು ನಕ್ಷತ್ರಗಳು ಗಾಡಿಯ ಆಕಾರದಲ್ಲಿರುವುವು. ಅವುಗಳಲ್ಲಿ ಪೂರ್ವದಿಕ್ಕಿನ ತುದಿಯಲ್ಲಿರುವ ನಕ್ಷತ್ರವು ಮರೀಚಿಯು. ಅದಕ್ಕೆ ಪಶ್ಚಿಮದಲ್ಲಿ ಸ್ವಲ್ಪ ಕೆಳಗೆ ಬಗ್ಗಿದ ನೊಗದ ಮರದ ಆಕಾರದಲ್ಲಿರುವುದು ಅರುಂಧತೀ ಸಹಿತವಾದ ವಶಿಷ್ಠ ನಕ್ಷತ್ರವು. ಅದರ ಪಶ್ಚಿಮಕ್ಕೆ ಸ್ವಲ್ಪ ಎತ್ತರವಾಗಿ ಗಾಡಿಯ ಈಚಿಮರದ ಬುಡದಲ್ಲಿರುವಂತಿರುವುದು ಅಂಗಿರಸ ನಕ್ಷತ್ರವು. ಅದರ ಸಮೀಪದಲ್ಲಿಯೇ ಪಶ್ಚಿಮದಿಕ್ಕಿನಲ್ಲಿರುವ ನಾಲ್ಕು ನಕ್ಷತ್ರಗಳಲ್ಲಿ ಈಶಾನ್ಯದಲ್ಲಿರುವುದು ಅತ್ರಿನಕ್ಷತ್ರವು. ಅತ್ರಿಗೆ ದಕ್ಷಿಣದಲ್ಲಿ ಪುಲಸ್ತ್ಯ ನಕ್ಷತ್ರವು. ಪುಲಸ್ತ್ಯನಕ್ಷತ್ರದ ಪಶ್ಚಿಮದಲ್ಲಿರುವುದು ಪುಲಹ ನಕ್ಷತ್ರವು. ಪುಲಹನಕ್ಷತ್ರದ ಉತ್ತರಕ್ಕೆ ಕ್ರತು ನಕ್ಷತ್ರವು. ಹೀಗಿರಲು ಈ ನಕ್ಷತ್ರಗಳು ಉದಯವಾದಾಗ ಪೂರ್ವ ದಿಕ್ಕಿನಲ್ಲಿ ಮೊದಲು ಪುಲಹಕ್ರತು ನಕ್ಷತ್ರಗಳು ಕಾಣುವುವು. ಇವುಗಳಲ್ಲಿ ಪುಲಸ್ತ್ಯ, ಕ್ರತು ನಕ್ಷತ್ರಗಳಿಗೂ ಇವುಗಳ ಪೂರ್ವಕ್ಕಿರುವ ನಕ್ಷತ್ರಗಳಿಗೂ ನಡುವೆ ಸಮದೂರ ದಲ್ಲಿ ದಕ್ಷಿಣೋತ್ತರವಾಗಿ ಒಂದು ರೇಖೆಯನ್ನೆಳೆದರೆ ಆ ರೇಖೆಯು ಸಮದೂರದಲ್ಲಿ ಅಶ್ವಿನ್ಯಾದಿ ಇಪ್ಪತ್ತೇಳು ನಕ್ಷತ್ರಗಳಲ್ಲೊಂದು ನಕ್ಷತ್ರವು ಕಾಣುವುದು. ಸಪ್ತಋಷಿ ನಕ್ಷತ್ರಗಳು ಆ ಒಂದು ನಕ್ಷತ್ರದೊಡನೆ ಮನುಷ್ಯಮಾನದ ಒಂದು ನೂರು ವರ್ಷ ಗಳವರೆಗೆ ಕಾಣುತ್ತಿರುವುವು. ನೂರು ವರ್ಷ ಕಳೆದ ಮೇಲೆ ಮತ್ತೊಂದು ನಕ್ಷತ್ರ ದೊಡನೆ ಕಾಣುವುವು. ಮೈತ್ರೇಯನೇ ! ಪರಿಕ್ಷಿತನು ರಾಜನಾಗಿದ್ದಾಗ ಸಪ್ತಋಷಿ ನಕ್ಷತ್ರಗಳು ಮಘಾನಕ್ಷತ್ರದಲ್ಲಿದ್ದುವು ಆ ಕಾಲದಲ್ಲಿಯೇ ದೇವಮಾನದಲ್ಲಿ ಸಾವಿರದ ಇನ್ನೂರು ವರ್ಷ ಪ್ರಮಾಣದ ಕಲಿಯುಗವು ಪ್ರಾರಂಭವಾಯಿತು.

ಯದ್ಯೈವ ಭಗವಾನ್ವಿಷ್ಣೋರಂಶೋ ಯಾತೋ ದಿವಂ ದ್ವಿಜ ।
ವಸುದೇವಕುಲೋದ್ಭೂತಸ್ತದೈವಾತ್ರಾಗತಃ ಕಲಿಃ ॥ ೧೦೮ ॥

ಯಾವತ್ಸ ಪಾದಪದ್ಮಾಭ್ಯಾಂ ಪಸ್ಪರ್ಶೇಮಾಂ ವಸುಂಧರಾಂ ।
ತಾವತ್ಪೃಥ್ವೀಂ ಪರಿಷ್ವಕ್ತುಂ ಸಮರ್ಥೋ ನಾಭವತ್ಕಲಿಃ ॥ ೧೦೯ ॥

ಗತೇ ಸನಾತನಸ್ಯಾಂಶೇ ವಿಷ್ಣೋಸ್ತತ್ರ ಭುವೋದಿವಂ ।
ತತ್ಯಾಜ ಸಾನುಜೋ ರಾಜ್ಯಂ ಧರ್ಮಪುತ್ರೋ ಯುಧಿಷ್ಠಿರಃ ॥ ೧೧೦ ॥

ವಿಪರೀತಾನಿ ದೃಷ್ಟ್ವಾ ಚ ನಿಮಿತ್ತಾನಿ ಹಿ ಪಾಂಡವಃ ।
ಯಾತೇ ಕೃಷ್ಣೇ ಚಕಾರಾಥ ಸೋಭಿಷೇಕಂ ಪರಿಕ್ಷಿತಃ ॥ ೧೧೧ ॥

---

೧೦೮-೧೧೧. ಯಾವಾಗ ವಸುದೇವನ ವಂಶದಲ್ಲಿ ಹುಟ್ಟಿದ ವಿಷ್ಣುವಿನ ಅಂಶನಾದ ಮಹಾಮಹಿಮೆಯುಳ್ಳ ಕೃಷ್ಣನು ಸ್ವರ್ಗಕ್ಕೆ ಹೋದನೋ ಆಗಲೇ ಕಲಿಯುಗವು ಪ್ರಾರಂಭವಾಯಿತು. ಎಲ್ಲಿಯುವರೆಗೂ ಶ್ರೀ ಕೃಷ್ಣನ ಪಾದ ಪದ್ಮಗಳು ಭೂಮಿಯನ್ನು ಮುಟ್ಟದ್ದಿತೋ ಅಲ್ಲಿಯುವರೆಗೆ ಕಲಿಯು ಭೂಮಿಯನ್ನು ಸೇರಲು ಸಮರ್ಥನಾಗಲಿಲ್ಲ. ವಿಷ್ಣುವಿನ ಅಂಶಸಂಭೂತನಾದ ಕೃಷ್ಣನು ಭೂಮಿಯನ್ನು ಬಿಟ್ಟು ಸ್ವರ್ಗಕ್ಕೆ ಹೋದಮೇಲೆ ಧರ್ಮಪುತ್ರನಾದ ಯುಧಿಷ್ಠಿರನು ತಮ್ಮಂದಿರೊಡನೆ ರಾಜ್ಯವನ್ನು ಬಿಟ್ಟುಬಿಟ್ಟನು. ಯುಧಿಷ್ಠಿರನು ಕೃಷ್ಣನು ಹೊರಟು ಹೋದಮೇಲೆ ಆದ ಅಪಶಕುನಗಳನ್ನು ಕಂಡು ಪರಿಕ್ಷಿತನಿಗೆ ಪಟ್ಟಾಭಿಷೇಕವನ್ನು ಮಾಡಿದನು. ಇದು ಕಲಿಪ್ರವೇಶ ವಿಷಯವು.

ಪ್ರಯಾಸ್ಯಂತಿ ಯದಾ ಚೈತೇ ಪೂರ್ವಾಷಾಢಾಂ ಮಹರ್ಷಯಃ ।
ತದಾ ನಂದಾತ್ಪ್ರಭೃತ್ಯೇಷ ಗತಿವೃದ್ಧಿಂ ಗಮಿಷ್ಯತಿ ॥ ೧೧೨ ॥

ಯಸ್ಮಿನ್ ಕೃಷ್ಣೋ ದಿವಂ ಯಾತಸ್ತಸ್ಮಿನ್ನೇವ ತದಾಹನಿ ।
ಪ್ರತಿಪನ್ನಂ ಕಲಿಯುಗಂ ತಸ್ಯ ಸಂಖ್ಯಾಂ ನಿಬೋಧ ಮೇ ॥ ೧೧೩ ॥

ತ್ರೀಣಿ ಲಕ್ಷಾಣಿ ವರ್ಷಾಣಾಂ ದ್ವಿಜ ಮಾನುಷ್ಯಸಂಖ್ಯಯಾ ।
ಷಷ್ಟಿಶ್ಚೈವ ಸಹಸ್ರಾಣಿ ಭವಿಷ್ಯತ್ಯೇಷ ವೈ ಕಲಿಃ ॥ ೧೧೪ ॥

ಶತಾನಿ ತಾನಿ ದಿವ್ಯಾನಾಂ ಸಪ್ತಪಂಚ ಚ ಸಂಖ್ಯಯಾ ।
ನಿಶ್ಯೇಷೇಣಗತೇ ತಸ್ಮಿನ್ ಭವಿಷ್ಯತಿ ಪುನಃ ಕೃತಂ ॥ ೧೧೫ ॥

---

೧೧೨–೧೧೪. ಸಪ್ತಋಷಿ ನಕ್ಷತ್ರಗಳು ಪೂರ್ವಾಷಾಢಾ ನಕ್ಷತ್ರದಲ್ಲಿ ಪ್ರವೇಶ ಮಾಡಿದಾಗ ಅಂದರೆ ಮನುಷ್ಯರ ಕಾಲಮಾನದ ಸಾವಿರ ವರ್ಷಗಳು ಕಳೆದಮೇಲೆ ನಂದರಾಜರಿಂದ ಮುಂದಕ್ಕೆ ಕಲಿಧರ್ಮವು ವೃದ್ಧಿಯಾಗುವುದು. ಕೃಷ್ಣನು ಯಾವ ದಿನ ಸ್ವರ್ಗಕ್ಕೆ ಹೋದನೋ ಆ ದಿನವೇ ಕಲಿಯುಗವು ಪ್ರವೇಶಮಾಡಿತು. ಅದರ ಪ್ರಮಾಣವು ಮನುಷ್ಯರ ಕಾಲಮಾನದಿಂದ ಮೂರು ಲಕ್ಷ ಅರವತ್ತು ಸಾವಿರ ವರ್ಷಗಳು. ಇದು ಸಂಧಿಕಾಲವನ್ನು ಸೇರಿಸದ ಕಲಿಯುಗ ಪ್ರಮಾಣವು.

೧೧೫. ಸಂಧ್ಯಾಂಶವೂ ಸೇರಿ ದೇವಮಾನದಿಂದ ಸಾವಿರದ ಇನ್ನೂರು ವರ್ಷವಾದರೆ ಅಂದರೆ ಮನುಷ್ಯರ ಕಾಲಮಾನದಿಂದ ನಾಲ್ಕುಲಕ್ಷದ ಮೂವತ್ತೆರಡು ಸಾವಿರ ವರ್ಷವಾದರೆ ಕಲಿಯುಗವು ಸಂಪೂರ್ಣವಾಗಿ ಕಳೆದು ಕೃತಯುಗವು ಪ್ರಾರಂಭವಾಗುವುದು.

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಶ್ಶೂದ್ರಾಶ್ಚ ದ್ವಿಜಸತ್ತಮ ।
ಯುಗೇ ಯುಗೇ ಮಹಾತ್ಮಾನಸ್ಸಮತೀತಾಸ್ಸಹಸ್ರಶಃ ॥ ೧೧೬ ॥

ಬಹುತ್ವಾನ್ನಾಮಧೇಯಾನಾಂ ಪರಿಸಂಖ್ಯಾ ಕುಲೇ ಕುಲೇ ।
ಪುನರುಕ್ತ್ಯಾಧಿಕ್ಯಾಚ್ಚ ನ ಮಯಾ ಪರಿಕೀರ್ತಿತಾಃ ॥ ೧೧೭ ॥

ದೇವಾಪಿಃ ಪೌರವೋ ರಾಜಾ ಪುರುಶ್ಚೇಕ್ಷ್ವಾಕುವಂಶಜಃ ।
ಮಹಾಯೋಗಬಲೋಪೇತೌ ಕಲಾಪಗ್ರಾಮಸಂಶ್ರಿತೌ ॥ ೧೧೮ ॥

ಕೃತೇ ಯುಗೇ ತ್ವಿಹಾಗಮ್ಯ ಕ್ಷತ್ರಪ್ರಾವರ್ತಕೌ ಹಿತೌ ।
ಭವಿಷ್ಯತೋ ಮನೋರ್ವಂಶಬೀಜಭೂತೌ ವ್ಯವಸ್ಥಿತೌ ॥ ೧೧೯ ॥

ಏತೇನ ಕ್ರಮಯೋಗೇನ ಮನುಪುತ್ರೈರ್ವಸುಂಧರಾ ।
ಕೃತತ್ರೇತಾದ್ಯಾಪರಾಣಿ ಯುಗಾನಿ ತ್ರೀಣಿ ಭುಜ್ಯತೇ ॥ ೧೨೦ ॥

ಕಲೌ ತೇ ಬೀಜಭೂತಾಸ್ತು ಕೇಚಿತ್ತಿಷ್ಠಂತಿ ವೈ ಮುನೇ ।
ಯಥೈವ ದೇವಾಪಿ ಪುರೂ ಸಾಂಪ್ರತಂ ಸಮಧಿಷ್ಠಿತೌ ॥ ೧೨೧ ॥

---

೧೧೬–೧೧೭ ಮೈತ್ರೇಯನೇ ! ಪ್ರತಿಯೊಂದು ಯುಗದಲ್ಲಿಯೂ ಬ್ರಾಹ್ಮಣ ಕ್ಷತ್ರಿಯ, ವೈಶ್ಯ, ಶೂದ್ರರಲ್ಲಿ ಮಹಾಮಹಿಮರಾದವರು ಸಾವಿರಾರು ಜನ ಕಳೆದು ಹೋದರು. ಪ್ರತಿಯೊಂದು ವಂಶದಲ್ಲಿಯೂ ಅವರ ಹೆಸರುಗಳು ಅನೇಕವಾಗಿದ್ದುದರಿಂದಲೂ ಪುನರುಕ್ತಿಯುಂಟಾಗುವುದರಿಂದಲೂ ಒಂದೇ ಹೆಸರು ಅನೇಕರಿಗೆ ಇದ್ದುದರಿಂದಲೂ ಅವುಗಳನ್ನೆಲ್ಲ ನಾನು ಹೇಳಲಿಲ್ಲ.

೧೧೮–೧೨೧. ಪುರುವಂಶದ ದೇವಾಪಿರಾಜನೂ ಇಕ್ಷ್ವಾಕು ವಂಶದ ಪುರುರಾಜನೂ ಮಹಾಯೋಗಶಕ್ತಿಯಿಂದ ಕಲಾಪವೆಂಬ ಗ್ರಾಮದಲ್ಲಿ ವಾಸವಾಗಿದ್ದು ಕೃತಯುಗವು ಪ್ರಾರಂಭವಾದಾಗ ಮನುವಂಶಕ್ಕೆ ಬೀಜರೂಪರಾದ ಅವರು ಈ ಭೂಮಿಗೆ ಬಂದು ಕ್ಷತ್ರಿಯ ವಂಶವನ್ನು ಮತ್ತೆ ನಡೆಸುವರು. ಆ ಕ್ಷತ್ರಿಯರು ಕ್ರಮವಾಗಿ ಕೃತ, ತ್ರೇತ, ದ್ವಾಪರ ಯುಗಗಳಲ್ಲಿ ಭೂಮಿಯನ್ನು ಪಾಲಿಸುವರು. ಕಲಿಯುಗದಲ್ಲಿಯೂ ಕೆಲವು ಕ್ಷತ್ರಿಯರು ದೇವಾಪಿ ಪುರುಗಳಂತೆ ಕ್ಷತ್ರಿಯ ವಂಶಕ್ಕೆ ಬೀಜರೂಪದಿಂದ ಈಗಲೂ ಇರುವರು.

ಏಷ ತೂದ್ದೇಶತೋ ವಂಶಸ್ತವೋಕ್ತೋ ಭೂಭುಜಾಂ ಮಯಾ ।
ನಿಖಿಲೋ ಗದಿತುಂ ಶಕ್ಯೋ ನೈಷ ವರ್ಷಶತೈರಪಿ ॥ ೧೨೨ ॥

ಏತೇ ಚಾನ್ಯೇ ಚ ಭೂಪಾಲಾ ಯೈರತ್ರ ಕ್ಷಿತಿಮಂಡಲೇ ।
ಕೃತಂ ಮಮತ್ವಂ ಮೋಹಾಂಧೈರ್ನಿತ್ಯಂ ಹೇಯಕಳೇಬರೇ ॥ ೧೨೩ ॥

ಕಥಂ ಮಮೇಯಮಚಲಾ ಮತ್ಪುತ್ರಸ್ಯ ಕಥಂ ಮಹೀ ।
ಮದ್ವಂಶಸ್ಯೇತಿ ಚಿಂತಾರ್ತಾ ಜಗ್ಮುರಂತಮಿಮೇ ನೃಪಾಃ ॥ ೧೨೪ ॥

ತೇಭ್ಯಃ ಪೂರ್ವತರಾಶ್ಚಾನ್ಯೇ ತೇಭ್ಯಸ್ತೇಭ್ಯಸ್ತಥಾ ಪರೇ ।
ಭವಿಷ್ಯಾಶ್ಚೈವ ಯಾಸ್ಯಂತಿ ತೇಷಾಮನ್ಯೇ ಚ ಯೇಽಪ್ಯನು ॥ ೧೨೫ ॥

ವಿಲೋಕ್ಯಾತ್ಮಜಯೋದ್ಯೋಗಂ ಯಾತ್ರಾವ್ಯಗ್ರಾನ್ನರಾಧಿಪಾನ್ ।
ಪುಷ್ಪಪ್ರಹಾಸೈಶ್ಶರದಿ ಹಸಂತೀವ ವಸುಂಧರಾ ॥ ೧೨೬ ॥

---

೧೨೨-೧೨೬. ಮೈತ್ರೇಯನೇ! ನೀನು ಕೇಳಿದ ಪ್ರಶ್ನೆಗೆ ಉತ್ತರವಾಗಿ ಈ ರಾಜವಂಶವನ್ನು ಹೇಳಿರುವೆನು. ಸಂಪೂರ್ಣವಾಗಿ ರಾಜರ ವಂಶವನ್ನು ಹೇಳಲು ನೂರು ವರ್ಷ ಹೇಳಿದರೂ ಮುಗಿಯುವುದಿಲ್ಲ. ಈ ರಾಜರೆಲ್ಲರೂ ಈ ಭೂಮಂಡಲದಲ್ಲಿ ಅಜ್ಞಾನಿಗಳಾಗಿ ಈ ದುಷ್ಟವಾದ ಶರೀರದಲ್ಲಿ ನಾನು ನನ್ನದು ಎಂದು ಅಭಿಮಾನವನ್ನು ಇಟ್ಟುಕೊಂಡಿರುವರು. ನನ್ನ ಈ ದೇಶವು ನನ್ನ ಮಕ್ಕಳಿಗೂ ನನ್ನ ವಂಶದವರಿಗೂ ಇರುವುದೇ ಎಂಬ ಚಿಂತೆಯಿಂದಲೇ ಅವರು ದೇಹ ತ್ಯಾಗವನ್ನು ಮಾಡುವರು. ಇವರ ಹಿಂದೆಯೂ ಅನೇಕರು ಇದೇ ಚಿಂತೆಯಿಂದ ದೇಹತ್ಯಾಗ ಮಾಡಿದರು. ಮುಂದೆಯೂ ಅನೇಕರು ಹೀಗೆಯೇ ದೇಹತ್ಯಾಗ ಮಾಡುವರು. ಇವರೆಲ್ಲರನ್ನೂ ನೋಡಿ ಭೂಮಿಯು ಶರದೃತುವಿನಲ್ಲಿ ಬಿಟ್ಟ ಹೂವಿನ ನೆಪದಿಂದ ನಗುತ್ತ ಜಯಾರ್ಥವಾಗಿ ಯುದ್ಧಕ್ಕೆ ಹೋಗುವ ರಾಜರನ್ನು ಹಾಸ್ಯಮಾಡುತ್ತಿರುವುದು.

ನ್ಮೈತ್ರೇಯ ಪೃಥಿವೀಗೀತಾನ್ ಶ್ಲೋಕಾಂಶ್ಚಾತ್ರ ನಿಬೋಧ ಮೇ ।
ಯಾನಾಹ ಧರ್ಮಧ್ವಜಿನೇ ಜನಕಾಯಾಸಿತೋ ಮುನಿಃ ॥ ೧೨೭ ॥

॥ ಪೃಥಿವೀ ॥

ಕಥಮೇಷ ನರೇಂದ್ರಾಣಾಂ ಮೋಹೋ ಬುದ್ಧಿಮತಾಮಪಿ ।
ಯೇನ ಫೇನಸಧರ್ಮಾಣೋಽಪ್ಯತಿವಿಶ್ವಸ್ತ ಚೇತಸಃ ॥ ೧೨೮ ॥

ಪೂರ್ವಮಾತ್ಮಜಯಂ ಕೃತ್ವಾ ಜೇತುಮಿಚ್ಛಂತಿ ಮಂತ್ರಿಣಃ ।
ತತೋ ಭೃತ್ಯಾಂಶ್ಚ ಪೌರಾಂಶ್ಚ ಜಿಗೀಷಂತೇ ತಥಾ ರಿಪೂನ್ ॥ ೧೨೯ ॥

ಕ್ರಮೇಣಾನೇನ ಜೇಷ್ಯಾಮೋ ವಯಂ ಪೃಥ್ವೀಂ ಸಸಾಗರಾಂ ।
ಇತ್ಯಾಸಕ್ತಧಿಯೋ ಮೃತ್ಯುಂ ನ ಪಶ್ಯಂತ್ಯವಿದೂರಗಂ ॥ ೧೩೦ ॥

---

೧೨೭. ಮೈತ್ರೇಯನೇ ! ಧರ್ಮಧ್ವಜನೆಂಬ ಜನಕರಾಜನಿಗೆ ಅಸಿತನೆಂಬ ಮುನಿಯು ಪೃಥಿವೀಗೀತವೆಂಬ ಶ್ಲೋಕವನ್ನು ಹೇಳಿದನು. ಆ ಶ್ಲೋಕಾಭಿಪ್ರಾಯಗಳನ್ನು ಹೇಳವೆನು ಕೇಳು.

೧೨೮. ಭೂಮಿಯು ಹೇಳುವುದೇನೆಂದರೆ:— ಈ ರಾಜರು ಅತ್ಯಂತ ಬುದ್ಧಿವಂತರಾದರೂ ನೀರಿನ ನೊರೆಗೆ ಸಮಾನವಾದ ಶರೀರದಲ್ಲಿ ನಂಬಿಕೆಯುಳ್ಳವರಾಗಿ ಅಜ್ಞಾನವನ್ನು ಹೊಂದಿರುವರು. ಈ ಅಜ್ಞಾನವು ಇವರಿಗೆ ಹೇಗೆ ಬಂದಿತು ?

೧೨೯-೧೩೧. ಈ ರಾಜರು ಮೊದಲು ಇಂದ್ರಿಯನಿಗ್ರಹವನ್ನು ಮಾಡಿ ಮಂತ್ರಿಗಳನ್ನೂ, ಭೃತ್ಯರನ್ನೂ, ಪಟ್ಟಣಿಗರನ್ನೂ, ಶತ್ರುಗಳನ್ನೂ ಜಯಿಸಲು ಇಚ್ಛಿಸುವರು. ಈ ಕ್ರಮದಲ್ಲಿಯೇ ಸಮುದ್ರದಿಂದ ಸುತ್ತಿದ ಭೂಮಿಯನ್ನೆಲ್ಲ ಜಯಿಸುವೆ

ಸಮುದ್ರಾವರಣಂ ಯಾತಿ ಭೂಮಂಡಲಮಥೋವಶಂ ।
ಕಿಯದಾತ್ಮಜಯಸ್ಯೈತನ್ಮುಕ್ತಿರಾತ್ಮಜಯೇ ಫಲಂ ॥ ೧೩೧ ॥

ಉತ್ಸೃಜ್ಯ ಪೂರ್ವಜಾ ಯಾತಾ ಯಾಂ ನಾದಾಯ ಗತಃ ಪಿತಾ ।
ತಾಂ ಮಾಮತೀವಮೂಢತ್ವಾಜ್ಜೇತುಮಿಚ್ಛಂತಿ ಪಾರ್ಥಿವಾಃ ॥ ೧೩೨ ॥

ಮತ್ಕೃತೇ ಪಿತೃಪುತ್ರಾಣಾಂ ಭ್ರಾತೄಣಾಂ ಚಾಪಿ ವಿಗ್ರಹಃ ।
ಜಾಯತೇತ್ಯಂತಮೋಹೇನ ಮಮತ್ವಾದೃತಚೇತಸಾಂ ॥ ೧೩೩ ॥

ಪೃಥ್ವೀ ಮಮೇಯಂ ಸಕಲಾ ಮಮೈಷಾ
ಮದನ್ವಯಸ್ಯಾಪಿ [redacted] ಶಾಶ್ವತೀಯಂ ।
ಯೋ ಯೋ ಮೃತೋಹ್ಯತ್ರ ಬಭೂವ ರಾಜಾ
ಕುಬುದ್ಧಿರಾಸೀದಿತಿ ತಸ್ಯ ತಸ್ಯ ॥ ೧೩೪ ॥

---

ವೆಂಬ ಬುದ್ಧಿಯಿಂದ ಸಮೀಪದಲ್ಲಿರುವ ಮೃತ್ಯುವನ್ನೂ ನೋಡುವುದಿಲ್ಲ. ಇಂದ್ರಿಯ ಜಯಕ್ಕೆ ಶಾಶ್ವತವಾದ ಮುಕ್ತಿಯೇ ಫಲವಾಗಿದ್ದರೂ ಸಮುದ್ರವೇ ಮೇರೆಯಾಗಿ ಉಳ್ಳ ಭೂಮಂಡಲವನ್ನು ತಮ್ಮ ವಶಮಾಡಿಕೊಂಡ ಅಲ್ಪವಾದ ಈ ಫಲಕ್ಕೆ ತೃಪ್ತರಾಗುವರು.

೧೩೨–೧೩೩. ನನಗಿಂತ ಹಿಂದೆ ಇದ್ದ ರಾಜರು ಈ ಭೂಮಿಯನ್ನು ಬಿಟ್ಟು ಹೋದರು. ನಮ್ಮ ತಂದೆಯೂ ಈ ಭೂಮಿಯನ್ನು ತೆಗೆದುಕೊಂಡು ಹೋಗಲಿಲ್ಲ. ಎಂದು ತಿಳಿದಿದ್ದರೂ ಈ ರಾಜರು ಅಜ್ಞಾನದಿಂದ ನನ್ನನ್ನು ಜಯಿಸಲು ಅಪೇಕ್ಷಿಸುವರು. ನನಗೋಸ್ಕರವಾಗಿ ನನ್ನದೆಂಬ ಅಭಿಮಾನದಿಂದ ಕೂಡಿದ ಅವರಲ್ಲಿ ತಂದೆ ಮಕ್ಕಳಿಗೂ ಅಣ್ಣ ತಮ್ಮಂದಿರಿಗೂ ಅಜ್ಞಾನದಿಂದ ಕಲಹವುಂಟಾಗುವುದು.

೧೩೪–೧೩೫. ಈ ಭೂಮಿಯು ನನ್ನದು. ಈ ವಸ್ತುಗಳೆಲ್ಲ ನನ್ನವು. ಇವು ನನ್ನ ವಂಶಕ್ಕೇ ಶಾಶ್ವತವಾಗಿ ಸಂಬಂಧಪಟ್ಟವುಗಳು. ಎಂದು ಯಾವ ಯಾವ

ದೃಷ್ಟ್ವಾ ಮಮತ್ವಾದ್ದೃತಚಿತ್ತಮೇಕಂ
ವಿಹಾಯ ಮಾಂ ಮೃತ್ಯುವಶಂ ವ್ರಜಂತಂ ।
ತಸ್ಯಾನು ಯಸ್ತಸ್ಯ ಕಥಂ ಮಮತ್ವಂ
ಹೃದ್ಯಾಸ್ಪದಂ ಮತ್ಪ್ರಭವಂ ಕರೋತಿ ॥ ೧೩೫ ॥

ಪೃಥ್ವೀಮಮೈಷಾಶು ಪರಿತ್ಯಜೈನಾಂ
ವದಂತಿ ಯೇ ದೂತಮುಖೈಸ್ಸ್ವಶತ್ರೂನ್ ।
ನರಾಧಿಪಾಸ್ತೇಷು ಮಮಾತಿಹಾಸಃ
ಪುನಶ್ಚ ಮೂಢೇಷು ದಯಾಭ್ಯುಪೈತಿ ॥ ೧೩೬ ॥

॥ ಶ್ರೀ ಪರಾಶರಃ ॥

ಇತ್ಯೇತೇ ಧರಣೀ ಗೀತಾ ಶ್ಲೋಕಾ ಮೈತ್ರೇಯ ಯೈಶ್ಶ್ರುತಾ ।
ಮಮತ್ವಂ ವಿಲಯಂ ಯಾತಿ ತಪತ್ಯರ್ಕೇ ಯಥಾ ಹಿಮಂ ॥ ೧೩೭ ॥

---

ರಾಜರಿದ್ದರೋ ಅವರವರು ಮೃತರಾದಮೇಲೆ ಯಾವ ಯಾವ ರಾಜರು ಬಂದರೋ ಅವರೆಲ್ಲರಿಗೂ ಈ ದುರ್ಬುದ್ಧಿಯು ಇದ್ದೇ ಇದ್ದಿತು. ನನ್ನ ಭೂಮಿಯೆಂಬ ಅಭಿಮಾನವನ್ನಿಟ್ಟುಕೊಂಡಿದ್ದ ರಾಜನು ನನ್ನನ್ನು ಬಿಟ್ಟು ಮರಣಹೊಂದಿ ಹೋದವನನ್ನು ಕಂಡ ರಾಜರಿಗೆ ಪುನಃ ನನ್ನ ವಿಷಯದಲ್ಲಿ ನನ್ನದು ಎಂಬ ಅಭಿಮಾನವು ಹೇಗೆ ಉಂಟಾಗುವುದು ?

೧೩೬. ಇದು ನನ್ನ ಭೂಮಿ ಇದನ್ನು ಬಿಟ್ಟುಹೋಗು. ಎಂದು ಒಬ್ಬ ರಾಜನು ದೂತನೊಡನೆ ತನ್ನ ಶತ್ರುವಿಗೆ ಹೇಳಿ ಕಳುಹಿಸುವನು. ಇಂತಹ ರಾಜರ ವಿಷಯದಲ್ಲಿ ನನಗೆ ವಿಶೇಷವಾಗಿ ನಗುವುಂಟಾಗುವುದು. ಅವರೂ ಪುನಃ ಆ ಮೂಢರ ವಿಷಯದಲ್ಲಿ ದಯೆಯುಂಟಾಗುವುದು.

೧೩೭. ಮೈತ್ರೇಯನೇ! ಈ ಭೂಗೀತೆಯ ಶ್ಲೋಕಾಭಿಪ್ರಾಯವನ್ನು ಕೇಳಿದವರಿಗೆ ನನ್ನದೆಂಬ ಅಭಿಮಾನವು ಸೂರ್ಯನ ಕಾವಿನಲ್ಲಿ ಹಿಮವು ನಾಶವಾಗುವಂತೆ ನಾಶವಾಗಿ ಹೋಗುವುದು.

ಇತ್ಯೇಷ ಕಥಿತಸ್ಸಮ್ಯಙ್ಮನೋರ್ವಂಶೋ ಮಯಾ ತವ ।
ಯತ್ರ ಸ್ಥಿತಿಪ್ರವೃತ್ತಸ್ಯ ವಿಷ್ಣೋರಂಶಾಂಶಕಾ ನೃಪಾಃ ॥ ೧೩೮ ॥

ಶೃಣೋತಿ ಯ ಇಮಂ ಭಕ್ತ್ಯಾ ಮನೋರ್ವಂಶಮನುಕ್ರಮಾತ್ ।
ತಸ್ಯ ಪಾಪಮಶೇಷಂ ವೈ ಪ್ರಣಶ್ಯತ್ಯಮಲಾತ್ಮನಃ ॥ ೧೩೯ ॥

ಧನಧಾನ್ಯರ್ಧಿಮತುಲಾಂ ಪ್ರಾಪ್ನೋತ್ಯವ್ಯಾಹತೇಂದ್ರಿಯಃ ।
ಶ್ರುತ್ವೈವಮಖಿಲಂ ವಂಶಂ ಪ್ರಶಸ್ತಂ ಶಶಿಸೂರ್ಯಯೋಃ ॥ ೧೪೦ ॥

ಇಕ್ಷ್ವಾಕುಜಹ್ನುಮಾಂಧಾತೃಸಗರಾವಿಕ್ಷಿತಾನ್ ರಘೂನ್ ।
ಯಯಾತಿ ನಹುಷಾದ್ಯಾಂಶ್ಚ ಜ್ಞಾತ್ವಾನಿಷ್ಠಾಮುಪಾಗತಾನ್ ॥ ೧೪೧ ॥

---

೧೩೮-೧೩೯. ಈ ರೀತಿಯಲ್ಲಿ ನಾನು ನಿನಗೆ ವಿಷ್ಣುವಿನ ಅಂಶಾಂಶದಿಂದ ಹುಟ್ಟಿದ ರಾಜರು ಇದ್ದು ಅನೇಕ ಮಹಾಕಾರ್ಯಗಳನ್ನು ಮಾಡಿದ ಮನುವಂಶದ ಚರಿತ್ರೆಯನ್ನು ವಿಸ್ತಾರವಾಗಿ ಹೇಳಿದೆನು. ಈ ಮನುವಂಶವನ್ನು ಕ್ರಮವಾಗಿ ಭಕ್ತಿಯಿಂದ ಯಾರು ಯಾರು ಕೇಳುವರೋ ಆ ನಿರ್ಮಲವಾದ ಬುದ್ಧಿಯುಳ್ಳ ಮಹಾತ್ಮರ ಸಮಸ್ತ ಪಾಪಗಳೂ ನಾಶವಾಗುವುವು.

೧೪೦. ಪ್ರಶಸ್ತವಾದ ಈ ಸೂರ್ಯ ಚಂದ್ರ ವಂಶ ವಿಸ್ತಾರವನ್ನು ಕೇಳಿದವರು ಧನ ಧಾನ್ಯಾದಿಗಳ ಅಭಿವೃದ್ಧಿಯನ್ನು ಪಡೆದು ಇಂದ್ರಿಯಾರ್ಥಗಳನ್ನು ತಡೆಯಿಲ್ಲದೆ ಅನುಭವಿಸುವರು.

೧೪೧-೧೪೪. ಇಕ್ಷ್ವಾಕು, ಜಹ್ನು, ಮಾಂಧಾತ, ಸಗರ, ಅವಿಕ್ಷಿತ, (ಮರುತ್ತ) ರಘು, ಯಯಾತಿ, ನಹುಷ ಮುಂತಾದ ರಾಜರುಗಳು ಮಹಾಬಲ ಪರಾಕ್ರಮಗಳಿಂದಲೂ ಧನ ಧಾನ್ಯಾದಿಸಂಪತ್ತುಗಳಿಂದಲೂ ಕೂಡಿದವರಾಗಿದ್ದರೂ ಬಲವಾದ ಕಾಲವು ಅವರ ಹೆಸರುಗಳನ್ನು ಉಳಿಸಿತು. ಇವನ್ನು ಕೇಳಿದ ಜ್ಞಾನಿಯು ಮಕ್ಕಳು, ಹೆಂಡತಿ, ಮನೆ, ಭೂಮಿ, ಧನ ಮುಂತಾದುವುಗಳಲ್ಲಿ ನನ್ನದು ಎಂಬ

ಮಹಾಬಲಾನ್ಮಹಾವೀರ್ಯಾನನಂತಧನಸಂಚಯಾನ್ ।
ಕೃತಾನ್ಕಾಲೇನ ಬಲಿನಾ ಕಥಾಶೇಷಾನ್ನರಾಧಿಪಾನ್ ॥ ೧೪೨ ॥

ಶ್ರುತ್ವಾ ನಪುತ್ರದಾರಾದೌ ಗೃಹಕ್ಷೇತ್ರಾದಿಕೇ ತಥಾ ।
ದ್ರವ್ಯಾದೌ ವಾ ಕೃತಪ್ರಜ್ಞೋ ಮಮತ್ವಂ ಕುರುತೇ ನರಃ ॥ ೧೪೩ ॥

ತಪ್ತಂ ತಪೋ ಯೈಃ ಪುರುಷಪ್ರವೀರೈ
ರುದ್ಬಾಹುಭಿರ್ವರ್ಷಗಣಾನನೇಕಾನ್ ।
ಇಷ್ಟ್ವಾ ಸುಯಜ್ಞೈರ್ಬಲಿನೋತಿವೀರ್ಯಾಃ
ಕೃತಾಸು ಕಾಲೇನ ಕಥಾವಶೇಷಾಃ ॥ ೧೪೪ ॥

ಪೃಥುಸ್ಸಮಸ್ತಾನ್ವಿಚಚಾರ ಲೋಕಾನ
ವ್ಯಾಹತೋ ಯೋ ವಿಜಿತಾರಿಚಕ್ರಃ ।
ಸಕಾಲವಾತಾಭಿಹತಪ್ರಣಷ್ಟಃ
ಕ್ಷಿಪ್ತಂ ಯಥಾ ಶಾಲ್ಮಲಿತೂಲಮಗ್ನೌ ॥ ೧೪೫ ॥

---

ಅಭಿಮಾನವನ್ನು ಇಟ್ಟುಕೊಳ್ಳಬಾರದು. ಅನೇಕ ಪುರುಷಶ್ರೇಷ್ಠರು ಶೂರರಾಗಿ ಕೈಗಳನ್ನು ಮೇಲಕ್ಕೆತ್ತಿ ಅನೇಕ ವರ್ಷಗಳವರೆಗೆ ತಪಸ್ಸು ಮಾಡಿ ಯಜ್ಞಾದಿಗಳನ್ನು ಮಾಡಿದ್ದರು ಅವರೂ ಬಲವಾದ ಕಾಲಕ್ಕೆ ಅಧೀನರಾಗಿ ತಮ್ಮ ಹೆಸರನ್ನು ಮಾತ್ರ ಉಳಿಸಿಕೊಂಡಿರುವರು.

೧೪೫–೧೪೭. ಸಮಸ್ತ ಶತ್ರುಗಳನ್ನೂ ಜಯಿಸಿದ ಪೃಥುವು ಎಲ್ಲಿಯೂ ತಡೆಯಿಲ್ಲದೆ ಸಮಸ್ತ ಲೋಕಗಳನ್ನೂ ಸಂಚರಿಸುತ್ತಿದ್ದನು. ಇಂಥವನೂ ಕಾಲವೆಂಬ ಗಾಳಿಗೆ ಸಿಕ್ಕಿ ಬೆಂಕಿಗೆ ಹಾಕಿದ ಬೂರುಗದ ಹತ್ತಿಯಂತೆ ನಾಶವಾದನು. ಸಮಸ್ತ ದ್ವೀಪಗಳನ್ನೂ ಆಕ್ರಮಿಸಿ ಶತ್ರುಗಳನ್ನೆಲ್ಲ ಕೊಂದು ಸಕಲ ಭೂಮಿಯನ್ನು ಅನುಭವಿಸಿದನೆಂದು ಪ್ರಸಿದ್ಧಿಹೊಂದಿದ ಕಾರ್ತವೀರ್ಯಾರ್ಜುನನು ಇದ್ದನೋ ಇಲ್ಲವೋ ಎಂಬ ಸಂದೇಹಕ್ಕೆ ಆಸ್ಪದವಾಗಿರುವುದು. ದಶಾನನ, ಅವಿಕ್ಷಿತ, ರಾವ..

ಯಃ ಕಾರ್ತವೀರ್ಯೋ ಬುಭುಜೇ ಸಮಸ್ತಾನ್
ದ್ವೀಪಾನ್ಸಮಾಕ್ರಮ್ಯ ಹತಾರಿಚಕ್ರಃ ।
ಕಥಾಪ್ರಸಂಗೇಷ್ವಭಿಧೀಯಮಾನ
ಸ್ಸ ಏವ ಸಂಕಲ್ಪವಿಕಲ್ಪಹೇತುಃ ॥ ೧೪೬ ॥

ದಶಾನನಾವಿಕ್ಷಿತರಾಘವಾಣಾ
ಮೈಶ್ವರ್ಯ ಮುದ್ಭಾಸಿತದಿಙ್ಮುಖಾನಾಂ
ಭಸ್ಮಾಪಿ ಶಿಷ್ಟಂ ನ ಕಥಂ ಕ್ಷಣೇನ
ಭ್ರೂಭಂಗ ಪಾತೇನ ಧಿಗಂತಕಸ್ಯ ॥ ೧೪೭ ॥

ಕಥಾಶರೀರತ್ವಮವಾಪ ಯದ್ವೈ
ಮಾಂಧಾತೃನಾಮಾ ಭುವಿ ಚಕ್ರವರ್ತೀ ।
ಶ್ರುತ್ವಾಪಿ ತತ್ಕೋ ಹಿ ಕರೋತಿ ಸಾಧು
ಮಮತ್ವಮಾತ್ಮನ್ಯಪಿ ಮಂದಚೇತಾಃ ॥ ೧೪೮ ॥

---

ಮುಂತಾದವರ ಐಶ್ವರ್ಯವು ಸಮಸ್ತ ದಿಕ್ಕುಗಳಲ್ಲಿಯೂ, ಪ್ರಕಾಶಿಸತಕ್ಕುದಾಗಿದ್ದರೂ ಕ್ಷಣ ಮಾತ್ರದಲ್ಲಿ ಯಮನ ಕೋಪದಿಂದ ಅವರ ಬೂದಿಯೂ ಸಿಕ್ಕದಂತಾಯಿತು.

೧೪೮-೧೪೯. ಮಾಂಧಾತೃ ಚಕ್ರವರ್ತಿಯು ಭೂಮಿಯಲ್ಲಿದ್ದನೆಂದು ಅವನ ಕಥೆಯನ್ನು ಮಾತ್ರ ಹೇಳುವರು. ಅವನ ಶರೀರ ಮಾತ್ರ ಇಲ್ಲವೇ ಇಲ್ಲ. ಎಂಬುದನ್ನು ತಿಳಿದಮೇಲೆ ಶರೀರದಲ್ಲಿ ಆತ್ಮಬುದ್ಧಿಯನ್ನು ಯಾವ ಮೂಢನು ಮಾಡುವನು. ಭಗೀರಥ, ಸಗರ, ಕಕುತ್ಸ್ಥ, ದಶಾನನ, ರಾಮ ಲಕ್ಷ್ಮಣರು, ಯುಧಿಷ್ಠಿರನೇ

ಭಗೀರಥಾದ್ಯಾಸ್ಸಗರಃ ಕಕುತ್ಸ್ಥೋ
ದಶಾನನೋ ರಾಘವಲಕ್ಷ್ಮಣೌ ಚ ।
ಯುಧಿಷ್ಠಿರಾದ್ಯಾಶ್ಚ ಬಭೂವುರೇತೇ
ಸತ್ಯಂ ನ ಮಿಥ್ಯಾ ಕ್ವನು ತೇ ನ ವಿದ್ಮಃ ॥ ೧೪೯ ॥

ಯೇ ಸಾಂಪ್ರತಂ ಯೇ ಚ ನೃಪಾ ಭವಿಷ್ಯಾಃ
ಪ್ರೋಕ್ತಾ ಮಯಾ ವಿಪ್ರವರೋಗ್ರವೀರ್ಯಾಃ ।
ಏತೇ ತಥಾನ್ಯೇ ಚ ತಥಾಭಿಧೇಯಾಃ
ಸರ್ವೇ ಭವಿಷ್ಯಂತಿ ಯಥೈವ ಪೂರ್ವೇ ॥ ೧೫೦ ॥

ಏತದ್ವಿದಿತ್ವಾ ನ ನರೇಣ ಕಾರ್ಯಂ
ಮಮತ್ವಮಾತ್ಮನ್ಯಪಿ ಪಂಡಿತೇನ ।
ತಿಷ್ಠಂತು ತಾವತ್ತನಯಾತ್ಮಜಾಯಾಃ
ಕ್ಷೇತ್ರಾದಯೋ ಯೇ ಚ ಶರೀರಿಣೋಽನ್ಯೇ ॥ ೧೫೧ ॥

ಇತಿ ಶ್ರೀ ವಿಷ್ಣುಪುರಾಣೇ ಚತುರ್ಥಾಂಶೇ ಚತುರ್ವಿಂಶೋಽಧ್ಯಾಯಃ
ಇತಿ ಚತುರ್ಥಾಂಶಃ

---

ಮೊದಲಾದವರು ಇದ್ದರೆಂದು ಹೇಳುವುದು ನಿಜವೋ ಸುಳ್ಳೋ ಅವರೆಲ್ಲಿರುವರೆಂಬುದನ್ನು ನಾವರಿಯೆವು

೧೫೦-೧೫೧. ಬ್ರಾಹ್ಮಣ ಶ್ರೇಷ್ಠನಾದ ಮೈತ್ರೇಯನೇ ! ಈಗ ಇರುವವರೂ ಮುಂದೆ ಬರುವವರೂ ಆದ ಶೂರರಾದ ರಾಜರ ವಿಷಯವನ್ನು ನಾನು ಹೇಳಿರುವೆನು. ಇವರೆಲ್ಲರೂ ಹಿಂದಿನ ರಾಜರಂತೆಯೇ ಆಗುವರು. ಅವರ ಹೆಸರು ಮಾತ್ರವಿರುವುದು. ಇದನ್ನು ತಿಳಿದು ವಿದ್ವಾಂಸನಾದ ಮನುಷ್ಯನು ತನ್ನ ಶರೀರ ವಿಷಯದಲ್ಲಿ ನನ್ನದು ಎಂಬ ಅಭಿಮಾನವನ್ನು ಇಟ್ಟುಕೊಳ್ಳಬಾರದು. ಎಂದಮೇಲೆ ಹೆಂಡತಿ ಮಕ್ಕಳು ಭೂಮಿ ಮುಂತಾದುವುಗಳ ವಿಷಯದಲ್ಲಿ ಹೇಳಬೇಕಾದುದೇನೂ ಇರುವುದಿಲ್ಲ.

ಎಂಬಲ್ಲಿಗೆ ಶ್ರೀ ವಿಷ್ಣುಪುರಾಣದ ಚತುರ್ಥಾಂಶದಲ್ಲಿ
ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.

---

**ನಾಲ್ಕನೆಯ ಅಂಶವು ಸಂಪೂರ್ಣವಾಯಿತು.**